ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫–೩

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದವಿವರಣೆಗಳೊಡನೆ.)

ನಾಲ್ಕನೆಯ ಸ್ಕಂಧ



ಅನುವಾದಕ

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೩

# ಮೊದಲ ಮಾತು

ಶ್ರೀಗಣೇಶಶಾರದಾಗುರುಭ್ಯೋ ನಮಃ

ಪುರಾಣಗಳು ಭಾರತಾರ್ಯರ ಸಾಹಿತ್ಯದಲ್ಲಿ ಒಂದು ಮುಖ್ಯವಾದ ಸ್ಥಾನವನ್ನು ಪಡೆದಿವೆ. ಉತ್ತಮಗ್ರಂಥಗಳ ಸಮುದಾಯಕ್ಕೆ ಸಾಹಿತ್ಯವೆಂದು ಹೆಸರು. ನಮ್ಮ ಸಾಹಿತ್ಯವೂ ಸಂಸ್ಕೃತಿಯೂ ಚರಿತ್ರದೃಷ್ಟಿಯಿಂದ ಕನಿಷ್ಠಪಕ್ಷದಲ್ಲಿಯೂ ಸುಮಾರು ನಾಲ್ಕುಸಾವಿರ ವರ್ಷಗಳಿಂದಲೂ ಬೆಳೆಯುತ್ತಾ ಬರುತ್ತಿವೆ. ಈ ಸಾಹಿತ್ಯದಲ್ಲಿ ನಮ್ಮ ಸಂಸ್ಕೃತಿಯು ಪ್ರತಿಬಿಂಬಿಸಿದೆ. ಸಾಹಿತ್ಯವು ಜನಜೀವನದ ಪ್ರತಿಬಿಂಬವೆನ್ನುವುದು ಎಲ್ಲ ವಿಮರ್ಶಕರೂ ಒಪ್ಪಿರುವ ಸಿದ್ಧಾಂತವಾಗಿದೆ. ನಮ್ಮ ಸಂಸ್ಕೃತಿಯು ಧಾರ್ಮಿಕವಾದುದು. ಸಂಸ್ಕೃತಭಾಷೆಯೂ ಧಾರ್ಮಿಕಸಂಸ್ಕೃತಿಯೂ ಒಂದಕ್ಕಾಗಿಯೇ ಇನ್ನೊಂದು ಉಂಟಾಗಿದೆಯೋ ಎನ್ನುವಂತೆ ಪರಸ್ಪರವಾಗಿ ಅಚ್ಚುಮೆಚ್ಚಾಗಿ ಹೊಂದಿಕೊಂಡಿರುವುದು ನಮ್ಮ ಸಾಹಿತ್ಯದಲ್ಲಿರುವ ಒಂದು ವಿಶೇಷಗುಣವಾಗಿದೆ. ವೇದಾಂತತತ್ವವೂ, ದಿನಗಟ್ಟಲೆಯಲ್ಲಿನ ಜನಜೀವನದ ರೀತಿನೀತಿಗಳೂ, ಸಾಹಿತ್ಯದಲ್ಲಿ ಎಂದರೆ ವೈದಿಕಸಾಹಿತ್ಯದಲ್ಲಿ ಪ್ರಭುಸಮ್ಮಿತರೀತಿಯಿಂದಲೂ, ಪುರಾಣಶಾಸ್ತ್ರಸಾಹಿತ್ಯದಲ್ಲಿ ಮಿತ್ರಸಮ್ಮಿತರೀತಿಯಿಂದಲೂ, ಕಾವ್ಯಸಾಹಿತ್ಯದಲ್ಲಿ ಕಾಂತಾಸಮ್ಮಿತರೀತಿಯಿಂದಲೂ, ಪ್ರತಿಪಾದಿಸಲ್ಪಟ್ಟಿವೆ. ಆನೀದವಾತಂ ಸ್ವಧಯಾತದೇಕಂ, ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ, ಸತ್ಯಂವದ ಧರ್ಮಂಚರ, ಎಂದು ಮುಂತಾದ ಶ್ರುತಿಗಳೂ, ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ |, ಧಾರಣಾದ್ಧರ್ಮ ಇತ್ಯಾಹುಃ ಧರ್ಮೋ ಧಾರಯತಿಪ್ರಜಾಃ |, ಸರ್ವಂಖಲ್ವಿದಮೇವಾಹಂ ನಾನ್ಯದಸ್ತಿ ಸನಾತನಂ, ಎಂದು ಮುಂತಾದ ಪುರಾಣಶಾಸ್ತ್ರವಾಕ್ಯಗಳೂ, ಈ ಅಂಶವನ್ನು ಸ್ಪಷ್ಟಪಡಿಸುತ್ತಿವೆ. ಇವೆಲ್ಲವನ್ನೂ ಪರಿಶೀಲಿಸಿದರೆ ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ | ಎಂಬ ಸೂಕ್ತಿಯೂ ದೃಢಪಡುತ್ತದೆಂಬುದನ್ನೂ ಗಮನಿಸಬಹುದು.

ದೇವೀಭಾಗವತದ ಅರ್ಥವನ್ನು ಹೀಗೆ ವಿವರಿಸಿದೆ. ದೇವಿಯು ಸ್ವಪ್ರಕಾಶವಾಗಿರುವ ಶಕ್ತಿತೇಜೋರೂಪಳು. ಈ ಪ್ರಪಂಚಗಳ ಸೃಷ್ಟಿಸ್ಥಿತಿಲಯಗಳನ್ನು ಆಯಾಸವಿಲ್ಲದೆ ಲೀಲಾಜಾಲದಂತೆ ನೆರವೇರಿಸುತ್ತಾ ಕ್ರೀಡಿಸುತ್ತಿರುವ ಸ್ವಭಾವವುಳ್ಳವಳೂ, ಆಪ್ತಕಾಮಳೂ, ಭಕ್ತರಿಗೆ ಅಭ್ಯುದಯನಿಶ್ರೇಯಸಗಳನ್ನು ಅನುಗ್ರಹಿಸುವವಳೂ

ಆಗಿದಾಳೆ. ಭಗವತೀ ಎಂದರೆ ಶ್ರೀಮಂತಳೂ, ಮಹಾಮಹಿಮಶಾಲಿನಿಯಾದ ಷಡ್ಗುಣೈಶ್ವರ್ಯಸಂಪನ್ನಳೂ, ಸರ್ವಜ್ಞಳೂ ಸರ್ವಶಕ್ತಳೂ ಆದ ಭುವನೇಶ್ವರೀಮಾತೆಯು. ಈ ಅಂಶವನ್ನು ಮೊದಲನೆಯ ಸ್ಕಂಧದ ಹದಿನಾರನೆಯ ಅಧ್ಯಾಯದಲ್ಲೂ, ಎಲ್ಲ ಸ್ಕಂಧಗಳಲ್ಲೂ ಅಲ್ಲಲ್ಲೇ ಬರುವ ಸ್ತೋತ್ರಭಾಗಗಳಲ್ಲೂ, ಹೇಳಿರುತ್ತದೆ. ಮತ್ತು ಈ ಸ್ಕಂಧದಲ್ಲೂ ಪುಟ (೨೫-೨೬, ೯೮, ೧೮೩-೧೮೫, ೨೦೫, ೨೦೯-೨೧೨, ೨೬, ೨೩೨-೨೩೪, ೨೬೪-೨೬೯, ೩೦೦-೩೦೨), ಗಳನ್ನು ನೋಡಬಹುದು. ಈ ದೇವಿಗೆ ಪರಾಶಕ್ತಿ, ಮಹಾಮಾಯೆ, ಎಂದು ಮುಂತಾದ ವ್ಯವಹಾರಗಳೂ ಇವೆ. ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳೂ, ಇವರ ಸಹಧರ್ಮಿಣಿಯರಾದ ವಾಣೀ, ಲಕ್ಷ್ಮೀ, ಉಮಾದೇವಿಯರೂ ಈ ಪರಾಶಕ್ತಿಯಿಂದ ಉಂಟಾಗಿ, ಆ ಶಕ್ತಿಯ ಅಂಶರೂಪರಾಗಿರುತ್ತಾರೆ. ಇಂತಹ ಭಗವತೀದೇವಿಯ ವಿಷಯದಲ್ಲಿ ಓದುವವರ ಮತ್ತು ಕೇಳುವವರ ಮನಸ್ಸಿನಲ್ಲಿ ಭಕ್ತಿಯನ್ನುಂಟುಮಾಡುವ ಗ್ರಂಥಕ್ಕೆ ದೇವೀಭಾಗವತವೆಂದು ಹೆಸರು.

ಈ ದೇವಿಯು ಪರಬ್ರಹ್ಮತತ್ವದಲ್ಲಿ ಸೃಜ್ಯಮಾನಗಳಾದ ಪ್ರಾಣಿಗಳ ಕರ್ಮವಶದಿಂದ ಆಪೇಕ್ಷಿಕವಾಗಿ ಉಂಟಾಗುವ ಪ್ರಥಮಸ್ಪಂದರೂಪವಾದ ಶಕ್ತಿರೂಪಳಾಗಿದಾಳೆ. ಈ ಶಕ್ತಿ ಅಥವಾ ಮಾಯೆಯಿಂದ ಕ್ರಮವಾಗಿ ತ್ರಿಮೂರ್ತಿಗಳೂ ಅವರ ಪತ್ನಿಯರೂ, ಜೀವರೂ ಚರಾಚರಾತ್ಮಕವಾದ ಈ ಪ್ರಪಂಚಗಳೂ ಉಂಟಾಗುತ್ತವೆ. ಹೀಗೆ ಬ್ರಹ್ಮತತ್ವದ ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿಗಳೇ ಅವು ಪ್ರಕಟವಾಗಿರುವಾಗ ಮಾಯೆ ಎಂಬ ಉಪಾಧಿಯಾಗಿರುತ್ತದೆ. ಈ ಮಾಯೆಯು ಸತ್ವರಜಸ್ತಮಸ್ಸುಗಳೆಂಬ ತ್ರಿಗುಣಗಳ ಸ್ವರೂಪವಾದುದು. ಈ ಗುಣಗಳ ವಿಷಮಸ್ಥಿತಿಯಿಂದ ಜಗತ್ತಿನ ಸೃಷ್ಟಿಸ್ಥಿತಿಲಯಗಳು ಆಗುತ್ತಿರುತ್ತವೆ. ಇದೇ ಮಾಯೆಯ ವ್ಯಕ್ತಸ್ಥಿತಿಯು. ಇದರ ಪರಿಣಾಮರೂಪಗಳಾದ ಸ್ಥೂಲಕಾರ್ಯಗಳೇ ಪ್ರಪಂಚವಾಗಿ ಏರ್ಪಡುತ್ತಿರುತ್ತದೆ. ಈ ಮಾಯಾಸಂವಳಿತಬ್ರಹ್ಮತತ್ವಕ್ಕೇ ಹಿರಣ್ಯಗರ್ಭ ಅಥವಾ ಪ್ರಥಮಶರೀರೀ ಎಂಬ ವ್ಯವಹಾರವಿದೆ. ಈ ಅಂಶವನ್ನು ಹಿರಣ್ಯಗರ್ಭಸ್ಸಮವರ್ತತಾಗ್ರೇ, ಸವೈಶರೀರೀ ಪ್ರಥಮಃ, ಎಂದು ಶ್ರುತಿಸ್ಮೃತಿಗಳು ತಿಳಿಸುತ್ತವೆ. ಈ ಹಿರಣ್ಯಗರ್ಭನೂ ಉಪಾಧಿಯಾದ ಮಾಯೆಯೂ, ಶಿವ ಮತ್ತು ಶಕ್ತಿ ಎಂಬ ವ್ಯವಹಾರವನ್ನು ಪಡೆದಿರುತ್ತಾರೆ. ಇವರಿಂದ ಕ್ರಮವಾಗಿ ತ್ರಿಮೂರ್ತಿಗಳೂ ಅವರ ಪತ್ನಿಯರೂ, ಜೀವರೂ, ಭೂತತನ್ಮಾತ್ರೆಗಳೂ ಉಂಟಾಗುತ್ತವೆ. ಈ ಸಾಕ್ಷಾತ್ಸೃಷ್ಟಿಗೆ ಸರ್ಗವೆಂದು ಹೆಸರು. ಆಮೇಲೆ ತ್ರಿಮೂರ್ತಿಗಳು ಒಂದೊಂದು ಗುಣವೂ ಮುಂದಾಗಿರುವ ಮಾಯೆಯ ಶಕ್ತಿಗಳನ್ನು ಉಪಾಧಿಯಾಗಿ ಪಡೆದು .ಕ್ರಮವಾಗಿ ಸೃಷ್ಟಿಸ್ಥಿತಿಲಯಗಳನ್ನು ನೆರವೇರಿ

ಸುತ್ತಿರುತ್ತಾರೆ. ಇವರ ಉಪಾಧಿಯಾದ ಮಾಯೆಯ ಶಕ್ತ್ಯಂಶಗಳ ಸ್ವರೂಪರಾದ ವಾಣೀ ಲಕ್ಷ್ಮೀ ಉಮಾದೇವಿಯರು ಪರಾಶಕ್ತಿರೂಪಳಾದ ಮಾಯೆಯಿಂದ ತ್ರಿಮೂರ್ತಿಗಳಿಗೆ ದೊರೆಯುತ್ತಾರೆ. ದೇ. ಭಾ. ೩ ಸ್ಕಂ. ೬ ಅ. ನೋಡಬೇಕು. ಆಮೇಲೆ ಬ್ರಹ್ಮನೂ ಅವನ ಮಾನಸಪುತ್ರರೂ ಸೃಷ್ಟಿಕಾರ್ಯವನ್ನು ಮುಂದುವರಿಯಿಸುತ್ತಾರೆ. ಇದಕ್ಕೆ ಪ್ರತಿಸರ್ಗ ಅಥವಾ ಅನುಸೃಷ್ಟಿ ಎಂದು ಹೆಸರಿದೆ. ಇದರಂತೆಯೇ ಸ್ವಾಯಂಭುವ ಮುಂತಾದ ಮನ್ವಂತರಕಾಲಗಳನ್ನೂ, ಸೂರ್ಯಚಂದ್ರಾದಿ ವಂಶದ ರಾಜರ ಪರಂಪರೆಯನ್ನೂ, ಅವರು ನೆರವೇರಿಸಿದ ವಿಶೇಷ ಧರ್ಮವುಳ್ಳ ಮಹಾಕಾರ್ಯಗಳೆಂಬ ವಂಶಾನುಚರಿತಗಳನ್ನೂ ವರ್ಣಿಸಿರುವ ಗ್ರಂಥಕ್ಕೆ ಪುರಾಣವೆಂದು ಹೆಸರಿದೆ. ಈ ಅಂಶವನ್ನು, ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ | ವಂಶಾನುಚರಿತಂ ಚೇತಿ ಪುರಾಣಂ ಪಂಚಲಕ್ಷಣಂ || ದೇ. ಭಾ. ಸ್ಕಂ. ೧. ಅ. ೨. ಶ್ಲೋ. ೧೭ ರಲ್ಲೂ, ಮತ್ಸ್ಯಪುರಾಣ ೫೩ ನೆಯ ಅಧ್ಯಾಯದಲ್ಲೂ ಹೇಳಿದೆ. ಆದರೆ ಮಹಾಪುರಾಣಗಳಲ್ಲಿ ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಅಂತರ, ವಂಶ, ವಂಶ್ಯಾನುಚರಿತ, ಸಂಸ್ಥಾ, ಹೇತು, ಅಪಾಶ್ರಯ ಎಂಬ ಹತ್ತು ಲಕ್ಷಣಗಳಿರುತ್ತವೆ; ಎಂದು ಹೇಳಿದೆ.

ಮೇಲೆ ವಿವರಿಸಿರುವಂತೆ ಪ್ರಪಂಚಗಳ ಸೃಷ್ಟಿ ಸ್ಥಿತಿ ಲಯಗಳನ್ನು ನೆರವೇರಿಸುತ್ತಾ ಜಗದ್ವ್ಯವಹಾರವನ್ನು ಸಾಗಿಸುತ್ತಿರುವ ಪ್ರಥಮದಂಪತಿಗಳಾದ ಹಿರಣ್ಯಗರ್ಭ ಬ್ರಹ್ಮ ಮತ್ತು ಮಹಾಮಾಯೆ ಅಥವಾ ಪರಾಶಕ್ತಿಯನ್ನು, ಶಿವ ಮತ್ತು ಶಕ್ತಿ ಎಂದು ಭಕ್ತರು ಅರ್ಚನೆ, ಜಪ, ಧ್ಯಾನಗಳಲ್ಲಿ ಆರಾಧಿಸುತ್ತಾರೆ. ' ಶಿವಶ್ಶಕ್ತ್ಯಾಯುಕ್ತಃ ' ಎಂದು ಮೊದಲಾಗುವ ಸೌಂದರ್ಯಲಹರಿಯಲ್ಲಿ ಶ್ರೀಶಂಕರಾಚಾರ್ಯರೂ ಪರಾಶಕ್ತಿರೂಪಳಾದ ದೇವಿಯನ್ನು ಸ್ತುತಿಸಿರುತ್ತಾರೆ. ಈ ದೇವಿಯೇ ಈ ಮಹಾಪುರಾಣದಲ್ಲೂ ಪ್ರತಿಪಾದ್ಯಳಾಗಿ ಆರಾಧ್ಯಳಾಗಿರುವ ದೇವತೆಯು. ಈ ಶಿವನೂ ಶಕ್ತಿಯೂ ಒಂದೇ ತತ್ವದ ಎರಡು ರೂಪಗಳಾಗಿ, ಅಗ್ನಿಯೂ ದಾಹಕಶಕ್ತಿಯೂ ಅಭಿನ್ನವಾಗಿರುವಂತೆ, ಅವಿನಾಭಾವದಿಂದ ಅಭಿನ್ನರಾಗಿರುತ್ತಾರೆ. ಇದೇ ಶುದ್ಧ ಪರಬ್ರಹ್ಮತತ್ವದ ವ್ಯಾವಹಾರಿಕಸ್ವರೂಪವು. ನತಸ್ಯ ಕಾರ್ಯಂ ಕರಣಂಚ ವಿದ್ಯತೇ ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ | ಪರಾಸ್ಯಶಕ್ತಿರ್ವಿವಿಧೈವಶ್ರೂಯತೇ ಸ್ವಾಭಾವಿಕೀಜ್ಞಾನಬಲಕ್ರಿಯಾ ಚ || ಎಂದು ಶ್ವೇತಾಶ್ವತರ ಮುಂತಾದ ಉಪನಿಷತ್ತುಗಳಲ್ಲೂ ಈ ತತ್ವವನ್ನೇ ವರ್ಣಿಸಿರುತ್ತದೆ. ಶೈವ, ವೈಷ್ಣವಾದಿ ಮತಧರ್ಮಗಳಲ್ಲಿ ಪ್ರತಿಪಾದಿಸಿರುವ ಸಗುಣ ಸಾಕಾರ ಪರತತ್ವಸ್ವರೂಪದ ಪರಾಕಾಷ್ಠೆಯೂ ಇದೇ ಆಗಿದೆ. ತ್ರಯೀಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ, ಎಂಬ ಪದ್ಯದಲ್ಲಿ ಶ್ರೀಶಂಕರಾಚಾರ್ಯರು ಎಲ್ಲ ಮತಧರ್ಮ

ತತ್ವಗಳ ಸಾಮರಸ್ಯ ಐಕಮತ್ಯಗಳನ್ನು ಮನಗಂಡು ವರ್ಣಿಸಿರುವ ತತ್ವವೂ ಇದೇ ಆಗಿದೆ. ಎಲ್ಲ ಬಗೆಯ ಮತಧರ್ಮಗಳೂ, ಪೂಜಾ ಉಪಾಸನೆಗಳೂ, ಇಷ್ಟದೇವತೆಯ ಅನುಗ್ರಹವನ್ನು ಉಂಟುಮಾಡುವ, ಕಡೆಗೆ ಮೋಕ್ಷವನ್ನೂ ದೊರಕಿಸುವ ಮಾರ್ಗ ಗಳಾಗಿವೆ. ಆದರೂ ಪ್ರತಿಯೊಬ್ಬರೂ ತಮ್ಮ ಸಂಸ್ಕೃತಿಯ ಮಟ್ಟಕ್ಕೆ ತಕ್ಕಂತೆ ಮುಂದಿನ ಮೆಟ್ಟಲನ್ನು ವಿಮರ್ಶಿಸಿ ಆರಿಸಿಕೊಂಡು ಮುಂದುವರಿಯಬೇಕು. ಮಾನವನ ಮನಸ್ಸು ಸ್ಥೂಲವಿಷಯಗಳ ವಿಚಾರದಿಂದ ಸೂಕ್ಷ್ಮವಸ್ತುಗಳ ತಿಳಿವಳಿ ಕೆಗೂ, ತಿಳಿದಿರುವ ಯುಕ್ತಿಪ್ರಮಾಣಗಳಿಂದ ತಿಳಿಯದಿರಬಹುದಾದ ಮೇಲು ಮೇಲಿನ ಸಿದ್ಧಾಂತಗಳಿಗೂ, ಸಾಕಾರ ಸಗುಣಮೂರ್ತಿಯ ಪೂಜೆ ಉಪಾಸನೆಗಳಿಂದ ನಿರಾಕಾರ ನಿರ್ಗುಣ ನಿತ್ಯಪರತತ್ವದ ಅಪರೋಕ್ಷಾನುಭವಕ್ಕೂ ಸಾಗುತ್ತಿರುತ್ತದೆ. ಇದೇ ಸ್ವಾಭಾ ವಿಕವಾದ ಪ್ರಗತಿಯ ಮಾರ್ಗವಾಗಿದೆ. ಹೀಗೆ ತ್ರಿಮೂರ್ತಿಗಳಿಗೂ ಕಾರಣವಾಗಿ ರುವುದರಿಂದ ಸೂಕ್ಷ್ಮವೂ ಮೇಲಿನ ಅಂತಸ್ತಿನದೂ ಮತ್ತು ಸೃಷ್ಟಿಕ್ರಮದಲ್ಲಿ ಪರ ಬ್ರಹ್ಮತತ್ವದಿಂದ ಉಂಟಾಗುವ ತತ್ವಗಳಲ್ಲಿ ಮೊದಲನೆಯದೂ ಆದ ಈ ತತ್ವವನ್ನೇ ಈ ದೇವೀಭಾಗವತವು ಮುಖ್ಯವಾಗಿ ವರ್ಣಿಸುತ್ತದೆ. ಇಂತಹ ಮೇಲಾದ ತತ್ವವನ್ನು ಬೋಧಿಸುತ್ತಾ ಓದುಗರನ್ನೂ ಶ್ರೋತೃಗಳನ್ನೂ ಉದಾರಹೃದಯರನ್ನಾಗಿ ಮಾಡುತ್ತಾ ಸರ್ವಮತಸಹನೆಯನ್ನು ಮನಗಾಣಿಸುತ್ತದೆ. ಆದುದರಿಂದ ಈ ಪುರಾಣವೇ ಮಹಾ ಪುರಾಣವೆಂಬ ಹಿರಿಯ ಬಿರುದಿಗೆ ಅರ್ಹವಾಗಿದೆ.

ಇಂತಹ ಗ್ರಂಥದ ಪರಿಚಯವು ಕನ್ನಡಿಗರೆಲ್ಲರಿಗೂ ಆಗಲೆಂಬ ಉದಾತ್ತವಾದ ಉದ್ದೇಶದಿಂದ ನಮ್ಮನ್ನಾಳುತ್ತಿರುವ ಮಹಾಪ್ರಭುಗಳಾದ **ಶ್ರೀ ಜಯಚಾಮ ರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಸ್ವಾಮಿಗಳವರ** ಆಜ್ಞಾನುಸಾರ ವಾಗಿ ಈ ಮಹಾಪುರಾಣವನ್ನು ಕನ್ನಡಭಾಷೆಯಲ್ಲಿ ಬರೆದು ಮುದ್ರಿಸಿ ಪ್ರಕಟಪಡಿಸ ಲಾಗಿದೆ. ಈ ಘನತಮವಾದ ಉದ್ದೇಶವು ಸರ್ವದಾ ನೆರವೇರುತ್ತಿರುವಂತಾಗಲೆಂದು ಪರಾಶಕ್ತಿಸ್ವರೂಪಳಾದ ಮಹಾಮಹಿಮಳಾದ ಮಹಿಷಮರ್ದಿನೀ ಜಗನ್ಮಾತೆಯನ್ನು ಪ್ರಾರ್ಥಿಸುತ್ತಿರುತ್ತೇನೆ.

ಎಡತೊರೆ ದೇವಯ್ಯದೀಕ್ಷಿತರ ಮಗ
**ಚಂದ್ರಶೇಖರಶಾಸ್ತ್ರೀ**

# ದೇವೀಭಾಗವತಮಹಾಪುರಾಣದಲ್ಲಿನ ನಾಲ್ಕನೆಯ ಸ್ಕಂಧದ ವಿಷಯಸೂಚಿಕೆ

———

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಪ್ರಥಮೋಽಧ್ಯಾಯಃ ||

### ಮೊದಲನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ವಾಸವೇಯ ಮುನಿಶ್ರೇಷ್ಠ ಸರ್ವಜ್ಞಾನನಿಧೇಽನಘ ।**
**ಪ್ರಷ್ಟುಮಿಚ್ಛಾಮ್ಯಹಂ ಸ್ವಾಮಿನ್ನಸ್ಮಾಕಂ ಕುಲವರ್ಧನ** ॥೧॥

ಆರ್ಯಾಣಾಂ ಸಂಸ್ಕೃತಿಂ ತಾಮೃಷಿಕವಿಸುಮನೋಲಾಲಿತಾಂ ಧರ್ಮಮೂಲಾಂ
ರಕ್ಷಂತೀ ವರ್ಧಯಂತೀ ವಿಗತಮೃತಿಜರಾ ರಾಜತೇ ವೇದಭಾಷಾ ।
ಸೈಷಾ ಗೀರ್ವಾಣವಾಣೀ ಜಗದಿದಮವತಾತ್ ನಾಶನೇ ಸ್ಪರ್ಧಮಾನಂ
ದತ್ವಾ ಶಾಂತಿಂ ವಿವೇಕಂ ಸುಖಯುತು ಜನತಾಂ ಆಸ್ತಿಕತ್ವಾಭಿವೃದ್ಧ್ಯೈ ॥

ಧರ್ಮವನ್ನು ಅವಲಂಬಿಸಿ ಉಂಟಾಗಿರುವ, ವಿಶ್ವಧರ್ಮದ ಅರಿವು ಜನರಲ್ಲಿ ಬೇರೂರಿ ಬೆಳೆಯುವಂತೆ ಮಾಡಲು ಇದವರೆಗಿನಂತೆ ಮುಂದಕ್ಕೂ ಸಾಧನವಾಗಿರಬಲ್ಲ, ವ್ಯಾಸ, ವಾಲ್ಮೀಕಿ ಮುಂತಾದ ಋಷಿಗಳಿಂದಲೂ, ಕಾಳಿದಾಸ, ಭವಭೂತಿ ಮುಂತಾದ ಕವಿಗಳಿಂದಲೂ, ಜಗನ್ನಾಥ, ವಿದ್ಯಾನಾಥ, ಕ್ಷೇಮೇಂದ್ರ, ಅಪ್ಪಯ್ಯ ದೀಕ್ಷಿತ ಮುಂತಾದ ಕವಿಸುಹೃದಯರಾದ ವಿಮರ್ಶಕರಿಂದಲೂ, ಇಂದ್ರ, ಯಮ, ಮುಂತಾದ ದೇವತೆಗಳಿಂದಲೂ, ಆದರಿಸಿ ಬೆಳೆಸಲ್ಪಟ್ಟಿರುವ, ಪ್ರಪಂಚದಲ್ಲಿರುವ ಇತರ ಸಂಸ್ಕೃತಿಗಳಿಗಿಂತಲೂ ಹೆಚ್ಚು ಪುರಾತನವಾದ, ಕಾಲಕ್ರಮದಲ್ಲಿ ಬಂದೊದಗಿದ ಇತರ ಸಂಸ್ಕೃತಿಗಳ ಆಘಾತಗಳಿಂದ ನಷ್ಟವಾಗದೆ ಉಳಿದು ಊರ್ಜಿತವಾಗಿರುವ ನಮ್ಮ ಭಾರತಾರ್ಯರ ಸಂಸ್ಕೃತಿಯನ್ನು ಈ ವೇದ ಪುರಾಣ ಕಾವ್ಯಗಳ ಭಾಷೆಯು ಕಾಪಾಡುತ್ತಲೂ ಬೆಳೆಯಿಸುತ್ತಲೂ ಪ್ರಕಾಶಿಸುತ್ತಿದೆ ; ಮುಪ್ಪುಸಾವುಗಳಿಲ್ಲದೆ ವಿರಾಜಿ

ಸುತ್ತದೆ. ಇಂತಹ ದೇವಭಾಷೆಯಾದ ಸಂಸ್ಕೃತವಾಣಿಯು ಈ ಪ್ರಪಂಚದಲ್ಲಿರುವ ಜನಾಂಗಗಳಲ್ಲಿ ಒಬ್ಬರಿಗೊಬ್ಬರು ಸಹಾನುಭೂತಿಯಿಂದ ಸಹಕರಿಸುವುದರಲ್ಲಿ ಹೋರಾಡುತ್ತಾ ಮುಂದುವರಿಯುವುದಕ್ಕಿಂತ ಹೆಚ್ಚಾಗಿ, ಒಬ್ಬರನ್ನೊಬ್ಬರು ಹಾಳುಮಾಡಿಕೊಳ್ಳಲು ಹೋರಾಡುತ್ತಿರುವ ರಾಜ್ಯಗಳನ್ನು ಒಳಗೊಂಡಿರುವ ಈ ಜಗತ್ತನ್ನು ಧಾರ್ಮಿಕಸಂಸ್ಕೃತಿಯ ಪ್ರಚಾರಣದಿಂದ ಕಾಪಾಡಲಿ. ವಿವೇಕವನ್ನೂ ಶಾಂತಿಯನ್ನೂ ಜನಾಂಗಗಳಿಗೆ ಕೊಟ್ಟು, ಅವುಗಳಲ್ಲಿ ಆಸ್ತಿಕತ್ವವನ್ನು ಬೆಳೆಯಿಸುವುದರಿಂದ ಜನರನ್ನು ಸಂತೋಷವುಳ್ಳವರನ್ನಾಗಿ ಮಾಡಲಿ. ಈ ಜಗತ್ತಿನ ಜನಾಂಗಗಳು ಪರಸ್ಪರವಾಗಿ ಯುದ್ಧದ ಭಯದಿಂದ ಯುದ್ಧವನ್ನು ತಪ್ಪಿಸುವುದಕ್ಕೆಂದು ಹೇಳುತ್ತಾ ಯುದ್ಧಸಾಮಗ್ರಿಗಳನ್ನು ಹೆಚ್ಚುಹೆಚ್ಚಾಗಿ ತಯಾರಿಸುತ್ತಿದ್ದು, ಈಗ ರಣರಂಗಕ್ಕೆ ಇನ್ನೊಂದಾವೃತ್ತಿಯೂ ದುಮುಕಿವೆ. ಯುದ್ಧದಲ್ಲಿ ತೊಡಗಿರುವ ಮತ್ತು ಇತರ ಎಲ್ಲ ಪ್ರಜೆಗಳಿಗೂ ಸಾವು, ನೋವು, ಸಂಕಟಗಳೂ, ಅರ್ಥನಾಶ, ಸಾಮಾಜಿಕಹಾನಿ, ಪ್ರಗತಿಪ್ರತಿಬಂಧಗಳೂ ದುಃಖ ಆತಂಕಗಳನ್ನು ತಂದೊಡ್ಡಿವೆ. ಇದಕ್ಕೆಲ್ಲ ಮೂಲ ಕಾರಣವು ಧರ್ಮದ, ವಿಶ್ವಧರ್ಮದ, ಅರಿವು ಆಚರಣೆಗಳು ಜನಾಂಗಗಳಿಗೆ ಒಲಿದು ಬರದೆ ಇರುವುದೇ ಆಗಿದೆ. ಈ ಪ್ರಪಂಚದಲ್ಲಿ ಶಾಂತಿಸುಖಗಳು ಪುನಃ ನೆಲಸುವಂತಾಗಬೇಕಾದರೆ ಧಾರ್ಮಿಕವಿದ್ಯೆಯ, ವಿಶ್ವಧರ್ಮದ ಆಚರಣೆಯಮೂಲಕವೇ ಆಗಬೇಕಾಗಿದೆ. ಆದುದರಿಂದ ಈ ಆಶಂಸನೆಯು ಈಗ ಹೆಚ್ಚು ಆವಶ್ಯಕವೂ ಉಚಿತವೂ ಆಗಿದೆ. ಸಂಸ್ಕೃತಭಾಷಾಸಾಹಿತ್ಯಗಳೂ, ಧಾರ್ಮಿಕಸಂಸ್ಕೃತಿಯೂ, ಒಂದಕ್ಕೊಂದು ಉತ್ತಮವಾಗಿ ಹೊಂದಿಕೊಂಡು ಇರುವುದರಿಂದ, ಇದರ ಪ್ರಚಾರದಿಂದಲೇ ಈ ಜಗತ್ತಿನ ಕಲ್ಯಾಣವನ್ನು ಸಾಧಿಸಬೇಕಾಗಿದೆ.

ಹಿಂದಿನ ಅಧ್ಯಾಯಗಳಲ್ಲಿ ಶ್ರೀಮಹಾವಿಷ್ಣುವು ನೆರವೇರಿಸಿದ ಅವತಾರಕಾರ್ಯಗಳಲ್ಲಿ ಶ್ರೀರಾಮಾವತಾರದ ವರೆಗಿನ ಕಥೆಗಳನ್ನು ಕೇಳಿ ತಿಳಿದುಕೊಂಡು, ಈಗ ಶ್ರೀಕೃಷ್ಣಾವತಾರದ ಕಥೆಯನ್ನು ಕೇಳಿ ತಿಳಿದುಕೊಳ್ಳಲು, ಜನಮೇಜಯರಾಜನು ವ್ಯಾಸಮಹರ್ಷಿಯನ್ನು ಹೀಗೆ ಕೇಳಿದನು— ಯೋಜನಗಂಧಿಯ ಮಗನಾದ, ಮುನಿಗಳಲ್ಲಿ ಉತ್ತಮನಾದ, ಸಮಸ್ತವನ್ನೂ ತಿಳಿದವನಾದ, ಪರಿಶುದ್ಧನಾದ, ನಮ್ಮ ವಂಶವನ್ನುದ್ಧಾರಮಾಡುವ ಓ ವ್ಯಾಸಸ್ವಾಮಿಯೇ, ನಿನ್ನನ್ನು ಪ್ರಶ್ನಿಸಲು ಇಚ್ಛಿಸುವೆನು.

**ಶೂರಸೇನಸುತಃ ಶ್ರೀಮಾನ್ವಸುದೇವಃ ಪ್ರತಾಪವಾನ್ ।**
**ಶ್ರುತಂ ಮಯಾ ಹರಿರ್ಯಸ್ಯ ಪುತ್ರಭಾವಮವಾಪ್ತವಾನ್ ॥೨॥**

ಶೂರಸೇನಮಹಾರಾಜನ ಮಗನಾದ, ಪರಾಕ್ರಮಶಾಲಿಯಾದ, ಸಂಪದ್ಯುಕ್ತನಾದ ವಸುದೇವನಿಗೆ ಮಗನಾಗಿ ಶ್ರೀ ಮಹಾವಿಷ್ಣುವು ಅವತರಿಸಿದನೆಂದು ನಾನು ಕೇಳಿ ತಿಳಿದಿರುತ್ತೇನೆ.

**ದೇವಾನಾಮಪಿ ಪೂಜ್ಯೋಽಭೂನ್ನಾಮ್ನಾ ಚಾಽಽನಕದುಂದುಭಿಃ ।**
**ಕಾರಾಗಾರೇ ಕಥಂ ಬದ್ಧಃ ಕಂಸಸ್ಯ ಧರ್ಮತತ್ಪರಃ ॥೩॥**

ವಸುದೇವನು ಹುಟ್ಟಿದಾಗ ದೇವತೆಗಳು ಸಂತೋಷದಿಂದ ಆನಕ, ದುಂದುಭಿ, ಮುಂತಾದ ವಾದ್ಯಗಳಿಂದ ಧ್ವನಿಮಾಡಿದರು. ಅದರಿಂದ ವಸುದೇವನಿಗೆ ಆನಕದುಂದುಭಿ ಎಂಬ ಹೆಸರು ಪ್ರಸಿದ್ಧವಾಯಿತು. ಹೀಗೆ ದೇವತೆಗಳಿಂದಲೂ ಅಭಿನಂದನಗೌರವವನ್ನು ಪಡೆಯಲು ಯೋಗ್ಯನಾದ, ಸರ್ವದಾ ಧರ್ಮದಲ್ಲಿ ನಿರತನಾಗಿದ್ದ ವಸುದೇವನು ಕಂಸನ ಸೆರೆಮನೆಯಲ್ಲಿ ಹೇಗೆ ಬಂಧಿಸಲ್ಪಟ್ಟನು ?

**ದೇವಕ್ಯಾ ಭಾರ್ಯಯಾ ಸಾರ್ಧಂ ಕಿಮಾಗಃ ಕೃತವಾನಸೌ ।**
**ದೇವಕ್ಯಾ ಬಾಲಷಟ್ಕಸ್ಯ ವಿನಾಶಶ್ಚ ಕೃತಃ ಪುನಃ ॥೪॥**

**ತೇನ ಕಂಸೇನ ಕಸ್ಮಾದ್ವೈ ಯಯಾತಿಕುಲಜೇನ ಚ ।**
**ಕಾರಾಗಾರೇ ಕಥಂ ಜನ್ಮ ವಾಸುದೇವಸ್ಯ ವೈ ಹರೇಃ ॥೫॥**

ಹೆಂಡತಿಯಾದ ದೇವಕಿಯಿಂದ ಕೂಡಿದ ವಸುದೇವನು ಯಾವ ಅಪರಾಧವನ್ನು ಮಾಡಿದನು? ಯಯಾತಿಮಹಾರಾಜನ ಒಳ್ಳೆಯ ವಂಶದಲ್ಲಿ ಉತ್ಪನ್ನನಾದರೂ ಕಂಸನು ಯಾವ ಕಾರಣದಿಂದ ದೇವಕಿಯಲ್ಲಿ ಹುಟ್ಟಿದ ಆರುಜನ ಮಕ್ಕಳನ್ನು ಸಂಹರಿಸಿದನು? ಸೆರೆಮನೆಯಲ್ಲಿ ವಾಸುದೇವನಾದ ವಿಷ್ಣುವು ಹೇಗೆ ಜನಿಸಿದನು?

**ಗೋಕುಲೇ ಚ ಕಥಂ ನೀತೋ ಭಗವಾನ್ ಸಾತ್ವತಾಂ ಪತಿಃ ।**
**ಗತೋ ಜನ್ಮಾಂತರಂ ಕಸ್ಮಾತ್ಪಿತರೌ ನಿಗಡೇ ಸ್ಥಿತೌ ॥೬॥**

ಪ್ರಪಂಚಪರಿಪಾಲಕನಾದ ನಾರಾಯಣನು ಕ್ಷತ್ರಿಯ ವಂಶದಲ್ಲಿ ಜನಿಸಿದರೂ ತಂದೆತಾಯಿಗಳು ಸೆರೆಮನೆಯಲ್ಲಿದ್ದರೂ ಕೂಡ ಹೇಗೆ ಅಲ್ಲಿಂದ ಹೊರಗೆ ಬಂದು ಗೋಕುಲದಲ್ಲಿ ನಂದನ ಮನೆಯಲ್ಲಿ ಬೆಳೆದನು? ಲೋಕದೃಷ್ಟಿಯಿಂದ ಜನ್ಮಾಂತರವನ್ನು ಕ್ಷತ್ರಿಯಜನ್ಮದಿಂದ ಗೋಪಾಲಕರ ಜನ್ಮವನ್ನು ಹೇಗೆ ಪಡೆದನು?

**ದೇವಕೀವಸುದೇವೌ ಚ ಕೃಷ್ಣಸ್ಯಾಮಿತತೇಜಸಃ ।**
**ಕಥಂ ನ ಮೋಚಿತೌ ವೃದ್ಧೌ ಪಿತರೌ ಹರಿಣಾಽಮುನಾ ॥೭॥**

ಅಪಾರವಾದ ಪರಾಕ್ರಮಶಾಲಿಯಾದ ಈ ನಾರಾಯಣನು, ಮುದುಕರೂ, ತಾಯಿತಂದೆಗಳೂ ಆದ ದೇವಕೀವಸುದೇವರನ್ನು ಏತಕ್ಕಾಗಿ ಸೆರೆಮನೆಯಿಂದ ಬಿಡಿಸಲಿಲ್ಲವು?

**ಜಗತ್ಕರ್ತುಂ ಸಮರ್ಥೇನ ಸ್ಥಿತೇನ ಜನಕೋದರೇ ।**
**ಪ್ರಾಕ್ತನಂ ಕಿಂ ತಯೋಃ ಕರ್ಮ ದುರ್ವಿಜ್ಞೇಯಂ ಮಹಾತ್ಮಭಿಃ ॥೮॥**

ಜಗತ್ತನ್ನೆಲ್ಲ ಸೃಷ್ಟಿಸಲು ಸಮರ್ಥನಾದ ಭಗವನ್ನಾರಾಯಣನು ಅವರ ಗರ್ಭದಲ್ಲಿರಲು ಅವರಿಗೆ ಹೇಗೆ ಪೂರ್ವಜನ್ಮದ ಪಾಪಕರ್ಮವು ಉಳಿದಿದ್ದಿತು? ಇದು ಆಶ್ಚರ್ಯಕರವಾಗಿದೆ. ಪರಮೇಶ್ವರನೇ ಮಗನಾಗಿ ಜನಿಸುವಷ್ಟು ಪುಣ್ಯಶಾಲಿಗಳಾಗಿರಬೇಕಾದವರಲ್ಲಿಯೂ ಕೂಡ ಕರ್ಮವು ಕಳೆದಿರಲಿಲ್ಲವೆಂದೂ ಕಾರಾಗೃಹವನ್ನು ಅನುಭವಿಸಬೇಕಾಗಿತ್ತೆಂದೂ ಹೇಳಿದರೆ ಇದನ್ನು ಸಮಂಜಸವಾಗಿ ತಿಳಿಯಲು ಪ್ರಾಜ್ಞರಿಗೂ ಸಾಧ್ಯವಾಗುವುದಿಲ್ಲವು.

**ಜನ್ಮ ವೈ ವಾಸುದೇವಸ್ಯ ಯತ್ರಾಸೀತ್ಪರಮಾತ್ಮನಃ ।**
**ಕೇ ಕೇ ಪುತ್ರಾಶ್ಚ ಕಾ ಬಾಲಾ ಯಾ ಕಂಸೇನ ವಿಪೋಥಿತಾ ॥೯॥**

ಪರಮಾತ್ಮನಾದ ವಾಸುದೇವನ ಜನ್ಮವು ಎಲ್ಲಿ ಸಂಭವಿಸಿತು? ಹತರಾದ ಮಕ್ಕಳೆಲ್ಲರೂ ಯಾರು? ಕಲ್ಲಿನ ಮೇಲೆ ಹೊಡೆಯಲು ಎತ್ತಿದಾಗ ಕಂಸನಿಂದ ತಪ್ಪಿಸಿಕೊಂಡ ಆ ಬಾಲೆ ಯಾರು?

**ಶಿಲಾಯಾಂ ನಿರ್ಗತಾ ವ್ಯೋಮ್ನಿ ಜಾತಾ ತ್ವಷ್ಟಭುಜಾ ಪುನಃ ।**
**ಗಾರ್ಹಸ್ಥ್ಯಂ ಚ ಹರೇರ್ಬ್ರೂಹಿ ಬಹುಭಾರ್ಯಸ್ಯ ಚಾನಘ ॥೧೦॥**

ಶಿಲೆಯಿಂದ ತಪ್ಪಿಸಿಕೊಂಡು ಆಕಾಶಕ್ಕೆ ಹಾರಿ ಎಂಟು ಭುಜಗಳಿಂದ ಕೂಡಿ ತೋರಿದ ಆ ಶಕ್ತಿಯು ಯಾರು? ಮತ್ತು ಕೃಷ್ಣನ ಗೃಹಸ್ಥಾಶ್ರಮವು ತಾನೇ ಸಾವಿರಾರು ಗೋಪಿಕಾಸ್ತ್ರೀಯರಿಂದ ಹೇಗೆ ನಡೆಯಿತು?

**ಕಾರ್ಯಾಣಿ ತತ್ರ ತಾನ್ಯೇವ ದೇಹತ್ಯಾಗಂ ಚ ತಸ್ಯ ವೈ ।**
**ಕಿಂವದಂತ್ಯಾ ಶ್ರುತಂ ಯತ್ತನ್ಮನೋ ಮೋಹಯತೀವ ಮೇ ॥೧೧॥**

ಆ ಕೃಷ್ಣನ ಕೆಲಸಗಳು ಮತ್ತು ಅವನ ದೇಹತ್ಯಾಗ ಮುಂತಾದವುಗಳನ್ನು ಸಾಮಾನ್ಯಜನಗಳ ಮಾತಿನಿಂದ ಕೇಳಿದ ನನಗೆ, ಅವನು ಅದ್ಭುತಕಾರ್ಯಗಳಿಂದ ದೇವನಂತೆಯೂ, ಸಾಮಾನ್ಯಕಾರ್ಯಗಳಿಂದ ಮಾನವನಂತೆಯೂ ಕಾಣಿಸಿಕೊಳ್ಳುವ ವಿಚಾರವನ್ನು ನೆನಸಿಕೊಂಡರೆ ನನಗೆ ಭ್ರಮೆಯುಂಟಾಗುವಂತಾಗುತ್ತದೆ.

**ಚರಿತಂ ವಾಸುದೇವಸ್ಯ ತ್ವಮಾಖ್ಯಾಹಿ ಯಥಾತಥಂ ।**
**ನರನಾರಾಯಣೌ ದೇವೌ ಪುರಾಣಾವೃಷಿಸತ್ತಮೌ ॥೧೨॥**

ಆ ವಾಸುದೇವನ ಚರಿತ್ರೆಯನ್ನು ಯಥಾವತ್ತಾಗಿ ನನಗೆ ಹೇಳುವವನಾಗು. ಅಲ್ಲದೆ, ನರನಾರಾಯಣರೆಂದು ಪ್ರಸಿದ್ಧರಾದ, ತುಂಬ ಪ್ರಾಚೀನ ಕಾಲದವರಾದ ಋಷಿಗಳಲ್ಲಿ ಶ್ರೇಷ್ಠರಾದ,

**ಧರ್ಮಪುತ್ರೌ ಮಹಾತ್ಮಾನೌ ತಪಶ್ಚೇರತುರುತ್ತಮಂ ।**
**ಯೌ ಮುನೀ ಬಹುವರ್ಷಾಣಿ ಪುಣ್ಯೇ ಬದರಿಕಾಶ್ರಮೇ ॥೧೩॥**

ಮಹಿಮೆಯುಳ್ಳವರಾದ, ಧರ್ಮದೇವನ ಮಕ್ಕಳಾದ ಯಾವ ಆ ಇಬ್ಬರು ಋಷಿಶ್ರೇಷ್ಠರು ಪವಿತ್ರವಾದ ಬದರಿಕಾಶ್ರಮದಲ್ಲಿ ಅನೇಕ ವರ್ಷಗಳವರೆಗೆ ತಪಸ್ಸನ್ನು ಮಾಡಿದರೆಂದು ಪ್ರಸಿದ್ಧವಾಗಿದೆ.

**ನಿರಾಹಾರೌ ಜಿತಾತ್ಮಾನೌ ನಿಃಸ್ಪೃಹೌ ಜಿತಷಡ್ಗುಣೌ ।**
**ವಿಷ್ಣೋರಂಶೌ ಜಗತ್ಸ್ಥೇಮ್ನೇ ತಪಶ್ಚೇರತುರುತ್ತಮಂ ॥೧೪॥**

ಆಹಾರವನ್ನು ಬಿಟ್ಟು, ಇಂದ್ರಿಯಗಳನ್ನು ಜಯಿಸಿ, ಆಶೆಯಿಲ್ಲದವರಾಗಿ ಸ್ವಾಧೀನವಾಗಿರುವ ಆರು ಧರ್ಮಗಳುಳ್ಳ, ವಿಷ್ಣುವಿನ ಅಂಶದಿಂದ ಪ್ರಪಂಚದ ಕ್ಷೇಮಕ್ಕಾಗಿ ಅವತರಿಸಿದ ಅವರು ಉತ್ತಮತಪಸ್ಸನ್ನು ಆಚರಿಸಿದರು.

**ತಯೋರಂಶಾವತಾರೌ ಹಿ ಜಿಷ್ಣುಕೃಷ್ಣೌ ಮಹಾಬಲೌ ।**
**ಪ್ರಸಿದ್ಧೌ ಮುನಿಭಿಃ ಪ್ರೋಕ್ತೌ ಸರ್ವಜ್ಞೈರ್ನಾರದಾದಿಭಿಃ ॥೧೫॥**

ಅವರಿಬ್ಬರ ಅಂಶಾವತಾರವೇ ತುಂಬ ಬಲಶಾಲಿಗಳಾದ ಕೃಷ್ಣಾರ್ಜುನರೆಂದು ಪ್ರಸಿದ್ಧರಾದ, ಸರ್ವಜ್ಞರಾದ ನಾರದರೇ ಮೊದಲಾದ ಮುನಿಜನರಿಂದ ಹೇಳಲ್ಪಟ್ಟಿದೆಯಲ್ಲವೇ ?

**ವಿದ್ಯಮಾನಶರೀರೌ ತೌ ಕಥಂ ದೇಹಾಂತರಂ ಗತೌ ।**
**ನರನಾರಾಯಣೌ ದೇವೌ ಪುನಃ ಕೃಷ್ಣಾರ್ಜುನೌ ಕಥಂ ॥೧೬॥**

ಅವರಿಬ್ಬರೂ ತಮ್ಮ ಶರೀರವಿದ್ದರೂ ಕೂಡ, ಬೇರೆ ಶರೀರವನ್ನು ಹೇಗೆ ಪಡೆದುಕೊಂಡರು? ತೇಜಸ್ವಿಗಳಾದ ಆ ನರನಾರಾಯಣರೇ ತಿರುಗಿ ಕೃಷ್ಣಾರ್ಜುನರು ಆದುದು ಹೇಗೆ?

**ಯೌ ಚಕ್ರತುಸ್ತಪಶ್ಚೋಗ್ರಂ ಮುಕ್ತ್ಯರ್ಥಂ ಮುನಿಸತ್ತಮೌ ।**
**ತೌ ಕಥಂ ಪ್ರಾಪತುರ್ದೇಹೌ ಪ್ರಾಪ್ತಯೋಗೌ ಮಹಾತಪೌ ॥೧೭॥**

ದೇಹದಿಂದ ಬಿಡುಗಡೆ ಹೊಂದಬೇಕೆಂಬ ಉದ್ದೇಶದಿಂದ ಬೇರೆ ಯಾವ ಪುರುಷಾರ್ಥವನ್ನೂ ಉದ್ದೇಶಿಸದೆ ತಪಸ್ಸನ್ನು ಮಾಡುತ್ತಿದ್ದ .ತುಂಬ ತಪಸ್ವಿಗಳಾದ ಯೋಗಸಿದ್ಧಿಯನ್ನು ಪಡೆದಿದ್ದ ಆ ಋಷಿಶ್ರೇಷ್ಠರು ಪುನಃ ಬೇರೆ ದೇಹವನ್ನು ಹೇಗೆ ಹೊಂದಿದರು?

**ಶೂದ್ರಃ ಸ್ವಧರ್ಮನಿಷ್ಠಸ್ತು ದೇಹಾಂತೇ ಕ್ಷತ್ರಿಯಸ್ತು ಸಃ ।**
**ಶುಭಾಚಾರೋ ಮೃತೋ ಯೋ ವೈ ಸ ಶೂದ್ರೋ ಬ್ರಾಹ್ಮಣೋ ಭವೇತ್ ॥**

ಶೂದ್ರನಾದವನು ತನ್ನ ಧರ್ಮದಲ್ಲಿ ನಿರತನಾಗಿದ್ದಲ್ಲಿ ಆ ದೇಹವು ಕಳೆದು ಹೋದಮೇಲೆ ಮುಂದಿನ ಜನ್ಮದಲ್ಲಿ ಕ್ರಮವಾಗಿ ಕ್ಷತ್ರಿಯನಾಗಿ ಜನಿಸುವನು. ಅದೇ ಶೂದ್ರನು ಒಳ್ಳೆಯ ಆಚಾರದಿಂದ ಬಾಳಿ ಸತ್ತಲ್ಲಿ, ಹಾಗೆಯೇ ಕ್ರಮವಾಗಿ ಬ್ರಾಹ್ಮಣನಾಗಿ ಹುಟ್ಟಬೇಕು. ಹೀಗೆ ಒಳ್ಳೆಯವರಾಗಿ ಮೇಲುಮೇಲಿನ ಜನ್ಮಗಳು ಬರುವುದು ಸಕಾರಣವಾಗಿರುತ್ತದೆ. ಅಲ್ಲದೆ,

**ಬ್ರಾಹ್ಮಣೋ ನಿಃಸ್ಪೃಹಃ ಶಾಂತೋ ಭವರೋಗಾದ್ವಿಮುಚ್ಯತೇ ।**
**ವಿಪರೀತಮಿದಂ ಭಾತಿ ನರನಾರಾಯಣೌ ಚ ತೌ ॥೧೯॥**

ಬ್ರಾಹ್ಮಣನು ಆಶೆಯನ್ನು ಬಿಟ್ಟು ಶಾಂತಮನಸ್ಕನಾಗಿ ಧರ್ಮದಲ್ಲಿ ನಿರತನಾಗಿದ್ದರೆ, ಈ ಸಂಸಾರವೆಂಬ ರೋಗದಿಂದಲೇ ಬಿಡುಗಡೆಯನ್ನು ಹೊಂದುವನು. ಆದರೆ ಇದೆಲ್ಲಾ ನರನಾರಾಯಣರ ವಿಷಯದಲ್ಲಿ ವಿಪರೀತವಾಗಿ ಎಂದರೆ ವ್ಯತ್ಯಸ್ತವಾಗಿರುವಂತೆ ಕಾಣುತ್ತಿದೆಯಲ್ಲವೇ?

**ತಪಸಾ ಶೋಷಿತಾತ್ಮಾನೌ ಕ್ಷತ್ರಿಯೌ ತೌ ಬಭೂವತುಃ ।**
**ಕೇನ ತೌ ಕರ್ಮಣಾ ಶಾಂತೌ ಜಾತೌ ಶಾಪೇನ ವಾ ಪುನಃ ॥೨೦॥**

ತಪಸ್ಸೆಂಬ ಅಗ್ನಿಯಿಂದ ಶುದ್ಧಿಯನ್ನು ಪಡೆದ ಆತ್ಮವುಳ್ಳ ಆ ಇಬ್ಬರು ಮುನಿಗಳೂ ಕ್ಷತ್ರಿಯರಾಗಿ ಜನಿಸಿದರು. ಯಾವ ಕಾರಣದಿಂದ ಅಥವಾ ಯಾರ ಶಾಪದಿಂದ ಅವರು ಪುನಃ ಈರೀತಿಯಾಗಿ ಜನ್ಮವನ್ನು ಪಡೆದರು ?

**ಬ್ರಾಹ್ಮಣೌ ಕ್ಷತ್ರಿಯೌ ಜಾತೌ ಕಾರಣಂ ತನ್ಮನೇ ವದ ।**
**ಯಾದವಾನಾಂ ವಿನಾಶಶ್ಚ ಬ್ರಹ್ಮಶಾಪಾದಿತಿ ಸ್ಮೃತಃ ॥೨೧॥**

**ಕೃಷ್ಣಸ್ಯಾಪಿ ಹಿ ಗಾಂಧಾರ್ಯಾಃ ಶಾಪೇನೈವ ಕುಲಕ್ಷಯಃ ।**
**ಪ್ರದ್ಯುಮ್ನಹರಣಂ ಚೈವ ಶಂಬರೇಣ ಕಥಂ ಕೃತಂ ॥೨೨॥**

ಬ್ರಾಹ್ಮಣರಾದ ಅವರಿಬ್ಬರೂ ಕ್ಷತ್ರಿಯರಾಗಿ ಜನಿಸಲು ಕಾರಣವೇನು? ಯಾದವರ ವಿನಾಶವು ಬ್ರಾಹ್ಮಣನ ಶಾಪದಿಂದ ಆಯಿತೆಂದು ಕೇಳಿದ್ದೇನೆ. ಮತ್ತು ಕೃಷ್ಣನ ವಂಶದ ನಾಶವೂ ಗಾಂಧಾರಿಯ ಶಾಪದಿಂದ ಉಂಟಾಯಿತೆಂದು ಕೇಳಿದ್ದೇನೆ. ಅಲ್ಲದೆ, ಶಂಬರಾಸುರನಿಂದ ಪ್ರದ್ಯುಮ್ನನು ಹೇಗೆ ಅಪಹರಿಸಲ್ಪಟ್ಟನು? ಎಂಬ ಇದೆಲ್ಲವನ್ನೂ ದಯವಿಟ್ಟು ವಿವರಿಸಿ ತಿಳಿಯಹೇಳು.

**ವರ್ತಮಾನೇ ವಾಸುದೇವೇ ದೇವದೇವೇ ಜನಾರ್ದನೇ ।**
**ಪುತ್ರಸ್ಯ ಸೂತಿಕಾಗೇಹಾದ್ಧರಣಂ ಚಾತಿದುರ್ಘಟಂ ॥೨೩॥**

**ದ್ವಾರಕಾದುರ್ಗಮಧ್ಯಾದ್ವೈ ಹರಿವೇಶ್ಮಾದ್ದುರತ್ಯಯಾತ್ ।**
**ನ ಜ್ಞಾತಂ ವಾಸುದೇವೇನ ತತ್ಕಥಂ ದಿವ್ಯಚಕ್ಷುಷಾ ॥೨೪॥**

ದೇವದೇವನಾದ ಜನಾರ್ದನನು ವಾಸುದೇವನಾಗಿ ಇರಲಾಗಿ, ದ್ವಾರಕಾ ಪಟ್ಟಣದ ಕೋಟೆಯ ಮಧ್ಯದಲ್ಲಿರುವ, ಪ್ರವೇಶಿಸಲು ಅಸಾಧ್ಯವಾದ ಕೃಷ್ಣನ ಅರಮನೆಯ ಮಧ್ಯದಲ್ಲಿನ ಹೆರಿಗೆ ಮನೆಯಿಂದ ತುಂಬ ಕಷ್ಟಕರವಾದ ಮಗುವಿನ ಅಪಹರಣವು ಹೇಗೆ ಸಂಭವಿಸಿತು? ಅಲ್ಲದೆ, ವಾಸುದೇವನಿಗೆ ಅವನ ದಿವ್ಯಚಕ್ಷುಸ್ಸಿನಿಂದ ಹೇಗೆ ಈ ವಿಚಾರವು ಮೊದಲು ಗೋಚರವಾಗಲಿಲ್ಲವು ?

**ಸಂದೇಹೋಽಯಂ ಮಹಾನ್ ಬ್ರಹ್ಮನ್ನಿಃಸಂದೇಹಂ ಕುರು ಪ್ರಭೋ ।**
**ಯತ್ಪತ್ನ್ಯೋ ವಾಸುದೇವಸ್ಯ ದಸ್ಯುಭಿರ್ಲುಂಠಿತಾ ಹೃತಾಃ ॥೨೫॥**

ಚೋರರಿಂದ ವಾಸುದೇವನ ಪತ್ನಿಯರೆಲ್ಲರೂ ಹೇಗೆ ಸೂರೆಮಾಡಿ ಅಪಹರಿಸಲ್ಪಟ್ಟರು? ಈ ಸಂದೇಹವನ್ನು ಓ ಮಹಾತ್ಮನಾದ ವ್ಯಾಸನೇ, ದೂರಮಾಡಿ ನನ್ನನ್ನು ಸಂಶಯವಿಲ್ಲದವನನ್ನಾಗಿ ಮಾಡು.

**ಸ್ವರ್ಗತೇ ದೇವದೇವೇ ತು ತತ್ಕಥಂ ಮುನಿಸತ್ತಮ ।**
**ಸಂಶಯೋ ಜಾಯತೇ ಬ್ರಹ್ಮಂಶ್ಚಿತ್ತಾಂದೋಲನಕಾರಕಃ ॥೨೬॥**

ದೇವತೆಗಳಿಗೂ ಒಡೆಯನಾದ ಶ್ರೀವಾಸುದೇವನು ವೈಕುಂಠವನ್ನು ಸೇರಲಾಗಿ, ಈರೀತಿಯಲ್ಲಿ ಮನಸ್ಸನ್ನು ಚಂಚಲಮಾಡುವುದಾಗಿರುವ ಈ ಎಲ್ಲ ಸಂಗತಿಗಳೂ ಹೇಗೆ ಸಂಭವಿಸಿದುವು? ಎಂಬ ಸಂಶಯವನ್ನು ಓ ಮುನಿಶ್ರೇಷ್ಠನೇ, ನನ್ನಿಂದ ದೂರಮಾಡು.

**ವಿಷ್ಣೋರಂಶಃ ಸಮುದ್ಭೂತಃ ಶೌರಿರ್ಭೂಭಾರಹಾರಕೃತ್ ।**
**ಸ ಕಥಂ ಮಥುರಾರಾಜ್ಯಂ ಭಯಾತ್ತ್ಯಕ್ತ್ವಾ ಜನಾರ್ದನಃ ॥೨೭॥**

**ದ್ವಾರವತ್ಯಾಂ ಗತಃ ಸಾಧೋ ಸಸೈನ್ಯಃ ಸಸುಹೃದ್ಗಣಃ ।**
**ಅವತಾರೋ ಹರೇಃ ಪ್ರೋಕ್ತೋ ಭೂಭಾರಹರಣಾಯ ವೈ ॥೨೮॥**

ವಿಷ್ಣುವಿನ ಅಂಶದಿಂದ ಕೂಡಿರುವ, ಭೂಮಿಗೆ ಭಾರವಾಗಿರುವ ರಾಕ್ಷಸರನ್ನು ಸಂಹರಿಸಲು ಜನಿಸಿದ ಆ ಶ್ರೀಕೃಷ್ಣನೂ ಭಯದಿಂದ ಹೆದರಿದವನಾಗಿ ಮಥುರೆಯನ್ನು ಬಿಟ್ಟು ದ್ವಾರಕೆಗೆ ತನ್ನ ಸೈನ್ಯ, ಮಿತ್ರರು, ಬಂಧು, ಬಳಗ ಇವರನ್ನೆಲ್ಲಾ ಕರೆದುಕೊಂಡು ಏತಕ್ಕಾಗಿ ಹೋದನು? ಆ ರೀತಿಯಲ್ಲಿ ಅವನು ಅವತಾರ ಮಾಡಿದುದು ಆ ರಾಕ್ಷಸರನ್ನು ನಾಶಮಾಡುವುದಕ್ಕಾಗಿಯೇ ಅಲ್ಲವೇ?

**ಪಾಪಾತ್ಮನಾಂ ವಿನಾಶಾಯ ಧರ್ಮಸಂಸ್ಥಾಪನಾಯ ಚ ।**
**ತತ್ಕಥಂ ವಾಸುದೇವೇನ ಚೌರಾಸ್ತೇನ ನಿಪಾತಿತಾಃ ॥೨೯॥**

ದುಷ್ಟರನ್ನು ಶಿಕ್ಷಿಸುವುದೂ, ಶಿಷ್ಟರನ್ನು ಪಾಲಿಸುವುದೂ, ಧರ್ಮವನ್ನು ಮತ್ತೆ ಉಜ್ಜೀವನಗೊಳಿಸುವುದೂ ಅವನ ಕರ್ತವ್ಯವಲ್ಲವೇ? ಹೀಗಿರುವಾಗ ಅವನಿಂದ ಆ ರಾಕ್ಷಸರೂ ಕಳ್ಳರೂ ಏತಕ್ಕಾಗಿ ಸಂಹರಿಸಲ್ಪಡಲಿಲ್ಲವು?

**ರ್ಯೈರ್ಹೃತಾ ವಾಸುದೇವಸ್ಯ ಪತ್ನ್ಯಃ ಸಂಲುಂಠಿತಾಶ್ಚ ತಾಃ ।**
**ಸ್ತೇನಾಸ್ತೇ ಕಿಂ ನ ವಿಜ್ಞಾತಾಃ ಸರ್ವಜ್ಞೇನ ಸತಾ ಪುನಃ ॥೩೦॥**

ಸರ್ವಜ್ಞನಾದ ಕೃಷ್ಣನು, ಅವನ ಹೆಂಡತಿಯರನ್ನು ಯಾರು ಸೂರೆಮಾಡಿ ಅಪಹರಿಸಿದರೋ ಅಂತಹ ಕಳ್ಳರನ್ನು ಮುಂಚಿತವಾಗಿಯೇ ತಿಳಿಯಲಿಲ್ಲವೇನು ?

**ಭೀಷ್ಮದ್ರೋಣವಧಃ ಕಾಮಂ ಭೂಭಾರಹರಣೇ ಮತಃ ।**
**ಅವಿತಾಶ್ಚ ಮಹಾತ್ಮಾನಃ ಪಾಂಡವಾ ಧರ್ಮತತ್ಪರಾಃ ॥೩೧॥**

ಮಹಾತ್ಮರಾದ ಭೀಷ್ಮದ್ರೋಣರ ವಧೆಯು ಭೂಭಾರನಾಶಕ್ಕೆಂದು ತಿಳಿದ ಕೃಷ್ಣನು ತನ್ನ ಪತ್ನಿಯರನ್ನು ಕದ್ದವರನ್ನು ಭೂಭಾರಭೂತರೆಂದು ತಿಳಿಯಲಿಲ್ಲವೇನು? ಅಲ್ಲದೆ ಮಹಾತ್ಮರಾದ ಸದಾ ಧರ್ಮದಲ್ಲಿ ನಿರತರಾಗಿರುವ ಪಾಂಡವರನ್ನು ರಕ್ಷಿಸಲಿಲ್ಲವೇ ?

**ಕೃಷ್ಣಭಕ್ತಾಃ ಸದಾಚಾರಾ ಯುಧಿಷ್ಠಿರಪುರೋಗಮಾಃ ।**
**ತೇ ಕೃತ್ವಾ ರಾಜಸೂಯಂಚ ಯಜ್ಞರಾಜಂ ವಿಧಾನತಃ ॥೩೨॥**

ಯುಧಿಷ್ಠಿರನೇ ಮೊದಲಾದ ಈ ಪಾಂಡವರು ಕೃಷ್ಣನ ಭಕ್ತರು; ಸದಾಚಾರ ಸಂಪನ್ನರು. ಅವರು ಯಜ್ಞಗಳಲ್ಲಿ ಅತಿಶ್ರೇಷ್ಠವಾದ ರಾಜಸೂಯವೆಂಬ ಯಾಗವನ್ನು ವಿಧ್ಯುಕ್ತವಾಗಿ ಆಚರಿಸಿ,

**ದಕ್ಷಿಣಾ ವಿವಿಧಾ ದತ್ತಾ ಬ್ರಾಹ್ಮಣೇಭ್ಯೋಽತಿಭಾವತಃ ।**
**ಪಾಂಡುಪುತ್ರಾಸ್ತು ದೇವಾಂಶಾ ವಾಸುದೇವಾಶ್ರಿತಾ ಮುನೇ ॥೩೩॥**

ಈ ಪಾಂಡುಪುತ್ರರು ಬ್ರಾಹ್ಮಣರಿಗೆ ಭಕ್ತಿಭಾವದಿಂದ ಅನೇಕ ವಿಧವಾದ ದಕ್ಷಿಣೆಗಳನ್ನು ಕೊಟ್ಟವರು ; ಮತ್ತು ದೇವಾಶಸಂಭೂತರು ; ಅಲ್ಲದೆ ಶ್ರೀಕೃಷ್ಣನನ್ನು ಆಶ್ರಯಿಸಿಕೊಂಡಿದ್ದವರು.

**ಘೋರಂ ದುಃಖಂ ಕಥಂ ಪ್ರಾಪ್ತಾಃ ಕ್ವ ಗತಂ ಸುಕೃತಂ ಚ ತತ್ ।**
**ಕಿಂ ತತ್ಪಾಪಂ ಮಹಾರೌದ್ರಂ ಯೇನ ತೇ ಪೀಡಿತಾಃ ಸದಾ ॥೩೪॥**

ಈ ವಿಧವಾದ ಸತ್ಸಮಾಚರಣೆಯಿಂದ ಇದ್ದ ಪಾಂಡವರು ಸಹಿಸಲಶಕ್ಯವಾದ ಕಷ್ಟಗಳನ್ನು ಏತಕ್ಕೆ ಅನುಭವಿಸಬೇಕಾಯಿತು ? ಅವರು ಮಾಡಿದ ಸುಕೃ

ತವು ಎಲ್ಲಿ ಹೋಯಿತು ? ಈ ವಿಧವಾಗಿ ಅವರೂ ಕಷ್ಟಕ್ಕೊಳಗಾಗಬೇಕಾದರೆ ಅವರು ಮಾಡಿದ್ದ ಮಹಾಭಯಂಕರವಾವ ಪಾಪವಾದರೂ ಯಾವುದು ?

**ದ್ರೌಪದೀ ಚ ಮಹಾಭಾಗಾ ವೇದೀಮಧ್ಯಾತ್ಸಮುತ್ಥಿತಾ ।**
**ರಮಾಂಶಜಾ ಚ ಸಾಧ್ವೀ ಚ ಕೃಷ್ಣಭಕ್ತಿಯುತಾ ತಥಾ ॥೩೫॥**

**ಸಾ ಕಥಂ ದುಃಖಮತುಲಂ ಪ್ರಾಪ ಘೋರಂ ಪುನಃ ಪುನಃ ।**
**ದುಃಶಾಸನೇನ ಸಾ ಕೇಶೇ ಗೃಹೀತಾ ಪೀಡಿತಾ ಭೃಶಂ ॥೩೬॥**

**ರಜಸ್ವಲಾ ಸಭಾಯಾಂ ತು ನೀತಾ ಭೀತ್ಯೈಕವಾಸಸಾ ।**

ಓ ಪುಣ್ಯಶಾಲಿಯಾದ ವ್ಯಾಸಮುನಿಶ್ರೇಷ್ಠನೇ, ಪಾಂಡವರ ಪತ್ನಿಯಾದ ದ್ರೌಪದಿಯೂ ಮಹಾಮಹಿಮಳು. ಯಜ್ಞವೇದಿಯ ಮಧ್ಯದಲ್ಲಿ ಪವಿತ್ರವಾದ ಅಗ್ನಿಯಿಂದ ಉದ್ಭವಿಸಿದವಳು ; ರಮಾಂಶದಿಂವ ಕೂಡಿ ಅವತರಿಸಿ ಕೃಷ್ಣನಲ್ಲಿ ಅತ್ಯಂತ ಭಕ್ತಿಯುಳ್ಳವಳಾಗಿದ್ದ ಸಾಧ್ವೀಶಿರೋಮಣಿಯು. ಅಂತಹ ದ್ರೌಪದಿಯೂ ಭಯಂಕರಳಾದ ಅನೇಕ ದುಃಖಗಳನ್ನು ಬಾರಿಬಾರಿಗೂ ಏತಕ್ಕಾಗಿ ಅನುಭವಿಸಬೇಕಾಯಿತು ? ರಜಸ್ವಲೆಯಾಗಿ ಒಂದೇ ವಸ್ತ್ರವನ್ನುಟ್ಟಿದ್ದ ಕಾಲದಲ್ಲಿ ಭಯದಿಂದ ನಡುಗುತ್ತಿದ್ದರೂ, ದುಃಶಾಸನನು ಅವಳ ಮುಂದಲೆಯನ್ನು ಹಿಡಿದು ಸಭೆಗೆ ಎಳೆತಂದು ಅವಮಾನಪಡಿಸಿ ತೊಂದರೆಪಡಿಸಿದನು !

**ವಿರಾಟನಗರೇ ದಾಸೀ ಜಾತಾ ಮತ್ಸ್ಯಸ್ಯ ಸಾ ಪುನಃ ॥೩೭॥**
**ಧರ್ಷಿತಾ ಕೀಚಕೇನಾಥ ರುದತೀ ಕುರರೀ ಯಥಾ ।**

ಇಷ್ಟೇ ಅಲ್ಲದೆ ಆ ದ್ರೌಪದಿಯು ಮತ್ಸ್ಯಾಧಿಪತಿಯಾದ ವಿರಾಟರಾಜನ ಮನೆಯಲ್ಲಿ ದಾಸಿಯಾಗಬೇಕಾಯಿತು. ಆ ಕಾಲದಲ್ಲಿ ದುಷ್ಟಕೀಚಕನಿಂದ ಆಕ್ರಮಿಸಿ ಅವಮಾನಿತಳಾದಳು. ಈ ದುಃಖದಿಂದ ಅವಳು ಚಿನ್ಮಂಡಿ ಹುಳುವಿನಂತೆಯೂ ಕುರರಪಕ್ಷಿಯಂತೆಯೂ ರೋದನಗೈದಳು !

**ಹೃತಾ ಜಯದ್ರಥೇನಾಥ ಕ್ರಂದಮಾನಾತಿದುಃಖಿತಾ ॥೪೦॥**
**ಮೋಚಿತಾ ಪಾಂಡವೈಃ ಪಶ್ಚಾದ್ಬಲವದ್ಭಿರ್ಮಹಾತ್ಮಭಿಃ ।**

ಮತ್ತೊಂದು ಸಮಯದಲ್ಲಿ ಆ ದ್ರೌಪದಿಯು ಜಯದ್ರಥನೆಂಬ ಸಿಂಧುದೇಶದ ರಾಜನಿಂದ ಅಪಹರಿಸಲ್ಪಟ್ಟು, ಅತಿ ದುಃಖದಿಂದ ರೋದನಗೈಯ್ಯುತ್ತಿರುವಾಗ ಮಹಾಪರಾಕ್ರಮಶಾಲಿಗಳಾದ ಪಾಂಡವರು ಅವಳನ್ನು ಬಿಡಿಸಬೇಕಾಯಿತು.

**ಪೂರ್ವಜನ್ಮಕೃತಂ ಪಾಪಂ ಕಿಂ ತದ್ಯೇನ ಚ ಪೀಡಿತಾಃ ॥೩೯॥**

ಈ ರೀತಿಯಾಗಿ ಕಷ್ಟಪರಂಪರೆಗಳನ್ನು ಅನುಭವಿಸಲು ಅವರು ಪೂರ್ವಜನ್ಮದಲ್ಲಿ ಮಾಡಿದ್ದ ಮಹಾಪಾತಕಗಳಾದರೂ ಏನು ?

**ದುಃಖಾನ್ಯನೇಕಾನ್ಯಾಪ್ತಾಸ್ತೇ ಕಥಯಾದ್ಯ ಮಹಾಮತೇ ।**
**ರಾಜಸೂಯಂ ಕ್ರತುವರಂ ಕೃತ್ವಾ ತೇ ಮಮ ಪೂರ್ವಜಾಃ ॥೪೦॥**

ತುಂಬ ವಿವೇಕಶಾಲಿಯಾದ ಓ ವ್ಯಾಸನೇ, ಯಜ್ಞಗಳಲ್ಲಿ ಶ್ರೇಷ್ಠವಾದ ರಾಜಸೂಯಯಾಗವನ್ನು ಮಾಡಿದ್ದರೂ ಕೂಡ ನಮ್ಮ ಪೂರ್ವಿಕರಾದ ಆ ಮಹಾರಾಜರು ಅನೇಕ ದುಃಖಗಳನ್ನು ಏಕೆ ಅನುಭವಿಸಿದರೆಂಬುದನ್ನು ಈಗ ನನಗೆ ವಿವರಿಸಿ ಹೇಳು.

**ದುಃಖಂ ಮಹತ್ತರಂ ಪ್ರಾಪ್ತಾಃ ಪೂರ್ವಜನ್ಮಕೃತೇನ ವೈ ।**
**ದೇವಾಂಶಾನಾಂ ಕಥಂ ತೇಷಾಂ ಸಂಶಯೋಽಯಂ ಮಹಾನ್ ಹಿ ಮೇ ॥**

ದೇವಾಂಶಸಂಭೂತರಾದುದರಿಂದ ಅವರಿಗೆ ಪೂರ್ವಜನ್ಮದ ಪಾಪಗಳಿದ್ದುವೆಂದೂ ಹೇಳುವಹಾಗಿಲ್ಲ. ಹಾಗಾದರೂ ಅವರು ಹೆಚ್ಚಾದ ದುಃಖಗಳನ್ನು ಅನುಭವಿಸಿದರು. ಇದು ಹೇಗೆ ಎಂಬ ನನ್ನ ಈ ಸಂಶಯವು ತುಂಬ ದೊಡ್ಡದಾಗಿದೆ.

**ಸದಾಚಾರೈಸ್ತು ಕೌಂತೇಯೈರ್ಭೀಷ್ಮದ್ರೋಣಾದಯೋ ಹತಾಃ ।**
**ಛಲೇನ ಧನಲೋಭಾರ್ಥಂ ಜಾನಾನ್ಯೈರ್ನಶ್ವರಂ ಜಗತ್ ॥೪೨॥**

ಅಲ್ಲದೆ ಆ ಕುಂತಿಯ ಮಕ್ಕಳಾದ ಪಾಂಡವರು ಒಳ್ಳೆಯ ಧರ್ಮಾಚರಣೆಯುಳ್ಳವರಾದರೂ, ಈ ಪ್ರಪಂಚದ ಐಶ್ವರ್ಯ ಮುಂತಾದುದು ಶಾಶ್ವತವಾದುದಲ್ಲವೆಂದು ತಿಳಿದವರಾಗಿದ್ದರೂ, ಹಟದಿಂದಲೂ, ಸಂಪತ್ತಿನಲ್ಲಿ ಆಸೆಯಿಂದಲೂ ಭೀಷ್ಮದ್ರೋಣ ಮುಂತಾದ ಹಿರಿಯರನ್ನೂ ಗುರುಗಳನ್ನೂ ಸಂಹಾರ ಮಾಡಿದರು ! ಇದು ಹೇಗೆ ?

**ಪ್ರೇರಿತಾ ವಾಸುದೇವೇನ ಪಾಪೇ ಘೋರೇ ಮಹಾತ್ಮನಾ ।**
**ಕುಲಂ ಕ್ಷಯಿತವಂತಸ್ತೇ ಹರಿಣಾ ಪರಮಾತ್ಮನಾ ॥೪೩॥**

ಇಂತಹ ಭಯಂಕರವಾದ ಪಾಪಕಾರ್ಯದಲ್ಲೂ ಅವರು ಮಹಾಮಹಿಮ ಶಾಲಿಯಾದ ವಾಸುದೇವನಿಂದ ಪ್ರೇರಿಸಲ್ಪಟ್ಟರು! ಪರಮಾತ್ಮಸ್ವರೂಪಿಯಾದ ಶ್ರೀ ಕೃಷ್ಣನ ಪ್ರೇರಣೆಯಿಂದ ಅವರು ನಮ್ಮ ವಂಶವನ್ನೇ ನಾಶಮಾಡಿದರು! ಇದು ಏಕೆ ಹೀಗಾಗಬೇಕಾಯಿತು ?

**ವರಂ ಭಿಕ್ಷಾಟನಂ ಸಾಧೋರ್ನೀವಾರೈರ್ಜೀವನಂ ವರಂ ।**
**ಯೋಧಾನ್ನಹತ್ವಾ ಲೋಭೇನ ಶಿಲ್ಪೇನ ಜೀವನಂ ವರಂ ॥೪೪॥**

ಆ ರೀತಿಯಾಗಿ ಐಶ್ವರ್ಯ ಸಂಪತ್ತು ಇವುಗಳಲ್ಲಿ ಅತ್ಯಾಶೆಯಿಂದ ವೀರರಾದ ಸೈನಿಕರನ್ನೆಲ್ಲಾ ಕೊಂದು ಜೀವಿಸುವುದಕ್ಕಿಂತಲೂ, ಒಳ್ಳೆಯ ನಡತೆಯುಳ್ಳವರಾಗಿ ಭಿಕ್ಷೆಯನ್ನು ಬೇಡಿ, ಯಾವುದಾದರೂ ಕೈಗಾರಿಕೆಯನ್ನು ಅವಲಂಬಿಸಿ ನೀವಾರ ಧಾನ್ಯವನ್ನು ತಿನ್ನುತ್ತಾ ಜೀವಿಸುವುದೇ ಮೇಲಾದುದು!

**ವಿಚ್ಛಿನ್ನಸ್ತು ತ್ವಯಾ ವಂಶೋ ರಕ್ಷಿತೋ ಮುನಿಸತ್ತಮ ।**
**ಸಮುತ್ಪಾದ್ಯ ಸುತಾನಾಶು ಗೋಲಕಾಞ್ಛತ್ರುನಾಶನಾನ್ ॥೪೫॥**

ಅಷ್ಟೇ ಅಲ್ಲದೆ, ನಮ್ಮ ವಂಶವೇ ಸಂತತಿ ಇಲ್ಲದೆ ನಷ್ಟವಾಗಿತ್ತು. ಆಗ ಓ ವ್ಯಾಸನೇ, ನೀನು ಶತ್ರುಗಳನ್ನು ನಾಶಮಾಡಬಲ್ಲ ವೀರರಾದ ಗೋಲಕರೆಂಬ ಮಕ್ಕಳನ್ನು ಉಂಟುಮಾಡಿ ದಯೆಯಿಂದ ಈ ನಮ್ಮ ವಂಶವನ್ನು ನಾಶವಾಗದಂತೆ ಕಾಪಾಡಿದೆ.

**ಸೋಽಲ್ಪೇನೈವ ತು ಕಾಲೇನ ವಿರಾಟತನಯಾಸುತಃ ।**
**ತಾಪಸಸ್ಯ ಗಲೇ ಸರ್ಪಂ ನ್ಯಸ್ತವಾನ್ಕಥಮದ್ಭುತಂ ॥೪೬॥**

ಹೀಗಿದ್ದರೂ ಸ್ವಲ್ಪಕಾಲ ಕಳೆಯುವಷ್ಟರಲ್ಲಿಯೇ, ವಿರಾಟರಾಜನ ಮಗಳಾದ ಉತ್ತರೆಯ ಮಗನಾದ ಪರೀಕ್ಷಿದ್ರಾಜನು, ತಪಸ್ಸನ್ನು ಮಾಡುತ್ತಿದ್ದ ಶಮೀಕ ಋಷಿಯ ಕತ್ತಿಗೆ ಹಾವನ್ನು ತಗಲುಹಾಕಿದನು! ಈ ಆಶ್ಚರ್ಯಕರವಾದ ಮತ್ತು ಪಾಪಕರವಾದ ಸಂಗತಿಯು ಹೇಗೆ ಸಂಭವಿಸಿತು ?

**ನ ಕೋಽಪಿ ಬ್ರಾಹ್ಮಣಂ ದ್ವೇಷ್ಟಿ ಕ್ಷತ್ರಿಯಸ್ಯ ಕುಲೋದ್ಭವಃ ।**
**ತಾಪಸಂ ಮೌನಸಂಯುಕ್ತಂ ಪಿತ್ರಾ ಕಿಂ ತತ್ಕೃತಂ ಮುನೇ ॥೪೭॥**

ಏತಕ್ಕೆಂದರೆ, ಕ್ಷತ್ರಿಯ ವಂಶದಲ್ಲಿ ಜನಿಸಿದ ಯಾರೂ ಬ್ರಾಹ್ಮಣರನ್ನು ದ್ವೇಷಿಸುವುದಿಲ್ಲವು. ಅದರಲ್ಲೂ ಮೌನದಿಂದ ತಪಸ್ಸು ಮಾಡುತ್ತಿದ್ದ ಋಷಿಯ ಕುತ್ತಿಗೆಗೆ ನನ್ನ ತಂದೆಯಾದ ಪರೀಕ್ಷಿದ್ರಾಜನು ಸರ್ಪವನ್ನು ತಗಲುಹಾಕುವ ನೀಚ ಕೆಲಸವನ್ನು ಮಾಡಲು ಏಕೆ ಇಷ್ಟಪಟ್ಟನು?

**ಏತೈರನ್ಯೈಶ್ಚ ಸಂದೇಹೈರ್ವಿಕಲಂ ಮೇ ಮನೋಽಧುನಾ ।**
**ಸ್ಥಿರಂ ಕುರು ಪಿತಃ ಸಾಧೋ ಸರ್ವಜ್ಞೋಽಸಿ ದಯಾನಿಧೇ ॥೪೮॥**

ಈ ಸಂಗತಿಗಳಿಂದಲೂ ಮತ್ತು ಇಂತಹ ಇತರ ಸಂಶಯಗಳಿಂದಲೂ ಕೂಡಿ ನನ್ನ ಹೃದಯವು ಅತ್ಯಂತವಾಗಿ ಕಲಕಿ ವ್ಯಾಕುಲವಾಗಿರುತ್ತದೆ. ಓ ದಯಾನಿಧಿಯಾದ ತಂದೆಯೇ, ನೀನು ಸತ್ಪುರುಷನೂ, ಎಲ್ಲವನ್ನೂ ತಿಳಿದವನೂ ಆಗಿರುವೆ. ಈ ನನ್ನ ಸಂದೇಹಗಳನ್ನೆಲ್ಲಾ ನಿವಾರಣ ಮಾಡಿ ನನ್ನ ಮನಸ್ಸನ್ನು ಸಮಾಧಾನಗೊಳಿಸುವವನಾಗು ಎಂದು ಜನಮೇಜಯರಾಜನು ವ್ಯಾಸಮುನಿಯನ್ನು ಕೇಳಿಕೊಂಡನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಪ್ರಥಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಮೊದಲನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### ॥ ದ್ವಿತೀಯೋಽಧ್ಯಾಯಃ ॥

### ಎರಡನೆಯ ಅಧ್ಯಾಯವು

॥ ಸೂತ ಉವಾಚ ॥

**ಏವಂ ಪೃಷ್ಟಃ ಪುರಾಣಜ್ಞೋ ವ್ಯಾಸಃ ಸತ್ಯವತೀಸುತಃ ।**
**ಪರೀಕ್ಷಿತಸುತಂ ಶಾಂತಂ ತತೋ ವೈ ಜನಮೇಜಯಂ ॥೧॥**
**ಉವಾಚ ಸಂಶಯಚ್ಛೇತ್ತೃ ವಾಕ್ಯಂ ವಾಕ್ಯವಿಶಾರದಃ ।**

ಸೂತಮಹರ್ಷಿಯು ಸಮಾಧಾನಕರವಾದ ಉತ್ತರವನ್ನು ಹೀಗೆ ಹೇಳಿದನು— ಹದಿನೆಂಟು ಪುರಾಣಗಳನ್ನೂ ತಿಳಿದಿರುವ, ಸತ್ಯವತಿಯ ಮಗನಾದ ವ್ಯಾಸಮುನಿಯನ್ನು ಕುರಿತು ಜನಮೇಜಯರಾಜನು ಕೇಳಲು, ಆ ಮೇಲೆ ಪರೀಕ್ಷಿದ್ರಾಜನ ಮಗನಾದ ಶಾಂತಗುಣವುಳ್ಳ ಆ ಜನಮೇಜಯರಾಜನನ್ನು ಕುರಿತು ಸರಿಯಾದ ಮಾತುಗಳನ್ನು ಹೇಳಬಲ್ಲ ವ್ಯಾಸನು ಅವನ ಸಂದೇಹಗಳನ್ನು ಹೋಗಲಾಡಿಸಬಲ್ಲ ಪ್ರತ್ಯುತ್ತರದ ವಾಕ್ಯಗಳನ್ನು ಹೀಗೆ ಹೇಳಿದನು.

॥ ವ್ಯಾಸ ಉವಾಚ ॥

**ರಾಜನ್ ಕಿಮೇತದ್ವಕ್ತವ್ಯಂ ಕರ್ಮಣಾಂ ಗಹನಾ ಗತಿಃ ॥೨॥**

**ದುರ್ಜ್ಞೇಯಾ ಕಿಲ ದೇವಾನಾಂ ಮಾನವಾನಾಂ ಚ ಕಾ ಕಥಾ ।**
**ಯದಾ ಸಮುತ್ಥಿತಂ ಚೈತದ್ಬ್ರಹ್ಮಾಂಡಂ ತ್ರಿಗುಣಾತ್ಮಕಂ ॥೩॥**
**ಕರ್ಮಣೈವ ಸಮುತ್ಪತ್ತಿಃ ಸರ್ವೇಷಾಂ ನಾತ್ರ ಸಂಶಯಃ ।**

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ, ಈ ವಿಚಾರ ವನ್ನು ತೃಪ್ತಿಕರವಾಗಿ ವಿವರಿಸುವುದು ಕಷ್ಟಕರವಾದುದು. ಏಕೆಂದರೆ, ಆ ಕರ್ಮವು ತನ್ನ ಫಲವನ್ನು ಹೇಗೆ, ಯಾವಾಗ, ಯಾರಿಗೆ ಕೊಡುತ್ತದೆ ಎಂಬ ಕರ್ಮದ ಗತಿ ಎಂದರೆ ರೀತಿಯನ್ನು ತಿಳಿಯುವುದು ಕಷ್ಟವು. ಆದರೂ ಎಲ್ಲವೂ ಕರ್ಮಾಧೀನವು. ಇಂತಹ ಕರ್ಮದ ಗತಿಯನ್ನು ದೇವತೆಗಳೂ ತಿಳಿಯಲಾರರು. ಹೀಗಿರುವಾಗ ಮಾನ ವರು ಇದನ್ನು ತಿಳಿಯುವುದು ಕಷ್ಟಕರವೆಂಬುದನ್ನು ಹೇಳಬೇಕಾದುದೇನು ? ಸತ್ತ್ವ ರಜಸ್ತಮೋಗುಣಗಳ ಪರಿಣಾಮರೂಪವಾದ ಬ್ರಹ್ಮಾಂಡವು ಯಾವಾಗ ಉಂಟಾ ಯಿತೋ ಆಗಲೇ ಅದಕ್ಕೂ ಕಾರಣವಾಗಿ ಈ ಕರ್ಮವೂ ಉಂಟಾಗಿತ್ತು. ಎಲ್ಲ ಪ್ರಾಣಿಗಳೂ ತಮ್ಮ ತಮ್ಮ ಕರ್ಮಾನುಸಾರವಾಗಿ ಜನ್ಮಗಳನ್ನು ಪಡೆಯುತ್ತವೆ. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲವು.

**ಅನಾದಿನಿಧನಾ ಜೀವಾಃ ಕರ್ಮಬೀಜಸಮುದ್ಭವಾಃ ॥೪॥**

ಜೀವರೆಲ್ಲರೂ ಅನಾದಿಕಾಲದಿಂದಲೂ ಹುಟ್ಟುಸಾವುಗಳಿಲ್ಲದ ಚೇತನಸ್ವರೂಪ ರಾಗಿರುತ್ತಾರೆ. ಆದರೂ ಅವರಿಗೆ ಎಂದರೆ ಅವರ ದೇಹಗಳಿಗೆ ಹುಟ್ಟುಸಾವುಗಳು ಅವರವರ ಕರ್ಮರೂಪವಾದ ಬೀಜದಿಂದ ಎಂದರೆ ಕಾರಣದಿಂದ ಉಂಟಾಗು ತ್ತಿರುತ್ತವೆ.

**ನಾನಾಯೋನಿಷು ಜಾಯಂತೇ ಮ್ರಿಯಂತೇ ಚ ಪುನಃಪುನಃ ।**
**ಕರ್ಮಣಾ ರಹಿತೋ ದೇಹಸಂಯೋಗೋ ನ ಕದಾಚನ ॥೫॥**

ಹೀಗೆ ಜೀವರು ತಮ್ಮ ತಮ್ಮ ಕರ್ಮಾನುಸಾರವಾಗಿ ಅನೇಕ ಬಗೆಯ ಕ್ಷೇತ್ರ ಗಳಲ್ಲಿ ಬಾರಿಬಾರಿಗೂ ಹುಟ್ಟುತ್ತಲೂ ಸಾಯುತ್ತಲೂ ಇರುತ್ತಾರೆ. ಅಲ್ಲದೆ, ಜೀವ ರಿಗೆ ಇಂತಹ ಕರ್ಮದೇಹಗಳೊಡನೆ ಸಂಬಂಧವು ತಕ್ಕ ಕರ್ಮದ ಸಂಪರ್ಕವಿಲ್ಲದೆ ಯಾವಾಗಲೂ ಸಂಭವಿಸುವುದಿಲ್ಲವು.

**ಶುಭಾಶುಭೈಸ್ತಥಾ ಮಿಶ್ರೈಃ ಕರ್ಮಭಿರ್ವೇಷ್ಟಿತಂ ತ್ವಿದಂ ।**
**ತ್ರಿವಿಧಾನಿ ಹಿ ತಾನ್ಯಾಹುರ್ಬುಧಾಸ್ತತ್ತ್ವವಿದಶ್ಚ ಯೇ ॥೬॥**

ಹೀಗೆ ಪ್ರಾಪಂಚಿಕವಾದ ಈ ಸಂಸಾರವು ಮೂರು ಬಗೆಯ ಇಂತಹ ಕರ್ಮ ಗಳಿಂದ ಸಾಗುತ್ತಿರುತ್ತದೆ. ಈ ಕರ್ಮಗಳಲ್ಲಿ ಒಳ್ಳೆಯವೆಂದೂ, ಕೆಟ್ಟವೆಂದೂ ಈ

ಎರಡೂ ಬೆರೆದವುಗಳೆಂದೂ ಮೂರು ಬಗೆಯನ್ನೂ ಕಾಣಬಹುದು. ಈ ಕರ್ಮದಿಂದ ಈ ಪ್ರಪಂಚವೆಲ್ಲವೂ ಬಂಧಿಸಲ್ಪಟ್ಟಿದೆ ಎಂದು ಕರ್ಮತತ್ತ್ವಸ್ವರೂಪವನ್ನು ತಿಳಿದ ವಿದ್ವಾಂಸರು ಹೇಳುತ್ತಾರೆ.

**ಸಂಚಿತಾನಿ ಭವಿಷ್ಯಾಣಿ ಪ್ರಾರಬ್ಧಾನಿ ತಥಾ ಪುನಃ ।**
**ವರ್ತಮಾನಾನಿ ದೇಹೇಽಸ್ಮಿಂಸ್ತ್ರೈವಿಧ್ಯಂ ಕರ್ಮಣಾಂ ಕಿಲ ॥೭॥**

ಹಿಂದೆ ಹೇಳಿದಂತೆ ಕರ್ಮಗಳು ಶುಭಾಶುಭಮಿಶ್ರಗಳೆಂದು ಮೂರು ಬಗೆಯಾಗಿರುವುವಲ್ಲದೆ, ಅವುಗಳು ಫಲವನ್ನು ಕೊಡುವ ಕಾಲವನ್ನನುಸರಿಸಿ ಸಂಚಿತ, ಭವಿಷ್ಯ, ಪ್ರಾರಬ್ಧಗಳೆಂದು ಪ್ರಕಾರಾಂತರದಿಂದ ಮೂರು ಬಗೆಯಾಗಿರುವುವು. ಹಿಂದಿನ ಜನ್ಮಗಳಲ್ಲಿ ಮಾಡಿದುದು ಸಂಚಿತಕರ್ಮವು. ಈ ಕರ್ಮಗಳಲ್ಲೈಕಿ ಈಗ ಸುಖದುಃಖರೂಪವಾದ ಫಲವನ್ನು ಕೊಡುತ್ತಿರುವುದು ಪ್ರಾರಬ್ಧಕರ್ಮವು. ಈಗ ಮಾಡುತ್ತಿರುವ ಮತ್ತು ಮುಂದೆ ಮಾಡುವ ಕರ್ಮಗಳಿಗೆ ಭವಿಷ್ಯಕರ್ಮವೆಂದು ಹೆಸರು.

**ಬ್ರಹ್ಮಾದೀನಾಂ ಚ ಸರ್ವೇಷಾಂ ತದ್ವಶತ್ವಂ ನರಾಧಿಪ ।**
**ಸುಖದುಃಖಜರಾಮೃತ್ಯುಹರ್ಷಶೋಕಾದಯಸ್ತಥಾ ॥೮॥**

ಓ ಜನಮೇಜಯರಾಜನೇ, ಬ್ರಹ್ಮಾದಿಗಳೂ ಕೂಡ ಹಿಂದೆ ಹೇಳಿದಂತೆ ಅವರವರ ಕರ್ಮಕ್ಕೆ ಅಧೀನರಾಗಿಯೇ ಇರುತ್ತಾರೆ. ಅಂತಹ ಕರ್ಮಾನುಸಾರವಾಗಿ ಅವರಿಗೂ ಸುಖ, ದುಃಖ, ಮುಪ್ಪು, ಮರಣ, ಸಂತೋಷ, ವ್ಯಸನ ಇವೇ ಮುಂತಾದವುಗಳು ತಪ್ಪದೆ ಉಂಟಾಗುತ್ತಿರುತ್ತವೆ.

**ಕಾಮಕ್ರೋಧೌ ಚ ಲೋಭಶ್ಚ ಸರ್ವೇ ದೇಹಗತಾ ಗುಣಾಃ ।**
**ದೈವಾಧೀನಾಶ್ಚ ಸರ್ವೇಷಾಂ ಪ್ರಭವಂತಿ ನರಾಧಿಪ ॥೯॥**

ಓ ಜನಮೇಜಯರಾಜನೇ, ಕಾಮ, ಕ್ರೋಧ, ಲೋಭವೇ ಮೊದಲಾದ ಗುಣಗಳು ದೈವಾಧೀನವಾಗಿಯೂ, ಪೂರ್ವಕರ್ಮಾನುಸಾರವಾಗಿಯೂ ಎಲ್ಲರಿಗೂ ಉಂಟಾಗುತ್ತಿರುತ್ತವೆ. ಪೂರ್ವಜನ್ಮಕೃತಂಕರ್ಮ ದೈವಮಿತ್ಯಭಿಧೀಯತೇ । ಎಂಬಂತೆ ಜನ್ಮಾಂತರದಲ್ಲಿ ಮಾಡಿದ ಕರ್ಮವೇ ದೈವವೆಂದು ವ್ಯವಹಾರವನ್ನು ಪಡೆದಿರುತ್ತದೆ.

**ರಾಗದ್ವೇಷಾದಯೋ ಭಾವಾಃ ಸ್ವರ್ಗೇಽಪಿ ಪ್ರಭವಂತಿ ಹಿ ।**
**ದೇವಾನಾಂ ಮಾನವಾನಾಂ ಚ ತಿರಶ್ಚಾಂ ಚ ತಥಾ ಪುನಃ ॥೧೦॥**

ರಾಗದ್ವೇಷವೇ ಮೊದಲಾದ ಮನಸ್ಸಿನ ವಿಕಾರಗಳು ಸ್ವರ್ಗದಲ್ಲಿಯೂ ದೇವತೆಗಳಿಗೂ ಸಹ ಉಂಟಾಗುತ್ತವೆ. ಹಾಗೆಯೇ ಈ ಗುಣವಿಕಾರಗಳು ಮನುಷ್ಯರಿಗೂ, ಪ್ರಾಣಿಗಳಿಗೂ ಅವರವರ ಕರ್ಮಗಳಿಗೆ ಅನುಸಾರವಾಗಿ ಉಂಟಾಗುತ್ತಿರುತ್ತವೆ.

**ವಿಕಾರಾಸ್ಸರ್ವ ಏವೈತೇ ದೇಹೇನ ಸಹ ಸಂಗತಾಃ ।**
**ಪೂರ್ವವೈರಾನುಯೋಗೇನ ಸ್ನೇಹಯೋಗೇನ ವೈ ಪುನಃ ॥೧೧॥**

ಕಾಮಕ್ರೋಧವೇ ಮೊದಲಾದ ಈ ಎಲ್ಲಾ ಮನೋವಿಕಾರಗಳೂ ಕೂಡ ಅವರವರ ಸೂಕ್ಷ್ಮದೇಹದೊಡನೆ ಸಂಸ್ಕಾರರೂಪದಲ್ಲಿ ಸಂಬಂಧಿಸಿಕೊಂಡಿರತಕ್ಕವುಗಳು. ಅಲ್ಲದೆ ಈ ಕಾಮ ಕ್ರೋಧಾದಿಗಳು ಪೂರ್ವಜನ್ಮದ ಅಥವಾ ಹಿಂದಿನ ದ್ವೇಷ ಮತ್ತು ಪ್ರೇಮದ ಸಂಸ್ಕಾರಗಳಿಗನುಸಾರವಾಗಿ ಉಂಟಾಗುತ್ತವೆ.

**ಉತ್ಪತ್ತಿಃ ಸರ್ವಜಂತೂನಾಂ ವಿನಾ ಕರ್ಮ ನ ವಿದ್ಯತೇ ।**
**ಕರ್ಮಣಾ ಭ್ರಮತೇ ಸೂರ್ಯಃ ಶಶಾಂಕಃ ಕ್ಷಯರೋಗವಾನ್ ॥೧೨॥**

ಎಲ್ಲ ಪ್ರಾಣಿಗಳಿಗೂ ಹುಟ್ಟುವಿಕೆ ಸಹ ಕರ್ಮವಿಲ್ಲದೆ ಆಗುವುದಿಲ್ಲವು. ಆದುದರಿಂದಲೇ ಸೂರ್ಯನೂ ಸಹ ಕರ್ಮಕ್ಕನುಸಾರವಾಗಿ ಆಕಾಶದಲ್ಲಿ ಸುತ್ತುತ್ತಿರುತ್ತಾನೆ. ಮತ್ತು ಚಂದ್ರನೂ ಕೂಡ ತನ್ನ ಕರ್ಮಕ್ಕನುಸಾರವಾಗಿಯೇ ಪ್ರತಿ ಒಂದು ತಿಂಗಳಿನಲ್ಲಿ ಒಂದು ಪಕ್ಷದಲ್ಲಿ ದಿನೇದಿನೇ ಕ್ಷೀಣನಾಗುತ್ತಾನೆ.

**ಕಪಾಲೀ ಚ ತಥಾ ರುದ್ರಃ ಕರ್ಮಣೈವ ನ ಸಂಶಯಃ ।**
**ಅನಾದಿನಿಧನಂ ಚೈತತ್ಕಾರಣಂ ಕರ್ಮಸಂಭವೇ ॥೧೩॥**

ಈಶ್ವರನೂ ಸಹ ತನ್ನ ಕರ್ಮದಿಂದಲೇ ಕಪಾಲವನ್ನು ಧರಿಸಿ ಭಿಕ್ಷೆಯನ್ನು ಬೇಡಬೇಕಾಯಿತು. ಆದುದರಿಂದ ಇಂತಹ ಕರ್ಮವು ಎಲ್ಲ ಪ್ರಾಣಿಗಳ ಹುಟ್ಟುವಿಕೆಯಲ್ಲಿ ಕಾರಣವಾಗಿರುತ್ತದೆ. ಈ ಕರ್ಮವು ಬೀಜಾಂಕುರನ್ಯಾಯದಂತೆ ಅನಾದಿಯಾಗಿಯೂ ಇರುತ್ತದೆ. ಅಲ್ಲದೆ, ಮೋಕ್ಷವಾಗುವವರೆಗೂ ಇರುತ್ತದಾದುದರಿಂದ ಔಪಚಾರಿಕವಾಗಿ ಮರಣವಿಲ್ಲದ್ದೆಂದೂ ಅನಂತವೆಂದೂ ಹೇಳಿದೆ.

**ತೇನೇಹ ಶಾಶ್ವತಂ ಸರ್ವಂ ಜಗತ್ಸ್ಥಾವರಜಂಗಮಂ ।**
**ನಿತ್ಯಾನಿತ್ಯವಿಚಾರೇಽತ್ರ ನಿಮಗ್ನಾ ಮುನಯಃ ಸದಾ ॥೧೪॥**

ಈರೀತಿಯಾಗಿ ಕರ್ಮವು ಸದಾ ಇರುವುದರಿಂದ ಅದರ ಫಲಪರಿಣಾಮರೂಪವಾಗಿ ಸ್ಥಿರಚರಾತ್ಮಕವಾದ ಈ ಎಲ್ಲ ಜಗತ್ತೂ ಜೀವನದಿಯ ಪ್ರವಾಹದಂತೆ ನಿತ್ಯವಾಗಿ ಯಾವಾಗಲೂ ಹರಿಯುತ್ತಾ ಮುಂದಕ್ಕೆ ಸಾಗುತ್ತಾ ಇರುತ್ತದೆ. ಈ ಜಗತ್ತು ನಿತ್ಯವೋ ಅಥವಾ ಲಯವನ್ನು ಹೊಂದತಕ್ಕದ್ದೋ ಎಂಬ ವಿಚಾರದಲ್ಲಿ ಮುನಿಗಳು ಯಾವಾಗಲೂ ವಿಚಾರತತ್ಪರರಾಗಿರುವರು.

**ನ ಜಾನಂತಿ ಕೀಮೇತದ್ವೈ ನಿತ್ಯಂ ವಾಽನಿತ್ಯಮೇವ ಚ ।**
**ಮಾಯಾಯಾಂ ವಿದ್ಯಮಾನಾಯಾಂ ಜಗನ್ನಿತ್ಯಂ ಪ್ರತೀಯತೇ ॥೧೫॥**

ಆದರೆ ಮುನಿಗಳೂ ಸಹ ಈ ಜಗತ್ತು ಶಾಶ್ವತವಾದುದೋ ಅಥವಾ ಶಾಶ್ವತವಲ್ಲವೋ ಎಂಬುದನ್ನು ತಿಳಿಯಲಾರದೆ ಇರುತ್ತಾರೆ. ಎಲ್ಲಿಯವರೆಗೆ ಮಾಯೆಯು ಎಂದರೆ ಅಜ್ಞಾನವು ಆವರಿಸಿರುವುದೋ ಅಲ್ಲಿಯವರೆಗೆ ಈ ಜಗತ್ತು ನಿತ್ಯವಾಗಿರುವಂತೆ ತೋರುತ್ತಿರುತ್ತದೆ.

**ಕಾರ್ಯಾಭಾವಃ ಕಥಂ ವಾಚ್ಯಃ ಕಾರಣೇ ಸತಿ ಸರ್ವಥಾ ।**
**ಮಾಯಾಽನಿತ್ಯಾಕಾರಣಂ ಚ ಸರ್ವೇಷಾಂ ಸರ್ವದಾ ಕಿಲ ॥೧೬॥**

ಜಗತ್ತು ನಿತ್ಯವಾಗಿ ತೋರಲು ಮಾಯೆಯೇ ಕಾರಣವು. ಹೀಗೆ ಈ ಜಗತ್ತಿಗೂ, ಕರ್ಮ ಮತ್ತು ಅಜ್ಞಾನ ಇವಕ್ಕೂ ಕಾರ್ಯಕಾರಣ ಸಂಬಂಧವು ಗೊತ್ತಾದಮೇಲೆ ಈ ಕರ್ಮ ಮತ್ತು ಅಜ್ಞಾನರೂಪವಾದ ಕಾರಣವು ಇರುತ್ತಿರಲಾಗಿ ಅದರ ಕಾರ್ಯವಾದ ಜಗತ್ತೂ ನಿತ್ಯವಾಗಿ ಇದ್ದೇ ಇರಬೇಕಾಗುತ್ತದೆ ಎನ್ನಬೇಕು. ಈ ಮಾಯೆಯೂ ಕರ್ಮವೂ ಎಲ್ಲರಲ್ಲಿಯೂ ಯಾವಾಗಲೂ ಇರುವುದು. ಎಂದರೆ ಮೋಕ್ಷಪರ್ಯಂತವಾಗಿ ಇದ್ದೇ ಇರುವುದು ಎನ್ನಬೇಕಾಗುತ್ತದೆ. ಹಾಗಾದರೆ ಈ ಪ್ರಪಂಚವು ಯಾವಾಗಲೂ ಬದಲಾಯಿಸುತ್ತಿರುವ ಸ್ವಭಾವವುಳ್ಳದ್ದಾದುದರಿಂದ ಇದು ಅನಿತ್ಯವಾದುದೆಂದು ಗೊತ್ತಾಗುತ್ತಿದೆಯಲ್ಲವೇ ?ಎಂದರೆ, ಹೌದು. ಅದಕ್ಕೆ ಇನ್ನೂ ಒಂದು ಕಾರಣವಿದೆ. ಅದೇನೆಂದರೆ —

**ಕರ್ಮಬೀಜಂ ತತೋಽನಿತ್ಯಂ ಚಿಂತನೀಯಂ ಸದಾ ಬುಧೈಃ ।**
**ಭ್ರಮತ್ಯೇವ ಜಗತ್ಸರ್ವಂ ರಾಜನ್ ಕರ್ಮನಿಯಂತ್ರಿತಂ ॥೧೭॥**

ಓ ಜನಮೇಜಯರಾಜನೇ, ಈ ಜಗತ್ತಿನ ಅನಿತ್ಯತೆಗೆ ಕರ್ಮವೇ ಮೂಲ ಕಾರಣವಾಗಿರುವುದು, ಎನ್ನಬೇಕು. ಏಕೆಂದರೆ, ಜಗತ್ತು ಕರ್ಮಜನ್ಯವಾದುದೂ, ಮೋಕ್ಷವಾದಮೇಲೆ ಜ್ಞಾನನಿವರ್ತ್ಯವೂ ಆಗಿರುತ್ತದೆ. ಆದುದರಿಂದ ಪಂಡಿತರು ಅದನ್ನು ಅನಿತ್ಯವೆಂದು ತಿಳಿಯತಕ್ಕದ್ದು. ಹೀಗೆ ಈ ಸಮಸ್ತ ಜಗತ್ತೂ ಕೂಡ ಕರ್ಮದ ನಿಯಮದಿಂದಲೇ ಚಕ್ರದಂತೆ ಸುತ್ತುತ್ತಾ ಚಲಿಸುತ್ತಿರುವುದು. ಹೀಗೆ ಕರ್ಮವೂ, ಪ್ರಪಂಚವೂ ಜನ್ಯಗಳಾದುದರಿಂದಲೂ ಅನಿತ್ಯವಾದವುಗಳೆಂದೇ ತಿಳಿಯ ಬೇಕೆಂದು ತಾತ್ಪರ್ಯವು.

**ನಾನಾಯೋನಿಷು ರಾಜೇಂದ್ರ ನಾನಾಧರ್ಮಮಯೀಷು ಚ ।**
**ಇಚ್ಛಯಾ ಚ ಭವೇಜ್ಜನ್ಮ ವಿಷ್ಣೋರಮಿತತೇಜಸಃ ॥೧೮॥**

ದೊರೆಗಳಲ್ಲಿ ಶ್ರೇಷ್ಠನಾದ ಎಲೈ ಜನಮೇಜಯರಾಜನೇ, ಹೀಗೆ ಸಮಸ್ತವೂ ಕರ್ಮಾಧೀನವಲ್ಲದೇ ಇದ್ದಲ್ಲಿ, ಅತ್ಯಂತ ತೇಜಸ್ವಿಯಾದ ವಿಷ್ಣುವಿಗೂ ಅವತಾರವು ನಾನಾ ಬಗೆಯ ಜಾತಿಯವರಲ್ಲಿಯೂ, ಬೇರೆಬೇರೆ ಸ್ವಭಾವವುಳ್ಳುದಾಗಿಯೂ, ಆಗಾಗ್ಗೆ ಏಕೆ ಸಂಭವಿಸುತ್ತಿರಬೇಕು? ವಿಷ್ಣುವು ತನ್ನ ಇಚ್ಛೆಯಿಂದಲೇ ಏಕೆ ಹೀಗೆ ಜನಿಸಿಯಾನು? ಅಲ್ಲದೆ,

**ಯುಗೇಯುಗೇಷ್ವನೇಕಾಸು ನೀಚಯೋನಿಷು ತತ್ಕಥಂ ।**
**ತ್ಯಕ್ತ್ವಾ ವೈಕುಂಠಸಂವಾಸಂ ಸುಖಭೋಗಾನನೇಕಶಃ ॥೧೯॥**

ಆ ವಿಷ್ಣುವು ಅನೇಕ ಸುಖಭೋಗಗಳನ್ನೂ ಮತ್ತು ದಿವ್ಯವಾದ ವೈಕುಂಠ ಲೋಕದಲ್ಲಿ ನೆಮ್ಮದಿಯಿಂದ ವಾಸವಾಗಿರುವುದನ್ನೂ ಬಿಟ್ಟು ಪ್ರತಿಯೊಂದು ಯುಗ ದಲ್ಲಿಯೂ ಕೂಡ ನಾನಾ ಬಗೆಯ ಹೀನಕುಲದಲ್ಲಿಯೂ ಏಕೆ ಜನಿಸುವನು?

**ವಿಣ್ಮೂತ್ರಮಂದಿರೇ ವಾಸಂ ಸಂತ್ರಸ್ತಃ ಕೋಽಭಿವಾಂಛತಿ ।**
**ಪುಷ್ಪಾವಚಯಲೀಲಾ ಚ ಜಲಕೇಲಿಃ ಸುಖಾಸನಂ ॥೨೦॥**

ದೇವತೆಗಳು ಕರ್ಮಕ್ಕೆ ಅಧೀನರಾಗದೆ ತಮ್ಮ ಇಚ್ಛೆಯಿಂದಲೇ ಅವತರಿಸು ತ್ತಾರೆಂದರೆ, ಅದು ಸ್ವಾಭಾವಿಕವಾದುದಲ್ಲವು. ಏಕೆಂದರೆ, ಸುಂದರವಾದ ಉದ್ಯಾನ ವನದಲ್ಲಿ ಹೂವನ್ನು ಕೊಯ್ಯುವ ಆಟವನ್ನೂ, ಜಲಕ್ರೀಡೆಯನ್ನೂ ಮತ್ತು ಮೃದು ವಾದ ಆಸನಗಳಲ್ಲಿ ಸುಖವಾಗಿ ಕುಳಿತಿರುವಿಕೆ ಮುಂತಾದ ಅತ್ಯಂತ ಸುಖಕರವಾದ

ವಿನೋದಗಳನ್ನೂ ಆ ದೇವತೆಗಳು ಬಿಟ್ಟು, ಮಲಮೂತ್ರಾದಿಗಳಿಗೆ ಸ್ಥಾನವಾದ ನಾನಾ ಬಗೆಯ ಗರ್ಭಗಳಲ್ಲಿ ವಾಸಮಾಡಲು ಹೆದರಿಕೆಯುಳ್ಳ ಯಾರುತಾನೇ ಈ ಬಗೆಯ ಗರ್ಭವಾಸವನ್ನು ಇಚ್ಛಿಸುತ್ತಾರೆ.

**ತ್ಯಕ್ತ್ವಾ ಗರ್ಭಗೃಹೇ ವಾಸಂ ಕೋಽಭಿವಾಂಛತಿ ಬುದ್ಧಿಮಾನ್ ।**
**ತೂಲಿಕಾಂ ಮೃದುಸಂಯುಕ್ತಾಂ ದಿವ್ಯಾಂ ಶಯ್ಯಾಂ ವಿನಿರ್ಮಿತಾಂ ॥೨೧॥**

ಬಹಳ ಮೆತ್ತಗಿರತಕ್ಕ, ಹಂಸದ ಗರಿಗಳಿಂದ ಮಾಡಲ್ಪಟ್ಟ ದಿವ್ಯವಾದ ಹಾಸಿಗೆಯನ್ನು ತ್ಯಜಿಸಿ, ದುಃಖವನ್ನುಂಟುಮಾಡತಕ್ಕ ಗರ್ಭದಲ್ಲಿ ವಾಸಿಸಲು, ವಿವೇಕಿಯಾದ ಯಾವ ಮನುಷ್ಯನು ತಾನೇ ಇಚ್ಛಿಸುತ್ತಾನೆ ?

**ತ್ಯಕ್ತ್ವಾಽಧೋಮುಖವಾಸಂ ಚ ಕೋಽಭಿವಾಂಛತಿ ಪಂಡಿತಃ ।**
**ಗೀತಂ ನೃತ್ಯಂ ಚ ವಾದ್ಯಂ ಚ ನಾನಾಭಾವಸಮನ್ವಿತಂ ॥೨೨॥**

ಶೃಂಗಾರಾದಿ ಅನೇಕವಿಧವಾದ ಭಾವಗಳಿಂದ ಕೂಡಿರತಕ್ಕ ಸಂಗೀತವನ್ನೂ, ನರ್ತನವನ್ನೂ, ಅನೇಕವಿಧವಾದ ಮಧುರವಾದ್ಯಶ್ರವಣಜನಿತಸುಖವನ್ನೂ ತ್ಯಜಿಸಿ, ಗರ್ಭದಲ್ಲಿ ಕೆಳಮುಖವಾಗಿರಬೇಕಾಗಿರುವುದರಿಂದ ಉಂಟಾಗುವ ಅತ್ಯಂತಕ್ಲೇಶವನ್ನು ಸಹಿಸಿಕೊಂಡು ಗರ್ಭವಾಸಮಾಡಲು, ತಿಳಿವಳಿಕೆಯುಳ್ಳ ಯಾವನು ತಾನೇ ಅಪೇಕ್ಷಿಸುತ್ತಾನೆ ?

**ಮುಕ್ತ್ವಾ ಕೋ ನರಕೇ ವಾಸಂ ಮನಸಾಽಪಿ ವಿಚಿಂತಯೇತ್ ।**
**ಸಿಂಧುಜಾದ್ಭುತಭಾವಾನಾಂ ರಸಂ ತ್ಯಕ್ತ್ವಾ ಸುದುಸ್ತ್ಯಜಂ ॥೨೩॥**

ಅಲ್ಲದೆ, ಆ ವಿಷ್ಣುವು, ಸಮುದ್ರರಾಜನ ಮಗಳಾದ ಲಕ್ಷ್ಮೀದೇವಿಯ ಅನೇಕ ವಿಧವಾದ ಹಾವಭಾವಗಳಿಂದ ಕೂಡಿದ ಶೃಂಗಾರಾದಿರಸಗಳ ಅನುಭವದ ಆನಂದವನ್ನು ಬಿಡಲು ಸ್ವಲ್ಪವೂ ಮನಸ್ಸುಬಾರದೆ ಇದ್ದರೂ ಆ ಸುಖವನ್ನು ಬಿಟ್ಟವನಾಗಿ ನರಕಕ್ಕೆ ಸಮಾನವಾದ ಗರ್ಭದಲ್ಲಿ ವಾಸಮಾಡಲು ಕೇವಲ ಮನಸ್ಸಿನಲ್ಲಿ ಮಾತ್ರವಾದರೂ ಹೇಗೆತಾನೇ ಅಪೇಕ್ಷಿಸಿಯಾನು ?

**ವಿಣ್ಮೂತ್ರರಸಪಾನಂ ಚ ಕ ಇಚ್ಛೇನ್ಮತಿಮಾನ್ನರಃ ।**
**ಗರ್ಭವಾಸಾತ್ಪರೋ ನಾಸ್ತಿ ನರಕೋ ಭುವನತ್ರಯೇ ॥೨೪॥**

ಅಲ್ಲದೆ, ಅಂತಹ ಗರ್ಭದಲ್ಲಿದ್ದವನಾಗಿ ಮಲಮೂತ್ರಾದಿಗಳ ರಸಪಾನ ಮಾಡಲು ಬುದ್ಧಿವಂತನಾದ ಯಾವ ಮನುಷ್ಯನು ತಾನೇ ಇಷ್ಟಪಡುವನು? ಮತ್ತು ಸ್ವರ್ಗ, ಮರ್ತ್ಯ, ಪಾತಾಲವೆಂಬ ಮೂರು ಲೋಕಗಳಲ್ಲಿಯೂ ಕೂಡ ಗರ್ಭವಾಸಕ್ಕಿಂತಲೂ ಹೆಚ್ಚಿನ ನರಕವು ಇನ್ನೊಂದಿಲ್ಲವು.

**ತದ್ಭೀತಾಶ್ಚ ಪ್ರಕುರ್ವಂತಿ ಮುನಯೋ ದುಸ್ತರಂ ತಪಃ ।**
**ಹಿತ್ವಾ ಭೋಗಂ ಚ ರಾಜ್ಯಂ ಚ ವನೇ ಯಾಂತಿ ಮನಸ್ವಿನಃ ॥೨೫॥**

ಆದುದರಿಂದಲೇ, ಅಂತಹ ಗರ್ಭವಾಸದಿಂದ ಹೆದರಿದವರಾಗಿ ಪುನಃ ಜನ್ಮವು ಬಾರದಿರಲೆಂದು ಮುನಿಗಳು ಅತ್ಯಂತ ಕಠಿನವಾದ ತಪಸ್ಸನ್ನು ಮಾಡುತ್ತಾರೆ. ಮನಸ್ಸನ್ನು ಜಯಿಸಿ ಸ್ವಾಧೀನದಲ್ಲಿಟ್ಟುಕೊಂಡಿರುವ ರಾಜರೇ ಮುಂತಾದವರೂ ತಮ್ಮ ಸಮಸ್ತರಾಜ್ಯವನ್ನೂ ಈ ವಿಷಯಸುಖವನ್ನೂ ಬಿಟ್ಟವರಾಗಿ ತಪಸ್ಸುಮಾಡಲು ಕಾಡಿಗೆ ಹೋಗುತ್ತಾರೆ.

**ಯದ್ಭೀತಾಸ್ತು ವಿಮೂಢಾತ್ಮಾ ಕಸ್ತಂ ಸೇವಿತುಮಿಚ್ಛತಿ ।**
**ಗರ್ಭೇ ತುದಂತಿ ಕೃಮಯೋ ಜಠರಾಗ್ನಿಸ್ತಪತ್ಯಧಃ ॥೨೬॥**

ಅಲ್ಲದೆ ಆ ಗರ್ಭದಲ್ಲಿ ಅನೇಕವಿಧವಾದ ಹುಳುಗಳು ಬಹಳವಾಗಿ ವ್ಯಥೆಯನ್ನುಂಟುಮಾಡುತ್ತಿರುತ್ತವೆ. ಮತ್ತು ಕೆಳಭಾಗದಲ್ಲಿ ಜಠರಾಗ್ನಿಯು ಸುಡುತ್ತಿರುತ್ತದೆ. ಇಂತಹ ದುಃಖಕರವಾದ ಗರ್ಭದಲ್ಲಿ ವಾಸಿಸಲು ಯಾವ ಮೂರ್ಖನು ತಾನೇ, ಹೆದರದೆ ಇಚ್ಛಿಸುತ್ತಾನೆ?

**ವಸಾಸಂವೇಷ್ಟನಂ ಕ್ರೂರಂ ಕಿಂ ಸುಖಂ ತತ್ರ ಭೂಪತೇ ।**
**ವರಂ ಕಾರಾಗೃಹೇ ವಾಸೋ ಬಂಧನಂ ನಿಗಡೈರ್ವರಂ ॥೨೭॥**

ಓ ಜನಮೇಜಯರಾಜನೇ, ಅಲ್ಲದೆ ಅತ್ಯಂತ ದುಃಖಕರವಾದ ಮತ್ತು ದೇಹವನ್ನು ಆವರಿಸಿಕೊಂಡಿರುವ ಚೀಲದಲ್ಲಿ ಕೈಕಾಲುಗಳನ್ನು ಮುದಚಿಕೊಂಡು ಆ ಗರ್ಭದಲ್ಲಿ ವಾಸಮಾಡುವಿಕೆಯು ಯಾವ ಸುಖವನ್ನುಂಟುಮಾಡಬಲ್ಲುದು? ಅಂತಹ ಇಕ್ಕಟ್ಟಿನ ಗರ್ಭದಲ್ಲಿ ವಾಸಿಸುವುದಕ್ಕಿಂತಲೂ ಸೆರೆಮನೆಯಲ್ಲಿ ವಾಸಮಾಡುವುದೂ ಮತ್ತು ಸರಪಣಿಯಿಂದ ಬಂಧನವೂ ಮೇಲಾದುವೆನ್ನಬೇಕು.

**ಅಲ್ಪಮಾತ್ರಂ ಕ್ಷಣಂ ನೈವ ಗರ್ಭವಾಸಃ ಕ್ವಚಿಚ್ಛುಭಃ ।**
**ಗರ್ಭವಾಸೇ ಮಹದ್ದುಃಖಂ ದಶಮಾಸನಿವಾಸನಂ ॥೨೮॥**

ಆ ಗರ್ಭದಲ್ಲಿ ಒಂದು ಕ್ಷಣಕಾಲವು ಕೂಡ ವಾಸಮಾಡುವುದು ಹಿತಕರವಾದುದಲ್ಲವು. ಮತ್ತು ಆ ಗರ್ಭದಲ್ಲಿ ಹತ್ತು ತಿಂಗಳವರೆಗೆ ವಾಸಮಾಡುವುದು ತುಂಬ ದುಃಖವನ್ನುಂಟುಮಾಡುವುದೇ ಆಗಿರುತ್ತದೆ.

**ತಥಾ ನಿಃಸರಣೇ ದುಃಖಂ ಯೋನಿಯಂತ್ರೇsತಿದಾರುಣೇ ।**
**ಬಾಲಭಾವೇ ತಥಾ ದುಃಖಂ ಮೂಕಜ್ಞಾಭಾವಸಂಯುತಂ ॥೨೯॥**

ಹಾಗೆಯೇ ಅತ್ಯಂತ ಯಾತನೆಯನ್ನುಂಟುಮಾಡತಕ್ಕ ಸ್ತ್ರೀಜನನೇಂದ್ರಿಯ ದ್ವಾರಾ ಗರ್ಭದಿಂದ ಹೊರಗೆ ಬರುವಿಕೆಯೂ ಕೂಡ ಬಹಳ ದುಃಖಕರವಾದುದು. ಅಲ್ಲದೆ ಬಾಯಿಯಿಂದ ಮಾತನಾಡಲು ಸಹ ಸಾಧ್ಯವಿಲ್ಲದೆ ಕೇವಲ ತಿಳಿವಳಿಕೆಯೂ ಇಲ್ಲದೆ ಇರುವ ಬಾಲ್ಯದಲ್ಲಿಯೂ ಅತ್ಯಂತ ದುಃಖವನ್ನನುಭವಿಸಬೇಕಾಗಿರುತ್ತದೆ.

**ಕ್ಷುತ್ತೃಡಾವೇದನಾಶಕ್ತಃ ಪರತಂತ್ರೋsತಿಕಾತರಃ ।**
**ಕ್ಷುಧಿತೇ ರುದಿತೇ ಬಾಲೇ ಮಾತಾ ಚಿಂತಾತುರಾ ತದಾ ॥೩೦॥**

ಬಾಲ್ಯದಲ್ಲಿ ಹಸಿವುಬಾಯಾರಿಕೆಗಳು ಆದಾಗ್ಯೂ ಕೂಡ ಅವನ್ನು ಹೇಳಲೂ ಸಾಮರ್ಥ್ಯವಿಲ್ಲದೆ, ತನ್ನ ದೇಹಪೋಷಣೆಗೆ ಇತರರ ಸಹಾಯವನ್ನು ಅಪೇಕ್ಷಿಸುವವನಾಗಿಯೂ, ಗಾಬರಿ ಆತಂಕಗಳಿಂದ ಕೂಡಿದವನಾಗಿಯೂ ಇರಬೇಕಾಗುವುದು. ಮತ್ತು ಬಾಲಕನು ಹಸಿವಿನಿಂದ ಅಳುತ್ತಿರಲಾಗಿ ತಾಯಿಯು ಏನಾಗಿದೆ ಎಂಬುದನ್ನೂ, ಏನು ಮಾಡಬೇಕೆಂಬುದನ್ನೂ ತಿಳಿಯದೆ ಅತ್ಯಂತ ವ್ಯಸನದಿಂದ ಕೂಡಿದವಳಾಗುತ್ತಾಳೆ.

**ಭೇಷಜಂ ಪಾತುಮಿಚ್ಛಂತೀ ಜ್ಞಾತ್ವಾ ವ್ಯಾಧಿವ್ಯಥಾಂ ದೃಢಾಂ ।**
**ನಾನಾವಿಧಾನಿ ದುಃಖಾನಿ ಬಾಲಭಾವೇ ಭವಂತಿ ಹಿ ॥೩೧॥**

ಮಗುವು ಅಳುವುದಕ್ಕೆ ಕಾರಣವನ್ನು ತಿಳಿಯದವಳಾಗಿ ತಾಯಿಯು, ವಾಸ್ತವವಾಗಿ ಆ ಮಗುವಿಗೆ ಯಾವ ರೋಗವೂ ಇಲ್ಲದಿದ್ದರೂ, ಯಾವುದೋ ರೋಗದ ವ್ಯಥೆಯಿಂದ ಅಳುತ್ತಿದೆಯೆಂದು ಭ್ರಾಂತಿಯಿಂದ ತಿಳಿದು ಔಷಧಿಯನ್ನು ಕುಡಿಸಲು

ಇಚ್ಛಿಪಡುತ್ತಾಳೆ. ಈ ರೀತಿಯಾಗಿ ಬಾಲ್ಯದಲ್ಲಿ ಅನೇಕ ವಿಧವಾದ ದುಃಖಗಳು ಉಂಟಾಗುತ್ತವೆ.

**ಕಿಂ ಸುಖಂ ವಿಬುಧಾ ದೃಷ್ಟ್ವಾ ಜನ್ಮ ವಾಂಛಂತಿ ಚೇಚ್ಛಯಾ ।**
**ಸಂಗ್ರಾಮಮಸುರೈಃ ಸಾರ್ಧಂ ಸುಖಂ ತ್ಯಕ್ತ್ವಾ ನಿರಂತರಂ ॥೩೨॥**
**ಕರ್ತುಮಿಚ್ಛೇಚ್ಚ ಕೋ ಮೂಢಃ ಶ್ರಮದಂ ಸುಖನಾಶನಂ ॥**

ಹೀಗಿರುವಲ್ಲಿ ತಿಳಿವಳಿಕೆಯುಳ್ಳವರು ಯಾವ ಸುಖವನ್ನು ಕಂಡು ಜನ್ಮಗಳನ್ನು ಪಡೆಯಲು ಇಚ್ಛಿಸುತ್ತಾರೆ? ಅಲ್ಲದೆ, ಯಾವ ದಡ್ಡನು ತಾನೇ ತನ್ನ ಸುಖವನ್ನು ಬಿಟ್ಟು, ಯಾವಾಗಲೂ ಆಯಾಸವನ್ನುಂಟುಮಾಡುವ, ಸುಖವನ್ನು ಹಾಳುಮಾಡುವ ಯುದ್ಧವನ್ನು ದೇವತೆಗಳೊಡನೆ ಮಾಡಲು ಅಪೇಕ್ಷಿಸುತ್ತಾನೆ?

**ಸರ್ವಥೈವ ನೃಪಶ್ರೇಷ್ಠ ಸರ್ವೇ ಬ್ರಹ್ಮಾದಯಃ ಸುರಾಃ ।**
**ಕೃತಕರ್ಮವಿಪಾಕೇನ ಪ್ರಾಪ್ನುವಂತಿ ಸುಖಾಸುಖೇ ॥೩೩॥**

ಆದುದರಿಂದ ದೊರೆಗಳಲ್ಲಿ ಉತ್ತಮನಾದ ಜನಮೇಜಯರಾಜನೇ, ಸಮಸ್ತ ಬ್ರಹ್ಮಾದಿದೇವತೆಗಳೂ ಕೂಡ ತಮ್ಮ ತಮ್ಮ ಕರ್ಮಗಳು ಪರಿಪಾಕವಾಗುವುದರಿಂದ ಎಂದರೆ ಫಲೋನ್ಮುಖವಾಗುವುದರಿಂದ ಆ ಕರ್ಮಕ್ಕನುಸಾರವಾಗಿ ಸುಖವನ್ನೂ, ದುಃಖವನ್ನೂ ಹೊಂದುತ್ತಾರೆ ಎಂಬುದಾಗಿ ಗೊತ್ತಾಗುತ್ತದೆ.

**ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ।**
**ದೇಹವದ್ಭಿರ್ನೃಭಿರ್ದೇವೈಸ್ತಿರ್ಯಗ್ಭಿಶ್ಚ ನೃಪೋತ್ತಮ ॥೩೪॥**

ಓ ರಾಜಶ್ರೇಷ್ಠನಾದ ಜನಮೇಜಯರಾಜನೇ, ಸಮಸ್ತವೂ ಕರ್ಮಾಧೀನವಾದುದರಿಂದ ಶರೀರವುಳ್ಳ ದೇವತೆಗಳಾಗಲಿ, ಮನುಷ್ಯರಾಗಲಿ, ಪ್ರಾಣಿಗಳಾಗಲಿ, ತಾವು ಮಾಡಿದ ಒಳ್ಳೆಯ ಮತ್ತು ಕೆಟ್ಟ ಕರ್ಮಗಳ ಫಲವನ್ನು ಅನುಭವಿಸಿಯೇ ತೀರಬೇಕು.

**ತಪಸಾ ದಾನಯಜ್ಞೈಶ್ಚ ಮಾನವಶ್ಚೇಂದ್ರತಾಂ ವ್ರಜೇತ್ ।**
**ಕ್ಷೀಣೇ ಪುಣ್ಯೇಽಥ ಶಕ್ರೋಽಪಿ ಪತತ್ಯೇವ ನ ಸಂಶಯಃ ॥೩೫॥**

ತಪಸ್ಸನ್ನು ಮಾಡುವುದರಿಂದಲೂ, ದಾನ, ಯಜ್ಞ, ಇವುಗಳನ್ನು ನೆರವೇರಿಸುವುದರಿಂದಲೂ ಮನುಷ್ಯನು ಇಂದ್ರಪದವಿಯನ್ನೂ ಸಂಪಾದಿಸಬಹುದು. ಆದರೂ

ಆ ರೀತಿ ಮಾಡಿದ ಪುಣ್ಯವು ಮುಗಿದುಹೋದಮೇಲೆ ಆ ಇಂದ್ರನೂ ತನ್ನ ಇಂದ್ರ ಪದವಿಯನ್ನು ಕಳೆದುಕೊಂಡು ಕೆಳಗೆ ಬಿದ್ದು ಭೂಲೋಕದಲ್ಲಿ ಪುನಃ ಜನ್ಮವೆತ್ತು ವನು ಎಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲವು.

**ರಾಮಾವತಾರಯೋಗೇನ ದೇವಾ ವಾನರತಾಂ ಗತಾಃ ।**
**ತಥಾ ಕೃಷ್ಣಸಹಾಯಾರ್ಥಂ ದೇವಾ ಯಾದವತಾಂ ಗತಾಃ ॥೩೬॥**

ರಾಮಾವತಾರದ ಸಂಬಂಧದಿಂದ ಆ ಕಾಲದಲ್ಲಿ ದೇವತೆಗಳೂ ರಾಮನ ಧರ್ಮರಕ್ಷಣೆಯ ಕಾರ್ಯನಿರ್ವಾಹಕ್ಕೆ ನೆರವಾಗಲು, ಕಪಿಗಳ ರೂಪವನ್ನು ಹೊಂದಿ ಅವತರಿಸಿದ್ದರು. ಮತ್ತು ಕೃಷ್ಣಾವತಾರದ ಸಮಯದಲ್ಲಿ ಕೃಷ್ಣನ ಸಹಾಯಕ್ಕೋಸ್ಕರ ಆ ದೇವತೆಗಳೇ ಯದುವಂಶದಲ್ಲಿ ಯಾದವರಾಗಿ ಜನಿಸಿದ್ದರು.

**ಏವಂ ಯುಗೇ ಯುಗೇ ವಿಷ್ಣುರವತಾರಾನನೇಕಶಃ ।**
**ಕರೋತಿ ಧರ್ಮರಕ್ಷಾರ್ಥಂ ಬ್ರಹ್ಮಣಾ ಪ್ರೇರಿತೋ ಭೃಶಂ ॥೩೭॥**

ಈ ರೀತಿಯಾಗಿ ವಿಷ್ಣುವು ಹಿರಣ್ಯಗರ್ಭಬ್ರಹ್ಮನಿಂದ ಪ್ರೇರಿಸಲ್ಪಟ್ಟವನಾಗಿ ಪ್ರತಿಯೊಂದು ಯುಗದಲ್ಲಿಯೂ ಧರ್ಮರಕ್ಷಣೆಗೋಸ್ಕರ ಅನೇಕಸಲ ಭೂಲೋಕದಲ್ಲಿ ಅವತರಿಸುತ್ತಾನೆ.

**ಪುನಃ ಪುನರ್ಹರೇರೇವಂ ನಾನಾಯೋನಿಷು ಪಾರ್ಥಿವ ।**
**ಅವತಾರಾ ಭವಂತ್ಯನ್ಯೇ ರಥಚಕ್ರವದದ್ಭುತಾಃ ॥೩೮॥**

• ಓ ಜನಮೇಜಯರಾಜನೇ, ಈ ಪ್ರಕಾರವಾಗಿ ವಿಷ್ಣುವಿನ ಬೇರೆ ಬೇರೆ ಅವತಾರಗಳು ಹಲವು ಬಗೆಯ ಕ್ಷೇತ್ರಗಳಲ್ಲಿ ರಥದ ಚಕ್ರವು ಯಾವ ರೀತಿಯಲ್ಲಿ ತಿರುಗುತ್ತಿರುವುದೋ ಹಾಗೆಯೇ ತಿರುಗಿ ತಿರುಗಿ ಆಶ್ಚರ್ಯಕರವಾಗಿ ಆಗುತ್ತಿರುವುವು.

**ದೈತ್ಯಾನಾಂ ಹನನಂ ಕರ್ಮ ಕರ್ತವ್ಯಂ ಹರಿಣಾ ಸ್ವಯಂ ।**
**ಅಂಶಾಂಶೇನ ಪೃಥಿವ್ಯಾಂ ವೈ ಕೃತ್ವಾ ಜನ್ಮ ಮಹಾತ್ಮನಾ ॥೩೯॥**

ಈ ರೀತಿಯಾಗಿ ಹಿರಣ್ಯಗರ್ಭನ ಅಂಶನಾದ ವಿಷ್ಣುವು ತನ್ನ ಅಂಶದಿಂದ ರಾಮಕೃಷ್ಣ ಮುಂತಾದ ಮಹಾತ್ಮರಾಗಿ ಈ ಭೂಲೋಕದಲ್ಲಿ ಅವತರಿಸಿದವರಾಗಿ ತಾನು ರಾಕ್ಷಸರ ಸಂಹಾರವನ್ನು ಮಾಡಬೇಕು. ಅಲ್ಲದೆ ದುಷ್ಟನಿಗ್ರಹ ಶಿಷ್ಟಾನುಗ್ರಹ ರೂಪವಾದ ಧರ್ಮರಕ್ಷಣೆ ಎಂಬ ಕರ್ತವ್ಯವನ್ನು ಮಾಡುತ್ತಿರಬೇಕು.

ಪರಬ್ರಹ್ಮತತ್ತ್ವವು ಸಚ್ಚಿದಾನಂದರೂಪವಾದುದೆಂದು ಆಗಾಗ್ಗೆ ಹೇಳಿದೆ. ಈ ಬ್ರಹ್ಮತತ್ತ್ವದ ಶಕ್ತಿಗೆ ಆದಿಶಕ್ತಿ, ಪರಾಶಕ್ತಿ, ಮಹಾಮಾಯೆ ಎಂದು ವ್ಯವಹಾರವಿದೆ. ಬೆಂಕಿಗೂ ಸುಡುವ ಶಕ್ತಿಗೂ ಹೇಗೆ ಭೇದವಿಲ್ಲವೋ ಹಾಗೆಯೇ ಬ್ರಹ್ಮವೂ ಶಕ್ತಿಯೂ ಅಭಿನ್ನತತ್ತ್ವಗಳು. ಆದುದರಿಂದ ಈ ಶಕ್ತಿಯನ್ನು ಅದರ ವಾಸ್ತವರೂಪದಲ್ಲಿ ಸಚ್ಚಿದಾನಂದರೂಪಳೆಂದೂ, ವ್ಯವಹಾರಸ್ಥಿತಿಯಲ್ಲಿ ಎಂದರೆ ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ನಿರ್ವಹಿಸುತ್ತಿರುವಾಗ ಮಹಾಮಾಯೆ ಎಂದೂ, ಪರಾಶಕ್ತಿ ಎಂದೂ, ಭಗವತೀ ಎಂದರೆ ಷಡ್ಗುಣೈಶ್ವರ್ಯವುಳ್ಳ ಮಹಾಮಹಿಮಾಶಾಲಿನಿ ಎಂದೂ ವೇದಾಗಮಪುರಾಣಶಾಸ್ತ್ರಗಳಿಂದಲೂ ಗೊತ್ತಾಗುತ್ತಿದೆ. ಅಲ್ಲದೆ, ವಿಚಾರವಿಮರ್ಶೆಗಳಿಂದಲೂ ಈ ಅಂಶವನ್ನು ಎಲ್ಲರೂ ಅನುಭವಕ್ಕೆ ತಂದುಕೊಳ್ಳಬಹುದು. ಈ ಪರಾಶಕ್ತಿಸ್ವರೂಪಳಾದ ಮಹಾದೇವಿಯು ಆಪ್ತಕಾಮಳಾಗಿ ನಿತ್ಯತೃಪ್ತಳಾದುದರಿಂದ ಈ ಪ್ರಪಂಚವನ್ನು ಸೃಷ್ಟಿಸುವುದರಿಂದ ಆ ದೇವಿಗೆ ಆಗಬೇಕಾಗಿರುವ ಪ್ರಯೋಜನವೇನೂ ಇಲ್ಲವು. ಆದರೆ ಅನಂತಕೋಟಿ ಜೀವರು ನಾನಾಬಗೆಯ ಶರೀರಗಳಲ್ಲಿ ತಮ್ಮ ತಮ್ಮ ಕರ್ಮಗಳಿಗೆ ತಕ್ಕಂತೆ ಜನ್ಮಗಳನ್ನು ಪಡೆದು ಹಲವು ಬಗೆಯ ಕರ್ಮಗಳನ್ನು ಅನಾದಿಕಾಲದಿಂದ ಮಾಡಿಯೂ ಮಾಡುತ್ತಲೂ ಇರುತ್ತಾರೆ. ಆ ಕರ್ಮಗಳ ಫಲಗಳನ್ನು ಅವರು ಅನುಭವಿಸಲು ಬದ್ಧರಾಗಿರುತ್ತಾರೆ. ಅವರ ಈ ಫಲಗಳ ಅನುಭವಕ್ಕಾಗಿ ಈ ಜಗದ್ವ್ಯಾಪಾರವು ಸಾಗುತ್ತಿರಬೇಕು. ಆದುದರಿಂದ ಜೀವರಿಗೆ ಸುಖದುಃಖಫಲಗಳನ್ನು ಕೊಡುವ ದೇವಿಗೆ ವೈಷಮ್ಯ ಎಂದರೆ ಪಕ್ಷಪಾತವಾಗಲಿ, ನೈರ್ಘೃಣ್ಯ ಎಂದರೆ ದಯೆಯಿಲ್ಲದ ಕ್ರೂರತನವಾಗಲಿ ಸಂಘಟಿಸುವುದಿಲ್ಲವು. ಎಂದರೆ ಜೀವರು ತಮಗೆ ತಾವೇ ಹೊಣೆಗಾರರಾಗಿರುತ್ತಾರೆ. ಹೇಗೆಂದರೆ, ಅವರು ಸಕಾಮಕರ್ಮಾಚರಣೆಯಿಂದ ಈ ಸಂಸಾರದ ಪ್ರವಾಹದಲ್ಲಿ ಆ ಕರ್ಮಫಲಗಳನ್ನು ಅನುಭವಿಸಲು ತೇಲುತ್ತಲೂ ಸುಳಿಗಳಲ್ಲಿ ಸುತ್ತುತ್ತಲೂ ಅನಂತವಾಗಿ ಬದ್ಧರಾಗಿರುವುದಕ್ಕಾಗಲಿ, ಅಥವಾ ನಿಷ್ಕಾಮಕರ್ಮಾಚರಣೆಯಿಂದ ಕಡೆಗೆ ಈ ಸಂಸಾರದ ನಿರ್ಬಂಧದುಃಖವನ್ನು ತಪ್ಪಿಸಿಕೊಂಡು ಬಿಡುಗಡೆಯ ಮೋಕ್ಷಾನಂದವನ್ನು ನಿತ್ಯವಾಗಿ ಪಡೆಯುವುದಕ್ಕಾಗಲಿ ಸ್ವತಂತ್ರರಾಗಿರುತ್ತಾರೆ. ಆದರೆ, ದೇವಿಯು ಮಾತ್ರ ಆಗಾಗ್ಗೆ ವಿಶೇಷವಾಗಿ ಹೆಚ್ಚಿದ ದುಷ್ಟರನ್ನು ಶಿಕ್ಷಿಸುತ್ತಲೂ, ಶಿಷ್ಟರನ್ನು ರಕ್ಷಿಸುತ್ತಲೂ, ಧರ್ಮವನ್ನು ಕಾಪಾಡುತ್ತಿರುತ್ತಾಳೆ. ಆದುದರಿಂದ ದೇವಿಗೆ ಮೇಲೆ ಹೇಳಿದ ದೋಷಸಂಬಂಧವಿಲ್ಲವು.

ಹೀಗೆಂದು ಸಮಾಧಾನವನ್ನು ಹೇಳಿದರೂ ಮೊದಲ ಸೃಷ್ಟಿಯಲ್ಲಾದರೂ ದೇವಿಗೆ ದೋಷಸಂಪರ್ಕವನ್ನು ತಪ್ಪಿಸಲಾಗುವುದಿಲ್ಲವೆಂದರೆ, ಸೃಷ್ಟಿಗೆ ಮೊಟ್ಟ

ಮೊದಲು ಎನ್ನುವುದೇ ಇಲ್ಲವು. ಜೀವರ ಕರ್ಮಗಳೂ, ಜಗತ್ತೂ ಉಂಟಾಗಿ ಮುಂದುವರಿಯುತ್ತಿರುವುದೂ, ಬೀಜವೃಕ್ಷನ್ಯಾಯದಂತೆ ಅನಾದಿಕಾಲದಿಂದಲೂ ಬಂದಿದೆ ಎಂದು ಸಮಾಧಾನವು. ಇದರಿಂದ ಇವುಗಳಿಗೆ ಪರಸ್ಪರವಾಗಿ ಅನ್ಯೋನ್ಯಾಶ್ರಯದೋಷವೂ ತಪ್ಪುತ್ತದೆ ಎಂದು ತಿಳಿಯಬಹುದು. ಈ ಅಂಶದಲ್ಲಿ " ಜೀವ ಈಶೋ ವಿಶುದ್ಧಾಚಿತ್ ತಥಾ ಜೀವೇಶಯೋರ್ಭಿದಾ । ಅವಿದ್ಯಾ. ತಚ್ಚಿತೋರ್ಯೋಗಃ (ರ್ಭೇದಃ) ಷಡಸ್ಮಾಕಮನಾದಯಃ ॥ " ಎಂಬ ವಚನವೂ ಪ್ರಮಾಣವೆಂದು ಹೇಳಿದೆ.

ಅಲ್ಲದೆ ಬೃಹದಾರಣ್ಯಕೋಪನಿಷತ್ತಿನಲ್ಲೂ ಈ ವಿಷಯವನ್ನು ನಿರೂಪಿಸಿದೆ. ಪೂರ್ವಜನ್ಮದಲ್ಲಿ ಸತ್ಕರ್ಮಗಳನ್ನು ಮಾಡಿ ಉಪಾಸನೆಯಲ್ಲಿ ಸಿದ್ಧಿಯನ್ನು ಪಡೆದಿದ್ದ ಉತ್ತಮಜೀವನು ಹಿರಣ್ಯಗರ್ಭನೇ ಮುಂತಾದ ಅಧಿಕಾರಿಕಪದವಿಯನ್ನು ಪಡೆಯುತ್ತಾನೆ. ಅವನ ಆ ಕರ್ಮದ ಫಲವನ್ನು ಅನುಭವಿಸುವುದರಲ್ಲಿ ಆ ಈಶ್ವರನೂ ಬದ್ಧನಾಗಿಯೇ ಇರುತ್ತಾನೆ. ಎಂಬ ಅಂಶವನ್ನು " ಸೋಽಬಿಭೇತ್, ನೈವ ರೇಮೇ " ಎಂದು ಮುಂತಾದ ವಾಕ್ಯಗಳಿಂದ ವರ್ಣಿಸಿದೆ. ಆಮೇಲೆ " ಸೋ ವೇದಾಹಂ ಬ್ರಹ್ಮಾಸ್ಮೀತಿ " ಕಡೆಗೆ ಅವನಿಗೂ ಜ್ಞಾನವೂ ಮೋಕ್ಷವೂ ಉಂಟಾದಂತೆ ವರ್ಣಿಸಿದೆ. ಹೀಗೆ ಪ್ರಥಮ ಶರೀರಿಯಾದ ಹಿರಣ್ಯಗರ್ಭನು ಸೃಜ್ಯಮಾನವಾದ ಪ್ರಾಣಿಗಳ ಕರ್ಮವಶದಿಂದ ಪರಬ್ರಹ್ಮತತ್ತ್ವದಲ್ಲಿ ಪ್ರಥಮಸ್ಪಂದರೂಪನೂ, ಇಚ್ಛಾ, ಜ್ಞಾನ, ಕ್ರಿಯಾ, ಶಕ್ತಿರೂಪಳಾದ ಮಹಾಮಾಯೆಯೇ ಉಪಾಧಿಯಾಗಿ ಉಳ್ಳವನೂ, ಆಗಿ ಉಂಟಾಗುತ್ತಾನೆ. ಬ್ರಹ್ಮವಿಷ್ಣುರುದ್ರರು ಈ ಹಿರಣ್ಯಗರ್ಭ ಮಾಯೆ ಇವರ ಸಾಕ್ಷಾದವತಾರರೂಪರು. ಇವರೆಲ್ಲರೂ ಕರ್ಮಬದ್ಧರು. ಈ ಅವತಾರಗಳ ಅವತಾರಗಳಾದ ರಾಮಕೃಷ್ಣಾದಿಗಳು ಆಗಾಗ್ಗೆ ಧರ್ಮಸಂಸ್ಥಾಪನೆಗಾಗಿ ಕಾಲಕ್ರಮದಲ್ಲಿ ಅವತರಿಸುತ್ತಿರುತ್ತಾರೆ. ಆದುದರಿಂದ ರಾಮಕೃಷ್ಣಾದ್ಯವತಾರಗಳು ಅಂಶಾಂಶಗಳು ಎಂದರೆ ಹಿರಣ್ಯಗರ್ಭಬ್ರಹ್ಮನ ಅಂಶನಾದ ವಿಷ್ಣುವಿನ ಅಂಶಗಳೆಂದು ಹೇಳಿದೆ. ಹೀಗೆ ಇವರೆಲ್ಲರೂ ಕರ್ಮಬದ್ಧರೆಂಬುದೂ ಸ್ವತಸ್ಸಿದ್ಧವಾಗುತ್ತದೆ. ಈ ಸಾಮಾನ್ಯಕಾರಣದ ಜೊತೆಗೆ ರಾಮಕೃಷ್ಣಾದ್ಯವತಾರಗಳಾಗಲು ಶಾಪಾನುಗ್ರಹಾದಿವಿಶೇಷಕಾರಣಗಳೂ ಇರುವುದುಂಟೆಂದೂ ತಿಳಿಸಿದೆ. ಈ ಎಲ್ಲ ಅಂಶವನ್ನೂ ಈ ಪದ್ಯವು ಸಂಗ್ರಹವಾಗಿ ತಿಳಿಸುತ್ತದೆ.

ಅಸ್ಮಿನ್ ಜನ್ಮನಿ ಭುಜ್ಯತೇ ಯದಿ ಸುಖಂ ದುಃಖಂ ವಿನಾಕಾರಣಂ
ತನ್ನಿರ್ವಕ್ತು ಮಿಹೇಷ್ಯತೇ ಗತಜನಿಃ ಸಾಽನಾದಿಪಾರಂಪರೀ ।
ಸೋಽಚೇದ್ದಾತುರಿಹಾಪತೇದ್ಬಹುವಿಧಂ ವೈಷಮ್ಯನೈರ್ಘೃಣ್ಯಕಂ
ತಸ್ಮಾಜ್ಜೀವ ಇಹೋಚ್ಯತೇ ಸ್ವಕೃತಿಭಿಃ ಬದ್ಧಃ ಸ್ವತಂತ್ರೋಽಪಿಚ ॥

**ತದಹಂ ಸಂಪ್ರವಕ್ಷ್ಯಾಮಿ ಕೃಷ್ಣಜನ್ಮಕಥಾಂ ಶುಭಾಂ ।**
**ಸ ಏವ ಭಗವಾನ್ವಿಷ್ಣುರವತೀರ್ಣೋ ಯದೋಃ ಕುಲೇ ॥೪೦॥**

ಆದುದರಿಂದ ನಾನು ಮಂಗಳಕರವಾದ ಕೃಷ್ಣನ ಉತ್ಪತ್ತಿಯ ಕಥೆಯನ್ನು ನಿನಗೆ ಹೇಳುತ್ತೇನೆ. ಆ ಷಡ್ಗುಣೈಶ್ವರ್ಯಸಂಪನ್ನನಾದ ಪೂಜ್ಯನಾದ ವಿಷ್ಣುವೇ ಯದುವಂಶದಲ್ಲಿ ಕೃಷ್ಣರೂಪನಾಗಿ ಅವತರಿಸಿದನು.

**ಕಶ್ಯಪಸ್ಯ ಮುನೇರಂಶೋ ವಸುದೇವಃ ಪ್ರತಾಪವಾನ್ ।**
**ಗೋವೃತ್ತಿರಭವದ್ರಾಜನ್ ಪೂರ್ವಶಾಪಾನುಭಾವತಃ ॥೪೧॥**

ಓ ಜನಮೇಜಯರಾಜನೇ, ಕಶ್ಯಪಮುನಿಯ ಅಂಶದಿಂದ ಶೂರನಾದ ವಸುದೇವನು ಹುಟ್ಟಿದನು. ಅಲ್ಲದೆ, ಆ ವಸುದೇವನು ಹಿಂದಿನ ಜನ್ಮದಲ್ಲಿ ಬಂದಿದ್ದ ಶಾಪದಿಂದ ಗೋಪಾಲಕನಾದನು. ಎಂದರೆ ಗೋವುಗಳನ್ನು ಮೇಯಿಸುವ ವೃತ್ತಿಯುಳ್ಳವನಾದನು.

**ಕಶ್ಯಪಸ್ಯ ಚ ದ್ವೇ ಪತ್ನ್ಯೌ ಶಾಪಾದತ್ರ ಮಹೀತಲೇ ।**
**ಅದಿತಿಃ ಸುರಸಾ ಚೈವಮಾಸತುಃ ಪೃಥಿವೀತಲೇ ॥೪೨॥**

ಓ ಜನಮೇಜಯರಾಜನೇ, ಕಶ್ಯಪಮುನಿಗೆ ಅದಿತಿ ಮತ್ತು ಸುರಸಾ ಎಂಬ ಇಬ್ಬರು ಹೆಂಡಂದಿರಿದ್ದರು. ಅವರು ವರುಣನ ಶಾಪದಿಂದ ಭೂಲೋಕದಲ್ಲಿ ದೇವಕೀ ಮತ್ತು ರೋಹಿಣಿಯರಾಗಿ ಹುಟ್ಟಿದರು.

**ದೇವಕೀ ರೋಹಿಣೀ ಚೋಭೇ ಭಗಿನ್ಯೌ ಭರತರ್ಷಭ ।**
**ವರುಣೇನ ಮಹಾಞ್ಛಾಪೋ ದತ್ತಃ ಕೋಪಾದಿತಿ ಶ್ರುತಂ ॥೪೩॥**

ಓ ಭರತವಂಶದ ರಾಜರಲ್ಲಿ ಶ್ರೇಷ್ಠನಾದ ಜನಮೇಜಯರಾಜನೇ, ವಸುದೇವನಿಗೆ ಆ ದೇವಕೀ ಮತ್ತು ರೋಹಿಣಿಯರು ಹೆಂಡಂದಿರಾದರು. ಇದಕ್ಕೆ ಕಾರಣವೇನೆಂದರೆ ಪೂರ್ವದಲ್ಲಿ ವರುಣನು ಕೋಪದಿಂದ ಈರೀತಿಯಲ್ಲಿ ಶಾಪವನ್ನು ಕೊಟ್ಟಿದ್ದನೆಂದು ಕೇಳಿದ್ದೇನೆ.

॥ ರಾಜೋವಾಚ ॥

**ಕಿಂ ಕೃತಂ ಕಶ್ಯಪೇನಾಽಽಗೋ ಯೇನ ಶಪ್ತೋ ಮಹಾನೃಷಿಃ ।**
**ಸಭಾರ್ಯಃ ಸ ಕಥಂ ಜಾತಸ್ತದ್ವದಸ್ವ ಮಹಾಮತೇ ॥೪೪॥**

ಜನಮೇಜಯರಾಜನು ಕೇಳಿದನು—ಓ ಅತ್ಯಂತಬುದ್ಧಿಶಾಲಿಯಾದ ವ್ಯಾಸ ಮಹರ್ಷಿಯೇ, ಮಹಾತ್ಮನಾದ ಕಶ್ಯಪಮುನಿಯು ಯಾವ ಅಪರಾಧವನ್ನು ಮಾಡಿದನು? ಮತ್ತು ಯಾವ ಅವನ ತಪ್ಪಿಗೋಸ್ಕರ ವರುಣನು ಅವನಿಗೂ, ಅವನ ಹೆಂಡಂದಿರಿಗೂ ಶಾಪವನ್ನು ಕೊಟ್ಟನು? ಎಂಬ ವಿಷಯವನ್ನು ನನಗೆ ತಿಳಿಸು.

**ಕಥಂ ಚ ಭಗವಾನ್ವಿಷ್ಣುಸ್ತತ್ರ ಜಾತೋಽಸ್ತಿ ಗೋಕುಲೇ ।**
**ವಾಸೀ ವೈಕುಂಠನಿಲಯೇ ರಮಾಪತಿರಖಂಡಿತಃ ॥೪೫॥**

ಶ್ರೇಷ್ಠವಾದ ವೈಕುಂಠಲೋಕದಲ್ಲಿ ವಾಸಮಾಡತಕ್ಕವನಾದ, ಲಕ್ಷ್ಮೀದೇವಿಯ ಪತಿಯಾದ ಮತ್ತು ಯಾರಿಂದಲೂ ಜಯಿಸಲಶಕ್ಯನಾದ ಮಹಾವಿಷ್ಣುವು ಆ ಶ್ರೇಷ್ಠವಾದ ವೈಕುಂಠವನ್ನು ಬಿಟ್ಟವನಾಗಿ ನಿಕೃಷ್ಟವಾದ ಗೋಕುಲದಲ್ಲಿ ಹೇಗೆ ಜನಿಸಿದವನಾದನು?

**ನಿದೇಶಾತ್ಕಸ್ಯ ಭಗವಾನ್ವರ್ತತೇ ಪ್ರಭುರವ್ಯಯಃ ।**
**ನಾರಾಯಣಃ ಸುರಶ್ರೇಷ್ಠೋ ಯುಗಾದಿಃ ಸರ್ವಧಾರಕಃ ॥೪೬॥**

ಮಹಾಮಹಿಮಶಾಲಿಯಾದ, ಎಲ್ಲರಿಗೂ ಒಡೆಯನಾಗಿರುವ, ನಾಶವಿಲ್ಲದ ನಿತ್ಯನಾಗಿರುವ, ಸಮಸ್ತದೇವತೆಗಳಿಗೂ ಶ್ರೇಷ್ಠನಾದ, ಪ್ರತಿಯೊಂದು ಯುಗದ ಸೃಷ್ಟಿಯಲ್ಲಿಯೂ ಆದಿಪುರುಷನಾಗಿರುವ ಮತ್ತು ಸಮಸ್ತಜಗತ್ತನ್ನು ಧರಿಸಿ ಕಾಪಾಡುವ ಶ್ರೀಮನ್ನಾರಾಯಣನು ಯಾರ ಆಜ್ಞೆಯಿಂದ ಗೋಕುಲದಲ್ಲಿ ವಾಸಮಾಡುತ್ತಿರುವನು?

**ಸ ಕಥಂ ಸದನಂ ತ್ಯಕ್ತ್ವಾ ಕರ್ಮವಾನಿವ ಮಾನುಷೇ ।**
**ಕರೋತಿ ಜನನಂ ಕಸ್ಮಾದತ್ರ ಮೇ ಸಂಶಯೋ ಮಹಾನ್ ॥೪೭॥**

ಅಂತಹ ವಿಷ್ಣುವು ತನ್ನ ವಾಸಸ್ಥಾನವಾದ ವೈಕುಂಠವನ್ನು ಬಿಟ್ಟು, ಕರ್ಮಕ್ಕೆ ಅಧೀನನಾಗಿ ಸಾಮಾನ್ಯಮನುಷ್ಯರಂತೆ ಭೂಲೋಕದಲ್ಲಿ ಏಕೆ ಅವತರಿಸುತ್ತಾನೆ? ಈ ವಿಷಯದಲ್ಲಿ ನನಗೆ ತುಂಬ ಸಂದೇಹವುಂಟಾಗಿದೆ.

**ಪ್ರಾಪ್ಯ ಮಾನುಷದೇಹಂ ತು ಕರೋತಿ ಚ ವಿಡಂಬನಂ ।**
**ಭಾವಾನ್ನಾನಾವಿಧಾಂಸ್ತತ್ರ ಮಾನುಷೇ ದುಷ್ಟಜನ್ಮನಿ ॥೪೮॥**

ಅಂತಹ ವಿಷ್ಣುವು ಮಾನುಷಶರೀರವನ್ನು ಹೊಂದಿದವನಾಗಿ ಮನುಷ್ಯರಂತೆ ಆಚರಿಸುತ್ತಾನೆ ಮತ್ತು ನೀಚವಾದ ಆ ಮನುಷ್ಯಜನ್ಮದಲ್ಲಿ ಅನೇಕವಿಧವಾದ ಶೃಂಗಾರಾದಿಭಾವಗಳನ್ನು ತೋರಿಸುತ್ತಾನೆ. ಅವುಗಳು ಯಾವುವೆಂದರೆ—

**ಕಾಮಃ ಕ್ರೋಧೋಽಮರ್ಷಶೋಕೌ ವೈರಂ ಪ್ರೀತಿಶ್ಚ ಕರ್ಹಿಚಿತ್ ।**
**ಸುಖಂ ದುಃಖಂ ಭಯಂ ನೄಣಾಂ ದೈನ್ಯಮಾರ್ಜವಮೇವ ಚ ॥೪೯॥**

**ದುಷ್ಕೃತಂ ಸುಕೃತಂ ಚೈವ ವಚನಂ ಹನನಂ ತಥಾ ।**
**ಪೋಷಣಂ ಚಲನಂ ತಾಪೋ ವಿಮರ್ಶಶ್ಚ ವಿಕತ್ಥನಂ ॥೫೦॥**

**ಲೋಭೋ ದಂಭಸ್ತಥಾ ಮೋಹಃ ಕಪಟಂ ಶೋಚನಂ ತಥಾ ।**
**ಏತೇ ಚಾನ್ಯೇ ತಥಾ ಭಾವಾ ಮಾನುಷ್ಯೇ ಸಂಭವಂತಿ ಹಿ ॥೫೧॥**

ದುರಾಶೆ, ಕೊಲ್ಲುವವರೆಗಿರುವ ಕೋಪ, ಪ್ರತೀಕಾರದವರೆಗಿರುವ ಕೋಪ, ಅಳುವುದು, ದ್ವೇಷ, ಪ್ರೇಮ, ಸುಖ, ದುಃಖ, ಹೆದರಿಕೆ, ದೀನತೆ, ಸರಳಸ್ವಭಾವ, ಕೆಟ್ಟದು, ಒಳ್ಳೆಯದು, ವಿಶ್ವಾಸದ ಮಾತು, ಹೊಗಳುವಿಕೆ, ಕೊಲ್ಲುವಿಕೆ, ಪಾಲನೆ, ಸಂಚರಿಸುವಿಕೆ, ಜ್ವಲಿಸುವಿಕೆ, ಆಸೆ, ಅಹಂಕಾರ, ಮೋಹ, ಮೋಸ, ದುಃಖಿಸುವಿಕೆ ಇವುಗಳೂ ಮತ್ತು ಇತರ ಮನೋವಿಕಾರಗಳೂ ಕೂಡ ಮನುಷ್ಯಜನ್ಮದಲ್ಲಿ ಉಂಟಾಗುತ್ತವೆ.

**ಸ ಕಥಂ ಭಗವಾನ್ವಿಷ್ಣುಸ್ತ್ಯಕ್ತ್ವಾ ಸುಖಮನಶ್ವರಂ ।**
**ಕರೋತಿ ಮಾನುಷಂ ಜನ್ಮ ಭಾವೈರೇತೈರಭಿದ್ರುತಂ ॥೫೨॥**

ಪೂಜ್ಯನಾದ ಆ ವಿಷ್ಣುಪರಮಾತ್ಮನು ನಾಶವಿಲ್ಲದ ಆ ತನ್ನ ಸುಖವನ್ನು ಬಿಟ್ಟವನಾಗಿ, ಹಿಂದೆ ಹೇಳಿದಂತಹ ದುಷ್ಟಭಾವಗಳಿಂದ ಕೂಡಿದ ಮನುಷ್ಯಜನ್ಮವನ್ನು ಏಕೆ ತಾಳುತ್ತಾನೆ?

**ಕಿಂ ಸುಖಂ ಮಾನುಷಂ ಪ್ರಾಪ್ಯ ಭುವಿ ಜನ್ಮ ಮುನೀಶ್ವರ ।**
**ಕಿಂ ನಿಮಿತ್ತಂ ಹರಿಃ ಸಾಕ್ಷಾದ್ಗರ್ಭವಾಸಂ ಕರೋತಿ ವೈ ॥೫೩॥**

ಓ ವ್ಯಾಸಮಹರ್ಷಿಯೇ, ಇಂತಹ ದುಃಖಕರವಾದ ಮತ್ತು ನೀಚವಾದ ಮಾನುಷಜನ್ಮವನ್ನು ಹೊಂದಿದುದರಿಂದ ಅವನಿಗೆ ಯಾವ ಸೌಖ್ಯವು ದೊರಕುವು

ವುದು ? ಮತ್ತು ಸರ್ವಸಮರ್ಥನಾದ ಸಾಕ್ಷಾದ್ವಿಷ್ಣುವು ಯಾವ ಫಲವಿಶೇಷಕ್ಕೋಸ್ಕರ ಗರ್ಭದಲ್ಲಿ ವಾಸಮಾಡುತ್ತಾನೆ ?

**ಗರ್ಭದುಃಖಂ ಜನ್ಮದುಃಖಂ ಬಾಲಭಾವೇ ತಥಾ ಪುನಃ ।**
**ಯೌವನೇ ಕಾಮಜಂ ದುಃಖಂ ಗಾರ್ಹಸ್ಥ್ಯೇಽತಿಮಹತ್ತರಂ ॥೩೪॥**

ಈ ಮನುಷ್ಯಜನ್ಮನಲ್ಲಾದರೋ, ಗರ್ಭವಾಸದಲ್ಲಿಯೂ ದುಃಖವು, ಜನಿಸುವಾಗಲೂ ವೇದನಾದುಃಖವೂ ಇದ್ದೇ ಇರುವುದು. ಹಾಗೆಯೇ ಬಾಲ್ಯದಲ್ಲಿಯೂ ಮಾತಾಡಲು ಸಾಧ್ಯವಿಲ್ಲದೆ ದುಃಖವನ್ನು ಅನುಭವಿಸಬೇಕಾಗುವುದು. ಮತ್ತು ಯೌವನದಲ್ಲಿ ಅನೇಕವಿಧವಾದ ಕಾಮವಿಕಾರಗಳು ಹುಟ್ಟಿ ಅವುಗಳು ನೆರವೇರದೆ ಇರುವುದರಿಂದ ಆಗುವ ದುಃಖವು, ಗೃಹಸ್ಥಾಶ್ರಮದಲ್ಲಿ ಕುಟುಂಬಭರಣವೇ ಮೊದಲಾದ ಇನ್ನೂ ಹೆಚ್ಚಿನ ದುಃಖವು, ಇವುಗಳನ್ನು ಅನುಭವಿಸಬೇಕಾಗುವುದು.

**ದುಃಖಾನ್ಯೇತಾನ್ಯವಾಪ್ನೋತಿ ಮಾನುಷೇ ದ್ವಿಜಸತ್ತಮ ।**
**ಕಥಂ ಸ ಭಗವಾನ್ವಿಷ್ಣುರವತಾರಾನ್ಪುನಃ ಪುನಃ ॥೩೫॥**

ಓ ಬ್ರಾಹ್ಮಣರಲ್ಲಿ ಶ್ರೇಷ್ಠನಾದ ವ್ಯಾಸಮುನಿಯೇ, ಈ ರೀತಿಯಾದ ಅನೇಕ ದುಃಖಗಳನ್ನು ಮನುಷ್ಯಜನ್ಮದಲ್ಲಿ ಅನುಭವಿಸಬೇಕಾಗುತ್ತದೆ. ಆದರೂ ಸಹ ಪೂಜ್ಯನಾದ ಆ ವಿಷ್ಣುವು ಭೂಲೋಕದಲ್ಲಿ ಏಕೆ ಮತ್ತೆ ಮತ್ತೆ ಅವತರಿಸುತ್ತಾನೆ ?

**ಪ್ರಾಪ್ಯ ರಾಮಾವತಾರಂ ಹಿ ಹರಿಣಾ ಬ್ರಹ್ಮಯೋನಿನಾ ।**
**ದುಃಖಂ ಮಹತ್ತರಂ ಪ್ರಾಪ್ತಂ ವನವಾಸೇಽತಿದಾರುಣೇ ॥೩೬॥**

ಪೂರ್ವದಲ್ಲಿ ಬ್ರಹ್ಮನಿಗೆ ತಂದೆಯಾದ ವಿಷ್ಣುವು ಮಾನುಷರೂಪದಿಂದ ರಾಮನಾಗಿ ಜನಿಸಿ ವನವಾಸ, ಸೀತಾಪಹರಣ ಮೊದಲಾದ ಅತ್ಯಂತ ಕಷ್ಟಗಳನ್ನು ಅನುಭವಿಸಿದನು.

**ಸೀತಾವಿರಹಜಂ ದುಃಖಂ ಸಂಗ್ರಾಮಶ್ಚ ಪುನಃ ಪುನಃ ।**
**ಕಾಂತಾತ್ಯಾಗೋಽಪ್ಯನೇನೈವಮನುಭೂತೋ ಮಹಾತ್ಮನಾ ॥೩೭॥**

ರಾಮಾವತಾರದಲ್ಲಿ ಶ್ರೀರಾಮನ ಪತ್ನಿಯಾದ ಸೀತೆಯನ್ನು ರಾವಣನು ಕದ್ದೊಯ್ದುದರಿಂದ, ಉಂಟಾದ ಸೀತಾವಿಯೋಗದುಃಖವನ್ನು ಮಹಾತ್ಮನಾದ, ರಾಮರೂಪದಿಂದ ಅವತರಿಸಿದ ವಿಷ್ಣುವು ಅನುಭವಿಸಿದನು. ಮತ್ತು ರಾವಣನೇ

ಮೊದಲಾದ ರಾಕ್ಷಸರೊಡನೆ ತಿರುಗಿ ತಿರುಗಿ ಯುದ್ಧಮಾಡಬೇಕಾಗಿ ಬಂದುದರಿಂದ ಇನ್ನೂ ಹೆಚ್ಚಿನ ದುಃಖವನ್ನು ಅನುಭವಿಸಬೇಕಾಯಿತು.

**ತಥಾ ಕೃಷ್ಣಾವತಾರೇಽಪಿ ಜನ್ಮ ರಕ್ಷಾಗೃಹೇ ಪುನಃ ।**
**ಗೋಕುಲೇ ಗಮನಂ ಚೈವ ಗವಾಂ ಚಾರಣಮಿತ್ಯುತ ॥೫೮॥**

ಹಾಗೆಯೇ, ಕೃಷ್ಣಾವತಾರದಲ್ಲಿಯೂ, ಕೃಷ್ಣನ ಜನ್ಮವು ಕಾರಾಗೃಹದಲ್ಲಿ ಆಯಿತು. ಮತ್ತು ಅಲ್ಲಿಂದ ಗೋಕುಲಕ್ಕೆ ಹೋಗಿ ವಾಸಮಾಡಬೇಕಾದುದು, ಗೋವುಗಳನ್ನು ಮೇಯಿಸಬೇಕಾದುದು ಇವೇ ಮೊದಲಾದ ಅನೇಕ ದುಃಖಗಳನ್ನು ಅನುಭವಿಸಿದನು.

**ಕಂಸಸ್ಯ ಹನನಂ ಕಷ್ಟಾದ್ದ್ವಾರಕಾಗಮನಂ ಪುನಃ ।**
**ನಾನಾಸಂಸಾರದುಃಖಾನಿ ಭುಕ್ತವಾನ್ಭಗವಾನ್ಕಥಂ ॥೫೯॥**

ಕಂಸನನ್ನು ಕೊಲ್ಲುವುದು ಸಹ ಬಹಳ ಕಷ್ಟದಿಂದ ಸಾಧ್ಯವಾಯಿತು. ಅನಂತರ ದುಷ್ಕರ ಉಪದ್ರವದಿಂದ ಅಲ್ಲಿಂದ ದ್ವಾರಕಿಗೆ ಹೋದನು. ಈ ರೀತಿಯಾಗಿ ಅನೇಕ ವಿಧವಾದ ಸಂಸಾರದುಃಖಗಳನ್ನು ಸರ್ವಸಮರ್ಥನಾದ ಮಹಾವಿಷ್ಣುವು ಹೇಗೆ ಅನುಭವಿಸಿದನು ?

**ಸ್ವೇಚ್ಛಯಾ ಕಃ ಪ್ರತೀಕ್ಷೇತ ಮುಕ್ತೋ ದುಃಖಾನಿ ಜ್ಞಾನವಾನ್ ।**
**ಸಂಶಯಂ ಛಿಂದಿ ಸರ್ವಜ್ಞ ಮಮ ಚಿತ್ತಪ್ರಶಾಂತಯೇ ॥೬೦॥**

ಈ ರೀತಿಯಾದ ಅನೇಕ ದುಃಖಗಳನ್ನು ಬುದ್ಧಿಶಾಲಿಯಾದವನು ಯಾರು ತಾನೇ ತನ್ನ ಇಚ್ಛೆಯಿಂದ ಅಪೇಕ್ಷಿಸುತ್ತಾನೆ? ಯಾರೂ ಅಪೇಕ್ಷಿಸುವುದಿಲ್ಲ. ಆದುದರಿಂದ ಸಮಸ್ತವನ್ನೂ ತಿಳಿದಿರತಕ್ಕ ಓ ವ್ಯಾಸಮಹರ್ಷಿಯೇ, ನನ್ನ ಮನಸ್ಸಿನ ಸಮಾಧಾನಕ್ಕೋಸ್ಕರ ಈ ಸಂಶಯಗಳನ್ನು ಹೋಗಲಾಡಿಸು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ದ್ವಿತೀಯೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ತೃತೀಯೋಽಧ್ಯಾಯಃ ||

### ಮೂರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಕಾರಣಾನಿ ಬಹೂನ್ಯತ್ರಾಪ್ಯವತಾರೇ ಹರೇಃ ಕಿಲ ।**
**ಸರ್ವೇಷಾಂ ಚೈವ ದೇವಾನಾಮಂಶಾವತರಣೇಷ್ವಪಿ ||೧||**

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ, ಈ ಭೂಲೋಕದಲ್ಲಿ ವಿಷ್ಣುವಿನ ಅವತಾರಗಳಾಗುವುದಕ್ಕೂ ಅನೇಕ ಕಾರಣಗಳಿರುತ್ತವೆ. ಅದರಂತೆಯೇ ಇತರ ದೇವತೆಗಳ ಅಂಶಗಳಿಂದ ಕೂಡಿದ ಅವತಾರಗಳಾಗುವುದರಲ್ಲಿಯೂ ಅನೇಕಕಾರಣಗಳು ಇರುತ್ತವೆ.

**ವಸುದೇವಾವತಾರಸ್ಯ ಕಾರಣಂ ಶೃಣು ತತ್ತ್ವತಃ ।**
**ದೇವಕ್ಯಾಶ್ಚೈವ ರೋಹಿಣ್ಯಾ ಅವತಾರಸ್ಯ ಕಾರಣಂ ||೨||**

ವಸುದೇವನ ಅವತಾರಕ್ಕೆ ನಿಜವಾದ ಕಾರಣವನ್ನು ಹೇಳುವೆನು, ಕೇಳು. ಅಲ್ಲದೆ, ದೇವಕಿಯ ಮತ್ತು ರೋಹಿಣಿಯ ಅವತಾರಗಳಿಗೂ ಕಾರಣವನ್ನು ಹೇಳುವೆನು, ಕೇಳು.

**ಏಕದಾ ಕಶ್ಯಪಃ ಶ್ರೀಮಾನ್ಯಜ್ಞಾರ್ಥಂ ಧೇನುಮಾಹರತ್ ।**
**ಯಾಚಿತೋಽಯಂ ಬಹುವಿಧಂ ನ ದದೌ ಧೇನುಮುತ್ತಮಾಂ ||೩||**

ಒಂದು ಕಾಲದಲ್ಲಿ ಕಶ್ಯಪಬ್ರಹ್ಮನು ಯಜ್ಞವನ್ನು ಮಾಡಲೋಸುಗ ವರುಣನ ಹಸುವನ್ನು ಅಪಹರಿಸಿ ತೆಗೆದುಕೊಂಡು ಬಂದನು. ಆಮೇಲೆ ವರುಣನು ತನ್ನ

ಹಸುವನ್ನು ತನಗೆ ಕೊಡಬೇಕೆಂದು ಕಶ್ಯಪನನ್ನು ಬಹುವಿಧವಾಗಿ ಪ್ರಾರ್ಥಿಸಿಕೊಂಡರೂ, ಕಶ್ಯಪನು ಆ ಶ್ರೇಷ್ಠವಾದ ಹಸುವನ್ನು ಅವನಿಗೆ ಕೊಡಲಿಲ್ಲವು.

**ವರುಣಸ್ತು ತತೋ ಗತ್ವಾ ಬ್ರಹ್ಮಾಣಂ ಜಗತಃ ಪ್ರಭುಂ ।**
**ಪ್ರಣಮ್ಯೋವಾಚ ದೀನಾತ್ಮಾ ಸ್ವದುಃಖಂ ವಿನಯಾನ್ವಿತಃ । ॥೪॥**

ಆಮೇಲೆ ವರುಣನು ಜಗತ್ತಿಗೆ ಒಡೆಯನಾದ ಬ್ರಹ್ಮನ ಸಮೀಪಕ್ಕೆ ಹೋಗಿ, ಅವನನ್ನು ನಮಸ್ಕರಿಸಿ, ವಿನಯಪೂರ್ವಕವಾಗಿ, ಬಹು ದುಃಖದಿಂದ ತನ್ನ ದುಃಸ್ಥಿತಿಯನ್ನು ಹೇಳಿಕೊಂಡನು.

**ಕಿಂ ಕರೋಮಿ ಮಹಾಭಾಗ ಮತ್ತೋಽಸೌ ನ ದದಾತಿ ಗಾಂ ।**
**ಶಾಪೋ ಮಯಾ ವಿಸೃಷ್ಟೋಽಸ್ಮೈ ಗೋಪಾಲೋ ಭವ ಮಾನುಷೇ ॥೫॥**

ಓ ಪೂಜ್ಯನಾದ ಬ್ರಹ್ಮನೇ, ಆ ಕಶ್ಯಪನು ತನ್ನ ದುರಹಂಕಾರದಿಂದ ಕೊಬ್ಬಿದವನಾಗಿ ನನ್ನ ಹಸುವನ್ನು ಕೊಡುವುದಿಲ್ಲವು. ಅದಕ್ಕಾಗಿ ಸಿಟ್ಟುಗೊಂಡು ನಾನು ಅವನಿಗೆ ಮನುಷ್ಯಲೋಕದಲ್ಲಿ ದನವನ್ನು ಕಾಯುವವನಾಗಿ ಹುಟ್ಟು ಎಂದು ಶಾಪವನ್ನು ಕೊಟ್ಟೆನು.

**ಭಾರ್ಯೇ ದ್ವೇ ಅಪಿ ತತ್ರೈವ ಭವೇತಾಂ ಚಾತಿದುಃಖಿತೇ ।**
**ಯತೋ ವತ್ಸಾ ರುದಂತ್ಯತ್ರ ಮಾತೃಹೀನಾಃ ಸುದುಃಖಿತಾಃ ॥೬॥**

ಮತ್ತು ನಿನಗೆ ಆ ಜನ್ಮದಲ್ಲಿ ಇಬ್ಬರು ಹೆಂಡರು ಇರುವರು. ಆದರೆ ಇಲ್ಲಿ, ನೀನು ಹಸುಗಳನ್ನು ತಿರುಗಿ ನನಗೆ ಕೊಡದಿರುವುದರಿಂದ ಅವುಗಳ ಕರುಗಳು ತಾಯಿಯಿಲ್ಲದೆ ತುಂಬಾ ದುಃಖಗೊಂಡು ಹೇಗೆ ಕೂಗುತ್ತಿರುತ್ತವೆಯೋ ಹಾಗೆಯೇ ಆ ಇಬ್ಬರೂ ಯಾವಾಗಲೂ ತುಂಬ ದುಃಖಿತರಾಗಿಯೇ ಇರುವರು.

**ಮೃತವತ್ಸಾಽದಿತಿಸ್ತಸ್ಮಾದ್ಭವಿಷ್ಯತಿ ಧರಾತಲೇ ।**
**ಕಾರಾಗಾರನಿವಾಸಾ ಚ ತೇನಾಪಿ ಬಹುದುಃಖಿತಾ ॥೭॥**

ಆ ಕಾರಣದಿಂದಲೇ ನಿನ್ನ ಪತ್ನಿಯಾದ ಅದಿತಿಯು ಹುಟ್ಟಿದಕೂಡಲೆ ಸಾಯುವ ಮಕ್ಕಳುಳ್ಳವಳಾಗುವಳು. ಮತ್ತು ಭೂಲೋಕದಲ್ಲಿ ಅವಳು ಸೆರೆಮನೆಯ ವಾಸದಿಂದ ತುಂಬ ದುಃಖವುಳ್ಳವಳೂ ಆಗುವಳು ಎಂದು ಆ ಕಶ್ಯಪನಿಗೆ ಶಾಪವನ್ನು ಕೊಟ್ಟನು ಎಂದು ವರುಣನು ಹೇಳಿದನು.

|| ವ್ಯಾಸ ಉವಾಚ ||

**ತಚ್ಛ್ರುತ್ವಾ ವಚನಂ ತಸ್ಯ ಯಾದೋನಾಥಸ್ಯ ಪದ್ಮಭೂಃ ।**
**ಸಮಾಹೂಯ ಮುನಿಂ ತತ್ರ ತಮುವಾಚ ಪ್ರಜಾಪತಿಃ ॥೮॥**

ವ್ಯಾಸಮುನಿಯು ಮುಂದುವರೆದು ಹೇಳಿದನು—ಜಲಜಂತುಗಳಿಗೆಲ್ಲ ಒಡೆಯನಾದ ವರುಣನ ಆ ಮಾತುಗಳನ್ನು ಕೇಳಿ, ವಿಷ್ಣುವಿನ ನಾಭಿಕಮಲದಿಂದ ಹುಟ್ಟಿದ ಮತ್ತು ಎಲ್ಲ ಪ್ರಾಣಿಗಳಿಗೂ ಒಡೆಯನಾದ ಬ್ರಹ್ಮನು ಆ ಕಶ್ಯಪಮುನಿಯನ್ನು ಕರೆಸಿ ಹೀಗೆ ಹೇಳಿದನು.

**ಕಸ್ಮಾತ್ತ್ವಯಾ ಮಹಾಭಾಗ ಲೋಕಪಾಲಸ್ಯ ಧೇನವಃ ।**
**ಹೃತಾಃ ಪುನರ್ನ ದತ್ತಾಶ್ಚ ಕಿಮನ್ಯಾಯ್ಯಂ ಕರೋಷಿ ವೈ ॥೯॥**

ಎಲೈ ಭಾಗ್ಯಶಾಲಿಯಾದ ಕಶ್ಯಪನೇ, ಲೋಕಪಾಲಕರಲ್ಲಿ ಒಬ್ಬನಾದ ವರುಣನ ಹಸುಗಳನ್ನು ಅಪಹರಿಸಿ ಅವುಗಳನ್ನು ತಿರುಗಿ ಏಕೆ ಕೊಡದೆ ಇರುತ್ತೀಯೆ? ಇದೇನು ಅನ್ಯಾಯವನ್ನು ಮಾಡುತ್ತಲಿರುವೆ.

**ಜಾನನ್ನ್ಯಾಯಂ ಮಹಾಭಾಗ ಪರವಿತ್ತಾಪಹಾರಣಂ ।**
**ಕೃತವಾನ್ಕಥಮನ್ಯಾಯ್ಯಂ ಸರ್ವಜ್ಞೋಽಸಿ ಮಹಾಮತೇ ॥೧೦॥**

ಎಲೈ ಮಹಾಭಾಗನೇ, ನೀನು ನೀತಿಯನ್ನು ಬಲ್ಲವನಾದರೂ ಮತ್ತೊಬ್ಬರ ದ್ರವ್ಯವನ್ನು ಅಪಹರಿಸುವಂತಹ ಅನ್ಯಾಯವನ್ನು ಹೇಗೆ ಮಾಡಿರುತ್ತೀಯೆ? ನೀನು ಮಹಾಬುದ್ಧಿಶಾಲಿಯೂ, ಎಲ್ಲವನ್ನು ತಿಳಿದವನೂ ಆಗಿರುವೆ. ಹೀಗಿದ್ದರೂ ಈ ಅನ್ಯಾಯವನ್ನು ಮಾಡಬಹುದೇ?

**ಅಹೋ ಲೋಭಸ್ಯ ಮಹಿಮಾ ಮಹತೋಽಪಿ ನ ಮುಂಚತಿ ।**
**ಲೋಭಂ ನರಕದಂ ನೂನಂ ಪಾಪಾಕರಮಸಂಮತಂ ॥೧೧॥**

ದುರಾಶೆಯ ಮಹಿಮೆಯು ತುಂಬ ಆಶ್ಚರ್ಯಕರವಾದುದು. ಅದು ತಿಳಿವಳಿಕೆಯುಳ್ಳ ದೊಡ್ಡವರನ್ನೂ ಬಿಡುವುದಿಲ್ಲವು. ಆ ದುರಾಶೆಯು ಪಾಪಗಳಿಗೆಲ್ಲಾ ನಿಧಿಯು, ಮತ್ತು ನರಕವನ್ನು ಕೊಡುವಂತಹುದು. ಆದುದರಿಂದಲೇ ಅದು ಸತ್ಪುರುಷರಿಗೆ ಸಮ್ಮತವಾಗಿರದೆ ನಿಂದ್ಯವಾದುದು.

**ಕಶ್ಯಪೋಽಪಿ ನ ತಂ ತ್ಯಕ್ತುಂ ಸಮರ್ಥಃ ಕಿಂ ಕರೋಮ್ಯಹಂ ।**
**ಸರ್ವದೈವಾಧಿಕಸ್ತಸ್ಮಾಲ್ಲೋಭೋ ವೈ ಕಲಿತೋ ಮಯಾ ॥೧೨॥**

ಎಲ್ಲವನ್ನೂ ತಿಳಿದ ಈ ಕಶ್ಯಪನೂ ಸಹ ಆ ಲೋಭವನ್ನು ಬಿಡಲು ಸಮರ್ಥನಾಗಿರುವುದಿಲ್ಲವು. ಇನ್ನು ನಾನು ಏನನ್ನು ಮಾಡಲಿ? ಆದುದರಿಂದ ಈ ಲೋಭವು ಯಾವಾಗಲೂ ತುಂಬ ಪ್ರಬಲವಾದುದೆಂದು ನಾನು ತಿಳಿಯುತ್ತೇನೆ.

**ಧನ್ಯಾಸ್ತೇ ಮುನಯಃ ಶಾಂತಾ ಜಿತೋ ಯೈರ್ಲೋಭ ಏವ ಚ ।**
**ವೈಖಾನಸೈಃ ಶಮಪರೈಃ ಪ್ರತಿಗ್ರಹಪರಾಙ್ಮುಖೈಃ ॥೧೩॥**

ಯಾರು ಅಂತರಿಂದ್ರಿಯ ಮತ್ತು ಬಹಿರಿಂದ್ರಿಯಗಳನ್ನು ನಿಗ್ರಹಿಸಿ ದಾನವನ್ನು ಸ್ವೀಕರಿಸದೆ ಇರುವವರಾಗಿ, ವಿಖನಸಮುನಿಗಳು ಹೇಳಿದಂತೆ ಅನುಷ್ಠಾನಪರರಾಗಿದ್ದು ಈ ಲೋಭವನ್ನು ಜಯಿಸಿ ಶಾಂತರಾಗಿರುವರೋ ಆ ಮುನಿಗಳೇ ಧನ್ಯರು.

**ಸಂಸಾರೇ ಬಲವಾಞ್ಛತ್ರುರ್ಲೋಭೋಽಮೇಧ್ಯವರಃ ಸದಾ ।**
**ಕಶ್ಯಪೋಽಪಿ ದುರಾಚಾರಃ ಕೃತಸ್ನೇಹೋ ದುರಾತ್ಮನಾ ॥೧೪॥**

ಜನ್ಮಮರಣರೂಪವಾದ ಈ ಸಂಸಾರದಲ್ಲಿ ಲೋಭವೆಂಬುದು ತುಂಬ ಬಲಿಷ್ಠವಾದ ಶತ್ರುವು. ಮತ್ತು ಇದು ತುಂಬ ಅಪವಿತ್ರವಾದದು. ಇಂತಹ ಲೋಭದೊಡನೆ ಸಂಬಂಧವನ್ನು ಪಡೆದುದರಿಂದ ಈ ಕಶ್ಯಪನೂ ಸಹ ಕೆಟ್ಟ ನಡತೆಯುಳ್ಳವನಾಗಿರುವನು.

**ಬ್ರಹ್ಮಾಪಿ ತಂ ಶಶಾಪಾಥ ಕಶ್ಯಪಂ ಮುನಿಸತ್ತಮಂ ।**
**ಮರ್ಯಾದಾರಕ್ಷಣಾರ್ಥಂ ಹಿ ಪೌತ್ರಂ ಪರಮವಲ್ಲಭಂ ॥೧೫॥**

ಬ್ರಹ್ಮನೂ ಸಹ ತನಗೆ ಮೊಮ್ಮಗನಾದ, ತುಂಬ ಪ್ರೀತಿಪಾತ್ರನೂ ಮತ್ತು ಮುನಿಶ್ರೇಷ್ಠನೂ ಆದ ಆ ಕಶ್ಯಪನನ್ನು, ತಾನು ಮಾಡಿದ ದುಷ್ಟಶಿಕ್ಷಣ ಶಿಷ್ಟರಕ್ಷಣವೆಂಬ ಧರ್ಮಪಾಲನೆಯ ಮರ್ಯಾದೆಯನ್ನು ರಕ್ಷಿಸುವ ಸಲುವಾಗಿ ಹೀಗೆ ಶಪಿಸಿದನು.

**ಅಂಶೇನ ತ್ವಂ ಪೃಥಿವ್ಯಾಂ ವೈ ಪ್ರಾಪ್ಯ ಜನ್ಮ ಯದೋಃ ಕುಲೇ ।**
**ಭಾರ್ಯಾಭ್ಯಾಂ ಸಂಯುತಸ್ತತ್ರ ಗೋಪಾಲತ್ವಂ ಕರಿಷ್ಯಸಿ ॥೧೬॥**

ಎಲೈ ಕಶ್ಯಪನೇ, ನೀನು ಅಂಶದಿಂದ ಭೂಲೋಕದಲ್ಲಿ ಯದುರಾಜನ ವಂಶದಲ್ಲಿ ಜನ್ಮವೆತ್ತಿ ಅಲ್ಲಿ ಇಬ್ಬರು ಪತ್ನಿಯರೊಂದಿಗೆ ಕೂಡಿದವನಾಗಿ ಗೊಲ್ಲತನವನ್ನು ಮಾಡುತ್ತಿರುವವನಾಗುವೆ.

॥ ವ್ಯಾಸ ಉವಾಚ ॥

**ಏವಂ ಶಪ್ತಃ ಕಶ್ಯಪೋಽಸೌ ವರುಣೇನ ಚ ಬ್ರಹ್ಮಣಾ ।**
**ಅಂಶಾವತರಣಾರ್ಥಾಯ ಭೂಭಾರಹರಣಾಯ ಚ ॥೧೭॥**

ವ್ಯಾಸಮುನಿಯು ಹೇಳಿದನು—ಈ ರೀತಿಯಾಗಿ ವರುಣನಿಂದಲೂ, ಬ್ರಹ್ಮನಿಂದಲೂ, ಆ ಕಶ್ಯಪಮುನಿಯು ಭೂಲೋಕದಲ್ಲಿ, ತನ್ನಲ್ಲಿ ಅವತರಿಸುವ ಕೃಷ್ಣನ ಮೂಲಕ ಭೂಮಿಯ ಭಾರವನ್ನು ಇಳಿಸುವುದಕ್ಕಾಗಿ ತನ್ನ ಅಂಶದಿಂದ ಅವತಾರ ಮಾಡಬೇಕೆಂದು ಶಪಿಸಲ್ಪಟ್ಟನು.

**ತಥಾ ದಿತ್ಯಾಽದಿತಿಃ ಶಪ್ತಾ ಶೋಕಸಂತಪ್ತಯಾ ಭೃಶಂ ।**
**ಜಾತಾ ಜಾತಾ ವಿನಶ್ಯೇರಂಸ್ತವ ಪುತ್ರಾಸ್ತು ಸಪ್ತ ವೈ ॥೧೮॥**

ಮತ್ತು ಆ ಕಶ್ಯಪನ ಪತ್ನಿಯಾದ ಅದಿತಿಯು ತುಂಬ ಶೋಕದಿಂದ ಸಂಕಟಪಟ್ಟ ತನ್ನ ಸವತಿಯಾದ ದಿತಿಯಿಂದ–ನಿನಗೆ ಏಳು ಜನ ಮಕ್ಕಳು ಹುಟ್ಟಿ ಹುಟ್ಟಿ ಹಾಗೆಯೇ ಸಾಯಲಿ ಎಂದು ಶಪಿಸಲ್ಪಟ್ಟಳು.

॥ ಜನಮೇಜಯ ಉವಾಚ ॥

**ಕಸ್ಮಾದ್ದಿತ್ಯಾ ಚ ಭಗಿನೀ ಶಪ್ತೇಂದ್ರಜನನೀ ಮುನೇ ।**
**ಕಾರಣಂ ವದ ಶಾಪೇ ಚ ಶೋಕಸ್ತು ಮುನಿಸತ್ತಮ ॥೧೯॥**

ಓ ಮುನಿಶ್ರೇಷ್ಠನಾದ ವ್ಯಾಸಮಹರ್ಷಿಯೇ, ದಿತಿಯು ಯಾವ ಕಾರಣದಿಂದ ತನ್ನ ತಂಗಿಯಾದ ಮತ್ತು ಇಂದ್ರನ ತಾಯಿಯಾದ ಅದಿತಿಯನ್ನು ಶಪಿಸಿದಳು? ಇದನ್ನು ಕೇಳಿ ನನಗೂ ದುಃಖವಾಗುತ್ತಿದೆ. ಆದುದರಿಂದ ಅದನ್ನು ತಿಳಿಯಹೇಳು

॥ ಸೂತ ಉವಾಚ ॥

**ಪಾರಿಕ್ಷಿತೇನ ಪೃಷ್ಟಸ್ತು ವ್ಯಾಸಃ ಸತ್ಯವತೀಸುತಃ ।**
**ರಾಜಾನಂ ಪ್ರತ್ಯುವಾಚೇದಂ ಕಾರಣಂ ಸುಸಮಾಹಿತಃ ॥೨೦**

ಸೂತಮುನಿಯು ಹೇಳಿದನು—ಹೀಗೆ ಆ ಪರೀಕ್ಷಿತರಾಜನ ಮಗನಾದ ಜನಮೇಜಯರಾಜನಿಂದ ಪ್ರಶ್ನಿಸಲ್ಪಟ್ಟವನಾಗಿ ಸತ್ಯವತಿಯ ಮಗನಾದ ಆ ವ್ಯಾಸ ಮುನಿಯು ತುಂಬ ಸಮಾಧಾನದಿಂದ ಕೂಡಿದ ಮನಸ್ಸುಳ್ಳವನಾಗಿ ಆ ರಾಜನನ್ನು ಕುರಿತು, ದಿತಿಯ ಶಾಪದ ಕಾರಣವನ್ನು ಹೀಗೆ ವಿವರಿಸಿ ಹೇಳಿದನು.

|| ವ್ಯಾಸ ಉವಾಚ ||

**ರಾಜನ್ ದಕ್ಷಸುತೇ ದ್ವೇ ತು ದಿತಿಶ್ಚಾದಿತಿರುತ್ತಮೇ ।**
**ಕಶ್ಯಪಸ್ಯ ಪ್ರಿಯೇ ಭಾರ್ಯೇ ಬಭೂವತುರುರುಕ್ರಮೇ ॥೨೦॥**

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ, ದಕ್ಷಬ್ರಹ್ಮನಿಗೆ ದಿತಿ ಮತ್ತು ಅದಿತಿ ಎಂಬ ಇಬ್ಬರು ಶ್ರೇಷ್ಠರಾದ ಪುತ್ರಿಯರಿದ್ದರು. ದೊಡ್ಡ ನಡವಳಿಕೆಯುಳ್ಳ ಆ ದಿತಿಅದಿತಿಯರಿಬ್ಬರೂ ಕಶ್ಯಪಬ್ರಹ್ಮನ ಪ್ರೀತಿಪಾತ್ರರಾದ ಹೆಂಡಿತಿಯರಾಗಿದ್ದರು.

**ಅದಿತ್ಯಾ ಮಘವಾ ಪುತ್ರೋ ಯಥಾಽಭೂದತಿವೀರ್ಯವಾನ್ ।**
**ತಥಾ ತು ತಾದೃಶಂ ಪುತ್ರಂ ಚಕಮೇ ದಿತಿರೋಜಸಾ ॥೨೧॥**

ಆ ಅದಿತಿಯ ಪುತ್ರನೇ ಇಂದ್ರನು. ಅವನು ತುಂಬ ಪರಾಕ್ರಮಶಾಲಿಯಾಗಿದ್ದನು. ಆಗ ದಿತಿಯೂ ಆ ಇಂದ್ರನಂತಹ ಪರಾಕ್ರಮಶಾಲಿಯಾದ ಪುತ್ರನು ತನಗೂ ಉಂಟಾಗಬೇಕೆಂದು ಅಪೇಕ್ಷೆಪಟ್ಟಳು.

**ಪತಿಮಾಹಾಽಸಿತಾಪಾಂಗೀ ಪುತ್ರಂ ಮೇ ದೇಹಿ ಮಾನದ ।**
**ಇಂದ್ರತುಲ್ಯಬಲಂ ವೀರಂ ಧರ್ಮಿಷ್ಠಂ ವೀರ್ಯವತ್ತಮಂ ॥೨೩॥**

ಆಗ ಕಪ್ಪಾದ ಕಡೆಗಣ್ಣುಳ್ಳ ಆ ದಿತಿಯು ತನ್ನ ಪತಿಯಾದ ಕಶ್ಯಪನನ್ನು ಕುರಿತು—ಮರ್ಯಾದೆಯನ್ನು ಕೊಡುವ (ಇಲ್ಲಿ ಅದಿತಿಗೆ ಬಲಿಷ್ಠನಾದ ಪುತ್ರನು ಇರುವುದರಿಂದ ತುಂಬ ಮರ್ಯಾದೆಯುಂಟಾಗಿರುತ್ತದೆ. ನನಗೆ ಅದಿಲ್ಲವು. ಆದುದರಿಂದ ಅಂತಹ ಪುತ್ರನನ್ನು ಕೊಟ್ಟು ನನ್ನ ಮರ್ಯಾದೆಯನ್ನು ಕಾಪಾಡು ಎಂದು ದಿತಿಯ ಅಭಿಪ್ರಾಯವು.) ಪತಿಯೇ, ಇಂದ್ರನಿಗೆ ಸದೃಶವಾದ ಬಲವುಳ್ಳ ಮತ್ತು ವೀರನಾದ ಧರ್ಮಪರನಾದ ತುಂಬ ಪರಾಕ್ರಮಶಾಲಿಯಾದ ಮಗನನ್ನು ನನಗೂ ಉಂಟಾಗುವಂತೆ ಮಾಡು—ಎಂದು ಹೇಳಿದಳು.

**ತಾಮುವಾಚ ಮುನಿಃ ಕಾಂತೇ ಸ್ವಸ್ಥಾ ಭವ ಮಯೋದಿತೇ ।**
**ವ್ರತಾಂತೇ ಭವಿತಾ ತುಭ್ಯಂ ಶತಕ್ರತುಸಮಃ ಸುತಃ ॥೨೪॥**

ಆ ದಿತಿಯನ್ನು ಕುರಿತು ಕಶ್ಯಪಮುನಿಯು—ಓ ಕಾಂತೆಯೇ, ಸಮಾಧಾನ ವುಳ್ಳವಳಾಗಿರು. ನಾನು ಹೇಳಿದ ವ್ರತವು ಮುಗಿಯುತ್ತಲೇ ನಿನಗೆ ಇಂದ್ರನಿಗೆ ಸದೃಶನಾದ ಮಗನಾಗುವನು ಎಂದು ಹೇಳಿದನು.

**ಸಾ ತಥೇತಿ ಪ್ರತಿಶ್ರುತ್ಯ ಚಕಾರ ವ್ರತಮುತ್ತಮಂ ।**
**ನಿಷಿಕ್ತಂ ಮುನಿನಾ ಗರ್ಭಂ ಬಿಭ್ರಾಣಾ ಸುಮನೋಹರಂ ॥೨೫॥**

ಆ ದಿತಿಯು ಹಾಗಾಲೆಂದು ಒಪ್ಪಿಕೊಂಡು, ಕಶ್ಯಪಮುನಿಯಿಂದ ನಿಷಿಕ್ತ ವಾದ ಮತ್ತು ಮನೋಹರವಾದ ಗರ್ಭವನ್ನು ಧರಿಸಿದವಳಾಗಿ ಮೇಲೆ ಹೇಳಿದ ಶ್ರೇಷ್ಠವಾದ ವ್ರತವನ್ನು ಮಾಡಿದಳು.

**ಭೂಮೌ ಚಕಾರ ಶಯನಂ ಪಯೋವ್ರತಪರಾಯಣಾ ।**
**ಪವಿತ್ರಾಧಾರಣಾಯುಕ್ತಾ ಬಭೂವ ವರವರ್ಣಿನೀ ॥೨೬॥**

ಮತ್ತು ಉತ್ತಮ ಸ್ತ್ರೀಯಾದ ಆ ದಿತಿಯು ವ್ರತಾಚರಣೆಯ ಅಂಗವಾಗಿ, ಬರಿಯ ನೆಲದ ಮೇಲೆಯೇ ಮಲಗುತ್ತಿದ್ದಳು. ಆಹಾರಕ್ಕಾಗಿ ಬರಿಯ ಹಾಲ ನ್ನಾಗಲೀ, ನೀರನ್ನಾಗಲೀ ಸೇವಿಸುತ್ತಾ, ತುಂಬ ಶುದ್ಧಳಾಗಿ ಮತ್ತು ಇಂದ್ರಿಯ ನಿಗ್ರಹ ವುಳ್ಳವಳಾಗಿ ವ್ರತನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದಳು.

**ಏವಂ ಜಾತಃ ಸುಸಂಪೂರ್ಣೋ ಯದಾ ಗರ್ಭೋಽತಿವೀರ್ಯವಾನ್ ।**
**ಶುಭ್ರಾಂಶುಮತಿದೀಪ್ತಾಂಗೀಂ ದಿತಿಂ ದೃಷ್ಟ್ವಾ ತು ದುಃಖಿತಾ ॥೨೭॥**

ಹೀಗೆ, ಯಾವಾಗ ಆ ದಿತಿಯ ಗರ್ಭವು ಸಂಪೂರ್ಣವಾಗಿಯೂ ತೇಜಸ್ವಿ ಯಾಗಿಯೂ ಬೆಳೆಯಿತೋ, ಆಗ ಗರ್ಭಿಣಿಯರಿಗೆ ಸ್ವಾಭಾವಿಕವಾದ ಬಿಳಿಯ ಕಾಂತಿಯುಳ್ಳ ಮತ್ತು ತುಂಬ ಪ್ರಕಾಶಮಾನವಾದ ಶರೀರವುಳ್ಳ ಆ ದಿತಿಯನ್ನು ನೋಡಿ, ಅದಿತಿಯು ಅಸೂಯೆಯಿಂದ ತುಂಬ ದುಃಖಪಟ್ಟಳು.

**ಮಘವತ್ಸದೃಶಃ ಪುತ್ರೋ ಭವಿಷ್ಯತಿ ಮಹಾಬಲಃ ।**
**ದಿತ್ಯಾಸ್ತದಾ ಮಮ ಸುತಸ್ತೇಜೋಹೀನೋ ಭವೇತ್ಕಿಲ ॥೨೮॥**

ಏಕೆಂದರೆ, ಈ ದಿತಿಗೂ ತುಂಬ ಪರಾಕ್ರಮಶಾಲಿಯಾದ ಮತ್ತು ನನ್ನ ಮಗ ಇಂದ್ರನಿಗೆ ಸಮಾನನಾದ ಮಗನು ಹುಟ್ಟುವನು. ಆಗ ನನ್ನ ಮಗನಾದ ಇಂದ್ರನು ಸಾಮರ್ಥ್ಯದಲ್ಲಿ ಕಡಮೆಯಾದವನು ಆಗಬಹುದಲ್ಲವೇ? ಎಂದು ಯೋಚಿಸಿದಳು.

**ಇತಿ ಚಿಂತಾಪರಾ ಪುತ್ರಮಿಂದ್ರಂ ಚೋವಾಚ ಮಾನಿನೀ ।**
**ಶತ್ರುಸ್ತೇಽದ್ಯ ಸಮುತ್ಪನ್ನೋ ದಿತಿಗರ್ಭೇಽತಿವೀರ್ಯವಾನ್ ॥೨೯॥**

ಹೀಗೆ ಚಿಂತೆಯಿಂದ ಕಂಗೆಟ್ಟು, ತನ್ನ ಪುತ್ರನಾದ ಇಂದ್ರನನ್ನು ಕುರಿತು ತುಂಬ ಮಾನಿಷ್ಠಳಾದ ಅದಿತಿಯು ಹೀಗೆ ಹೇಳಿದಳು— ಎಲೈ ಪುತ್ರನೇ, ಈಗ ದಿತಿಯ ಗರ್ಭದಲ್ಲಿ ನಿನಗೆ ತುಂಬ ಬಲಶಾಲಿಯಾದ ಶತ್ರುವು ಬೆಳೆಯುತ್ತಲಿರುವನು.

**ಉಪಾಯಂ ಕುರು ನಾಶಾಯ ಶತ್ರೋರದ್ಯ ವಿಚಿಂತಯ ।**
**ಉತ್ಪತ್ತಿರೇವ ಹಂತವ್ಯಾ ದಿತ್ಯಾ ಗರ್ಭಸ್ಯ ಶೋಭನ ॥೩೦॥**

ಆ ಕಾರಣದಿಂದ ಈಗಲೇ ಆ ಶತ್ರುವಿನ ನಾಶಕ್ಕಾಗಿ ತಕ್ಕ ಉಪಾಯವನ್ನು ಆಲೋಚಿಸಿ ಪ್ರಯತ್ನಮಾಡು. ಎಲೈ ಮಂಗಳಕರನೇ, ದಿತಿಯ ಗರ್ಭದಿಂದ ಮಗುವು ಹುಟ್ಟದಂತೆಯೇ ನಾಶಮಾಡಬೇಕು.

**ವೀಕ್ಷ್ಯ ತಾಮುಸಿತಾಪಾಂಗೀಂ ಸಪತ್ನೀಭಾವಮಾಸ್ಥಿತಾಂ ।**
**ದುನೋತಿ ಹೃದಯೇ ಚಿಂತಾ ಸುಖಮರ್ಮವಿನಾಶಿನೀ ॥೩೧॥**

ಕಪ್ಪಾದ ಕಡೆಗಣ್ಣುಳ್ಳ ಆ ದಿತಿಯು ಸವತಿಯ ಸ್ವಭಾವಗಳಿಂದ ಕೂಡಿರುವುದನ್ನು ನೋಡಿ ನನ್ನ ಮನಸ್ಸಿನಲ್ಲಿ ಚಿಂತೆಯು ಸುಖದ ಮರ್ಮವನ್ನೇ ಎಂದರೆ ಮುಖ್ಯಭಾಗವನ್ನೇ ನಾಶಮಾಡುತ್ತಾ ನನ್ನ ಹೃದಯದಲ್ಲಿ ಸಂತಾಪವನ್ನುಂಟುಮಾಡುತ್ತಲಿದೆ.

**ರಾಜಯಕ್ಷ್ಮೇವ ಸಂವೃದ್ಧೋ ನಷ್ಟೋ ನೈವ ಭವೇದ್ರಿಪುಃ ।**
**ತಸ್ಮಾದಂಕುರಿತಂ ಹನ್ಯಾದ್ಬುದ್ಧಿಮಾನಹಿತಂ ಕಿಲ ॥೩೨॥**

ಶತ್ರುವು ಬೆಳೆದ ಮೇಲೆ ಕ್ಷಯರೋಗದಂತೆ ಎಂದಿಗೂ ನಷ್ಟವಾಗಲಾರನು. ಆದುದರಿಂದ ಬುದ್ಧಿವಂತನಾದವನು, ಅದು ಮೊಳಕೆಯಾಗುತ್ತಿರುವಾಗಲೇ ಅದನ್ನು ನಿರ್ಮೂಲವಾಗಿ ನಾಶಪಡಿಸಬೇಕು. ಎಂದರೆ, ಶತ್ರುವು ಬೆಳೆಯುವುದರೊಳಗೆ ಅವನನ್ನು ನಾಶಗೊಳಿಸಬೇಕು.

**ಲೋಹಶಂಕುರಿವ ಕ್ಷಿಪ್ತೋ ಗರ್ಭೋ ವೈ ಹೃದಯೇ ಮಮ ।**
**ಯೇನ ಕೇನಾಪ್ಯುಪಾಯೇನ ಪಾತಯಾದ್ಯ ಶತಕ್ರತೋ ॥೩೩॥**

ಆ ದಿತಿಯ ಗರ್ಭವು, ನನ್ನ ಹೃದಯದಲ್ಲಿ ಹೊಡೆಯಲ್ಪಟ್ಟ ಕಬ್ಬಿಣದ ಮೊಳೆಯಂತೆ ತೊಂದರೆಯನ್ನುಂಟುಮಾಡುತ್ತಲಿದೆ. ಆದುದರಿಂದ ನೂರು ಯಾಗಗಳನ್ನು ಮಾಡಿದ ಎಲೈ ಇಂದ್ರನೇ, ಈಗ ಯಾವುದಾದರೂ ಉಪಾಯದಿಂದ ಆ ದಿತಿಯ ಗರ್ಭವನ್ನು ನಾಶಗೊಳಿಸು.

**ಸಾಮದಾನಬಲೇನಾಪಿ ಹಿಂಸನೀಯಸ್ತ್ವಯಾ ಸುತಃ ।**
**ದಿತ್ಯಾ ಗರ್ಭೋ ಮಹಾಭಾಗ ಮಮ ಚೇದಿಚ್ಛಸಿ ಪ್ರಿಯಂ ॥೩೪॥**

ಒಳ್ಳೆಯ ಮಾತಿನಿಂದಲಾಗಲಿ, ದ್ರವ್ಯಮುಂತಾದುವನ್ನು ಕೊಡುವುದರಿಂದಾಗಲಿ, ಬಲವನ್ನು ಪ್ರಯೋಗಿಸಿಯಾಗಲಿ, ದಿತಿಯ ಮಗನನ್ನು ಗರ್ಭಗತನಾಗಿರುವಾಗಲೇ ಕೊಲ್ಲಬೇಕು. ತುಂಬ ಭಾಗ್ಯಶಾಲಿಯಾದ ಇಂದ್ರನೇ ನನಗೆ ಒಳ್ಳೆಯದನ್ನು ಮಾಡಬೇಕೆಂದು ನಿನ್ನ ಮನಸ್ಸಿನಲ್ಲಿದ್ದರೆ, ಈ ಕೆಲಸವನ್ನು ಮಾಡು.

॥ ವ್ಯಾಸ ಉವಾಚ ॥

**ಶ್ರುತ್ವಾ ಮಾತೃವಚಃ ಶಕ್ರೋ ವಿಚಿಂತ್ಯ ಮನಸಾ ತತಃ ।**
**ಜಗಾಮಾಪರಮಾತುಃ ಸ ಸಮೀಪಮಮರಾಧಿಪಃ ॥೩೫॥**

ವ್ಯಾಸಮುನಿಯು ಹೇಳಿದನು ತನ್ನ ತಾಯಿಯು ಹೇಳಿದ ಮಾತುಗಳನ್ನು ಕೇಳಿ, ದೇವತೆಗಳಿಗೆ ಒಡೆಯನಾದ ಇಂದ್ರನು, ಮನಸ್ಸಿನಲ್ಲಿ ಉಪಾಯವನ್ನು ಆಲೋಚಿಸಿಕೊಂಡು, ತನ್ನ ಬಲತಾಯಿಯಾದ ದಿತಿಯ ಸಮೀಪಕ್ಕೆ ಹೋದನು.

**ವವಂದೇ ವಿನಯಾತ್ಪಾದೌ ದಿತ್ಯಾಃ ಪಾಪಮತಿರ್ನೃಪ ।**
**ಪ್ರೋವಾಚ ವಿನಯೇನಾಸೌ ಮಧುರಂ ವಿಷಗರ್ಭಿತಂ ॥೩೬॥**

ಎಲೈ ಜನಮೇಜಯರಾಜನೇ, ಆ ಬಳಿಕ ಇಂದ್ರನು ತನ್ನ ಮನಸ್ಸಿನಲ್ಲಿ ಅವಳ ಗರ್ಭವನ್ನು ನಾಶಮಾಡಬೇಕೆಂಬ ಕೆಟ್ಟಬುದ್ಧಿಯುಳ್ಳವನಾಗಿ, ದಿತಿಯ ಪಾದಗಳಿಗೆ ನಮಸ್ಕರಿಸಿ, ಒಳಗೆ ವಿಷದಿಂದ ಕೂಡಿದ್ದರೂ ಮೇಲೆ ಮಾತ್ರ ಮಧುರವಾಗಿ ತೋರುತ್ತಿರುವ ಮಾತುಗಳನ್ನು ಅತಿನಮ್ರತೆಯಿಂದ ಹೀಗೆ ನುಡಿದನು.

|| ಇಂದ್ರ ಉವಾಚ ||

**ಮಾತಸ್ತ್ವಂ ವ್ರತಯುಕ್ತಾಸಿ ಕ್ಷೀಣದೇಹಾಽತಿದುರ್ಬಲಾ ।**
**ಸೇವಾರ್ಥಮಿಹ ಸಂಪ್ರಾಪ್ತಃ ಕಿಂ ಕರ್ತವ್ಯಂ ವದಸ್ವ ಮೇ ॥೩೭॥**

ಇಂದ್ರನು ಹೇಳಿದನು—ಓ ತಾಯಿಯೇ, ವೀರ್ಯವಂತನಾದ ಪುತ್ರನು ಹುಟ್ಟಲೆಂದು ನೀನು ವ್ರತವನ್ನು ಆಚರಿಸುತ್ತಲಿದ್ದೀಯೆ. ಆ ವ್ರತದ ಆಚರಣೆಯಿಂದ ನಿನ್ನ ಶರೀರವು ಕೃಶವಾಗಿ ಶಕ್ತಿಯಿಲ್ಲದ್ದಾಗಿದೆ. ಅದಕ್ಕೋಸ್ಕರ ನಿನ್ನ ಸೇವೆಗಾಗಿ ನಾನು ಬಂದಿರುತ್ತೇನೆ. ನಾನು ಏನನ್ನು ಮಾಡಬೇಕು ಎಂಬುದನ್ನು ಹೇಳು.

**ಪಾದಸಂವಾಹನಂ ತೇಽಹಂ ಕರಿಷ್ಯಾಮಿ ಪತಿವ್ರತೇ ।**
**ಗುರುಶುಶ್ರೂಷಣಾತ್ಪುಣ್ಯಂ ಲಭತೇ ಗತಿಮಕ್ಷಯಾಂ ॥೩೮॥**

ಪತಿಯೇ ಪರದೈವವೆಂದು ತಿಳಿದಿರುವ ಓ ಮಾತೆಯೇ, ನಾನು ನಿನ್ನ ಕಾಲುಗಳನ್ನು ಒತ್ತುತ್ತೇನೆ. ಹಿರಿಯರನ್ನು ಸೇವಿಸುವವನಿಗೆ ಆ ಸೇವೆಯಿಂದ ಪುಣ್ಯವೂ, ಅದರಿಂದ ನಾಶವಿಲ್ಲದ ಉತ್ತಮಲೋಕವೂ ದೊರೆಯುತ್ತದೆ.

**ನ ಮೇ ಕಿಮಪಿ ಭೇದೋಽಸ್ತಿ ತಥಾಽದಿತ್ಯಾ ಶಪೇ ಕಿಲ ।**
**ಇತ್ಯುಕ್ತ್ವಾ ಚರಣೌ ಸ್ಪೃಷ್ಟ್ವಾ ಸಂವಾಹನಪರೋಽಭವತ್ ॥೩೯॥**

ಓ ತಾಯಿಯೇ, ನಾನು, ನಿನಗೂ ನನ್ನ ತಾಯಿಯಾದ ಅದಿತಿಗೂ ತಾಯಿ ಎಂಬ ಅಂಶದಲ್ಲಿ ಭೇದವನ್ನೇ ತಿಳಿದಿಲ್ಲವು. ಇದನ್ನು ಆಣೆಯಿಟ್ಟು ಹೇಳುತ್ತೇನೆ, ಎಂದು ಇಂದ್ರನು ಹೇಳಿ, ಆ ದಿತಿಯ ಕಾಲುಗಳನ್ನು ಮುಟ್ಟಿ ಒತ್ತುವುದಕ್ಕೆ ಪ್ರಾರಂಭಿಸಿದನು.

**ಸಂವಾಹನಸುಖಂ ಪ್ರಾಪ್ಯ ನಿದ್ರಾಮಾಪ ಸುಲೋಚನಾ ।**
**ಶ್ರಾಂತಾ ವ್ರತಕೃಶಾ ಸುಪ್ತಾ ವಿಶ್ವಸ್ತಾ ಪರಮಾ ಸತೀ ॥೪೦॥**

ಸುಂದರವಾದ ಕಣ್ಣುಗಳುಳ್ಳ, ಉತ್ತಮಳೂ ಪತಿವ್ರತೆಯೂ ಆದ ಮತ್ತು ನಿಯಮಗಳ ಆಚರಣೆಯಿಂದ ಕೃಶಳಾಗಿ ಬಳಲಿದ್ದ ಆ ದಿತಿಯು, ಇಂದ್ರನು ಪಾದಗಳನ್ನು ಒತ್ತುವುದರಿಂದುಂಟಾದ ಸುಖದಿಂದ ಹಾಗೆಯೇ ನಿದ್ರೆಯನ್ನು ಮಾಡತೊಡಗಿದಳು. ಮತ್ತು ಆ ಇಂದ್ರನಲ್ಲಿ ನಂಬುಗೆಯುಳ್ಳವಳಾಗಿ, ಮಲಗಿ ಚನ್ನಾಗಿ ನಿದ್ರೆಹೋದಳು.

**ತಾಂ ನಿದ್ರಾವಶಮಾಪನ್ನಾಂ ವಿಲೋಕ್ಯ ಪ್ರಾವಿಶತ್ತನುಂ ।**
**ರೂಪಂ ಕೃತ್ವಾತಿಸೂಕ್ಷ್ಮಂ ಚ ಶಸ್ತ್ರಪಾಣಿಃ ಸಮಾಹಿತಃ ॥೪೧॥**

ಆ ಮೇಲೆ ಇಂದ್ರನು, ಆ ದಿತಿಯು ನಿದ್ರಾಪರವಶಳಾದುದನ್ನು ನೋಡಿ, ಕೈಯಲ್ಲಿ ಆಯುಧವನ್ನು ಹಿಡಿದು ತುಂಬ ಸೂಕ್ಷ್ಮವಾದ ರೂಪವನ್ನು ಧರಿಸಿ, ಎಚ್ಚರಿಕೆಯಿಂದ ಅವಳ ಶರೀರವನ್ನು ಪ್ರವೇಶಿಸಿದನು.

**ಉದರಂ ಪ್ರವಿವೇಶಾಶು ತಸ್ಯಾ ಯೋಗಬಲೇನ ವೈ ।**
**ಗರ್ಭಂ ಚಕರ್ತ ವಜ್ರೇಣ ಸಪ್ತಧಾ ಪವಿನಾಯಕಃ ॥೪೨॥**

ಹೀಗೆ ಆ ಇಂದ್ರನು ತನ್ನ ಯೋಗಬಲದಿಂದ ಆ ದಿತಿಯ ಹೊಟ್ಟೆಯನ್ನು ಜಾಗ್ರತೆಯಾಗಿ ಪ್ರವೇಶಿಸಿದನು. ಮತ್ತು ವಜ್ರಾಯುಧದ ಉಪಯೋಗದಲ್ಲಿ ಗಟ್ಟಿಗನಾದ ಅವನು ತನ್ನ ವಜ್ರಾಯುಧದಿಂದ ದಿತಿಯ ಗರ್ಭವನ್ನು ಏಳು ಭಾಗವಾಗಿ ಕತ್ತರಿಸಿದನು.

**ರುರೋದ ಚ ತದಾ ಬಾಲೋ ವಜ್ರೇಣಾಭಿಹತಸ್ತಥಾ ।**
**ಮಾ ರುದೇತಿ ಶನೈರ್ವಾಕ್ಯಮುವಾಚ ಮಘವಾನಮುಂ ॥೪೩॥**

ಆಗ ದಿತಿಯ ಗರ್ಭದಲ್ಲಿದ್ದ ಆ ಬಾಲಕನು ವಜ್ರಾಯುಧದ ಹೊಡೆತದಿಂದ ನೊಂದು ಅಳಲು ತೊಡಗಿದನು. ಆಗ ಇಂದ್ರನು ಆ ಮಗುವನ್ನು ಕುರಿತು "ಮಾರುದ" ಎಂದರೆ ಅಳಬೇಡ ಎಂಬ ಮಾತನ್ನು ಮೆಲ್ಲಗೆ ಹೇಳಿದನು.

**ಶಕಲಾನಿ ಪುನಃ ಸಪ್ತ ಸಪ್ತಧಾ ಕರ್ತಿತಾನಿ ಚ ।**
**ತದಾ ಚೈಕೋನಪಂಚಾಶನ್ಮರುತಶ್ಚಾಭವನ್ನೃಪ ॥೪೪॥**

ಓ ಜನಮೇಜಯರಾಜನೇ, ಇಂದ್ರನು ಮತ್ತೆ ಆ ಏಳು ಗರ್ಭದ ಚೂರುಗಳನ್ನು ಪುನಃ ಏಳೇಳು ಭಾಗವಾಗಿ ಕತ್ತರಿಸಿದನು. ಆಗ ಆ ನಲವತ್ತೊಂಬತ್ತು ಭಾಗಗಳು ನಲವತ್ತೊಂಬತ್ತು ವಾಯುಗಳು ಆದವು.

**ತದಾ ಪ್ರಬುದ್ಧಾ ಸುದತೀ ಜ್ಞಾತ್ವಾ ಗರ್ಭಂ ತಥಾಕೃತಂ ।**
**ಇಂದ್ರೇಣಚ್ಛಲರೂಪೇಣ ಚುಕೋಪ ಭೃಶದುಃಖಿತಾ ॥೪೫॥**

ಸುಂದರವಾದ ದಂತಪಂಕ್ತಿಯುಳ್ಳ ಆ ದಿತಿಯು ಕೂಡಲೇ ಎಚ್ಚರಗೊಂಡು ಕಪಟರೂಪವನ್ನು ತಾಳಿದ್ದ ಇಂದ್ರನಿಂದ ಗರ್ಭವು ಆರೀತಿ ಕತ್ತರಿಸಲ್ಪಟ್ಟುದನ್ನು ತಿಳಿದು ದುಃಖಪಟ್ಟವಳಾಗಿ ತುಂಬ ಸಿಟ್ಟುಗೊಂಡಳು.

**ಭಗಿನೀಕೃತಂ ತು ಸಾ ಬುಧ್ವಾ ಶಶಾಪ ಕುಪಿತಾ ತದಾ ।**
**ಅದಿತಿಂ ಮಘವಂತಂ ಚ ಸತ್ಯವ್ರತಪರಾಯಣಾ ॥೪೬॥**

ಇದೆಲ್ಲವೂ ತನ್ನ ತಂಗಿ (ಸವತಿ) ಯಾದ ಅದಿತಿಯ ಮೋಸದ ಕೆಲಸವೆಂದು ತಿಳಿದು, ಸತ್ಯವನ್ನು ನುಡಿಯುವವಳೂ, ವ್ರತನಿಯಮಗಳನ್ನು ಆಚರಿಸತಕ್ಕವಳೂ ಆದ ಆ ದಿತಿಯು ಸಿಟ್ಟುಗೊಂಡು, ಅದಿತಿಯನ್ನೂ, ಇಂದ್ರನನ್ನೂ ಹೀಗೆ ಶಪಿಸಿದಳು.

**ಯಥಾ ಮೇ ಕರ್ತಿತೋ ಗರ್ಭಸ್ತವ ಪುತ್ರೇಣ ಛದ್ಮನಾ ।**
**ತಥಾ ತನ್ನಾಶಮಾಯಾತು ರಾಜ್ಯಂ ತ್ರಿಭುವನಸ್ಯ ತು ॥೪೭॥**

ಹೇಗೆ ನಿನ್ನ ಪುತ್ರನಾದ ಇಂದ್ರನು ಮೋಸದಿಂದ ನನ್ನ ಗರ್ಭವನ್ನು ಕತ್ತರಿಸಿದನೋ ಅದರಂತೆಯೇ ಅವನಿಗೆ ಈ ಮೂರು ಲೋಕಗಳ ಆಳ್ವಿಕೆಯು ನಷ್ಟವಾಗಿ ಹೋಗಲಿ.

**ಯಥಾ ಗುಪ್ತೇನ ಪಾಪೇನ ಮಮ ಗರ್ಭೋ ನಿಪಾತಿತಃ ।**
**ಅದಿತ್ಯಾ ಪಾಪಚಾರಿಣ್ಯಾ ಯಥಾ ಮೇ ಘಾತಿತಃ ಸುತಃ ॥೪೮॥**

ಮತ್ತು, ಕೆಟ್ಟ ನಡತೆಯುಳ್ಳ ಅದಿತಿಯು ಗುಟ್ಟಾಗಿ ನನ್ನ ಗರ್ಭವನ್ನು ನಾಶಮಾಡಿ ಆ ಗರ್ಭದಲ್ಲಿದ್ದ ನನ್ನ ಮಗನನ್ನು ಯಾವ ರೀತಿಯಲ್ಲಿ ಕೊಂದಳೋ

**ತಸ್ಯಾಃ ಪುತ್ರಾಸ್ತು ನಶ್ಯಂತು ಜಾತಾ ಜಾತಾಃ ಪುನಃ ಪುನಃ ।**
**ಕಾರಾಗಾರೇ ವಸತ್ವೇಷಾ ಪುತ್ರಶೋಕಾತುರಾ ಭೃಶಂ ॥೪೯॥**

ಅದರಂತೆಯೇ ಈ ಅದಿತಿಯ (ಏಳು) ಮಕ್ಕಳೂ ಪುನಃಪುನಃ ಹುಟ್ಟಿ ಸಾಯಲಿ. ಮತ್ತು ಅವಳೂ ತುಂಬ ಪುತ್ರಶೋಕದಿಂದ ಕೂಡಿದವಳಾಗಿ ಸೆರೆಮನೆಯಲ್ಲಿ ಬಂಧಿತಳಾಗಿ ವಾಸಿಸಲಿ.

**ಅನ್ಯ ಜನ್ಮನಿ ಚಾಪ್ಯೇವಂ ಮೃತಾಪತ್ಯಾ ಭವಿಷ್ಯತಿ ।**

ಇದೇ ರೀತಿಯಾಗಿ, ಇನ್ನೊಂದು ಮುಂದಿನ ಜನ್ಮದಲ್ಲಿಯೂ ಇವಳಿಗೆ ಹುಟ್ಟುವ ಮಕ್ಕಳುಗಳು ಮೃತರಾಗಿ ಆ ದುಃಖವನ್ನು ಇವಳು ಅನುಭವಿಸುವಳು.

|| ವ್ಯಾಸ ಉವಾಚ ||

**ಇತ್ಯುತ್ಸೃಷ್ಟಂ ತದಾ ಶ್ರುತ್ವಾ ಶಾಪಂ ಮರೀಚಿನಂದನಃ ||೫೦||**
**ಉವಾಚ ಪ್ರಣಯೋಪೇತೋ ವಚನಂ ಶಮಯನ್ನಿವ ।**

ಹೀಗೆ ದಿತಿಯು ಅದಿತಿಗೆ ಶಾಪವನ್ನು ಕೊಟ್ಟುದನ್ನು ಕೇಳಿ, ಮರೀಚಿಬ್ರಹ್ಮನ ಮಗನಾದ ಕಶ್ಯಪಮುನಿಯು ದಿತಿಯನ್ನು ಕುರಿತು ಅವಳ ಸಿಟ್ಟನ್ನು ಸಮಾಧಾನ ಮಾಡಲು ಪ್ರೀತಿಪೂರ್ವಕವಾಗಿ ಹೀಗೆ ಹೇಳಿದನು.

**ಮಾ ಕೋಪಂ ಕುರು ಕಲ್ಯಾಣಿ ಪುತ್ರಾಸ್ತೇ ಬಲವತ್ತರಾಃ ||೫೧||**
**ಭವಿಷ್ಯಂತಿ ಸುರಾಃ ಸರ್ವೇ ಮರುತೋ ಮಘವತ್ಸಖಾಃ ।**

ಓ ಮಂಗಳಾಂಗಿಯೇ, ಕೋಪವನ್ನು ಮಾಡಬೇಡ. ಕತ್ತರಿಸಲ್ಪಟ್ಟ ಆ ನಿನ್ನ ಮಕ್ಕಳು ನಾಶವಾಗದೆ ಎಲ್ಲರೂ ತುಂಬ ಬಲಿಷ್ಠರಾದ ಮತ್ತು ಇಂದ್ರನಿಗೆ ಸ್ನೇಹಿತರಾದ ಮರುತ್ತಗಳೆಂಬ ದೇವತೆಗಳಾಗುವರು.

**ಶಾಪೋಽಯಂ ತವ ವಾಮೋರು ತ್ವಷ್ಟಾವಿಂಶೇಽಥ ದ್ವಾಪರೇ ||೫೨||**
**ಅಂಶೇನ ಮಾನುಷಂ ಜನ್ಮ ಪ್ರಾಪ್ಯ ಭೋಕ್ಷ್ಯತಿ ಭಾಮಿನೀ ।**

ಸುಂದರವಾದ ತೊಡೆಗಳುಳ್ಳ ಓ ದಿತಿಯೇ, ನೀನು ಈಗ ಕೊಟ್ಟರತಕ್ಕ ಶಾಪವನ್ನು ಅದಿತಿಯು ಇಂದಿಗೆ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ತನ್ನ ಅಂಶ ದಿಂದ ಮನುಷ್ಯಜನ್ಮವನ್ನು ಪಡೆದು, ಅನುಭವಿಸವಳು.

**ವರುಣೇನಾಪಿ ದತ್ತೋಽಸ್ತಿ ಶಾಪಃ ಸಂತಾಪಿತೇನ ಚ ||೫೩||**
**ಉಭಯೋಃ ಶಾಪಯೋಗೇನ ಮಾನುಷೀಯಂ ಭವಿಷ್ಯತಿ ।**

ಹಿಂದೆ ನನ್ನಿಂದ ದುಃಖಗೊಳಿಸಲ್ಪಟ್ಟು, ವರುಣನೂ ಸಹ ನಿನ್ನಂತೆಯೇ ಶಾಪವನ್ನು ಕೊಟ್ಟಿರುತ್ತಾನೆ. ನಿಮ್ಮಿರ್ವರ ಶಾಪಗಳ ಯೋಗದಿಂದ ಈ ಅದಿತಿಯು ಆ ದ್ವಾಪರಯುಗದಲ್ಲಿ ಮನುಷ್ಯ ಜನ್ಮವನ್ನು ಪಡೆಯುವಳು.

॥ ವ್ಯಾಸ ಉವಾಚ ॥

**ಪತಿನಾಽಽಶ್ವಾಸಿತಾ ದೇವೀ ಸಂತುಷ್ಟಾ ಸಾಽಭವತ್ತದಾ ॥೫೪॥**
**ನೋವಾಚ ವಿಪ್ರಿಯಂ ಕಿಂಚಿತ್ತತಃ ಸಾ ವರವರ್ಣಿನೀ ।**

ವ್ಯಾಸಮುನಿಯು ಹೇಳಿದನು—ಹೀಗೆ ಆ ದಿತಿದೇವಿಯು ಪತಿಯಾದ ಕಶ್ಯಪನಿಂದ ಸಮಾಧಾನಪಡಿಸಲ್ಪಟ್ಟು ಶಾಂತಿಸುಖವುಳ್ಳವಳಾದಳು ಮತ್ತು ಉತ್ತಮಸ್ತ್ರೀಯಾದ ಅವಳು ಆಮೇಲೆ ಅವನಿಗೆ ಅಹಿತವಾದ ಒಂದು ಮಾತನ್ನೂ ಆಡಲಿಲ್ಲವು.

**ಇತಿ ತೇ ಕಥಿತಂ ರಾಜನ್ ಪೂರ್ವಶಾಪಸ್ಯ ಕಾರಣಂ ॥೫೫॥**
**ಅದಿತಿರ್ದೇವಕೀ ಜಾತಾ ಸ್ವಾಂಶೇನ ನೃಪಸತ್ತಮ ।**

ಎಲೈ ಜನಮೇಜಯರಾಜನೇ, ಹೀಗೆ ಅದಿತಿಯ ಪೂರ್ವಶಾಪಕ್ಕೆ ಕಾರಣವನ್ನು ನಿನಗೆ ಹೇಳಿರುತ್ತೇನೆ. ಆ ದಿತಿಯ ಶಾಪದಂತೆ ಅದಿತಿಯು ತನ್ನ ಅಂಶದಿಂದ ಭೂಲೋಕದಲ್ಲಿ ಯದುವಂಶದಲ್ಲಿ ದೇವಕಿಯಾಗಿ ಹುಟ್ಟಿದಳು.

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ತೃತೀಯೋಽಧ್ಯಾಯಃ.

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಚತುರ್ಥೋಽಧ್ಯಾಯಃ ||

### ನಾಲ್ಕನೆಯ ಅಧ್ಯಾಯವು

|| ರಾಜೋವಾಚ ||

**ವಿಸ್ಮಿತೋಽಸ್ಮಿ ಮಹಾಭಾಗ ಶ್ರುತ್ವಾಽಽಖ್ಯಾನಂ ಮಹಾಮತೇ ।**
**ಸಂಸಾರೋಽಯಂ ಪಾಪರೂಪಃ ಕಥಂ ಮುಚ್ಯೇತ ಬಂಧನಾತ್ ॥೧॥**

ಜನಮೇಜಯರಾಜನು ಹೇಳಿದನು—ಓ ಪುಣ್ಯವಂತನೇ, ಮೇಲಾದ ಬುದ್ಧಿಶಾಲಿಯೇ, ನೀನು ಹೇಳಿದ ಈ ಕಥೆಯನ್ನು ನಾನು ಕೇಳಿ ಬಹಳ ಆಶ್ಚರ್ಯಗೊಂಡಿರುವೆನು. ಈ ಸಂಸಾರವೆಂಬ ಎಂದರೆ ಕರ್ತೃತ್ವಭೋಕ್ತೃತ್ವಜನನಮರಣಪರಂಪರೆಯಲ್ಲಿ ನಿರ್ಬಂಧದಿಂದ ಸಿಕ್ಕಿಕೊಂಡಿರುವಿಕೆ ಎಂಬ, ಪಾಪದ ಫಲವಾದ ಬಂಧನದಿಂದ ಬಿಡುಗಡೆಯನ್ನು ಹೊಂದುವುದು ಹೇಗೆ ?

**ಕಶ್ಯಪಸ್ಯಾಪಿ ದಾಯಾದಸ್ತ್ರಿಲೋಕೀ ವಿಭವೇ ಸತಿ ।**
**ಕೃತವಾನೀದೃಶಂ ಕರ್ಮ ಕೋ ನ ಕುರ್ಯಾಜ್ಜುಗುಪ್ಸಿತಂ ॥೨॥**

ಮೂರು ಲೋಕಗಳಿಗೂ ಒಡೆಯನಾಗುವುದರಿಂದ ದೊರೆಯಬಹುದಾದ ವೈಭವದಿಂದ ಕೂಡಿದ್ದರೂ, ಪರಿಶುದ್ಧನಾದ ಕಶ್ಯಪನಲ್ಲಿ ಜನಿಸಿದ್ದರೂ ಕೂಡ ಇಂದ್ರನೂ ಈ ರೀತಿಯಾದ ನೀಚಕೆಲಸವನ್ನು ಮಾಡಿರುವನು. ಹೀಗಿರುವಾಗ ಇಂತಹ ಅಸಹ್ಯವಾದ ಕೆಲಸವನ್ನು ಸಾಧಾರಣರಾದ ಇತರರು ಯಾರು ತಾನೇ ಮಾಡದೇ ಹೋದಾರು ?

**ಗರ್ಭೇ ಪ್ರವಿಶ್ಯ ಬಾಲಸ್ಯ ಹನನಂ ದಾರುಣಂ ಕಿಲ ।**
**ಸೇವಾಮಿಷೇಣ ಮಾತುಶ್ಚ ಕೃತ್ವಾ ಶಪಥಮದ್ಭುತಂ ॥೩॥**

ಗರ್ಭಿಣಿಯಾದ ಸ್ತ್ರೀಯ ಉದರವನ್ನು ಪ್ರವೇಶಮಾಡಿ ಅಲ್ಲಿರುವ ಶಿಶುವನ್ನು ಕೊಲ್ಲುವುದು ಭಯಂಕರವಾದ ಪಾಪವಲ್ಲವೇ ? ಹೀಗಿದ್ದರೂ, ಮೊದಲು ನಂಬಿಕೆಯ ಮಾತನ್ನು ಆಣೆ ಇಟ್ಟುಕೊಂಡು ಹೇಳಿ ನಂಬಿಸಿ, ಶುಶ್ರೂಷೆಯನ್ನು ಮಾಡುವ ನೆವ ದಿಂದ, ಅದರಲ್ಲೂ ತನ್ನ ಸ್ವಂತತಾಯಿಗೆ ಸಮಾನಳಾದವಳ ಗರ್ಭವನ್ನು ಪ್ರವೇಶಿಸಿ ಅಲ್ಲಿರುವ ಶಿಶುವನ್ನು ಕೊಲ್ಲುವುದೆಂಬುದು ಅತ್ಯಂತ ನೀಚವೂ ಭಯಂಕರವೂ ಆದ ಕೆಲಸವಲ್ಲವೇ ?

**ಶಾಸ್ತಾ ಧರ್ಮಸ್ಯ ಗೋಪ್ತಾ ಚ ತ್ರಿಲೋಕ್ಯಾಃ ಪತಿರಪ್ಯುತ ।**
**ಕೃತವಾನೀದೃಶಂ ಕರ್ಮ ಕೋ ನ ಕುರ್ಯಾದಸಾಂಪ್ರತಂ ॥೪॥**

ಧರ್ಮವನ್ನು ರಕ್ಷಿಸುವುದೆಂಬ ಮುಖ್ಯವಾದ ಅಧಿಕಾರಕರ್ತವ್ಯದಲ್ಲಿ ನಿಯುಕ್ತ ನಾಗಿರುವವನೂ ಮೂರು ಲೋಕದ ಒಡೆಯನೂ ಆದ ಇಂದ್ರನೇ ಇಂತಹ ಪಾಪ ಕಾರ್ಯವನ್ನು ಮಾಡಿದನೆಂದಮೇಲೆ ಸಾಮಾನ್ಯರಾದ ಜನರಲ್ಲಿ ಬೇರೆ ಯಾರು ತಾನೇ ಅಕಾರ್ಯವನ್ನು ಮಾಡಲು ಹಿಂಜರಿದಾರು ?

**ಪಿತಾಮಹಾ ಮೇ ಸಂಗ್ರಾಮೇ ಕುರುಕ್ಷೇತ್ರೇಽತಿದಾರುಣಂ ।**
**ಕೃತವಂತಸ್ತಥಾಶ್ಚರ್ಯಂ ದುಷ್ಟಂ ಕರ್ಮ ಜಗದ್ಗುರೋ ॥೫॥**

ಓ ಪ್ರಪಂಚಕ್ಕೆಲ್ಲ ಪ್ರಭುವೇ, ಇವನೊಬ್ಬನೇ ಅಲ್ಲವು. ನನ್ನ ತಾತಂದಿರೂ ಕೂಡ ಕುರುಕ್ಷೇತ್ರದಲ್ಲಿ ನಡೆದ ಯುದ್ಧದಲ್ಲಿ ಇಂತಹ ಭಯಂಕರವಾದ ಎಂದರೆ, ಗುರುಹಿರಿಯರ ಕೊಲೆ ಮುಂತಾದ ಪಾಪಕೆಲಸವನ್ನು ಮಾಡಿರುತ್ತಾರೆ. ಇದೆಲ್ಲವೂ ಬಹಳ ಆಶ್ಚರ್ಯಕರವಾಗಿರುತ್ತದೆ.

**ಭೀಷ್ಮೋ ದ್ರೋಣಃ ಕೃಪಃಕರ್ಣೋ ಧರ್ಮಾಂಶೋಽಪಿ ಯುಧಿಷ್ಠಿರಃ ।**
**ಸರ್ವೇ ವಿರುದ್ಧಧರ್ಮೇಣ ವಾಸುದೇವೇನ ನೋದಿತಾಃ ॥೬॥**

**ಅಸಾರತಾಂ ವಿಜಾನಂತಃ ಸಂಸಾರಸ್ಯ ಸುಮೇಧಸಃ ।**
**ದೇವಾಂಶಾಶ್ಚ ಕಥಂ ಚಕ್ರುರ್ನಿಂದಿತಂ ಧರ್ಮತತ್ಪರಾಃ ॥೭॥**

ಭೀಷ್ಮ, ದ್ರೋಣ, ಕೃಪ, ಕರ್ಣ, ದಿಕ್ಪಾಲಕನಾದ ಯಮಧರ್ಮರಾಜನ ಅಂಶಾವತಾರನಾದ ಧರ್ಮರಾಜ, ಇವರೆಲ್ಲರೂ ಧರ್ಮದಲ್ಲಿ ನಡೆಯತಕ್ಕವರೂ, ದೇವಾಂಶಗಳಿಂದ ಸಂಭೂತರೂ, ಈ ಪ್ರಪಂಚದ ಅನಿತ್ಯತೆಯನ್ನು ತಿಳಿದಿರತಕ್ಕವರೂ, ಒಳ್ಳೆಯ ಮೇಧಾಶಕ್ತಿಯುಳ್ಳವರೂ ಆದರೂ ಕೂಡ ಧರ್ಮಕ್ಕೆ ವಿರುದ್ಧವಾದ ರೀತಿಯಿಂದ, ಕೃಷ್ಣನಿಂದ ಪ್ರೇರಿಸಲ್ಪಟ್ಟವರಾಗಿ ಹೇಗೆ ನೀಚವೂ ಪಾಪವೂ ಆದ ಕಾರ್ಯವನ್ನು ಮಾಡಿದರು ?

**ಕಾಽತ್ರಾಸ್ಥಾ ಧರ್ಮಸ್ಯ ವಿಪ್ರೇಂದ್ರ ಪ್ರಮಾಣಂ ಕಿಂ ವಿನಿಶ್ಚಿತಂ ।**
**ಚಲಚಿತ್ತೋಽಸ್ಮಿ ಸಂಜಾತಃ ಶ್ರುತ್ವಾ ಚೈತತ್ಕಥಾನಕಂ ॥೮॥**

ಧರ್ಮದಲ್ಲಿ ನಡೆಯುತ್ತಾ ಇತರರಿಗೆ ಮಾದರಿಯಾಗಿರಬೇಕಾದವರೇ ಈ ರೀತಿಯಾಗಿ ನಡೆದರೆ, ಧರ್ಮದಲ್ಲಿ ಯಾರಿಗೆ ತಾನೇ ಶ್ರದ್ಧೆಯು ಹುಟ್ಟುವುದು ? ಧರ್ಮಕ್ಕೆ ಪ್ರಮಾಣರೂಪದಲ್ಲಿರಬೇಕಾದವರೇ ಹೀಗಾದರೆ, ಧರ್ಮಕ್ಕೆ ಪ್ರಮಾಣವು ಇನ್ನೆಲ್ಲಿ ದೊರಕುತ್ತದೆ? ಈ ಮುಂತಾದ ಕಥೆಗಳ ವಿಷಯಗಳನ್ನೆಲ್ಲ ಕೇಳಿ ನನ್ನ ಮನಸ್ಸು ಬಹಳವಾಗಿ ಕಲಕಿ ಚಂಚಲವಾಗಿರುತ್ತದೆ.

**ಆಪ್ತವಾಕ್ಯಂ ಪ್ರಮಾಣಂ ಚೇದಾಪ್ತಃ ಕಃ ಪರದೇಹವಾನ್ ।**
**ಪುರುಷೋ ವಿಷಯಾಸಕ್ತೋ ರಾಗೀ ಭವತಿ ಸರ್ವಥಾ ॥೯॥**

ಆಪ್ತವಾಕ್ಯವೇ ಎಂದರೆ, ನಂಬಿಕೆಗೆ ಅರ್ಹರಾದವರ ಮಾತುಗಳೇ ಪ್ರಮಾಣವು ಎಂದು ತಿಳಿಯಹೇಳುವುದಾದರೆ, ಅಂತಹ ಆಪ್ತನು ಯಾವನಿದ್ದಾನೆ? ಏತಕ್ಕೆಂದರೆ, ಶರೀರವೇ ಶ್ರೇಷ್ಠವೆಂದು ತಿಳಿವಳಿಕೆಯುಳ್ಳವರು, ದೇಹವೇ ಆತ್ಮವೆಂದು ನಂಬಿ ನಡೆಯುವ ಚಾರ್ವಾಕಮುಂತಾದವರಂತೆ ದೇವರಲ್ಲೂ ಧರ್ಮದಲ್ಲೂ ನಂಬಿಕೆ ಇಲ್ಲದಿರುವವರು, ಐಹಿಕವಾದ ಸುಖವೇ ಪರಮಸುಖವೆಂದು ಭ್ರಾಂತಿಯುಳ್ಳವರು, ಸ್ವಾರ್ಥಪರತೆಯೇ ಪುರುಷಾರ್ಥವೆಂದು ತಿಳಿದಿರತಕ್ಕ ಈ ಎಲ್ಲರೂ ಕಾಮಕ್ರೋಧಲೋಭಾದಿಗಳಲ್ಲಿ ಮುಳುಗಿ, ಆಶೆಯುಳ್ಳವರಾಗಿ ಧರ್ಮಾಧರ್ಮವಿವೇಚನೆ ಇಲ್ಲದವರಾಗಿ ದುಷ್ಟವಾದ ಪರಿಣಾಮವನ್ನು ಹೊಂದುತ್ತಿರುವರು.

**ರಾಗೋದ್ವೇಷೋ ಭವೇನ್ನೂನಮರ್ಥನಾಶಾದಸಂಶಯಂ ।**
**ದ್ವೇಷಾದಸತ್ಯವಚನಂ ವಕ್ತವ್ಯಂ ಸ್ವಾರ್ಥಸಿದ್ಧಯೇ ॥೧೦॥**

ಹಣದ ನಾಶದಿಂದ ಖಂಡಿತವಾಗಿ, ಆಶೆ, ದ್ವೇಷಗಳು ಉತ್ಪನ್ನವಾಗುವುವು. ದ್ವೇಷದಿಂದ ತನ್ನ ಸ್ವಾರ್ಥಸಿದ್ಧಿಗಾಗಿ ಸುಳ್ಳನ್ನು ಹೇಳಲೇ ಬೇಕಾಗುತ್ತದೆ.

**ಜರಾಸಂಧವಿಘಾತಾರ್ಥಂ ಹರಿಣಾ ಸತ್ತ್ವಮೂರ್ತಿನಾ ।**
**ಛಲೇನ ರಚಿತಂ ರೂಪಂ ಬ್ರಾಹ್ಮಣಸ್ಯ ವಿಜಾನತಾ ॥೧೧॥**

ಎಲ್ಲವನ್ನೂ ತಿಳಿದಿರುವ, ಸಾತ್ವಿಕಗುಣವೇ ಪ್ರಧಾನವಾದ ಸ್ವಭಾವವುಳ್ಳ ವಿಷ್ಣುವಿನಿಂದ ಜರಾಸಂಧನನ್ನು ಕೊಲ್ಲಿಸಲು ಮೋಸದಿಂದ ಬ್ರಾಹ್ಮಣನ ರೂಪವನ್ನು ಧರಿಸಲಾಯಿತು.

**ತದಾಪ್ತಃ ಕಃ ಪ್ರಮಾಣಂ ಕಿಂ ಸತ್ತ್ವಮೂರ್ತಿರಪೀದೃಶಃ ।**
**ಅರ್ಜುನೋಽಪಿ ತಥೈವಾತ್ರ ಕಾರ್ಯೇ ಯಜ್ಞವಿನಿರ್ಮಿತೇ ॥೧೨॥**

ಸಾತ್ತ್ವಿಕಗುಣಕ್ಕೆ ಮನೆಯಂತಿರುವ ವಿಷ್ಣುವೇ ಈ ರೀತಿಯಲ್ಲಿ ನಡೆದಿರುವಾಗ ಆಪ್ತರು ಎಂದರೆ ನಂಬಲು ಯೋಗ್ಯರು ಎಂದು ಯಾರನ್ನು ತಾನೇ ಹೇಳಲು ಸಾಧ್ಯ? ಅರ್ಜುನನೂ ಕೂಡ ಸತ್ತ್ವಗುಣಪ್ರಧಾನವಾದ ಯಾಗವನ್ನು ಪ್ರಾರಂಭಿಸಿ ವಧರೂಪವಾದ ತಮೋಗುಣದ ಕಾರ್ಯವನ್ನು ಆಚರಿಸಿದನು.

**ಕೀದೃಶೋಽಯಂ ಕೃತೋ ಯಜ್ಞಃ ಕಿಮರ್ಥಂ ಶಮವರ್ಜಿತಃ ।**
**ಪರಲೋಕಪದಾರ್ಥಂ ವಾ ಯಶಸೇ ವಾಽನ್ಯಥಾ ಕಿಲ ॥೧೩॥**

ಶಿಶುಪಾಲನ ವಧೆಯನ್ನು ಆ ಯಾಗದಲ್ಲಿ ಮಾಡಿದುದರಿಂದ ಶಾಂತಿರಹಿತವಾದ ಆ ಯಾಗವು ಎಂತಹ ಯಾಗವು? ಈರೀತಿಯಲ್ಲಿ ಆಚರಿಸಿದರೆ ಪರಲೋಕವಾಗಲಿ, ಕೀರ್ತಿಯಾಗಲಿ, ಹೇಗೆ ತಾನೇ ಉಂಟಾಗುವುದು?

**ಧರ್ಮಸ್ಯ ಪ್ರಥಮಃ ಪಾದಃ ಸತ್ಯಮೇತಚ್ಛ್ರುತೇರ್ವಚಃ ।**
**ದ್ವಿತೀಯಸ್ತು ತಥಾ ಶೌಚಂ ದಯಾ ಪಾದಸ್ತೃತೀಯಕಃ ॥೧೪॥**

ಧರ್ಮಕ್ಕೆ ಇರುವ ನಾಲ್ಕು ಪಾದಗಳಲ್ಲಿ ಸತ್ಯವೇ ಮೊದಲನೆಯ, ಮುಂದಾದ ಪಾದವು; ನೈರ್ಮಲ್ಯದಿಂದ ಕೂಡಿರುವ ಸದಾಚಾರವೇ ಎರಡನೆಯ ಪಾದವು; ಕರುಣೆಯೇ ಮೂರನೆಯ ಪಾದವು; ಎಂದು ವೇದವಾಕ್ಯವು ಹೇಳುತ್ತದೆ.

**ದಾನಂ ಪಾದಶ್ಚತುರ್ಥಶ್ಚ ಪುರಾಣಜ್ಞಾ ವದಂತಿ ವೈ ।**
**ತ್ರೈವಿರ್ಹೀನಃ ಕಥಂ ಧರ್ಮಸ್ತಿಷ್ಠೇದಿಹ ಸುಸಂಮತಃ ॥೧೫॥**

ಅಲ್ಲದೆ, ದಾನವೇ ನಾಲ್ಕನೆಯ ಪಾದವು ಎಂದು ಪುರಾಣರಹಸ್ಯವನ್ನು ತಿಳಿದವರೂ ಹೇಳುವರು. ಈ ಗುಣಗಳಿಲ್ಲದ ಧರ್ಮವು ಹೇಗೆ ತಾನೇ ಧರ್ಮವೆನಿಸಿ ಕೊಳ್ಳುವುದು? ಅದನ್ನು ಶಿಷ್ಟರು ಹೇಗೆ ತಾನೇ ಒಪ್ಪಿಯಾರು?

**ಧರ್ಮಹೀನಂ ಕೃತಂ ಕರ್ಮ ಕಥಂ ತತ್ಫಲದಂ ಭವೇತ್ ।**
**ಧರ್ಮೇ ಸ್ಥಿರಾ ಮತಿಃ ಕ್ವಾಪಿ ನ ಕಸ್ಯಾಪಿ ಪ್ರತೀಯತೇ ॥೧೬॥**

ಸತ್ಯ, ದಯೆ ಮುಂತಾದ ಒಳ್ಳೆಯ ಗುಣಗಳಿಂದ ಬಿಡಲ್ಪಟ್ಟು ಮಾಡಿದ ಕರ್ಮವು ಹೇಗೆ ತಾನೇ ಒಳ್ಳೆಯ ಫಲವನ್ನು ಕೊಡಲು ಸಮರ್ಥವಾದೀತು? ಈ ರೀತಿಯಲ್ಲಿ ಮಾಡಿದರೆ ಯಾರಿಗೆ ತಾನೇ ಧರ್ಮದಲ್ಲಿ ಮನಸ್ಸು ಸ್ಥಿರವಾದ ಆದರ ವುಳ್ಳದ್ದಾಗುವುದು?

**ಛಲಾರ್ಥಂ ಚ ಯದಾ ವಿಷ್ಣುರ್ವಾಮನೋಽಭೂಜ್ಜಗತ್ಪ್ರಭುಃ ।**
**ಯೇನ ವಾಮನರೂಪೇಣ ವಂಚಿತೋಽಸೌ ಬಲಿರ್ನೃಪಃ ॥೧೭॥**

ನೆಪದಿಂದ ಸ್ವಕಾರ್ಯವನ್ನು ಸಾಧಿಸಲು, ಪ್ರಪಂಚಕ್ಕೆ ಒಡೆಯನಾದ ವಿಷ್ಣುವು ಕೂಡ ವಾಮನರೂಪವನ್ನು ಧರಿಸಿ, ಆ ವೇಷಾಂತರದಿಂದ ಬಲಿರಾಜನನ್ನು ಮೋಸ ಗೊಳಿಸಿದನು. ಈ ರೀತಿಯಲ್ಲಿ ವಿಷ್ಣುವೇ ಮೋಸಗಾರನಾಗಿ ಪರಿಣಮಿಸಿದರೆ ಬೇರೆ ಯಾರನ್ನು ತಾನೇ ಆಪ್ತರೆಂದು ನಂಬುವುದು?

**ವಿಹರ್ತಾ ಶತಯಜ್ಞಾನಾಂ ವೇದಾಜ್ಞಾಪರಿಪಾಲಕಃ ।**
**ಧರ್ಮಿಷ್ಠೋ ದಾನಶೀಲಶ್ಚ ಸತ್ಯವಾದೀ ಜಿತೇಂದ್ರಿಯಃ ॥೧೮॥**

ಬಲಿಯು ಯಾವಾಗಲೂ ಸತ್ಯವನ್ನು ಬಿಟ್ಟು ನಡೆದುದಿಲ್ಲ. ನೂರು ಯಜ್ಞ ಗಳನ್ನು ಮಾಡಿದವನೂ, ವೇದೋಕ್ತವಾದ ವಿಧಿನಿಯಮಗಳನ್ನು ತಪ್ಪದೆ ಪಾಲಿಸು ವವನೂ, ಧರ್ಮಾಚಾರರತನೂ, ದಾನಪರನೂ, ಸದಾಚಾರನಿರತನೂ, ಸತ್ಯವಾದಿಯೂ ಪಂಚೇಂದ್ರಿಯಗಳ ಚಾಪಲ್ಯವನ್ನು ಜಯಿಸಿದವನೂ ಆಗಿದ್ದನು. ಇಂತಹ ಸತ್ಪುರುಷ ನನ್ನೂ ವಿಷ್ಣುವೇ ಮೋಸಗೊಳಿಸಿದರೆ, ಇನ್ನು ಯಾರನ್ನು ತಾನೇ ಆಪ್ತರೆಂದು ನಾವು ತಿಳಿಯುವುದಕ್ಕೆ ಸಾಧ್ಯವಾದೀತು?

**ಸ್ಥಾನಾತ್ಪ್ರಭ್ರಂಶಿತೋಽ ಕಸ್ಮಾದ್ವಿಷ್ಣುನಾ ಪ್ರಭವಿಷ್ಣುನಾ ।**
**ಜಿತಂ ಕೇನ ತಯೋಃ ಕೃಷ್ಣ ಬಲಿನಾ ವಾಮನೇನ ವಾ ॥೧೯॥**

ಓ ಕೃಷ್ಣದ್ವೈಪಾಯನಮುನಿಯೇ, ಸರ್ವಸಮರ್ಥನಾದ ವಿಷ್ಣುವಿನಿಂದ ಆಕಸ್ಮಾತ್ತಾಗಿ ಬಲಿಯು ಸ್ಥಾನಭ್ರಷ್ಟತ್ವವನ್ನು ಹೊಂದಿದನು. ಎಂದರೆ ತಾನು ಪಡೆದಿದ್ದ ತ್ರಿಲೋಕಾಧಿಪತಿಯಾದ ಇಂದ್ರನ ಪದವಿಯನ್ನು ಕಳೆದುಕೊಂಡನು. ಆದರೂ ವಿಷ್ಣುವು ಅವನ ದ್ವಾರಪಾಲಕನಾದನು. ಈ ರೀತಿಯಲ್ಲಿ ನಡೆದುದರಿಂದ ವಾಮನನು ಗೆದ್ದನೇ ಅಥವಾ ಬಲಿಯು ಗೆದ್ದನೇ ಎಂಬುದನ್ನು ದಯವಿಟ್ಟು ತಿಳಿಸುವವನಾಗು. ಇವರಿಬ್ಬರಲ್ಲಿ ಯಾರು ಮೇಲಾದವರು ಎಂಬುದನ್ನು ವಿವರಿಸಿ ತಿಳಿಯಹೇಳು.

**ಛಲಕರ್ಮವಿದಾ ಚಾಯಂ ಸಂದೇಹೋಽತ್ರ ಮಹಾನ್ಮಮ ।**
**ವಂಚಯಿತ್ವಾ ವಂಚಿತೇನ ಸತ್ಯಂ ವದ ದ್ವಿಜೋತ್ತಮ ॥೨೦॥**

**ಪುರಾಣಕರ್ತಾ ತ್ವಮಸಿ ಧರ್ಮಜ್ಞಶ್ಚ ಮಹಾಮತಿಃ ।**

ಮೋಸಮಾಡುವ ಕಾರ್ಯದಲ್ಲಿ ನಿಪುಣನಾದ ವಿಷ್ಣುವಿನಿಂದ ಇವನು ಮೋಸ ಮಾಡಿ ವಂಚಿಸಲ್ಪಟ್ಟನೇ ಎಂಬ ಈ ವಿಷಯದಲ್ಲಿ ನನಗೆ ಬಹಳ ಸಂದೇಹವಿರುತ್ತದೆ. ಆದುದರಿಂದ ನಿಜವನ್ನು ತಿಳಿಯಹೇಳಿ ನನ್ನ ಸಂಶಯವನ್ನು ಪರಿಹರಿಸು. ಎಲೈ ಬ್ರಾಹ್ಮಣಶ್ರೇಷ್ಠನೇ, ನೀನು ಪುರಾಣಗಳನ್ನು ಸ್ವತಃ ರಚಿಸಿದವನು ಮತ್ತು ಧರ್ಮ ಸೂಕ್ಷ್ಮವನ್ನು ತಿಳಿದವನೂ, ಮಹಾಬುದ್ಧಿಶಾಲಿಯೂ ಆಗಿರುವೆ. ಆದುದರಿಂದ ಈ ನನ್ನ ಸಂಶಯವನ್ನು ನಿವಾರಿಸು.

॥ ವ್ಯಾಸ ಉವಾಚ ॥

**ಜಿತಂ ವೈ ಬಲಿನಾ ರಾಜನ್ ದತ್ತಾ ಯೇನ ಚ ಮೇದಿನೀ ॥೨೧॥**
**ತ್ರಿವಿಕ್ರಮೋಽಪಿ ನಾಮ್ನಾ ಯಃ ಪ್ರಥಿತೋ ವಾಮನೋಽಭವತ್ ।**

ವ್ಯಾಸನು ಹೇಳಿದನು—ಓ ದೊರೆಯೇ, ಭೂಮಿಯನ್ನು ದಾನವಾಗಿ ಕೊಟ್ಟ, ಸತ್ಯವನ್ನೇ ಅವಲಂಬಿಸಿ ಧರ್ಮಾಚರಣೆಯನ್ನು ಕೈಬಿಡದೆ, ವಾಗ್ದಾನವನ್ನು ನೆರವೇರಿಸಿದ ಬಲಿಚಕ್ರವರ್ತಿಯಿಂದ ವಿಷ್ಣುವೇ ಗೆಲ್ಲಲ್ಪಟ್ಟನು. ಮೂರು ಹೆಜ್ಜೆಗಳಷ್ಟು ನೆಲವನ್ನು ಅಳೆದುಕೊಳ್ಳುವ ನೆವದಿಂದ ಲೋಕಗಳನ್ನೆಲ್ಲ ವ್ಯಾಪಿಸಿದನೆಂದು ಹೇಳಿಸಿ

ಕೊಳ್ಳುತ್ತಿರುವ ಹರಿಯೂ ಕೂಡ, ಮೋಸಮಾಡುವ ಸಲುವಾಗಿ ಪ್ರಸಿದ್ಧವಾದ ವಾಮನಾವತಾರವನ್ನು ಮಾಡಿದನು.

**ಛಲನಾರ್ಥಮಿದಂ ರಾಜನ್ವಾಮನತ್ವಂ ನರಾಧಿಪ ॥೨೨॥**

**ಸಂಪ್ರಾಪ್ತಂ ಹರಿಣಾ ಭೂಯೋ ದ್ವಾರಪಾಲತ್ವಮೇವ ಚ ।**
**ಸತ್ಯಾದನ್ಯತರನ್ನಾಸ್ತಿ ಮೂಲಂ ಧರ್ಮಸ್ಯ ಪಾರ್ಥಿವ ॥೨೩॥**

ಅಷ್ಟೇ ಅಲ್ಲದೆ ಆ ಮೋಸವಂಚನೆಯ ಕಾರಣದಿಂದ ವಿಷ್ಣುವೂ ಆ ಬಲಿಚಕ್ರವರ್ತಿಯ ಮನೆಯ ಬಾಗಿಲನ್ನು ಕಾಯುವ ಕೆಲಸವನ್ನೂ ಮಾಡಬೇಕಾಯಿತು. ಆದುದರಿಂದಲೇ ಓ ದೊರೆಯೇ, ಧರ್ಮಕ್ಕೆ ಮೂಲವಾದುದು ಸತ್ಯವೇ ಹೊರತು ಬೇರೆ ಯಾವುದೂ ಅಲ್ಲವು. ಏಕೆಂದರೆ ಸತ್ಯದಲ್ಲಿ ನಡೆದ ಬಲಿಯೇ ಜಯಶಾಲಿಯಾಗಿರುತ್ತಾನೆ.

**ದುಃಸಾಧ್ಯಂ ದೇಹಿನಾ ರಾಜನ್ ಸತ್ಯಂ ಸರ್ವಾತ್ಮನಾ ಕಿಲ ।**
**ಮಾಯಾ ಬಲವತೀ ಭೂಪ ತ್ರಿಗುಣಾ ಬಹುರೂಪಿಣೀ ॥೨೪॥**

ಓ ದೊರೆಯೇ, ದೇಹವನ್ನು ಧರಿಸಿರುವ ಜನಸಾಮಾನ್ಯದವರಿಂದ ಸತ್ಯವಾಗಿಯೇ ನಡೆಯುವುದು, ದುಃಖಕಷ್ಟಗಳಿಂದ ಕೂಡಿರುವುದರಿಂದ, ಖಂಡಿತವಾಗಿಯೂ ಸಾಧ್ಯವಲ್ಲವು. ಏಕೆಂದರೆ, ಸತ್ತ್ವರಜಸ್ತಮೋಗುಣಗಳಿಂದ ಕೂಡಿದ, ಅನೇಕ ರೂಪಗಳನ್ನು ಧರಿಸಿರುವ ಮಾಯೆಯ ಮಹಿಮೆಯಿಂದುಂಟಾಗಿರುವ ಅಜ್ಞಾನವೂ, ಆಕರ್ಷಣೆಯೂ, ಅಶಕ್ತಿಯೂ ತುಂಬ ಪ್ರಬಲವಾದುದು.

**ಯಯೇದಂ ನಿರ್ಮಿತಂ ವಿಶ್ವಂ ಗುಣೈಃ ಶಬಲಿತಂತ್ರಿಭಿಃ ।**
**ತಸ್ಮಾಚ್ಛಲವತಾ ಸತ್ಯಂ ಕುತೋಽವಿದ್ಧಂ ಭವೇನ್ನೃಪ ॥೨೫॥**

ಓ ರಾಜನೆ, ಈ ಪ್ರಪಂಚವು ಸತ್ತ್ವರಜಸ್ತಮಸ್ಸೆಂಬ ಮೂರು ಗುಣಗಳಿಂದ ಕೂಡಿದ್ದಾಗಿ ನಿರ್ಮಿಸಲ್ಪಟ್ಟಿದೆ. ಆದುದರಿಂದಲೇ, ರಜೋಗುಣಕಾರ್ಯವಾದ ಛಲವನ್ನೇ ಸಾಧಿಸುವ ಸಾಮಾನ್ಯಮನುಷ್ಯನು ಸತ್ಯವನ್ನೇ ಆಶ್ರಯಿಸಿರಲು ಹೇಗೆತಾನೇ ಸಾಧ್ಯವಾದೀತು ?

**ಮಿಶ್ರೇಣ ಜನಿತಶ್ಚೈವ ಸ್ಥಿತಿರೇಷಾ ಸನಾತನೀ ।**
**ವೈಖಾನಸಾಶ್ಚ ಮುನಯೋ ನಿಸ್ಸಂಗಾ ನಿಷ್ಪ್ರತಿಗ್ರಹಾಃ ॥೨೬॥**

**ಸತ್ಯಂಯುಕ್ತಾ ಭವಂತ್ಯತ್ರ ವೀತರಾಗಾ ಗತತೃಷಃ ।**
**ದೃಷ್ಟಾಂತದರ್ಶನಾರ್ಥಾಯ ನಿರ್ಮಿತಾಸ್ತೇ ಚ ತಾದೃಶಾಃ ॥೨೭॥**

ರಜೋಗುಣದ ಸಂಪರ್ಕದಿಂದ ಹುಟ್ಟಿದ ಜನಸಾಮಾನ್ಯರ ಸ್ಥಿತಿಗತಿಯೆಲ್ಲವೂ ಎಂದರೆ ನಡೆವಳಿಕೆಗಳೆಲ್ಲವೂ ಅನಾದಿಕಾಲದಿಂದಲೂ ಈರೀತಿಯಾಗಿಯೇ ಇರುತ್ತದೆ. ಈರೀತಿ ಇರುವುದರಿಂದ ಧರ್ಮವೇ ನಷ್ಟವಾಯಿತೆಂದೂ, ಅಥವಾ ಧರ್ಮವೇ ಇಲ್ಲವೆಂದೂ ಯಾರೂ ತಿಳಿಯಕೂಡದು. ಏಕೆಂದರೆ, ಅಂತಹ ಮಾದರಿಯ ಧರ್ಮದ ಪರಿಪಾಲನೆಯ ಉದಾಹರಣೆಗಾಗಿಯೇ ಮತ್ತು ಜನಗಳಿಗೆ ವೇದದಲ್ಲಿ ಹೇಳಿರುವ ಧರ್ಮದ ಆಚರಣೆಯು ಶ್ರೇಯಸ್ಕರವಾದುದೆಂಬ ನಂಬಿಕೆಯನ್ನು ಸ್ಥಿರಪಡಿಸುವುದಕ್ಕಾಗಿಯೇ ಪುರಾಣೇತಿಹಾಸಗಳಲ್ಲಿ ಕೆಲವು ಮುನಿಗಳ ಮತ್ತು ರಾಜರ್ಷಿಗಳ ದೃಷ್ಟಾಂತಗಳನ್ನು ವರ್ಣಿಸಿರುತ್ತದೆ. ಅವರು ದುಷ್ಟಸಂಗವನ್ನು ಬಿಟ್ಟವರೂ, ಯಾವ ದಾನದ್ರವ್ಯಗಳಿಗೂ ಆಶಿಪಡದವರೂ, ರಾಗದ್ವೇಷಗಳನ್ನು ಬಿಟ್ಟವರೂ, ಸತ್ಯವಾದ ಮಾತುಗಳನ್ನೇ ಆಡತಕ್ಕವರೂ ಆದ ಋಷಿಶ್ರೇಷ್ಠರಾಗಿ ವಾಸಿಸುತ್ತಿರುತ್ತಾರೆ. ಅವರೇ ವೇದಾದಿಗಳ ಪ್ರಾಮಾಣ್ಯಕ್ಕೆ ಉದಾಹರಣೆಯಂತಿರುತ್ತಾರೆ. ಆದುದರಿಂದ ವೇದವಾಕ್ಯಗಳನ್ನು ಆಪ್ತವಾಕ್ಯಗಳೆಂದೂ, ಅವನ್ನು ಜನರಿಗೆ ಅನುಗ್ರಹಿಸಿದ ದೇವಿಯು ಎಲ್ಲರಿಗೂ ಪರಮಾಪ್ತಳೆಂದೂ ತಿಳಿದು, ಆಸ್ತಿಕತೆಯಿಂದ ಕೂಡಿದ ಶ್ರದ್ಧೆಯಿಂದ, ಧರ್ಮವನ್ನು ಎಲ್ಲರೂ, ಯಾವಾಗಲೂ ಆಚರಿಸುತ್ತಿರಬೇಕೇ ಹೊರತು, ಧರ್ಮದಲ್ಲೂ ದೇವರಲ್ಲೂ ನಂಬಿಕೆಯನ್ನು ಬಿಡಬಾರದು.

**ಅನ್ಯತ್ಸರ್ವಂ ಶಬಲಿತಂ ಗುಣೈರೇಭಿಸ್ತ್ರಿಭಿರ್ನೃಪ ।**
**ನೈಕಂ ವಾಕ್ಯಂ ಪುರಾಣೇಷು ವೇದೇಷು ನೃಪಸತ್ತಮ ॥೨೮॥**

ಓ ರಾಜೋತ್ತಮನೇ ಕೇಳು=ವೈಖಾನಸರೇ ಮುಂತಾದ ಇಂತಹ ಮಾದರಿಯ ಜನರಲ್ಲದೆ ಇತರರೆಲ್ಲರೂ ರಜೋಗುಣದ ಮತ್ತು ತಮೋಗುಣದ ಸಂಪರ್ಕಪ್ರಭಾವದಿಂದ ಕೂಡಿ ಉತ್ಪನ್ನರಾಗಿದಾರೆ. ಬೇರೆ ಬೇರೆಯಾದ ಮಾರ್ಗಗಳನ್ನು ಅವಲಂಬಿಸಿ ಬರೆದಿರುವುದರಿಂದಲೇ, ವೇದಗಳ ಅರ್ಥವಾದದ ಭಾಗಗಳಲ್ಲೂ ಅವುಗಳ ಅನುವಾದಗಳಾದ ಪುರಾಣಗಳಲ್ಲೂ, ಭಿನ್ನಭಿನ್ನವಾದ ಅಭಿಪ್ರಾಯಗಳು ಕಾಣಬರುತ್ತಿರುವುವು.

**ಧರ್ಮಶಾಸ್ತ್ರೇಷು ಚಾಂಗೇಷು ಸಗುಣೈ ರಚಿತೇಷ್ವಿಹ ।**
**ಸಗುಣಃ ಸಗುಣಂ ಕುರ್ಯಾನ್ನಿರ್ಗುಣೋ ನ ಕರೋತಿ ವೈ ॥೨೯॥**

ಈ ರೀತಿಯಲ್ಲಿ ಸಗುಣರು ಎಂದರೆ, ತ್ರಿಗುಣಗಳಲ್ಲಿ ಸತ್ತ್ವಗುಣವು ಕಡಮೆಯಾಗಿ, ತಮೋಗುಣದ ಸಂಪರ್ಕವಿದ್ದು, ರಜೋಗುಣವು ಮುಂದಾಗಿರುವ ಸ್ವಭಾವವುಳ್ಳ ಇಂತಹ ಜನರು ರಚಿಸಿರುವ, ಅಂತಹ ವಿಷಯಗಳನ್ನು ಅನುವಾದ ಮಾಡಿರುವ ವೇದಭಾಗಗಳಲ್ಲೂ, ವೇದಾಂಗಗಳಲ್ಲೂ ಶಾಸ್ತ್ರಪುರಾಣೇತಿಹಾಸಗಳಲ್ಲೂ ಪರಸ್ಪರ ವಿರುದ್ಧವಾಗಿರುವಂತೆ ತೋರುವ ಅಭಿಪ್ರಾಯಗಳೂ ಸಂಗತಿಗಳೂ ಕಾಣಬರುತ್ತವೆ. ಇಂತಹ ವಿರೋಧವೂ ಭೇದವೂ ಆ ಜನರ ಸ್ವಭಾವವನ್ನು ತಿಳಿಸುತ್ತದೆ ಎಂದು ತಿಳಿಯಬೇಕೇ ಹೊರತು, ದೇವರೇ ಇಲ್ಲವೆಂದಾಗಲಿ, ಧರ್ಮಾಚರಣೆಯು ಎಲ್ಲರಿಗೂ ಶ್ರೇಯಸ್ಕರವಲ್ಲವೆಂದಾಗಲಿ ತಪ್ಪಾಗಿ ತಿಳಿದುಕೊಳ್ಳಬಾರದು. ಏಕೆಂದರೆ, ಸಗುಣದಿಂದ ಉಂಟಾದ ಕಾರ್ಯವು ಸಗುಣವಾಗಿಯೇ ಇರುತ್ತದೆ. ಆದರೆ, ನಿರ್ಗುಣವಾದುದು ಎಂದರೆ, ಗುಣತ್ರಯರೂಪವಾದ ಮಾಯೆಯ ಪ್ರಭಾವಕ್ಕೆ ಅಡಿಯಾಳಾಗದೇ ಇರುವ ಸ್ವಭಾವಗಳೂ, ತತ್ತ್ವವೂ ಈರೀತಿಯಾದ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸುವುದಿಲ್ಲವು.

**ಗುಣಾಸ್ತೇ ಮಿಶ್ರಿತಾಃ ಸರ್ವೇ ನ ಪೃಥಗ್ಭಾವಸಂಗತಾಃ ।**
**ನಿರ್ವ್ಯಲೀಕೇ ಸ್ಥಿರೇ ಧರ್ಮೇ ಮತಿಃ ಕಸ್ಯಾಪಿ ನ ಸ್ಥಿರಾ ॥೩೦॥**

ರಜಸ್ತಮೋಗುಣಗಳು ಮಿಶ್ರವಾಗಿರುವುದರಿಂದಲೂ ಮತ್ತು ಆ ರಜಸ್ತಮೋಗುಣಗಳ ಪ್ರಭಾವಕ್ಕೆ ಒಳಗಾಗದೆ ಅವನ್ನು ಮೀರಿ ಅವನ್ನು ತಮ್ಮಲ್ಲಿ ವ್ಯಾಪಿಸದಂತೆ ದೂರವಾಗಿರುವಂತೆ ಮಾಡಲಾರದೆ ಇರುವುದರಿಂದಲೂ, ಪವಿತ್ರವಾದ, ಶ್ರೇಯಸ್ಸಿಗೆ ಕಾರಣವಾದ ಧರ್ಮದಲ್ಲಿ ಅಂತಹ ಸ್ವಭಾವವುಳ್ಳ ಯಾರಿಗೂ ದೃಢವಾದ ಬುದ್ಧಿಯು ಉಂಟಾಗಿ ನೆಲಸಿ ಇರುವುದಿಲ್ಲವು.

**ಭವೋದ್ಭವೇ ಮಹಾರಾಜ ಮಾಯಯಾ ಮೋಹಿತಸ್ಯ ವೈ ।**
**ಇಂದ್ರಿಯಾಣಿ ಪ್ರಮಾಥೀನಿ ತದಾಸಕ್ತಂ ಮನಸ್ತಥಾ ॥೩೧॥**

ಓ ರಾಜನೇ, ಈ ಪ್ರಪಂಚದ ಸಂಸ್ಕಾರದಲ್ಲಿ ಜೀವರು ಉಂಟಾದಾಗಿನಿಂದಲೂ ಎಂದರೆ ಅನಾದಿಕಾಲದಿಂದಲೂ ವ್ಯಾಪಿಯಾಗಿರುವ ಈ ಮಾಯೆಯಿಂದ ಎಲ್ಲವೂ ಆವರಿಸಲ್ಪಟ್ಟಿರುವುದರಿಂದ ಇಂದ್ರಿಯಗಳೂ ಕೂಡ ಹಾಗೆಯೇ ಅದರಿಂದ ಆವರಿಸಲ್ಪಟ್ಟವಾಗಿರುತ್ತವಾದುದರಿಂದ, ಅವೂ ಮನಸ್ಸನ್ನು ಕಲಕಿ ಸ್ಥಿರವಾದ ಧರ್ಮದಲ್ಲಿ ನಡೆಯುವಂತೆ ಬಿಡುವುದಿಲ್ಲವು; ಅಲ್ಲದೆ ಅದನ್ನು ಇಂದ್ರಿಯಗಳ ವಿಷಯಗಳಲ್ಲಿಯೇ ಆದರದೊಡನೆ ಪ್ರವರ್ತಿಸುತ್ತಿರುವಂತೆ ಮಾಡುತ್ತವೆ.

**ಕರೋತಿ ವಿವಿಧಾನ್ಭಾವಾನ್ಗುಣೈಸ್ತ್ರೈಃ ಪ್ರೇರಿತೋ ಭೃಶಂ ।**
**ಬ್ರಹ್ಮಾದಿಸ್ತಂಬಪರ್ಯಂತಾಃ ಪ್ರಾಣಿನಃ ಸ್ಥಿರಜಂಗಮಾಃ ॥೩೨॥**

ಆ ರಜೋಗುಣಾದಿಗಳಿಂದ ಪ್ರೇರಿಸಲ್ಪಟ್ಟಿರುವುದರಿಂದ ಆ ಬ್ರಹ್ಮನಿಂದ ಮೊದಲುಗೊಂಡು ಒಂದು ಹುಲ್ಲುಕಡ್ಡಿಯವರೆಗೂ ಇರುವ ಎಲ್ಲ ಸ್ಥಿರ ಮತ್ತು ಚರ ಪ್ರಾಣಿಗಳನ್ನು ಆ ಮಾಯೆಯು ಅನೇಕವಾದ ವಿಷಯಗಳಲ್ಲಿ ಆಶೆ ಮುಂತಾದ ಭಾವಗಳನ್ನು ಹೊಂದುವಂತೆ ಮಾಡುತ್ತದೆ. ಹೀಗೆ ಎಲ್ಲವೂ ಕಾಮ-ಕ್ರೋಧ-ಲೋಭ-ಮೋಹಗಳಿಗೆ ಅಧೀನವಾಗಿ ಪ್ರವರ್ತಿಸುತ್ತಿರುತ್ತದೆ.

**ಸರ್ವೇ ಮಾಯಾವಶಾ ರಾಜನ್ ಸಾऽನುಕ್ರೀಡತಿ ತೈರಿಹ ।**
**ಸರ್ವಾನ್ಸ್ವೈ ಮೋಹಯತ್ಯೇಷಾ ವಿಕುರ್ವತ್ಯನಿಶಂ ಜಗತ್ ॥೩೩॥**

ಓ ದೊರೆಯೇ, ಎಲ್ಲವೂ ಮಾಯೆಯ ಅಧೀನವೇ. ಅದು ನಡೆಸಿದಂತೆ ಈ ಪ್ರಪಂಚವು ನಡೆಯುತ್ತದೆ. ಹೀಗೆ ಆ ಮಾಯೆಯು ಎಲ್ಲ ಪ್ರಾಣಿಗಳನ್ನೂ ಆಟವಾಡಿಸುತ್ತಿರುತ್ತದೆ. ಯಾವಾಗಲೂ ಈ ಮಾಯೆಯು ಈ ಪ್ರಪಂಚದಲ್ಲಿ ಪ್ರಾಣಿಗಳೆಲ್ಲವನ್ನೂ ಭ್ರಾಂತಿಯಲ್ಲಿ ಮುಳುಗುವಂತೆ ನಾನಾಬಗೆಯ ವಿಕಾರಗಳುಳ್ಳಂತೆ ಮಾಡುತ್ತದೆ.

**ಅಸಕ್ತ್ಯೋ ಜಾಯತೇ ರಾಜನ್ಕಾರ್ಯವಾನ್ಪ್ರಥಮಂ ನರಃ ।**
**ಇಂದ್ರಿಯಾರ್ಥಾಂಶ್ಚಿಂತಯಾನೋ ನ ಪ್ರಾಪ್ನೋತಿ ಯದಾ ನರಃ ॥೩೪॥**

ಓ ದೊರೆಯೆ, ಹೀಗೆ ಆಶೆಯ ಬಲೆಗೆ ಸಿಕ್ಕಿದ ಮಾನವನು ತನ್ನ ಕಾರ್ಯವನ್ನು ನೆರವೇರಿಸಿಕೊಳ್ಳಲು ಆತುರಪಡುತ್ತಾನೆ. ಮೊದಲು ಇಂದ್ರಿಯಗಳ ವಿಷಯಗಳನ್ನು ಆಶಿಸಿ ಅವನ್ನು ಹೇಗೆ ಪಡೆಯಬೇಕೆಂದು ತೀವ್ರವಾಗಿ ಆಲೋಚಿಸುತ್ತಾ ಅವನ್ನು ಋಜುವಾದ ಮಾರ್ಗದಲ್ಲಿ, ನ್ಯಾಯವಾದ ರೀತಿಯಲ್ಲಿ ಪಡೆಯಲು ಆಗಲಾರದೆಂದು ತಿಳಿಯಬಂದರೆ, ಆ ಆಶೆಯನ್ನು ತಡೆಯಲಾರದೆ ಅವನು ಸುಳ್ಳನ್ನು ಹೇಳುವುದು, ಮೋಸವನ್ನು ಮಾಡುವುದೇ ಮುಂತಾದ ರೀತಿಯನ್ನು ಅವಲಂಬಿಸಿಯಾದರೂ ತನ್ನ ಆಶೆಯನ್ನು ತೀರಿಸಿಕೊಳ್ಳಲು ಪ್ರವರ್ತಿಸುತ್ತಾನೆ.

**ತದರ್ಥಂ ಛಲಮಾದತ್ತೇ ಛಲಾತ್ಪಾಪೇ ಪ್ರವರ್ತತೇ ।**
**ಕಾಮಃ ಕ್ರೋಧಶ್ಚ ಲೋಭಶ್ಚ ವೈರಿಣೋ ಬಲವತ್ತರಾಃ ॥೩೫**

ಓ ರಾಜನೇ, ಅದಕ್ಕಾಗಿ ಎಂದರೆ, ತನ್ನ ಸ್ವಾರ್ಥಸಾಧನೆಗಾಗಿ ಯಾವುದಾದರೂ ನೆಪವನ್ನು ಮಾಡಿಕೊಂಡು ಮೋಸದ ಮಾರ್ಗವನ್ನೂ ಆಶ್ರಯಿಸುತ್ತಾನೆ. ಆ ವಂಚನೆಯಿಂದ ಪಾಪದ ಆಚರಣೆಯಲ್ಲಿ ಪ್ರವರ್ತಿಸುತ್ತಾನೆ. ಈ ಕಾಮಕ್ರೋಧ ಲೋಭ ಎಂಬ ಭಾವಗಳು ಅವನಿಗೆ ಬಹಳ ಬಲವಾದ ಶತ್ರುಗಳಾಗಿ ಪರಿಣಮಿಸುತ್ತವೆ.

**ಕೃತಾಕೃತಂ ನ ಜಾನಂತಿ ಪ್ರಾಣಿನಸ್ತದ್ವಶಂ ಗತಾಃ ।**
**ವಿಭವೇ ಸತ್ಯಹಂಕಾರಃ ಪ್ರಬಲಃ ಪ್ರಭವತ್ಯಪಿ ॥೩೬॥**
**ಅಹಂಕಾರಾದ್ಭವೇನ್ಮೋಹೋ ಮೋಹಾನ್ಮರಣಮೇವ ಚ ।**

ಓ ದೊರೆಯೇ, ಕಾಮಕ್ರೋಧಾದಿಗಳ ವಶಕ್ಕೆ ಸಿಕ್ಕಿದವರು ತಾವು ಮಾಡಬಾರದ ಕಾರ್ಯವನ್ನು ಮಾಡುತ್ತಿರುವುದನ್ನಾಗಲಿ, ಮಾಡಬೇಕಾದುದನ್ನು ಮಾಡದೆ ಬಿಡುತ್ತಿರುವುದನ್ನಾಗಲಿ ತಿಳಿಯುವವರಾಗುವುದಿಲ್ಲ. ಮಾಯೆಯಿಂದ ಆವರಿಸಲ್ಪಟ್ಟಿರುವಂಥವರು, ಹಣವಿರಲು, ಐಶ್ವರ್ಯವನ್ನು ಪಡೆದಿರಲು, ಅಹಂಕಾರದಿಂದ ಪರವಶರಾಗಿ ಮೆರೆಯುತ್ತಾರೆ. ಆ ಅಹಂಕಾರದಿಂದ ಮೋಹವು ಎಂದರೆ ಅಜ್ಞಾನವೂ ತಪ್ಪುತಿಳಿವಳಿಕೆಯೂ ಉಂಟಾಗುತ್ತವೆ. ಮೋಹದಿಂದ ಮರಣವೂ ಸಂಭವಿಸುತ್ತದೆ.

**ಸಂಕಲ್ಪಾ ಬಹವಸ್ತತ್ರ ವಿಕಲ್ಪಾಃ ಪ್ರಭವಂತಿ ಚ ॥೩೭॥**
**ಈರ್ಷ್ಯಾಽಸೂಯಾ ತಥಾ ದ್ವೇಷಃ ಪ್ರಾದುರ್ಭವತಿ ಚೇತಸಿ ।**
**ಆಶಾ ತೃಷ್ಣಾ ತಥಾ ದೈನ್ಯಂ ದಂಭೋಽಧರ್ಮಮತಿಸ್ತಥಾ ॥೩೮॥**
**ಪ್ರಾಣಿನಾಂ ಪ್ರಭವಂತ್ಯೇತೇ ಭಾವಾ ಮೋಹಸಮುದ್ಭವಾಃ ।**

ಮಾಯೆಯಿಂದ ಆವರಿಸಲ್ಪಟ್ಟಿರುವವರಿಗೆ ಮನಸ್ಸಿನಲ್ಲಿ ಅನೇಕ ಸಂಕಲ್ಪಗಳು ಎಂದರೆ ಇಚ್ಛೆಗಳು ಹುಟ್ಟುತ್ತವೆ. ಅದರಿಂದ ನಾನಾಬಗೆಯ ಭ್ರಾಂತಿವಿಕಾರಗಳೂ ಆಗುತ್ತವೆ. ಹೇಗೆಂದರೆ, ಇತರರ ಗುಣಗಳಲ್ಲಿ ದೋಷಾರೋಪಣೆ, ಇತರ ಉತ್ಕರ್ಷವನ್ನು ಸಹಿಸದಿರುವಿಕೆ, ದ್ವೇಷ, ಮಿತಿಮೀರಿದ ಆಶೆ, ದುರಾಶೆ, ದೀನಸ್ವಭಾವ, ಧಾರ್ಮಿಕನೆಂದು ಪ್ರಕಟನೆಮಾಡಿಕೊಳ್ಳುವಿಕೆ, ಅಧರ್ಮದಲ್ಲಿ ಬುದ್ಧಿ, ಈ ಮೊದಲಾದ ಕೆಟ್ಟ ಭಾವನೆಗಳೂ ಮೋಹದಿಂದ ಉಂಟಾಗುತ್ತವೆ. ಹೀಗೆ ಅಹಂಕಾರವು ಬಹು ಕೆಟ್ಟ ಭಾವವು. ಅದನ್ನು ಬಿಟ್ಟು ವಿವೇಕಿಯಾದವನು ವೈರಾಗ್ಯದಲ್ಲಿ ಮನಸ್ಸನ್ನಿಟ್ಟು ಕಾರ್ಯಪರನಾಗಿರಬೇಕು ಎಂದು ತಾತ್ಪರ್ಯವು.

**ಯಜ್ಞದಾನಾನಿ ತೀರ್ಥಾನಿ ವ್ರತಾನಿ ನಿಯಮಾಸ್ತಥಾ ॥೩೯॥**
**ಅಹಂಕಾರಾಭಿಭೂತಸ್ತು ಕರೋತಿ ಪುರುಷೋಽನ್ವಹಂ ।**
**ಅಹಂಭಾವಕೃತಂ ಸರ್ವಂ ಪ್ರಭವೇದ್ವೈನ ಶೌಚವತ್ ॥೪೦॥**

ಅಹಂಕಾರದಿಂದ ಆವರಿಸಲ್ಪಟ್ಟಿರುವ ಮನುಷ್ಯನು, ಪಂಚಮಹಾಯಜ್ಞಗಳು, ದಾನಗಳು, ತೀರ್ಥಸ್ನಾನಗಳು, ವ್ರತಗಳು ಮುಂತಾದ ನಿಯಮಗಳನ್ನು ಮಾಡುವು ದುಂಟು. ಆದರೆ ಅಂಥವನು ಅಹಂಕಾರದಿಂದ ಕೂಡಿದವನಾಗಿ ಅವುಗಳನ್ನು ಮಾಡುವುದರಿಂದ ಅವುಗಳೆಲ್ಲವೂ ಪರಿಶುದ್ಧಗಳಾಗಿ ಇರುವುದಿಲ್ಲ.

**ರಾಗಲೋಭಾತ್ಕೃತಂ ಕರ್ಮ ಸರ್ವಾಂಗ ಶುದ್ಧಿವರ್ಜಿತಂ ।**
**ಪ್ರಥಮಂ ದ್ರವ್ಯಶುದ್ಧಿಶ್ಚ ದ್ರಷ್ಟವ್ಯಾ ವಿಬುಧೈಃ ಕಿಲ ॥೪೧॥**

ಈರೀತಿಯಲ್ಲಿ ಕಾಮ ಲೋಭ ಎಂದರೆ ಅನುಚಿತವಾದ, ಆವಶ್ಯಕವಾದ ವೆಚ್ಚವನ್ನೂ ಶಕ್ತಿ ಇದ್ದರೂ ಮಾಡದಿರುವಿಕೆ ಮುಂತಾದ ಭಾವಗಳಿಂದ ಕೂಡಿ ಮಾಡಿದ ಕೆಲಸವು ಎಲ್ಲ ಭಾಗದಲ್ಲೂ ಅಪರಿಶುದ್ಧವಾಗಿರುವುದರಿಂದ ಇದನ್ನು ನಿವಾರಿ ಸಲು ವಿವೇಕಿಯಾದ ಮನುಷ್ಯನು ಮೊದಲು ಅಹಂಕಾರಕ್ಕೆ ಮೂಲಭೂತವಾದ ದ್ರವ್ಯಶುದ್ಧಿಯನ್ನು ಕಾಪಾಡಿಕೊಳ್ಳುವುದು ಆವಶ್ಯಕವು. ಏಕೆಂದರೆ,

**ಅದ್ರೋಹೇಣಾರ್ಜಿತಂ ದ್ರವ್ಯಂ ಪ್ರಶಸ್ತಂ ಧರ್ಮಕರ್ಮಣಿ ।**
**ದ್ರೋಹಾರ್ಜಿತೇನ ದ್ರವ್ಯೇಣ ಯತ್ಕರೋತಿ ಶುಭಂ ನರಃ ॥೪೨॥**
**ವಿಪರೀತಂ ಭವೇತ್ತತ್ತು ಫಲಕಾಲೇ ನೃಪೋತ್ತಮ ।**

ಓ ರಾಜಶ್ರೇಷ್ಠನೇ, ಧರ್ಮವಾದ ಕೆಲಸಗಳನ್ನು ಮಾಡಲು ದ್ರೋಹವನ್ನು ಮಾಡದೆ ನ್ಯಾಯವಾಗಿ ಸಂಪಾದಿಸಿದ ಹಣವೇ ಶ್ರೇಷ್ಠವಾದುದು. ಹಾಗಿಲ್ಲದೆ, ದ್ರೋಹದಿಂದ ಸಂಪಾದಿಸಿದ ಹಣದಿಂದ ಯಾವ ಮನುಷ್ಯನು ಒಳ್ಳೆಯ ಕೆಲಸ ಗಳನ್ನು ಮಾಡುವನೋ ಅವನಿಗೆ ಆ ಧರ್ಮಕಾರ್ಯವು ಫಲಕಾಲದಲ್ಲಿ ದುಷ್ಫಲವನ್ನೇ ಕೊಡುವುದು.

**ಮನೋಽತಿನಿರ್ಮಲಂ ಹ್ಯಸ್ಯ ಸ ಸಮ್ಯಕ್ಫಲಭಾಗ್ಭವೇತ್ ॥೪೩॥**
**ತಸ್ಮಿನ್ವಿಕಾರಯುಕ್ತೇ ತು ನ ಯಥಾರ್ಥಫಲಂ ಲಭೇತ್ ।**

ಆದುದರಿಂದ ಧರ್ಮಕಾರ್ಯಗಳನ್ನು ಮಾಡುವುದರಲ್ಲಿ ಮಾನವನು ನಿರ್ಮಲವಾದ ಮನಸ್ಸಿನಿಂದ ಕೂಡಿದವನಾಗಿರಬೇಕು. ಹಾಗೆ ನಿರ್ಮಲಮನಸ್ಸಿನಿಂದ ಕೂಡಿದವನಾಗದೆ ಮನಸ್ಸಿನಲ್ಲಿ ದೋಷವಿದ್ದಲ್ಲಿ ಅವನಿಗೆ ಸರಿಯಾಗಿ ಗೊತ್ತಾದ ಫಲವು ಉಂಟಾಗುವುದಿಲ್ಲವು.

**ಕರ್ತಾರಃ ಕರ್ಮಣಾಂ ಸರ್ವೇ ಆಚಾರ್ಯಋತ್ವಿಜಾದಯಃ ॥೪೪॥**
**ಸ್ಯುಸ್ತೇ ವಿಶುದ್ಧಮನಸಸ್ತದಾ ಪೂರ್ಣಂ ಭವೇತ್ಫಲಂ ।**

ಹಿಂದಿನ ಶ್ಲೋಕದಲ್ಲಿ ಮನಶ್ಶುದ್ಧಿಯ ಫಲವನ್ನು ತಿಳಿಯಹೇಳಿ ಈಗ ಕರ್ಮಶುದ್ಧಿಯ ಫಲವನ್ನು ತಿಳಿಸುತ್ತಾರೆ. ಧರ್ಮಕಾರ್ಯವನ್ನು ಮಾಡುವವರೂ ಮತ್ತು ಅದನ್ನು ಮಾಡಿಸುವ ಆಚಾರ್ಯ ಋತ್ವಿಜರು ಮುಂತಾದವರೆಲ್ಲರೂ ಶುದ್ಧಮನಸ್ಸಿನಿಂದ ಕೂಡಿದವರಾಗಿದ್ದಲ್ಲಿ ಮಾತ್ರ ಅಂತಹ ಧರ್ಮಕಾರ್ಯಕ್ಕೆ ಸಂಪೂರ್ಣವಾದ ಫಲವು ದೊರೆಯುವುದು.

**ದೇಶಕಾಲಕ್ರಿಯಾದ್ರವ್ಯಕರ್ತ್ಯಾಣಾಂ ಶುದ್ಧತಾ ಯದಿ ॥೪೫॥**
**ಮಂತ್ರಾಣಾಂ ಚ ತದಾ ಪೂರ್ಣಂ ಕರ್ಮಣಾಂ ಫಲಮಶ್ನುತೇ ।**

ಮಾಡುವ ಧರ್ಮಕಾರ್ಯದ, ಕಾಲ, ದೇಶ, ಕಾರ್ಯಾಚರಣೆಯ ರೀತಿನೀತಿಗಳು, ಮಾಡುವವರ ಪಾರಿಶುದ್ಧ್ಯ, ಮಂತ್ರಗಳು ಸ್ವರಲೋಪಾದಿದೋಷಗಳಿಲ್ಲದೆ ಪರಿಶುದ್ಧವಾಗಿರುಕೆ, ಇವುಗಳು ಇದ್ದಲ್ಲಿ ಮಾತ್ರ ಆಗ ಸಂಪೂರ್ಣಫಲವು ದೊರಕುವುದು.

**ಶತ್ರೂಣಾಂ ನಾಶಮುದ್ದಿಶ್ಯ ಸ್ವವೃದ್ಧಿಂ ಪರಮಾಂ ತಥಾ ॥೪೬॥**
**ಕರೋತಿ ಸುಕೃತಂ ತದ್ವದ್ವಿಪರೀತಂ ಭವೇತ್ಕಿಲ ।**

ಹಾಗಿಲ್ಲದೆ ತನ್ನ ಅತಿಯಾದ ಮೇಲ್ಮೆಗಾಗಿಯೂ, ಶತ್ರುಗಳ ನಾಶಕ್ಕಾಗಿಯೂ ಧರ್ಮಕಾರ್ಯವನ್ನು ಮಾಡುವುದಾದರೆ, ಅಂತಹ ಧರ್ಮಕಾರ್ಯವೂ ವಿಪರೀತ ಎಂದರೆ ವಿರುದ್ಧಫಲವನ್ನುಂಟುಮಾಡುತ್ತದೆ. ಆದುದರಿಂದ ಶತ್ರುನಾಶಕ್ಕಾಗಿಯೂ ಮಾಡುವ ಕರ್ಮವೂ ದುಷ್ಟವಾದುದು ಮತ್ತು ಅಂತಹುದನ್ನು ಮಾಡಬಾರದು ಎಂದು ತಾತ್ಪರ್ಯವು.

**ಸ್ವಾರ್ಥಸಕ್ತಃ ಪುಮಾನ್ನಿತ್ಯಂ ನ ಜಾನಾತಿ ಶುಭಾಶುಭಂ ॥೪೭॥**
**ದೈವಾಧೀನಃ ಸದಾ ಕುರ್ಯಾತ್ಪಾಪಮೇವ ನ ಸತ್ಕೃತಂ ।**

ಓ ದೊರೆಯೇ, ತನ್ನ ಪ್ರಯೋಜನವನ್ನೇ ಸಾಧಿಸುವ ಕೆಲಸದಲ್ಲೇ ಮಗ್ನನಾಗಿರುವ ಪುರುಷನು, ಇದು ಕೆಟ್ಟದ್ದು, ಇದು ಒಳ್ಳೆಯದು ಎಂಬುದನ್ನೇ ತಿಳಿಯುವುದಿಲ್ಲವು. ಏಕೆಂದರೆ, ಎಲ್ಲರೂ ಸಾಮಾನ್ಯವಾಗಿ ಪ್ರಾರಬ್ಧಕರ್ಮಕ್ಕೆ ಅಧೀನರಾಗಿರುತ್ತಾರೆ. ಆದುದರಿಂದ ನಾವು ಯಾವಾಗಲೂ ಪುಣ್ಯಕರ್ಮವನ್ನೇ ಮಾಡಬೇಕೇ ಹೊರತು, ಪಾಪದಿಂದ ಕೂಡಿದ ಕಾರ್ಯವನ್ನು ಮಾಡಬಾರದು. ಈ ರೀತಿಯಲ್ಲಿ ಮಾನವರು ಸ್ವಾರ್ಥಪರರಾಗಿಯೂ ಧರ್ಮವನ್ನು ಆಚರಿಸಬಾರದು. ಮತ್ತೇನೆಂದರೆ, ಈಶ್ವರಪ್ರೀತಿಗೆಂದು ನಿಷ್ಕಾಮಕರ್ಮಾಚರಣೆಯನ್ನೇ ಯಾವಾಗಲೂ ನೆರವೇರಿಸುತ್ತಿರಬೇಕು.

**ಪ್ರಾಜಾಪತ್ಯಾಃ ಸುರಾಃ ಸರ್ವೇ ಹ್ಯಸುರಾಶ್ಚ ತದುದ್ಭವಾಃ ॥೪೮॥**
**ಸರ್ವೇ ತೇ ಸ್ವಾರ್ಥನಿರತಾಃ ಪರಸ್ಪರವಿರೋಧಿನಃ ।**

ಬ್ರಹ್ಮನಿಂದ ಮೊದಲಾಗಿ ಉಂಟಾಗಿರುವ ಈ ಎಲ್ಲ ದೇವತೆಗಳೂ, ರಾಕ್ಷಸರೂ ಕೂಡ ಈ ಸ್ವಾರ್ಥಪರತೆ, ಅಹಂಕಾರ ಮುಂತಾದ ಪಾಪದಿಂದ ಜನಿಸಿದವರೇ ಆಗಿರುತ್ತಾರೆ. ಆದುದರಿಂದ ಅವರೆಲ್ಲರೂ ತಮ್ಮ ಆಶೆಗಳನ್ನು ಪೂರಯಿಸಿಕೊಳ್ಳುವುದರಲ್ಲೇ ಆಸಕ್ತರಾಗಿರುತ್ತಾ ಪರಸ್ಪರವಾಗಿ ಪ್ರತಿಭಟಿಸುತ್ತಾ ಹೋರಾಡುತ್ತಿರುತ್ತಾರೆ.

**ಸತ್ತ್ವೋದ್ಭವಾಃ ಸುರಾಃ ಸರ್ವೇಽಪ್ಯುಕ್ತಾ ವೇದೇಷು ಮಾನುಷಾಃ ॥೪೯॥**
**ರಜೋದ್ಭವಾಸ್ತಾಮಸಾಸ್ತು ತಿರ್ಯಂಚಃ ಪರಿಕೀರ್ತಿತಾಃ ।**

ಸತ್ತ್ವಗುಣದ ಸ್ವಲ್ಪ ಹೆಚ್ಚಿಗೆಯಿಂದ ದೇವತೆಗಳೂ, ರಜೋಗುಣದ ಆಧಿಕ್ಯದಿಂದ ಮನುಷ್ಯರೂ, ತಾಮಸಗುಣದ ಪ್ರಾಧಾನ್ಯದಿಂದ ಪಶುಪಕ್ಷಿ ಮೊದಲಾದ ತಿರ್ಯಗ್ಜಂತುಗಳೂ ಉದ್ಭವಿಸಿವೆ, ಎಂದು ವೇದಶಾಸ್ತ್ರಗಳಲ್ಲಿ ಪ್ರಸಿದ್ಧಿ ಇರುತ್ತದೆ.

**ಸತ್ತ್ವೋದ್ಭವಾನಾಂ ತ್ರೈವೈರಂ ಪರಸ್ಪರಮನಾರತಂ ॥೫೦॥**
**ತಿರಶ್ಚಾಮತ್ರ ಕಿಂ ಚಿತ್ರಂ ಜಾತಿವೈರಸಮುದ್ಭವೇ ।**

ಆದುದರಿಂದ ಓ ದೊರೆಯೇ ಸದಾ ಶಾಂತರೀತಿಯಿಂದಿರಬೇಕಾದ ಸಾತ್ತ್ವಿಕಗುಣದಿಂದ ಕೂಡಿರುವ ದೇವತೆಗಳೂ ಕೂಡ ಯಾವಾಗಲೂ ಎಡೆಬಿಡದೆ ರಾಕ್ಷಸರೊಡನೆ ದ್ವೇಷಪ್ರತೀಕಾರದಲ್ಲಿ ನಿರತರಾಗಿರುವರು. ಅಂತಹದರಲ್ಲಿ ತಾಮಸಗುಣದಿಂದ ಕೂಡಿದ ಪ್ರಾಣಿಗಳಲ್ಲಿ ತಮ್ಮ ಜಾತಿಯವರಲ್ಲಿಯೇ ಪರಸ್ಪರವಾಗಿ ವೈರವಿರುವುದರಲ್ಲಿ ಆಶ್ಚರ್ಯವೇನು ?

**ಸದಾ ದ್ರೋಹಪರಾ ದೇವಾಸ್ತಪೋವಿಘ್ನಕರಾಸ್ತಥಾ ॥೫೦॥**
**ಅಸಂತುಷ್ಟಾ ದ್ವೇಷಪರಾಃ ಪರಸ್ಪರವಿರೋಧಿನಃ ।**

ಆದುದರಿಂದ ಈ ದೇವತೆಗಳೂ ಯಾವಾಗಲೂ ತಮ್ಮ ಶತ್ರುಗಳು ಮುಂತಾ ವವರಿಗೆ ದ್ರೋಹವನ್ನು ಎಣಿಸುವವರೂ ಮತ್ತು ತಮ್ಮಂತೆ ಉತ್ಕರ್ಷವನ್ನು ಪಡೆಯುವ ಉದ್ದೇಶದಿಂದ ತಪಸ್ಸು ಮುಂತಾದ ಧರ್ಮಾಚರಣೆಯಲ್ಲಿ ತೊಡಗಿರು ವವರ ತಪಸ್ಸಿಗೆ ಈರ್ಷ್ಯಾಸೂಯೆಗಳಿಂದ ವಿಘ್ನವನ್ನು ಉಂಟುಮಾಡುವವರೂ ಆಗಿರುತ್ತಾರೆ. ಆದುದರಿಂದ ಓ ದೊರೆಯೇ, ನಿಮ್ಮ ಪೂರ್ವಜರಾದ ದೊರೆಗಳೂ ದೇವತೆಗಳೂ ಏಕೆ ಅಕಾರ್ಯವನ್ನು ಮಾಡಿದರೆಂದು ಕೇಳಬೇಕಾಗಿಲ್ಲವು. ಅದಕ್ಕೆ ಅವರ ಅಹಂಕಾರ ಮುಂತಾದ ದೋಷಗಳು ಕಾರಣಗಳಾಗಿವೆ.

**ಅಹಂಕಾರಸಮುದ್ಭೂತಃ ಸಂಸಾರೋಽಯಂ ಯತೋಽನೃಪ ।**
**ರಾಗದ್ವೇಷವಿಹೀನಸ್ತು ಸ ಕಥಂ ಜಾಯತೇ ನೃಪ ॥೫೨॥**

ಓ ದೊರೆಯೇ, ಈ ಸಂಸಾರವೆಲ್ಲವೂ ಎಂದರೆ ಈ ಪ್ರಪಂಚದಲ್ಲಿರುವ ಪ್ರಾಣಿಗಳ ವ್ಯವಹಾರವೆಲ್ಲವೂ ಒಟ್ಟಿನಲ್ಲಿ ಆ ಮಾಯೆಯ ಮೋಹದ ಪರಿಣಾಮವಾದ ಅಹಂಕಾರವೆಂಬ ಮೂಲಕಾರಣದಿಂದ ಉಂಟಾಗಿರುತ್ತದೆ. ಆದುದರಿಂದ ಓ ರಾಜನೇ, ಹೀಗೆ ಮಾಯಾಮೋಹಕ್ಕೆ ಒಳಗಾಗಿ ಉಂಟಾಗಿರುವ ಮಾನವರೂ ಹೇಗೆತಾನೇ ರಾಗದ್ವೇಷಾದಿಗಳಿಲ್ಲದವರಾಗಿದ್ದಾರು? ಆದುದರಿಂದ ಈ ದುಃಖದಿಂದ ಪಾರಾಗ ಬೇಕೆಂದು ಅಪೇಕ್ಷಿಸುವವರೆಲ್ಲರೂ–ದೇವತೆಗಳೂ, ಮಾನವರೂ ಯಾರೇ ಆಗಿರಲಿ, ಅವರೆಲ್ಲರೂ- ಯಾವಾಗಲೂ ಎಲ್ಲಕ್ಕೂ ಪ್ರೇರಕಳಾದ, ಮಹಾಮಾಯಾಸ್ವರೂಪಳೂ, ಪರಾಶಕ್ತಿಸ್ವರೂಪಳೂ, ಮಾಯಾವಿಶಿಷ್ಟಬ್ರಹ್ಮಸ್ವರೂಪಿಣಿಯೂ ಆಗಿರುವ ಆ ಷಡ್ಗು ಣೈಶ್ವರ್ಯಸಂಪನ್ನಳಾದ ದೇವಿಯನ್ನೇ ಧ್ಯಾನೋಪಾಸನೆಗಳಿಂದ ಆರಾಧಿಸುತ್ತಿರ ಬೇಕು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ಚತುರ್ಥೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಪಂಚಮೋಽಧ್ಯಾಯಃ ||

### ಐದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಅಥ ಕಿಂ ಬಹುನೋಕ್ತೇನ ಸಂಸಾರೇಽಸ್ಮಿನ್ನೃಪೋತ್ತಮ ।**
**ಧರ್ಮಾತ್ಮಾ ದ್ರೋಹಬುದ್ಧಿಸ್ತು ಕಶ್ಚಿದ್ಭವತಿ ಕರ್ಹಿಚಿತ್ ॥೧॥**

ವ್ಯಾಸಮಹರ್ಷಿಯು ಹೇಳಿದನು—ಓ ರಾಜೇಂದ್ರನೇ ಕೇಳು. ಹೆಚ್ಚು ಹೇಳುವುದರಿಂದ ಏನು ಪ್ರಯೋಜನವು? ಈ ಸಂಸಾರದಲ್ಲಿ ಧರ್ಮಾತ್ಮನೂ, ದ್ರೋಹಬುದ್ಧಿ ಇಲ್ಲದವನೂ ಶುದ್ಧಸತ್ತ್ವನೂ ಆದ ಮಾನವನು ಎಂದೋ ಒಬ್ಬನು ಎಲ್ಲಿಯೋ ಹುಟ್ಟುವನು.

**ರಾಗದ್ವೇಷಾವೃತಂ ವಿಶ್ವಂ ಸರ್ವಂ ಸ್ಥಾವರಜಂಗಮಂ ।**
**ಆದ್ಯೇ ಯುಗೇಽಪಿ ರಾಜೇಂದ್ರ ಕಿಮುದ್ಯ ಕಲಿದೂಷಿತೇ ॥೨॥**

ಓ ರಾಜಶ್ರೇಷ್ಠನೇ, ಕೃತಯುಗದಲ್ಲಿಯೂ ಕೂಡ ಸ್ಥಾವರಜಂಗಮಾತ್ಮಕವಾದ ಎಂದರೆ ಚಲಿಸಲಾರದ ಮತ್ತು ಚಲಿಸಬಲ್ಲ ಪ್ರಾಣಿಗಳುಳ್ಳ ಈ ಪ್ರಪಂಚವೆಲ್ಲವೂ ರಾಗದ್ವೇಷಗಳಿಂದ ಕೂಡಿಯೇ ಇದ್ದಿತು. ಈಗ ಕೆಟ್ಟ ಭಾವಗಳಿಂದ ಆವರಿಸಲ್ಪಟ್ಟಿರುವ ಈ ಕಲಿಯುಗದಲ್ಲಿ ಹೇಳಬೇಕಾದುದೇನಿದೆ?

**ದೇವಾಃ ಸೇರ್ಷ್ಯಾಶ್ಚ ಸದ್ರೋಹಾಶ್ಛಲಕರ್ಮರತಾಃ ಸದಾ ।**
**ಮಾನುಷಾಣಾಂ ತಿರಶ್ಚಾಂ ಚ ಕಾ ವಾರ್ತಾ ನೃಪ ಗಣ್ಯತೇ ॥೩॥**

ಓ ದೊರೆಯೇ, ದೇವತೆಗಳೇ ಅಸೂಯೆ, ವಂಚನೆ, ದ್ರೋಹ ಮುಂತಾದ ದೋಷಗಳಿಂದ ಕೂಡಿದವರಾಗಿ ಮೋಸಕಾರ್ಯಗಳಲ್ಲಿ ಯಾವಾಗಲೂ ತೊಡಗಿರುವಲ್ಲಿ ಮನುಷ್ಯರ ಮತ್ತು ಪ್ರಾಣಿಗಳ ವಿಷಯದಲ್ಲಿ ಹೇಳಬೇಕಾದುದೇನಿದೆ ?

**ದ್ರೋಹಪರೇ ದ್ರೋಹಪರೋ ಭವೇದಿತಿ ಸಮಾನತಾ ।**
**ಅದ್ರೋಹಿಣಿ ತಥಾ ಶಾಂತೇ ವಿದ್ವೇಷಃ ಖಲತಾ ಸ್ಮೃತಾ ॥೪॥**

ಮೋಸ ಮಾಡುವವರಿಗೆ ಮೋಸ ಮಾಡುವುದು ಸರಿಯಾದುದು ಎನ್ನಬಹುದು. ಮತ್ತು ಅದು ಇಬ್ಬರಲ್ಲೂ ಸಮಾನವಾದುದಾಗಿರುತ್ತದೆ. ಆದರೆ ಮೋಸವನ್ನು ಮಾಡದವರ ವಿಷಯದಲ್ಲಿಯೂ, ಶಾಂತಸ್ವಭಾವವುಳ್ಳವರ ವಿಷಯದಲ್ಲಿಯೂ ದ್ರೋಹವನ್ನೆಣಿಸುವುದು ದುಷ್ಟತನವೆನ್ನಿಸಿಕೊಳ್ಳುವುದು.

**ಯಃ ಕಶ್ಚಿತ್ತಾಪಸಃ ಶಾಂತೋ ಜಪಧ್ಯಾನಪರಾಯಣಃ ।**
**ಭವೇತ್ತಸ್ಯ ಜಪೇ ವಿಘ್ನಕರ್ತಾ ನೈ ಮಘವಾಪರಂ ॥೫॥**

ಓ ರಾಜನೇ, ಯಾವನಾದರೂ ಒಬ್ಬ ಋಷಿಯು ಶಾಂತಮನಸ್ಕನಾಗಿ ಜಪತಪಧ್ಯಾನಗಳಲ್ಲಿ ನಿರತನಾಗಿದ್ದರೆ ಅಂತಹವನ ವಿಷಯದಲ್ಲಿಯೂ ಈ ಇಂದ್ರನು ಬಹಳವಾಗಿ ಅವನ ಸತ್ಕರ್ಮಾಚರಣೆಗೆ ಅಡ್ಡಿ ಆತಂಕಗಳನ್ನು ತಂದೊಡ್ಡಿ ತೊಂದರೆಯನ್ನುಂಟುಮಾಡುವವನಾಗಿದ್ದಾನೆ.

**ಸತಾಂ ಸತ್ಯಯುಗಂ ಸಾಕ್ಷಾತ್ಸರ್ವದೈವಾಽಸತಾಂ ಕಲಿಃ ।**
**ಮಧ್ಯಮೋ ಮಧ್ಯಮಾನಾಂ ತು ಕ್ರಿಯಾಯೋಗೌ ಯುಗೇ ಸ್ಮೃತೌ ॥೬॥**

ಸತ್ಯದಿಂದ ಇರುವ ಸಾಧುಗಳಿಗೆ ಎಲ್ಲ ಯುಗಗಳೂ ಸತ್ಯಯುಗದಂತೆಯೇ ಇರುತ್ತವೆ. ಅಸಾಧುಗಳಾದ ಕೆಟ್ಟ ಜನಗಳಿಗಾದರೋ ಎಲ್ಲ ಯುಗಗಳೂ ಕಲಿಯುಗದಂತೆಯೇ ಇರುತ್ತವೆ. ಮಧ್ಯಮರೀತಿಯಿಂದ ಇರುವವರಿಗೆ ಎಲ್ಲ ಯುಗಗಳೂ ತ್ರೇತಾ-ದ್ವಾಪರ ಯುಗಗಳಂತೆ ಇರುತ್ತವೆ. ಎಂದರೆ, ಯೋಗಮಾರ್ಗದಲ್ಲಿ ಸಿದ್ಧಿಯನ್ನು ಪಡೆದಿರುವವರಿಗೂ ಜ್ಞಾನಮಾರ್ಗದಲ್ಲಿ ಜೀವನ್ಮುಕ್ತರಾಗಿರುವವರಿಗೂ ಎಲ್ಲ ಯುಗಗಳೂ ಒಳ್ಳೆಯವೇ ಆಗಿರುತ್ತವೆ. ಏಕೆಂದರೆ, ಅಂಥವರು ಅಹಂಕಾರಾದಿ ದೋಷವಿಲ್ಲದೆ, ಪಾಪಲೇಪವಿಲ್ಲದೆ ಜ್ಞಾನಸಿದ್ಧಿಗಳಿಂದ ನಿತ್ಯಾನಂದಾನುಭವದಲ್ಲಿರುತ್ತಾರೆ. ಪಾಪಿಗಳಿಗೆ ಒಳ್ಳೆಯ ಕಾಲವೇ ಇಲ್ಲವು. ಏಕೆಂದರೆ ಅಂಥವರು ದೋಷ

ಸಂಪರ್ಕದಿಂದ ಯಾವಾಗಲೂ ಸಂಸಾರದುಃಖದಲ್ಲಿಯೇ ಇರುತ್ತಾರೆ. ಇನ್ನು ಉಳಿದವರಾದ ಮಧ್ಯಮಸ್ಥಿತಿಯಲ್ಲಿರುವ ಒಳ್ಳೆಯ ಜನರ ಸದ್ಗತಿ ಮತ್ತು ಶ್ರೇಯಸ್ಸುಗಳಿಗಾಗಿ ಕ್ರಿಯಾಯೋಗಗಳನ್ನು ಕ್ಲುಪ್ತಪಡಿಸಿ ಶಾಸ್ತ್ರಪುರಾಣಗಳಲ್ಲಿ ವಿಧಾನ ಮಾಡಿರುತ್ತದೆ. ಈ ಧರ್ಮಾಚರಣೆ ಯೋಗಾಭ್ಯಾಸಗಳಿಂದ ನಾವೆಲ್ಲರೂ ಕೃತಾರ್ಥರಾಗಬೇಕಾಗಿದೆ. ಇಂತಹ ಮಧ್ಯಮಸ್ಥಿತಿಯಲ್ಲಿರುವ ಒಳ್ಳೆಯ ಜನರನ್ನು ಅವಲಂಬಿಸಿ ಧರ್ಮವು ಯಾವಾಗಲೂ ಇರುತ್ತದೆಯೇ ಹೊರತು ಆ ಧರ್ಮಕ್ಕೆ ಸಂಪೂರ್ಣವಾಗಿ ಉಚ್ಛೇದವು ಯಾವಾಗಲೂ ಉಂಟಾಗುವುದಿಲ್ಲವು.

**ಕಶ್ಚಿತ್ಕದಾಚಿದ್ಭವತಿ ಸತ್ಯಧರ್ಮಾನುವರ್ತಕಃ ।**
**ಅನ್ಯಥಾನ್ಯಯುಗಾನಾಂ ವೈ ಸರ್ವೇ ಧರ್ಮಪರಾಯಣಾಃ ॥೭॥**

ಸತ್ಯದಿಂದಲೂ ಧರ್ಮದಿಂದಲೂ ನಡೆಯುವ ಮನುಷ್ಯನು ಯಾವಾಗಲೋ ಯಾವನೋ ಒಬ್ಬನು ಹುಟ್ಟುತ್ತಾನೆ. ಉಳಿದವರು ಬೇರೆ ಯುಗಧರ್ಮಗಳನ್ನು ಅನುಸರಿಸುವವರಾಗಿರುತ್ತಾರೆ.

**ವಾಸನಾ ಕಾರಣಂ ರಾಜನ್ಸರ್ವತ್ರ ಧರ್ಮಸಂಸ್ಥಿತೌ ।**
**ತಸ್ಯಾಂ ವೈ ಮಲಿನಾಯಾಂ ತು ಧರ್ಮೋಽಪಿ ಮಲಿನೋ ಭವೇತ್ ॥೮॥**

ಏತಕ್ಕಾಗಿ ಎಲ್ಲರೂ ಸತ್ಯಧರ್ಮಪರಾಯಣರಾಗಿರುವುದಿಲ್ಲವೆಂದು ಪ್ರಶ್ನಿಸಿದರೆ, ಎಲ್ಲಕ್ಕೂ ಮುಖ್ಯವಾಗಿ ಮನುಷ್ಯನಿಗೆ ಧಾರ್ಮಿಕನಾದ ಸದ್ಗುಣಗಳು ಉಂಟಾಗಿರಬೇಕಾದರೆ ಪೂರ್ವಜನ್ಮವಾಸನೆಯೇ ಕಾರಣವು. ಆ ಪೂರ್ವಸಂಸ್ಕಾರವು ಪರಿಶುದ್ಧವಲ್ಲದೆ ಮಲಿನವಾಗಿದ್ದಲ್ಲಿ ಅವನ ಧರ್ಮವೂ ಕೂಡ ಅದಕ್ಕನುಸಾರವಾಗಿ ಮಲಿನವಾದ ಪರಿಣಾಮವನ್ನು ಹೊಂದಿರುತ್ತದೆ. ಎಂಬುದು ಉತ್ತರವು.

**ಮಲಿನಾ ವಾಸನಾ ಸತ್ಯಂ ವಿನಾಶಾಯೇತಿ ಸರ್ವಥಾ ।**
**ಬ್ರಹ್ಮಣೋ ಹೃದಯಾಜ್ಜಾತಃ ಪುತ್ರೋ ಧರ್ಮ ಇತಿ ಸ್ಮೃತಃ ॥೯॥**

ಈ ಮಲಿನವಾದ ಎಂದರೆ, ಮೇಲೆ ಹೇಳಿದ ಅಹಂಕಾರ ರಾಗದ್ವೇಷ ಮುಂತಾದ ಕಶ್ಮಲಭಾವಗಳಿಂದ ಕೂಡಿದ ವಾಸನೆಯು ಮನುಷ್ಯನ ನಾಶಕ್ಕೆ ಕಾರಣವಾಗುತ್ತದೆ ಎಂಬುದು ನಿಜವಾದ ಮಾತಾಗಿದೆ. ಆದುದರಿಂದ ಕೆಟ್ಟಭಾವನೆಗಳಿಗೆ ನಾವು ಅವಕಾಶಕೊಡಬಾರದು. ಇದುವರೆಗೆ ದೇವಕೀವಸುದೇವ ಇವರಿಗೆ ಶಾಪವು

ಏಕೆ ಬಂದಿತು ? ಕೃಷ್ಣ, ಇಂದ್ರ ಮೊದಲಾದ ದೇವತೆಗಳೂ ಪಾಂಡವರು ಮುಂತಾದ ಸಜ್ಜನರೂ ಅಧರ್ಮವನ್ನು ಏಕೆ ಆಚರಿಸಿದರು ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿದುದಾಯಿತು. ಮುಂದೆ ನರನಾರಾಯಣರೆಂಬ ಸತ್ಪುರುಷರು ಮೋಕ್ಷಪ್ರಾಪ್ತಿ ಗೋಸ್ಕರ ತಪಸ್ಸನ್ನು ಮಾಡುತ್ತಿದ್ದರೂ ಅವರಿಗೂ ಸಂಸಾರಿಗಳಂತೆ ಮನುಷ್ಯಜನ್ಮವು ಏಕೆ ಬಂದಿತು ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳಲು ಆ ವಿಚಾರವನ್ನು ಉಪಕ್ರಮಿಸುವರು. ಧರ್ಮ ಎಂಬುದಾಗಿ ಪ್ರಸಿದ್ಧಿಯನ್ನು ಪಡೆದು ಲೋಕಕಲ್ಯಾಣವನ್ನು ನೆರವೇರಿಸುವ ಧರ್ಮದೇವನು ಬ್ರಹ್ಮನ ಹೃದಯದಿಂದ ಉಂಟಾದನು.

**ಬ್ರಾಹ್ಮಣಃ ಸತ್ಯಸಂಪನ್ನೋ ವೇದಧರ್ಮರತಃ ಸದಾ ।**
**ದಕ್ಷಸ್ಯ ದುಹಿತಾರೋ ಹಿ ವೃತಾ ದಶ ಮಹಾತ್ಮನಾ ॥೧೦॥**

ಆ ಧರ್ಮದೇವನು ಸತ್ಯಪರತೆಯಿಂದ ಕೂಡಿರುವವನಾಗಿ, ವೇದದಲ್ಲಿ ಹೇಳಿರುವ ಧರ್ಮಾಚರಣೆಯ ನಿಯಮಗಳ ಪಾಲನೆಯಲ್ಲಿಯೇ ಆಸಕ್ತಿಯನ್ನು ಹೊಂದಿರುವ ಬ್ರಾಹ್ಮಣನಾಗಿದ್ದನು. ಆ ಮಹಾಪುರುಷನಾದ ಧರ್ಮದೇವನು ದಕ್ಷನ ಹತ್ತು ಜನ ಹೆಣ್ಣುಮಕ್ಕಳನ್ನೂ ವರಿಸಿ ಮದುವೆಮಾಡಿಕೊಂಡನು.

**ವಿವಾಹವಿಧಿನಾ ಸಮ್ಯಙ್ಮುನಿನಾ ಗೃಹಧರ್ಮಿಣಾ ।**
**ತಾಸ್ವಜೀಜನಯತ್ಪುತ್ರಾನ್ ಧರ್ಮಃ ಸತ್ಯವತಾಂ ವರಃ ॥೧೧॥**
**ಹರಿಂ ಕೃಷ್ಣಂ ನರಂ ಚೈವ ತಥಾ ನಾರಾಯಣಂ ನೃಪ ।**

ಓ ದೊರೆಯೇ, ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಅದರ ಧರ್ಮಗಳನ್ನು ಪಾಲಿಸುವ ಆ ಧರ್ಮದೇವಮುನಿಯು ಆ ದಕ್ಷಬ್ರಹ್ಮನ ಹೆಣ್ಣುಮಕ್ಕಳನ್ನು ಶಾಸ್ತ್ರದಲ್ಲಿ ವಿಧಿಸಿರುವ ನಿಯಮವನ್ನು ಅನುಸರಿಸಿ ಮದುವೆಯಾದನು. ಮತ್ತು ಆ ಪತ್ನಿಯರಲ್ಲಿ, ಸತ್ಯಪರರಾದವರಲ್ಲಿ ಶ್ರೇಷ್ಠನಾದ ಆ ಧರ್ಮದೇವನು ಹರಿ, ಕೃಷ್ಣ, ನರ, ನಾರಾಯಣ ಎಂಬ ಮಕ್ಕಳನ್ನು ಹುಟ್ಟಿಸಿದನು.

**ಯೋಗಾಭ್ಯಾಸರತೋ ನಿತ್ಯಂ ಹರಿಃ ಕೃಷ್ಣೋ ಬಭೂವ ಹ ॥೧೨॥**

ಆ ಪುತ್ರರಲ್ಲಿ ಹರಿ ಮತ್ತು ಕೃಷ್ಣ ಎಂಬವರಿಬ್ಬರು ಯೋಗಾಭ್ಯಾಸದಲ್ಲಿ ಯಾವಾಗಲೂ ಆಸಕ್ತಿಯುಳ್ಳವರಾಗಿ ಅದನ್ನು ಅನುಸರಿಸುವವರಾದರು.

**ನರನಾರಾಯಣೌ ಚೈವ ಚೇರತುಸ್ತಪ ಉತ್ತಮಂ ।**
**ಪ್ರಾಲೇಯಾದ್ರಿಂ ಸಮಾಗತ್ಯ ತೀರ್ಥೇ ಬದರಿಕಾಶ್ರಮೇ ॥೧೩॥**

ನರ, ನಾರಾಯಣ ಎಂಬ ಉಳಿದವರಿಬ್ಬರೂ ಹಿಮಾಲಯಪರ್ವತಕ್ಕೆ ಬಂದು ಅದರ ತಪ್ಪಲಿನಲ್ಲಿರುವ ಬದರಿಕಾಶ್ರಮವೆಂಬ ಪವಿತ್ರವಾದ ಕ್ಷೇತ್ರದಲ್ಲಿ ಶ್ರೇಷ್ಠವಾದ ತಪಸ್ಸನ್ನು ಆಚರಿಸುತ್ತಿದ್ದರು.

**ತಪಸ್ವಿಷು ಧುರೀಣೌ ತೌ ಪುರಾಣೌ ಮುನಿಸತ್ತಮೌ ।**
**ಗೃಣಂತೌ ತತ್ಪರಂಬ್ರಹ್ಮ ಗಂಗಾಯಾ ವಿಪುಲೇ ತಟೇ ॥೧೪॥**

**ಹರೇರಂಶೌ ಸ್ಥಿತೌ ತತ್ರ ನರನಾರಾಯಣಾವೃಷೀ ।**
**ಪೂರ್ಣಂ ವರ್ಷಸಹಸ್ರಂ ತು ಚಕ್ರಾತೇ ತಪ ಉತ್ತಮಂ ॥೧೫॥**

ಓ ದೊರೆಯೇ, ತಪಸ್ಸನ್ನು ಆಚರಿಸುವವರಲ್ಲಿ ಶ್ರೇಷ್ಠರಾದ, ಬಹುಕಾಲ ದಿಂದಲೂ ಇರುವ, ಅನಾದಿನಿತ್ಯವಾದ ವಿಷ್ಣುವಿನ ಅಂಶದಿಂದ ಉತ್ಪನ್ನರಾದ, ಮನನ ಶೀಲರಾದ ಋಷಿಗಳಲ್ಲಿ ಉತ್ತಮರಾದ ಆ ನರನಾರಾಯಣರೆಂಬ ಋಷಿಗಳಿಬ್ಬರೂ .ಗಂಗಾನದಿಯ ವಿಸ್ತಾರವಾಗಿರುವ ದಡದಲ್ಲಿ ಪರಬ್ರಹ್ಮತತ್ತ್ವವನ್ನು ತಿಳಿಸುವ ಗಾಯತ್ರೀಮಂತ್ರವನ್ನು ಜಪಿಸುತ್ತ, ತದೇಕಚಿತ್ತರಾಗಿ ಸಾವಿರ ವರ್ಷಗಳು ಪೂರ್ಣ ವಾಗುವವರೆಗೂ ಮೇಲಾದ ತಪಸ್ಸನ್ನು ಆಚರಿಸುತ್ತಿದ್ದರು.

**ತಾಪಿತಂ ಚ ಜಗತ್ಸರ್ವಂ ತಪಸಾ ಸಚರಾಚರಂ ।**
**ನರನಾರಾಯಣಾಭ್ಯಾಂ ಚ ಶಕ್ರಃ ಕ್ಷೋಭಂ ತದಾ ಯಯೌ ॥೧೬॥**

ಆ ನರನಾರಾಯಣರಿಬ್ಬರೂ ತಮ್ಮ ತಪಸ್ಸಿನ ಪ್ರಭಾವದಿಂದ ಚರಾಚರಾತ್ಮಕ ವಾದ ಪ್ರಪಂಚವೆಲ್ಲವನ್ನೂ ಸುಡುವವರಾದರು. ಆಗ ಇಂದ್ರನೂ ಬಹಳವಾಗಿ ತಳಮಳಗೊಂಡನು.

**ಚಿಂತಾವಿಷ್ಟಃ ಸಹಸ್ರಾಕ್ಷೋ ಮನಸಾ ಸಮಕಲ್ಪಯತ್ ।**
**ಕಿಂ ಕರ್ತವ್ಯಂ ಧರ್ಮಪುತ್ರೌ ತಾಪಸೌ ಧ್ಯಾನಸಂಯುತೌ ॥೧೭॥**

**ಸಿದ್ಧಾರ್ಥೌ ಸುಭೃಶಂ ಶ್ರೇಷ್ಠಮಾಸನಂ ನ ಗ್ರಹೀಷ್ಯತಃ ।**
**ವಿಘ್ನಃ ಕಥಂ ಪ್ರಕರ್ತವ್ಯಸ್ತಪೋ ಯೇನ ಭವೇನ್ನಹಿ ॥೧೮॥**

ಸಹಸ್ರಾಕ್ಷನೆಂದು ಹೆಸರುಳ್ಳ ಆ ಇಂದ್ರನು ಆ ಧರ್ಮದೇವನ ಪುತ್ರರೀರ್ವರೂ ಈರೀತಿಯಲ್ಲಿ ಧ್ಯಾನಪರರಾಗಿ ಇರುವುದನ್ನು ಕಂಡು ಬಹಳ ಯೋಚನೆಯಲ್ಲಿ ಮುಳುಗಿದನು. ಹಾಗೆಯೇ ಅವನು ಮನಸ್ಸಿನಲ್ಲಿ ಚಿಂತಿಸುತ್ತ— ಈರೀತಿಯಲ್ಲಿ ದೃಢಪ್ರತಿಜ್ಞೆಯಿಂದ ಧ್ಯಾನದಲ್ಲಿ ಮಗ್ನರಾಗಿ ಕೂತಿರುವ ಇವರು ತಪಸ್ಸಿದ್ಧಿಯನ್ನು ಪಡೆದವರಾಗಿ ನನ್ನ ಇಂದ್ರಪದವಿಯನ್ನೂ ಆಕ್ರಮಿಸದಿರುವಂತೆಯೂ ಮತ್ತು ಕಾಮವನ್ನಾಗಲಿ ಕ್ರೋಧವನ್ನಾಗಲಿ ಉಂಟುಮಾಡಿ ಅವರ ತಪಸ್ಸು ಮುಂದಕ್ಕೆ ನಡೆಯದಂತೆಯೂ ಆಗಲು ಯಾವ ರೀತಿಯ ಅಡ್ಡಿಯನ್ನು ಉಂಟುಮಾಡಲಿ ಎಂದು ಯೋಚಿಸಿದನು.

ಉತ್ಪಾದ್ಯ ಕಾಮಂ ಕ್ರೋಧಂ ಚ ಲೋಭಂ ವಾಪ್ಯತಿದಾರುಣಂ ।
ಇತ್ಯುದ್ದಿಶ್ಯ ಸಹಸ್ರಾಕ್ಷಃ ಸಮಾರುಹ್ಯ ಗಜೋತ್ತಮಂ ॥೧೯॥

ವಿಘ್ನಕಾಮಸ್ತು ತರಸಾ ಜಗಾಮ ಗಂಧಮಾದನಂ ।
ಗತ್ವಾ ತತ್ರಾಶ್ರಮೇ ಪುಣ್ಯೇ ತಾವಪಶ್ಯಚ್ಛತಕ್ರತುಃ ॥೨೦॥

ಭಯಂಕರವಾದ ಪರಿಣಾಮವನ್ನುಂಟುಮಾಡಬಲ್ಲ ಕಾಮ, ಕ್ರೋಧ, ಲೋಭ ಮೊದಲಾದವುಗಳಲ್ಲಿ ಯಾವುದನ್ನಾದರೂ ಇವರ ಮನಸ್ಸಿನಲ್ಲಿ ಹುಟ್ಟಿಸಿ ವಿಘ್ನವನ್ನುಂಟುಮಾಡುವೆನು ಎಂದು ಮನಸ್ಸಿನಲ್ಲಿ ಉದ್ದೇಶಿಸಿ, ವಿಘ್ನವನ್ನುಂಟುಮಾಡುವುದರಲ್ಲಿ ಅತ್ಯಂತಾಸಕ್ತಿಯುಳ್ಳ, ನೂರು ಯಾಗಗಳನ್ನು ಮಾಡಿ ಇಂದ್ರಪದವಿಯನ್ನು ಪಡೆದಿದ್ದ ಆ ಇಂದ್ರನು ಗಜಶ್ರೇಷ್ಠವಾದ ಐರಾತವನ್ನು ಹತ್ತಿ ಕುಳಿತುಕೊಂಡು ಆ ಋಷಿಗಳೀರ್ವರು ತಪಸ್ಸು ಮಾಡುತ್ತಿದ್ದ ಗಂಧಮಾದನ ಪರ್ವತಕ್ಕೆ ಹೋಗಿ ಅಲ್ಲಿ ಪವಿತ್ರವಾದ ಬದರಿಕಾಶ್ರಮದಲ್ಲಿ ಅವರಿಬ್ಬರನ್ನೂ ನೋಡಿದನು.

ತಪಸಾ ದೀಪ್ತದೇಹೌ ತು ಭಾಸ್ಕರಾವಿವ ಚೋದಿತೌ ।
ಬ್ರಹ್ಮವಿಷ್ಣೂ ಕಿಮೇತೌ ವೈ ಪ್ರಕಟೌ ವಾ ವಿಭಾವಸೂ ॥೨೧॥

ಅಲ್ಲಿ ತಪಸ್ಸಿನಿಂದ ಪ್ರಕಾಶಮಾನವಾದ ದೇಹವುಳ್ಳ ಅವರು, ಆಗತಾನೇ ಉದಯಿಸಿದ ಸೂರ್ಯರೋ, ಅಥವಾ ಬ್ರಹ್ಮವಿಷ್ಣುಗಳೋ, ಅಥವಾ ಮೂರ್ತಿಗೊಂಡ ಅಗ್ನಿಗಳೋ ಎನ್ನುವ ಹಾಗೆ ಕಂಡುಬರುತ್ತಿದ್ದರು.

**ಧರ್ಮಪುತ್ರಾವೃಷೀ ಏತೌ ತಪಸಾ ಕಿಂ ಕರಿಷ್ಯತಃ ।**
**ಇತಿ ಸಂಚಿಂತ್ಯ ತೌ ದೃಷ್ಟ್ವಾ ತದೋವಾಚ ಶಚೀಪತಿಃ ॥೨೨॥**

ಆಗ ಧರ್ಮಪುತ್ರರಾದ ಇವರು ತಪಸ್ಸನ್ನು ಮಾಡಿ ಅದರಿಂದ ಮುಂದಕ್ಕೆ ಏನನ್ನು ಮಾಡಬೇಕೆಂದಿರುವರೋ ಗೊತ್ತಿಲ್ಲವಲ್ಲ ಎಂದು ಮನಸ್ಸಿನಲ್ಲಿ ಆತಂಕ ದೊಡನೆ ಚಿಂತಿಸುತ್ತ ಅವರನ್ನು ಕಂಡು ಶಚೀಪತಿಯಾದ ಇಂದ್ರನು ಈರೀತಿಯಾಗಿ ಹೇಳಿದನು.

**ಕಿಂ ವಾಂ ಕಾರ್ಯಂ ಮಹಾಭಾಗೌ ಬ್ರೂತಂ ಧರ್ಮಸುತೌ ಕಿಲ ।**
**ದದಾಮಿ ವಾಂ ವರಂ ಶ್ರೇಷ್ಠಂ ದಾತುಂ ಯಾತೋಽಸ್ಮ್ಯಹಂ ಋಷೀ ॥೨೩॥**

ಓ ಧರ್ಮಪುತ್ರರಾದ ಋಷಿಗಳಿರಾ, ಮಹಾಮಹಿಮೆಯುಳ್ಳ ನೀವು ಯಾವ ಕಾರ್ಯಕ್ಕಾಗಿ ಈ ಕಠಿನವಾದ ತಪಸ್ಸನ್ನು ಮಾಡುತ್ತಿರುವಿರಿ. ಅದನ್ನು ಹೇಳಿ. ನಿಮಗೆ ಬೇಕಾದ ಶ್ರೇಷ್ಠವಾದ ವರವನ್ನು ಕೊಡುವೆನು. ಅದಕ್ಕಾಗಿಯೇ ನಾನು ಇಲ್ಲಿಗೆ ಬಂದಿರುವೆನು.

**ಅದೇಯಮಪಿ ದಾಸ್ಯಾಮಿ ತುಷ್ಟೋಽಸ್ಮಿ ತಪಸಾ ಕಿಲ ।**

ಓ ಋಷಿಗಳಿರಾ, ನಿಮ್ಮ ತಪಸ್ಸಿನಿಂದ ನಾನು ಸಂತುಷ್ಟನಾಗಿರುವೆನು. ನಿಮಗೆ ಬೇಕಾದ ವರವನ್ನು, ಅದು ಎಷ್ಟೇ ಅಸಾಧ್ಯವಾದದ್ದಾದರೂ, ಕೊಡುವೆನು.

|| ವ್ಯಾಸ ಉವಾಚ ||

**ಏವಂ ಪುನಃ ಪುನಃ ಶಕ್ರಸ್ತಾವುವಾಚ ಪುರಃಸ್ಥಿತಃ ॥೨೪॥**
**ನೋಚತುಸ್ತಾವೃಷೀ ಧ್ಯಾನಸಂಸ್ಥಿತೌ ದೃಢಚೇತಸೌ ।**

ವ್ಯಾಸಮುನಿಯು ಹೇಳಿದನು—ಈ ರೀತಿಯಲ್ಲಿ ಇಂದ್ರನು ಅವರನ್ನು ಮತ್ತೆ ಮತ್ತೆ ಕೇಳಿದನು. ಆದರೂ ಅವರು ದೃಢಮನಸ್ಸಿನಿಂದ ಕೂಡಿ ಧ್ಯಾನಪರ ರಾಗಿದ್ದುದರಿಂದ ಅವನಿಗೆ ಉತ್ತರವೇನನ್ನೂ ಹೇಳಲಿಲ್ಲವು.

**ತತೋ ವೈ ಮೋಹಿನೀಂ ಮಾಯಾಂ ಚಕಾರ ಭಯದಾಂ ವೃಷಃ ॥೨೫॥**
**ವೃಕಾನ್ ಸಿಂಹಾಂಶ್ಚ ವ್ಯಾಘ್ರಾಂಶ್ಚ ಸಮುತ್ಪಾದ್ಯಾಬಿಭೀಷಯತ್ ।**

ಆಗ ಇಂದ್ರನು ಭಯವನ್ನುಂಟುಮಾಡುವ ಮಾಯೆಯಿಂದ ಕೂಡಿದ ಮೋಹಿನಿಯನ್ನು ಸೃಷ್ಟಿಸಿದನು. ಮತ್ತು ತೋಳ, ಸಿಂಹ, ಹುಲಿ ಮುಂತಾದ ಕ್ರೂರಪ್ರಾಣಿಗಳನ್ನು ಸೃಜಿಸಿ ಆ ಮುನಿಗಳಿಗೆ ಭಯವನ್ನುಂಟುಮಾಡಲು ಉದ್ಯುಕ್ತ ನಾದನು.

**ವರ್ಷಂ ವಾತಂ ತಥಾ ವಹ್ನಿಂ ಸಮುತ್ಪಾದ್ಯ ಪುನಃಪುನಃ ॥೨೬॥**
**ಭೀಷಯಾಮಾಸ ತೌ ಶಕ್ರೋ ಮಾಯಾಂ ಕೃತ್ವಾ ವಿಮೋಹಿನೀಂ ।**
**ಭಯತೋಽಪಿ ವಶಂ ನೀತೌ ನ ತೌ ಧರ್ಮಸುತೌ ಮುನೀ ॥೨೭॥**

ಅನಂತರದಲ್ಲಿ ಮಳೆ, ಗಾಳಿ, ಕಾಡುಕಿಚ್ಚು ಮುಂತಾದವುಗಳನ್ನು ಪುನಃ ಪುನಃ ಉಂಟುಮಾಡುತ್ತಾ, ಭ್ರಾಂತಿಯನ್ನುಂಟುಮಾಡುವ ಮಾಯೆಯನ್ನೂ ಸೃಷ್ಟಿಸಿ, ಇಂದ್ರನು ಆ ಮುನಿಗಳನ್ನು ಹೆದರಿಸಿದನು. ಆದರೆ, ಧರ್ಮದೇವನ ಮಕ್ಕ ಳಾದ ಆ ಮುನಿಗಳು ಈ ಭಯಗಳನ್ನು ಲಕ್ಷಿಸದೆ ತಮ್ಮ ತಪಸ್ಸಿನಲ್ಲಿ ನಿರತ ರಾಗಿದ್ದರು.

**ನರನಾರಾಯಣೌ ದೃಷ್ಟ್ವಾ ಶಕ್ರಃ ಸ್ವಭವನಂ ಗತಃ ।**
**ವರದಾನೇ ಪ್ರಲುಬ್ಧೌ ನ ನ ಭೀತೌ ವಹ್ನಿವಾಯುತಃ ॥೨೮॥**

ಈ ಮುನಿಗಳು, "ನಾನು ಕೊಡುವೆನೆಂದು ಹೇಳಿದ ವರಕ್ಕೆ ಆಶೆಪಡಲಿಲ್ಲವು. ಕಾಡುಕಿಚ್ಚು, ಗಾಳಿ ಮುಂತಾದ ಉಪದ್ರವಗಳಿಗೂ ಹೆದರಲಿಲ್ಲವು" ಎಂದು ತಿಳಿದು ಇಂದ್ರನು ಆ ಮುನಿಗಳ ಸಮೀಪದಿಂದ ಹೊರಟು ತನ್ನ ಮಂದಿರವನ್ನು ಸೇರಿದನು.

**ವ್ಯಾಘ್ರಸಿಂಹಾದಿಭಿಃ ಕ್ರಾಂತೌ ಚಲಿತೌ ನಾಶ್ರಮಾತ್ಸ್ವಕಾತ್ ।**
**ನ ತಯೋರ್ಧ್ಯಾನಭಂಗಂ ವೈ ಕರ್ತುಂ ಕೋಽಪಿ ಕ್ಷಮೋಽಭವತ್ ॥೨೯॥**

**ಇಂದ್ರೋಽಪಿ ಸದನಂ ಗತ್ವಾ ಚಿಂತಯಾಮಾಸ ದುಃಖಿತಃ ।**
**ಚಲಿತೌ ಭಯಲೋಭಾಭ್ಯಾಂ ನೇಮೌ ಮುನಿವರೋತ್ತಮೌ ॥೩೦॥**

ಈರೀತಿಯಲ್ಲಿ ಯಾವುದರಿಂದಲೂ ಬಗ್ಗದಿರುವ ನರನಾರಾಯಣರನ್ನು ನೋಡಿ ಇಂದ್ರನು ತನ್ನ ಮನೆಯನ್ನು ಸೇರಿ ಚಿಂತಾಕುಲನಾದನು. ಈ ಮುನಿವರ್ಯರು ಆಶೆಗಾಗಲಿ, ಭಯಕ್ಕಾಗಲಿ, ವಶವಾಗುವವರಲ್ಲ. ವ್ಯಾಘ್ರ ಮೊದಲಾದ ಕ್ರೂರ

ಜಂತುಗಳಿಗೂ ಸಹ ಭಯಪಡದೆ, ತಮ್ಮ ಆಶ್ರಮುವನ್ನು ಸಹ ಬಿಡದೆ ನಿರ್ಭಯ ರಾಗಿ ಧ್ಯಾನಮಗ್ನರಾಗಿದ್ದರು. ಇಂತಹ ಮುನಿಗಳ ಧ್ಯಾನಭಂಗವನ್ನು ಯಾರು ತಾನೇ ಮಾಡಲು ಸಮರ್ಥರು? ಎಂದು ಮೊದಲಾಗಿ ಅತಿದುಃಖದಿಂದ ಚಿಂತಿಸಿದನು.

**ಚಿಂತಯಂತೌ ಮಹಾವಿದ್ಯಾಮಾದಿಶಕ್ತಿಂ ಸನಾತನೀಂ ।**
**ಈಶ್ವರೀಂ ಸರ್ವಲೋಕಾನಾಂ ಪರಾಂ ಪ್ರಕೃತಿಮದ್ಭುತಾಂ ॥೩೦॥**

ಅವರಿಬ್ಬರೂ ಮನಸ್ಸಿನಲ್ಲಿ, ಮಹಾವಿದ್ಯಾಸ್ವರೂಪಿಣಿಯಾದ, ಎಲ್ಲ ಪ್ರಪಂಚಗಳಿಗೂ ಒಡೆಯಳಾದ, ಎಲ್ಲಕ್ಕೂ ಮೂಲಭೂತವಾದ, ಪರಬ್ರಹ್ಮನ ಶಕ್ತಿಸ್ವರೂಪಳಾದ, ಅನಾದಿನಿತ್ಯಳಾದ ಆದಿಶಕ್ತಿ ಭುವನೇಶ್ವರಿಯನ್ನು ಧ್ಯಾನಿಸುತ್ತಿದ್ದರು. ಅಲ್ಲದೆ, ಗುಣತ್ರಯದ ಸಾಮ್ಯಾವಸ್ಥೆಯಲ್ಲಿರುವ ಮಾಯೆಯೇ ಉಪಾಧಿಯಾಗಿರುವ ಬ್ರಹ್ಮಸ್ವರೂಪಳಾದ "ಪ್ರಕೃತಿಂ ವಿದ್ಧಿ ಮೇ ಪರಾಂ" ಎಂದು ಭಗವದ್ಗೀತೆಯಲ್ಲಿ ವರ್ಣಿಸಿರುವ ಅದ್ಭುತವಾದ ಮಹಿಮೆಯುಳ್ಳ ಆ ಮಹಾದೇವಿಯನ್ನು ಆ ನರನಾರಾಯಣರು ಧ್ಯಾನಿಸುತ್ತಿದ್ದುದರಿಂದ, ಇಂದ್ರನು ತೋರಿಸಿದ ಆಶೆಗಾಗಲಿ, ಉಂಟುಮಾಡಿದ ಭಯಕ್ಕಾಗಲಿ, ಅವರು ಸ್ವಲ್ಪವೂ ಚಲಿಸಲಿಲ್ಲವು.

**ಧ್ಯಾಯತಾಂ ಕಃ ಕ್ಷಮೋ ಲೋಕೇ ಬಹುಮಾಯಾವಿದಪ್ಯುತ ।**
**ಯನ್ಮೂಲಾಃ ಸಕಲಾ ಮಾಯಾ ದೇವಾಸುರಕೃತಾಃ ಕಿಲ ॥೩೨॥**

ದೇವತೆಗಳಾಗಲಿ, ರಾಕ್ಷಸರಾಗಲಿ, ಯಾರೇ ಆಗಲಿ ಮಾಡಬಲ್ಲಂಥಾ ಎಲ್ಲ ಬಗೆಯ ಮಾಯೆಗಳೂ ಯಾವ ಮಹಾಮಾಯೆಯನ್ನು ಅವಲಂಬಿಸಿ ಉಂಟಾಗುವ ಅಂಶಗಳಾಗಿವೆಯೋ ಅಂಥಾ ಸರ್ವಶಕ್ತಿಸ್ವರೂಪಳಾದ ದೇವಿಯನ್ನೇ ಧ್ಯಾನಿಸುತ್ತಾ ಭಾವಸಮಾಧಿಯಲ್ಲಿರುವ ಆ ನರನಾರಾಯಣರಿಗೆ, ತಪೋಭಂಗವನ್ನುಂಟುಮಾಡಲು, ಅನೇಕ ಬಗೆಯ ಮಾಯೆಗಳನ್ನು ತಿಳಿದು ಗಟ್ಟಿಗನಾಗಿದ್ದರೂ ಯಾವನುತಾನೇ ಸಮರ್ಥನಾದಾನು?

**ತೇ ಕಥಂ ಬಾಧಿತುಂ ಶಕ್ತಾ ಧ್ಯಾಯಂತಿ ಗತಕಲ್ಮಷಾಃ ।**
**ವಾಗ್ಬೀಜಂ ಕಾಮಬೀಜಂ ಚ ಮಾಯಾಬೀಜಂ ತಥೈವ ಚ ॥೩೩॥**

ಅಲ್ಲದೆ, ಹಿಂದೆ ಮೂರನೆಯ ಸ್ಕಂಧದಲ್ಲಿ ವರ್ಣಿಸಿರುವ ವಾಗ್ಬೀಜ, ಕಾಮ ಬೀಜ ಮುಂತಾದ ಬೀಜಮಂತ್ರಗಳನ್ನು ಕ್ರಮವಾಗಿ ಜಪಿಸಿ ಸಿದ್ಧಿಯನ್ನು ಪಡೆದು, ದೇವಿಯ ಅನುಗ್ರಹಕ್ಕೆ ಪಾತ್ರರಾಗಿರುವ ಆ ನರನಾರಾಯಣರು, ರಾಗದ್ವೇಷ ಅಹಂ ಕಾರ ಮುಂತಾದ ದೋಷಗಳ ಸಂಬಂಧವಿಲ್ಲದವರಾಗಿರುತ್ತಾರೆ. ಅಂತಹ ಮಹಾ ಪುರುಷರನ್ನು ಇತರರು ಯಾರುತಾನೇ, ಅವರ ತಪಸ್ಸಿಗೆ ಅಡ್ಡಿಯನ್ನೊಡ್ಡಿ ತೊಂದರೆ ಯನ್ನುಂಟುಮಾಡಲು ಶಕ್ತರಾದಾರು ?

**ಚಿತ್ತೇ ಯಸ್ಯ ಭವೇತ್ತಂ ತುಂ ಬಾಧಿತುಂ ಕೋಽಪಿ ನ ಕ್ಷಮಃ ।**
**ಮಾಯಯಾ ಮೋಹಿತಃ ಶಕ್ರೋ ಭೂಯಸ್ತಸ್ಯ ಪ್ರತಿಕ್ರಿಯಾಂ ॥೩೪॥**
**ಕರ್ತುಂ ಕಾಮವಸಂತೌ ತು ಸಮಾಹೂಯಾಬ್ರವೀದ್ವಚಃ ॥**

ಮೇಲೆ ಹೇಳಿದ ಮಹಾಮಂತ್ರಗಳಿಂದ ಬೋಧ್ಯಳಾದ ಆ ಭುವನೇಶ್ವರೀ ದೇವಿಯನ್ನು ಆ ರೀತಿಯಾಗಿ ಮನಸ್ಸಿನಲ್ಲಿ ಯಾರು ಧ್ಯಾನಿಸುತ್ತಾ ಇರುತ್ತಾರೋ ಅಂತಹವನನ್ನು ಬಾಧಿಸಲು ಯಾರುತಾನೇ ಸಾಮರ್ಥ್ಯವುಳ್ಳವರಾಗುವರು ? ಆದರೂ ಕೂಡ ಮಾಯೆಯಿಂದ ಆವರಿಸಿದ ಬುದ್ಧಿಯುಳ್ಳ ಇಂದ್ರನು ತನ್ನ ಶಕ್ತಿಯ ಪರಿ ಮಿತಿಯನ್ನು ತಿಳಿಯಲಾರದೆ ಪುನಃ ಅವರಿಗೆ ತೊಂದರೆಯನ್ನುಂಟುಮಾಡಿ ತಪೋ ಭಂಗವನ್ನು ಮಾಡಲೆಣಿಸಿ, ಮನ್ಮಥನನ್ನೂ ವಸಂತನನ್ನೂ ಕರೆದು ಈರೀತಿಯಾಗಿ ಹೇಳಿದನು.

**ಮನೋಭವ ವಸಂತೇನ ರತ್ಯಾ ಯುಕ್ತೋ ವ್ರಜಾಧುನಾ ॥೩೫॥**
**ಅಪ್ಸರೋಭಿಃ ಸಮಾಯುಕ್ತಸ್ತರಸಾ ಗಂಧಮಾಧನಂ ।**

ಓ ಮನ್ಮಥನೇ, ನೀನು ಈ ವಸಂತನನ್ನೂ, ನಿನ್ನ ಹೆಂಡತಿಯಾದ ರತಿ ಯನ್ನೂ ಮತ್ತು ಇತರ ಅಪ್ಸರಸ್ತ್ರೀಯರನ್ನೂ ಜೊತೆಯಲ್ಲಿ ಕರೆದುಕೊಂಡು ಈಗಲೇ ಇಲ್ಲಿಂದ ಹೊರಟು ಗಂಧಮಾದನಪರ್ವತವನ್ನು ಜಾಗ್ರತೆಯಾಗಿ ಸೇರು.

**ನರನಾರಾಯಣೌ ತತ್ರ ಪುರಾಣಾವೃಷಿಸತ್ತಮೌ ॥೩೬॥**
**ಕುರುತಸ್ತಪ ಏಕಾಂತೇ ಸ್ಥಿತೌ ಬದರಿಕಾಶ್ರಮೇ ।**

ಅಲ್ಲಿ ನರನಾರಾಯಣರೆಂಬ ಅನಾದಿನಿತ್ಯರಾದ ಋಷಿಗಳಿಬ್ಬರು ವಿವಿಕ್ತವಾಗಿ ರುವ ಬದರಿಕಾಶ್ರಮದಲ್ಲಿ ತಪಸ್ಸನ್ನು ಮಾಡುತ್ತಿರುವರು.

**ಗತ್ವಾ ತತ್ರ ಸಮೀಪೇ ತು ತಯೋರ್ಮನ್ಮಥಮಾರ್ಗಣೈಃ ॥೩೭॥**
**ಚಿತ್ತಂ ಕಾಮಾತುರಂ ಕಾರ್ಯಂ ಕುರು ಕಾರ್ಯಂ ಮಮಾಧುನಾ ।**

ಅಲ್ಲಿ ಅವರ ಸಮೀಪಕ್ಕೆ ಹೋಗಿ ಅವರನ್ನು ಮನ್ಮಥನ ಆಶಾವೃತ್ತಿಗಳೆಂಬ ನಿನ್ನ ಬಾಣಗಳಿಂದ ಪೀಡಿಸಿ ಅವರ ಮನಸ್ಸನ್ನು ವಿಷಯೇಚ್ಛೆಗಳಿಂದ ವ್ಯಾಕುಲವನ್ನಾಗಿ ಮಾಡಬೇಕು. ಹೀಗೆ ಮಾಡಿ ನನ್ನ ಕಾರ್ಯವನ್ನು ನೆರವೇರಿಸು.

**ಮೋಹಯಿತ್ವೋಚ್ಚಾಟಯಿತ್ವಾ ವಿಶಿಖೈಸ್ತಾಡಯಾಶು ಚ ॥೩೮॥**
**ವಶೀಕುರು ಮಹಾಭಾಗ ಮುನೀ ಧರ್ಮಸುತಾವಪಿ ॥**

ಓ ಮಹಾಮಹಿಮೆಯುಳ್ಳ ಮನ್ಮಥನೇ ಅವರನ್ನು ನೀನು ಮೋಹಗೊಳಿಸಿ, ನಿನ್ನ ಬಾಣಗಳಿಂದ ಅವರನ್ನು ಬೇಗನೆ ಪ್ರಹರಿಸು. ಮತ್ತು ಮನನಶೀಲರಾದ ಆ ಧರ್ಮದೇವನ ಮಕ್ಕಳನ್ನು ಅಲ್ಲಿಂದ ಹೊರಡಿಸಿ ನಿನ್ನ ವಶವಾಗುವಂತೆ ಮಾಡು.

**ಕೋ ಹ್ಯಸ್ಮಿನ್ ಸರ್ವಸಂಸಾರೇ ದೇವೋ ದೈತ್ಯೋಽಥ ಮಾನವಃ ॥೩೯॥**
**ಯಸ್ತೇ ಬಾಣವಶಂ ಪ್ರಾಪ್ತೋ ನ ಯಾತಿ ಭೃಶತಾಡಿತಃ ।**
**ಬ್ರಹ್ಮಾಹಂ ಗಿರಿಜಾನಾಥಶ್ಚಂದ್ರೋ ವಹ್ನಿರ್ವಿಮೋಹಿತಃ ॥೪೦॥**

ಈ ಎಲ್ಲ ಪ್ರಪಂಚದ ಸಂಸಾರದಲ್ಲಿ, ದೇವತೆಯಾಗಲಿ, ಮನುಷ್ಯನಾಗಲಿ, ನಿನ್ನ ಬಾಣದಿಂದ ಹೆಚ್ಚಾಗಿ ಪೀಡಿಸಲ್ಪಟ್ಟವನಾಗಿ ನಿನ್ನ ವಶವಾಗದಿರುವವನು ಯಾವನಿರುತ್ತಾನೆ? ಬ್ರಹ್ಮನಾದ ನಾನು, ಈಶ್ವರ, ಚಂದ್ರ ಅಗ್ನಿ ಮೊದಲಾದ ನಾವೆಲ್ಲರೂ ನಿನ್ನ ಬಾಣಗಳಿಗೆ ಸಿಲುಕಿ ಮೋಹವನ್ನು ಹೊಂದಿದವರಾಗಿರುವೆವು.

**ಗಣನಾ ಕಾಽನಯೋಃ ಕಾಮ ತ್ವದ್ಬಾಣಾನಾಂ ಪರಾಕ್ರಮೇ ।**
**ವರಾಂಗನಾಗಣೋಽಯಂ ತೇ ಸಹಾಯಾರ್ಥಂ ಮಯೇರಿತಃ ॥೪೧॥**

ಮುಖ್ಯರಾದ ನಮ್ಮನ್ನೇ ನಿನ್ನ ಬಾಣಗಳು ಸೋಲಿಸಿರುವಾಗ ಈ ನಿನ್ನ ಬಾಣದ ಪರಾಕ್ರಮದ ಮುಂದೆ ಈ ಇಬ್ಬರ ಗಣನೆಯನ್ನು ಹೇಳುವುದೇನಿದೆ? ಅಲ್ಲದೆ, ಉತ್ತಮರಾದ ಮತ್ತು ಮನೋಹರೆಯರಾದ ಈ ಹೆಂಗಸರ ಸಮೂಹವೂ ನಿನ್ನ ಸಹಾಯಾರ್ಥವಾಗಿ ನನ್ನಿಂದ ಪ್ರೇರಿಸಲ್ಪಟ್ಟಿದೆ.

**ಆಗಮಿಷ್ಯತಿ ತತ್ರೈವ ರಂಭಾಧೀನಾಂ ಮನೋರಮಃ ।**
**ಏಕಾ ತಿಲೋತ್ತಮಾ ರಂಭಾ ಕಾರ್ಯಂ ಸಾಧಯಿತುಂ ಕ್ಷಮಾ ॥೪೨॥**

ಅತಿ ಮನೋಹರೆಯರಾದ ರಂಭಾತಿಲೋತ್ತಮೆಯರೂ ಅಲ್ಲಿಗೆ ಬರುವರು. ಅವರಲ್ಲಿ ಒಬ್ಬೊಬ್ಬರೇ ಈ ಕೆಲಸವನ್ನು ಮಾಡಲು ಸಮರ್ಥರಾಗಿರುವರು.

**ತ್ವಮೇವೈಕಃ ಕ್ಷಮಃ ಕಾಮಂ ಮಿಲಿತೈಃ ಕಿಸ್ತು ಸಂಶಯಃ ।**
**ಕುರು ಕಾರ್ಯಂ ಮಹಾಭಾಗ ದದಾಮಿ ತವ ವಾಂಛಿತಂ ॥೪೩॥**

ನೀನೊಬ್ಬನೇ ಈ ಕೆಲಸವನ್ನು ಮಾಡಲು ಸಮರ್ಥನಾಗಿರುವೆ. ಹೀಗಿರುವಲ್ಲಿ ನೀವೆಲ್ಲರೂ ಜೊತೆಗೂಡಿ ಕಾರ್ಯಸಾಧನೆಯನ್ನು ಮಾಡಬಲ್ಲಿರೆಂಬುದರಲ್ಲಿ ಸಂಶಯ ವೇನಿದೆ? ಮಹಾಮಹಿಮೆಯುಳ್ಳ ಕಾಮದೇವನೇ ನೀನು ಈ ಕಾರ್ಯವನ್ನು ನೆರವೇರಿಸು. ನಿನಗೆ ಬೇಕಾದುದನ್ನು ಕೊಡಲು ನಾನು ಸಿದ್ಧನಾಗಿರುವೆನು.

**ಪ್ರಲೋಭಿತೌ ಮಯಾsತ್ಯರ್ಥಂ ವರದಾನೈಸ್ತಪಸ್ವಿನೌ ।**
**ಸ್ಥಾನಾನ್ನ ಚಲಿತೌ ಶಾಂತೌ ವೃಥಾಯಂ ಮೇ ಗತಃ ಶ್ರಮಃ ॥೪೪॥**

ನಾನು ಅವರನ್ನು ಅನೇಕಬಗೆಯ ದಾನಗಳಿಂದ ಎಷ್ಟು ಆಶೆಯನ್ನುಂಟು ಮಾಡಿದರೂ ಅವರು ತಮ್ಮ ಸ್ಥಾನದಿಂದ ಸ್ವಲ್ಪವೂ ಚಲಿಸದೆ ಶಾಂತಚಿತ್ತರಾಗಿ ತಪಸ್ಸನ್ನು ಆಚರಿಸುತ್ತಲೇ ಇದ್ದರು. ಅದಕ್ಕಾಗಿ ನಾನು ಪಟ್ಟ ಶ್ರಮವೆಲ್ಲವೂ ವ್ಯರ್ಥವಾಯಿತು.

**ತಥಾ ವೈ ಮಾಯಯಾ ಕೃತ್ವಾ ಭೀಷಿತೌ ತಾಪಸೌ ಭೃಶಂ ।**
**ತಥಾಪಿ ನೋತ್ಥಿತೌ ಸ್ಥಾನಾದ್ದೇಹರಕ್ಷಾಪರೌ ನ ತೌ ॥೪೫॥**

ಅದೇರೀತಿಯಾಗಿ ಮಾಯೆಯನ್ನೂ ಹರಡಿ, ಅವರನ್ನು ಮಳೆ, ಬಿರುಗಾಳಿ, ಕಿಚ್ಚು ಮೊದಲಾದವುಗಳಿಂದ ಬಹಳವಾಗಿ ಹೆದರಿಸಿದೆನು. ಆದರೂ ಕೂಡ ಅವರು ತಮ್ಮ ಧ್ಯಾನದಿಂದ ಸ್ವಲ್ಪವೂ ಚಲಿಸಲಿಲ್ಲವು. ಅವರು ತಮ್ಮ ದೇಹವನ್ನು ರಕ್ಷಿಸಿ ಕೊಳ್ಳಲೂ ಆ ಸ್ಥಳವನ್ನು ಬಿಟ್ಟು ಕದಲಲಿಲ್ಲವು. ಆದುದರಿಂದ ಅವರು ಸಾಮಾನ್ಯ ರಲ್ಲವೆಂಬುದಾಗಿ ತಿಳಿಯುತ್ತದೆ ಎಂದು ಇಂದ್ರನು ಕಾಮದೇವನಿಗೆ ಹೇಳಿದನು.

|| ವ್ಯಾಸ ಉವಾಚ ||

**ಇತಿ ತಸ್ಯ ವಚಃ ಶ್ರುತ್ವಾ ಶಕ್ರಂ ಪ್ರಾಹ ಮನೋಭವಃ ।**
**ವಾಸವಾದ್ಯ ಕರಿಷ್ಯಾಮಿ ಕಾರ್ಯಂ ತೇ ಮನಸೇಪ್ಸಿತಂ ॥೪೬॥**

ವ್ಯಾಸಮುನಿಯು ಹೇಳಿದನು—ಈ ರೀತಿಯಾದ ಇಂದ್ರನ ಮಾತನ್ನು ಮನ್ಮಥನು ಕೇಳಿ, ಅವನನ್ನು ಕುರಿತು ಹೀಗೆ ಹೇಳಿದನು—ಓ ಇಂದ್ರನೇ, ಈಗ ನಿನ್ನ ಮನಸ್ಸಿಗೆ ಇಷ್ಟವಾದ ಕೆಲಸವನ್ನು ನಾನು ಮಾಡುವೆನು.

**ಯದಿ ವಿಷ್ಣುಂ ಮಹೇಶಂ ವಾ ಬ್ರಹ್ಮಾಣಂ ವಾ ದಿವಾಕರಂ ।**
**ಧ್ಯಾಯಂತೌ ತೌ ತದಾಸ್ಮಾಕಂ ಭವಿತಾತೌ ವಶೌ ಮುನೀ ॥೪೭॥**

ಅವರಿಬ್ಬರೂ ವಿಷ್ಣು, ಈಶ್ವರ, ಬ್ರಹ್ಮ, ಸೂರ್ಯ ಇವರಲ್ಲಿ ಯಾರನ್ನಾದರೂ ಧ್ಯಾನಿಸುತ್ತಿದ್ದಲ್ಲಿ ಆ ಋಷಿಗಳಿಬ್ಬರೂ ಖಂಡಿತವಾಗಿಯೂ ನಮಗೆ ವಶವಾಗುವರು.

**ದೇವೀಭಕ್ತಂ ವಶೀಕರ್ತುಂ ನಾಹಂ ಶಕ್ತಃ ಕಥಂ ಚ ನ ।**
**ಕಾಮರಾಜಂ ಮಹಾಬೀಜಂ ಚಿಂತಯಂತಂ ಮನಸ್ಯಲಂ ॥೪೮॥**

ಆದರೆ, ಪರಾತ್ಪರಶಕ್ತಿರೂಪಳಾದ ದೇವಿಯನ್ನು ಭಜಿಸುತ್ತಿರುವ ಭಕ್ತನನ್ನು ನನ್ನ ಅಧೀನನನ್ನಾಗಿ ಮಾಡಿಕೊಳ್ಳಲು ನಾನು ಸರ್ವಥಾ ಸಮರ್ಥನಲ್ಲವು. ಕಾಮರಾಜಮಂತ್ರವೆಂದು ಪ್ರಸಿದ್ಧವಾಗಿರುವ ದೊಡ್ಡ ಬೀಜಮಂತ್ರವನ್ನು ಮನಸ್ಸಿನಲ್ಲಿ ಚೆನ್ನಾಗಿ ಧ್ಯಾನಿಸುತ್ತಿರುವ ಉಪಾಸಕನನ್ನು ನನ್ನ ವಶಮಾಡಿಕೊಳ್ಳಲು ಯಾವಾಗಲೂ ನನಗೆ ಸಾಧ್ಯವಿಲ್ಲವು.

**ತಾಂ ದೇವೀಂ ಚೇನ್ಮಹಾಶಕ್ತಿಂ ಸಂಶ್ರಿತೌ ಭಕ್ತಿಭಾವತಃ ।**
**ನ ತದಾ ಮಮ ಬಾಣಾನಾಂ ಗೋಚರೌ ತಾಪಸೌ ಕಿಲ ॥೪೯॥**

ಪರಾಶಕ್ತಿಸ್ವರೂಪಳಾದ ಆ ಮಹಾದೇವಿಯನ್ನು ಆಶ್ರಯಿಸಿ ಭಕ್ತಿಯಿಂದ ಧ್ಯಾನಿಸುತ್ತಿರುವವರಾದರೆ, ಆಗ ಆ ಋಷಿಗಳು ನನ್ನ ಬಾಣಗಳಿಗೆ ಗುರಿಯಾಗುವುದಿಲ್ಲವು.

|| ಇಂದ್ರ ಉವಾಚ ||

**ಗಚ್ಛ ತ್ವಂಚ ಮಹಾಭಾಗ ಸರ್ವೈಸ್ತತ್ರ ಸಮುದ್ಯತೈಃ ।**
**ಕಾರ್ಯಂ ಮಮಾತಿದುಃಸಾಧ್ಯಂ ಕರ್ತಾ ಹಿತಮನುತ್ತಮಂ ॥೫೦॥**

ಇಂದ್ರನು ಹೇಳಿದನು—ಓ ಮಹಿಮೆಯುಳ್ಳ ಮನ್ಮಥನೇ, ಈಗ ನೀನು ಪ್ರಯತ್ನಶಾಲಿಗಳಾದ ಎಲ್ಲರೊಡಗೂಡಿ ಅಲ್ಲಿಗೆ ಹೋಗು. ನನ್ನ ಈ ಅತ್ಯಂತಸಾಹಸ ಯುಕ್ತವಾದ ಮತ್ತು ಕಷ್ಟಸಾಧ್ಯವಾದ ಕಾರ್ಯವನ್ನು ಪ್ರಾರಂಭಿಸು. ಅವರು ದೇವೀಭಕ್ತರಾಗಿರಲಿ, ಇಲ್ಲದಿರಲಿ, ಉಪಕಾರಿಯಾದ ನೀನು ಪ್ರಯತ್ನವನ್ನು ಮಾತ್ರ ಮಾಡಲೇಬೇಕು. ಮುಂದಕ್ಕೆ ಆಗಬೇಕಾದುದು ಆಗಿಯೇ ಆಗುವುದು.

|| ವ್ಯಾಸ ಉವಾಚ ||

**ಇತಿ ತೇನ ಸಮಾದಿಷ್ಟಾ ಯಯುಃ ಸರ್ವೇ ಸಮುದ್ಯತಾಃ ।**
**ಯತ್ರ ತೌ ಧರ್ಮಪುತ್ರೌ ದ್ವೌ ತೇಪಾತೇ ದುಷ್ಕರಂ ತಪಃ ॥೫೧॥**

ವ್ಯಾಸಮುನಿಯು ಹೇಳಿದನು—ಇಂದ್ರನು ಅವರಿಗೆ ಈ ರೀತಿಯಾಗಿ ಹೇಳಲು, ಅವರೆಲ್ಲರೂ ಪ್ರಯತ್ನಪರರಾಗಿ ಒಟ್ಟುಗೂಡಿದವರಾಗಿ ಧರ್ಮಪುತ್ರರಾದ ಆ ನರನಾರಾಯಣಮುನಿಗಳು ಘೋರವಾದ ತಪಸ್ಸನ್ನು ಮಾಡುತ್ತಿರುವ ಗಂಧ ಮಾದನಪರ್ವತದ ಸಮೀಪಕ್ಕೆ ಹೋದರು.

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಪಂಚಮೋಽಧ್ಯಾಯಃ

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಐದನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಷಷ್ಠೋಽಧ್ಯಾಯಃ ||

### ಆರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಪ್ರಥಮಂ ತತ್ರ ಸಂಪ್ರಾಪ್ತೋ ವಸಂತಃ ಪರ್ವತೋತ್ತಮೇ ।**
**ಪುಷ್ಪಿತಾಃ ಪಾದಪಾಃ ಸರ್ವೇ ದ್ವಿರೇಫಾಲಿವಿರಾಜಿತಾಃ ॥೧॥**

ವ್ಯಾಸಮುನಿಯು ಹೇಳಿದನು—ಹೀಗೆ ಇಂದ್ರನ ಅನುಮತಿಯನ್ನು ಪಡೆದು ಮನ್ಮಥನು ಪರಿವಾರದೊಡನೆ ಗಂಧಮಾದನಪರ್ವತಕ್ಕೆ ಬಂದನು. ಆ ಶ್ರೇಷ್ಠವಾದ ಪರ್ವತದಲ್ಲಿ ಮೊದಲು ವಸಂತನು ಆವಿರ್ಭವಿಸಿದನು. ಅವನ ಆಗಮನದಿಂದ ಅಲ್ಲಿದ್ದ ವೃಕ್ಷಗಳೆಲ್ಲವೂ ಹೂವುಗಳನ್ನು ಬಿಟ್ಟು ಆ ಪುಷ್ಪಗಳ ವಾಸನೆಗಾಗಿ ಬಂದು ಸೇರಿದ ದುಂಬಿಗಳ ಸಾಲುಗಳಿಂದ ಕೂಡಿದವುಗಳಾಗಿ ಶೋಭಿಸಿದವು.

**ಆಮ್ರಾಶ್ಚ ಬಕುಲಾ ರಮ್ಯಾಸ್ತಿಲಕಾಃ ಕಿಂಶುಕಾಃ ಶುಭಾಃ ।**
**ಸಾಲಾಸ್ತಾಲಾಸ್ತಮಾಲಾಶ್ಚ ಮಧೂಕಾಃ ಪುಷ್ಪಿತಾ ಬಭುಃ ॥೨॥**

ಮಾವು, ಬಕುಲ, ತಿಲಕ, ಮುತ್ತುಗ, ಮತ್ತೀ, ಹೊಂಗೆ, ತಾಳೆ, ಹಿಪ್ಪೆ ಈ ಮುಂತಾದ ಗಿಡಮರಗಳು ಹೂವುಗಳಿಂದ ಕೂಡಿ ರಮ್ಯವಾಗಿ ಕಾಣತೊಡಗಿದುವು.

**ಬಭೂವುಃ ಕೋಕಿಲಾಲಾಪಾ ವೃಕ್ಷಾಗ್ರೇಷು ಮನೋಹರಾಃ ।**
**ವಲ್ಲ್ಯೋಽಪಿ ಪುಷ್ಪಿತಾಃ ಸರ್ವಾ ಆಲಿಲಿಂಗುರ್ನಗೋತ್ತಮಾನ್ ॥೩॥**

ಈ ರೀತಿಯಾದ ಅರಳಿದ ಹೂವುಗಳಿಂದ ಅಲಂಕೃತವಾದ ಗಿಡಗಳ ತುದಿಗಳಲ್ಲಿ ಮೃದುಮಧುರವಾದ ಕೋಕಿಲೆಯ ಸ್ವರಗಳು ವಿಜೃಂಭಿಸತೊಡಗಿದುವು. ಪುಷ್ಪಗಳಿಂದ

ತುಂಬಿದ ಬಳ್ಳಿಗಳೂ ಈ ಗಿಡಗಳನ್ನೆಲ್ಲಾ ಆಲಿಂಗಿಸಿದಂತೆ ಹಬ್ಬಿ ಮನೋಹರವಾಗಿ ಕಾಣಬಂದುವು.

**ಪ್ರಾಣಿನಃ ಸ್ವಾಸು ಭಾರ್ಯಾಸು ಪ್ರೇಮಯುಕ್ತಾಃ ಸ್ಮರಾತುರಾಃ ।**
**ಬಭೂವುಶ್ಚಾತಿಮತ್ತಾಶ್ಚ ಕ್ರೀಡಾಸಕ್ತಾಃ ಪರಸ್ಪರಂ ॥೪॥**

ಅಲ್ಲಿದ್ದ ಪ್ರಾಣಿಗಳು, ಈ ವಸಂತಋತುವಿನ ಆಗಮನದಿಂದ, ಹೆಚ್ಚಾದ ಕಾಮನೆಯುಳ್ಳವಾಗಿ ಪ್ರೇಮದಿಂದ ತಮ್ಮ ತಮ್ಮ ಪ್ರಿಯೆಯರೊಡನೆ ಮದದಿಂದ ಕೂಡಿದವುಗಳಾಗಿ ಕ್ರೀಡಿಸಲು ಮೊದಲು ಮಾಡಿದುವು.

**ವವುರ್ಮಂದಾಃ ಸುಗಂಧಾಶ್ಚ ಸುಸ್ಪರ್ಶಾ ದಕ್ಷಿಣಾನಿಲಾಃ ।**
**ಇಂದ್ರಿಯಾಣಿ ಪ್ರಮಾಥೀನಿ ಮುನೀನಾಮಪಿ ಚಾ ಭವನ್ ॥೫॥**

ಚಂದನವನದ ಮೇಲೆ ಬೀಸಿ ಪರಿಮಳದಿಂದ ಕೂಡಿ ಬರುತ್ತಿರುವ ದಕ್ಷಿಣ ದಿಕ್ಕಿನ, ಸುಗಂಧದಿಂದ ಕೂಡಿದ, ಸ್ಪರ್ಶಾಹ್ಲಾದಕರವಾದ ತಂಗಾಳಿಗಳು ಮೆಲ್ಲನೆ ಬೀಸತೊಡಗಿದವು. ಈ ರೀತಿಯಾಗಿ ಬೀಸುತ್ತಿರುವ ಮಂದಮಾರುತಗಳು ಮುನಿಗಳ ಮನಸ್ಸನ್ನೂ ಕೂಡ ಕಲಕಿ, ಅವರನ್ನು ಮನ್ಮಥವಿಕಾರಪರವಶರನ್ನಾಗಿ ಮಾಡಿದುವು.

**ರತಿಯುಕ್ತಸ್ತತಃ ಕಾಮಃ ಪೂರಯನ್ಪಂಚಮಾರ್ಗಣಾನ್ ।**
**ಚಕಾರ ತ್ವರಿತಸ್ತತ್ರ ವಾಸಂ ಬದರಿಕಾಶ್ರಮೇ ॥೬॥**

ಆ ಸಮಯದಲ್ಲಿ ಮನ್ಮಥನು ರತಿದೇವಿಯೊಡಗೂಡಿ, ತನ್ನ ಐದು ಬಾಣಗಳನ್ನೂ ಬಿಲ್ಲಿಗೇರಿಸಿ ಬಹಳ ಜಾಗ್ರತೆಯಿಂದ ಬಂದು ವಸಂತನಿಂದ ಪೂರ್ವಭಾವಿಯಾಗಿ ಸಿದ್ಧಗೊಳಿಸಲ್ಪಟ್ಟ ಬದರಿಕಾಶ್ರಮದಲ್ಲಿ ವಾಸಮಾಡಿದನು.

**ರಂಭಾತಿಲೋತ್ತಮಾದ್ಯಾಶ್ಚ ಗತ್ವಾ ತತ್ರ ವರಾಶ್ರಮೇ ।**
**ಗಾನಂ ಚಕ್ರುಃ ಸುಗೀತಜ್ಞಾಃ ಸ್ವರತಾನಸಮನ್ವಿತಂ ॥೭॥**

ಸಂಗೀತಶಾಸ್ತ್ರದಲ್ಲಿ ನಿಪುಣೆಯರಾದ ರಂಭೆ, ತಿಲೋತ್ತಮೆ ಮೊದಲಾದ ಅಪ್ಸರೆಯರೂ ಆ ಶ್ರೇಷ್ಠವಾದ ಆಶ್ರಮಕ್ಕೆ ಹೋಗಿ, ಸ್ವರಮೂರ್ಛನವಿಸ್ತಾರಗಳಿಂದ ಕೂಡಿದ ಮೃದುಮಧುರಗಾನವನ್ನು ಹಾಡಲುಪಕ್ರಮಿಸಿದರು.

**ತಚ್ಛ್ರುತ್ವಾ ಮಧುರೋದ್ಗೀತಂ ಕೋಕಿಲಾನಾಂ ಚ ಕೂಜಿತಂ ।**
**ಭ್ರಮರಾಲಿವಿರಾವಂ ಚ ಪ್ರಬುದ್ಧೌ ತೌ ಮುನೀಶ್ವರೌ ॥೮॥**

ಕಿವಿಗಿಂಪಾಗಿ ಉಚ್ಚಧ್ವನಿಯಲ್ಲಿ ಹಾಡುತ್ತಿರುವ ಆ ಗಾನವನ್ನೂ, ಕೋಕಿಲೆಗಳ ಮನೋಹರವಾದ ಕುಹೂರವವನ್ನೂ, ದುಂಬಿಗಳ ಮಧುರ ಝೇಂಕಾರನಾದವನ್ನೂ ಕೇಳಿ ಆ ಋಷಿಶ್ರೇಷ್ಠರಿಬ್ಬರೂ ತಪಸ್ಸಿನಿಂದ ಬಹಿರ್ಮುಖರಾಗಿ ಎಚ್ಚರಗೊಂಡವರಾದರು.

**ಋತುರಾಜಮಕಾಲೇ ತು ದೃಷ್ಟ್ವಾ ತೌ ಪುಷ್ಪಿತಂ ವನಂ ।**
**ಜಾತೌ ಚಿಂತಾಪರೌ ತತ್ರ ನರನಾರಾಯಣಾವೃಷೀ ॥೯॥**

ವಸಂತಕಾಲವಲ್ಲದ ಈ ಅಕಾಲದಲ್ಲಿ ಋತುಗಳ ರಾಜನಾದ ವಸಂತಋತುವಿನ ಪ್ರಭಾವವನ್ನೂ, ಅರಳಿದ ಹೂಗಳೇ ಮೊದಲಾದವುಗಳಿಂದ ಗುರುತಿಸಿದವರಾಗಿ, ಇದು ಏನು ? ಆಶ್ಚರ್ಯಕರವಾಗಿದೆಯಲ್ಲ ! ಎಂದು ಆ ನರನಾರಾಯಣಋಷಿಗಳಿಬ್ಬರೂ ಆಲೋಚನೆಗೀಡಾದರು.

**ಕಿಮದ್ಯ ಶಿಶಿರಾಪಾಯಃ ಸಂವೃತ್ತಃ ಸಮಯಂ ವಿನಾ ।**
**ಪ್ರಾಣಿನೋ ವಿಹ್ವಲಾಃ ಸರ್ವೇ ಲಕ್ಷ್ಯಂತೇಽತಿಸ್ಮರಾತುರಾಃ ॥೧೦॥**

ಇದೇನು ? ಅಕಾಲದಲ್ಲಿ ಈ ಶಿಶಿರಋತುವು ಕಳೆದುಹೋಯಿತೇ ? ಈ ಪ್ರಾಣಿಗಳೂ ವ್ಯಾಕುಲತೆಯಿಂದ ಚಂಚಲವಾಗಿ ಕಾಮಬಾಧೆಯಿಂದ ಕೂಡಿದವುಗಳಾಗಿ ಕಾಣುತ್ತಿರುವುವು.

**ಕಾಲಧರ್ಮವಿಪರ್ಯಾಸಃ ಕಥಮದ್ಯ ದುರಾಸದಃ ।**
**ನರಂ ನಾರಾಯಣಃ ಪ್ರಾಹ ವಿಸ್ಮಯೋತ್ಫುಲ್ಲಲೋಚನಃ ॥೧೧॥**

ಅಸಂಭಾವ್ಯವಾದ ಈ ಕಾಲಧರ್ಮದ ಬದಲಾವಣೆಯು ಹೇಗೆ ಉಂಟಾಯಿತು? ಈ ರೀತಿಯಾದ ಆಶ್ಚರ್ಯವನ್ನು ನೋಡಿದುದರಿಂದ ಅರಳಿದ ಕಣ್ಣುಗಳುಳ್ಳ ನಾರಾಯಣನು ನರನನ್ನು ಕುರಿತು ಹೀಗೆ ಹೇಳಿದನು.

॥ ನಾರಾಯಣ ಉವಾಚ ॥

**ಪಶ್ಯ ಭ್ರಾತರಿಮೇ ವೃಕ್ಷಾಃ ಪುಷ್ಪಿತಾಃ ಪ್ರತಿಭಾಂತಿ ವೈ**
**ಕೋಕಿಲಾಲಾಪಸಂಘುಷ್ಟಾ ಭ್ರಮರಾಲಿವಿರಾಜಿತಾಃ ॥೧೨॥**

ನಾರಾಯಣಋಷಿಯು ಹೇಳಿದನು—ಎಲೈ ಸಹೋದರನೇ, ಇಲ್ಲಿ ನೋಡು. ಈ ವೃಕ್ಷಗಳೆಲ್ಲವೂ ಹೂಗಳಿಂದ ಕೂಡಿದವಾಗಿ ದುಂಬಿಗಳ ಸಮೂಹದಿಂದಲೂ, ಧ್ವನಿಮಾಡುತ್ತಿರುವ ಕೋಕಿಲೆಗಳಿಂದಲೂ ಶಬ್ದಾಯಮಾನವಾಗಿ ಪ್ರಕಾಶಿಸುತ್ತಿವೆ.

ಶಿಶಿರಂ ಭೀಮಮಾತಂಗಂ ದಾರಯನ್ಸ್ವಖರೈರ್ನಖೈಃ ।
ವಸಂತಕೇಸರೀ ಪ್ರಾಪ್ತಃ ಪಲಾಶಕುಸುಮೈರ್ಮುನೇ ॥೧೩॥

ಚಳಿಯಿಂದ ಭಯಂಕರವಾಗಿರುವ ದೊಡ್ಡ ಆನೆಯೆಂಬ ಶಿಶಿರಋತುವನ್ನೂ ತನ್ನ ತೀಕ್ಷ್ಣವಾದ ಉಗುರುಗಳೆಂಬ ಮುತ್ತುಗಮರದ ಹೂವುಗಳಿಂದ ಸೀಳುತ್ತ ನಾಶಮಾಡುತ್ತಿರುವ ವಸಂತಋತುವೆಂಬ ಸಿಂಹವು ಈಗ ಬಂದಿರುತ್ತದೆ.

ರಕ್ತಾಶೋಕಕರಾ ತನ್ವೀ ದೇವರ್ಷೇ ಕಿಂಶುಕಾಂಘ್ರಿಕಾ ।
ನೀಲಾಶೋಕಕಚಾ ಶ್ಯಾಮಾ ವಿಕಾಸಿಕಮಲಾನನಾ ॥೧೪॥

ಓ ದೇವರ್ಷಿಯಾದ ನರನೇ, ಅಲ್ಲದೆ, ಆ ವಸಂತಸಿಂಹವು ವಸಂತಲಕ್ಷ್ಮಿ ಯಿಂದಲೂ ಕೂಡಿರುವಂತೆ ತೋರುತ್ತಾ ಲಕ್ಷ್ಮೀನೃಸಿಂಹನಂತೆ ಉದ್ಭವಿಸಿ ಇರು ವಂತಿದೆ. ಹೇಗೆಂದರೆ, ಕೆಂಪಾದ ಅಶೋಕವೃಕ್ಷಗಳೇ ಆ ವಸಂತಲಕ್ಷ್ಮಿಯ ಹಸ್ತ ಗಳಂತಿವೆ. ಕೆಂಪಾಗಿರುವ ಹೂವುಗಳಿಂದ ಕೂಡಿದ ಮುತ್ತುಗಮರವೇ ಪಾದ ಗಳಂತಿವೆ. ಕಪ್ಪಾಗಿರುವ ಅಶೋಕವೃಕ್ಷಗಳೇ ಅವಳ ಕೇಶಸಮೂಹದಂತಿವೆ. ಅರ ಳಿದ ಪದ್ಮವೇ ಅವಳ ಮುಖದಂತಿದೆ. ಹೀಗೆ ವಸಂತಲಕ್ಷ್ಮಿಯೂ ಉದ್ಭವಿಸಿರುವಳು.

ನೀಲೇಂದೀವರನೇತ್ರಾ ಸಾ ಬಿಲ್ವವೃಕ್ಷಫಲಸ್ತನೀ ।
ಪ್ರೋತ್ಫುಲ್ಲಕುಂದರದನಾ ಮಂಜರೀಕರ್ಣಶೋಭಿತಾ ॥೧೫॥

ಅಷ್ಟೇ ಅಲ್ಲದೆ ನೀಲಬಣ್ಣದಿಂದ ಕೂಡಿದ ಕನ್ನೈದಿಲೆಯ ಪುಷ್ಪಗಳೇ ಅವಳ ಕಣ್ಣುಗಳಂತಿವೆ. ಬಿಲ್ವವೃಕ್ಷದ ಫಲಗಳೇ ಸ್ತನಗಳಂತಿವೆ. ತುಂಬಿದ ಮಲ್ಲಿಗೆಯ ಮೊಗ್ಗುಗಳೇ ದಂತಗಳಂತಿವೆ. ಹೂಗೊಂಚಲೇ ಕರ್ಣಾಭರಣದಂತಿವೆ. ಹೀಗೆ ವಸಂತ ಲಕ್ಷ್ಮಿಯು ಶೋಭಿಸುತ್ತಿರುವಳು.

ಬಂಧುಜೀವಾಧರಾಶುಭ್ರಾ ಸಿಂಧುವಾರನಖಾದ್ಭುತಾ ।
ಪುಂಸ್ಕೋಕಿಲಸ್ವರಾ ಪುಣ್ಯಾ ಕದಂಬವಸನಾ ಶುಭಾ ॥೧೬॥

ಮತ್ತು, ಕೆಂಪುಹೂವಿನಗಿಡವೇ ಅವಳ ನಿರ್ಮಲವಾದ ತುಟಿಯಂತಿದೆ. ಸಿಂಧು ವಾರವೃಕ್ಷವೇ ಉಗುರುಗಳಂತಿದೆ. ಕೋಕಿಲೆಯ ಸ್ವರವೇ ಅವಳ ಮಾತಿನ ಸ್ವರದಂತಿದೆ. ಕದಂಬವೃಕ್ಷಸಮೂಹವೇ ಹೊಂಬಣ್ಣದ ಪಟ್ಟಾಂಬರದಂತಿದೆ.

**ಬರ್ಹಿಬೃಂದ ಕಲಾಪಾ ಚ ಸಾರಸಸ್ವನನೂಪೂರಾ ।**
**ವಾಸಂತೀ ಬದ್ಧರಶನಾ ಮತ್ತಹಂಸಗತಿಸ್ತಥಾ ॥೧೭॥**

ನವಿಲುಗಳ ಸಮೂಹವೇ ನವರತ್ನ ಖಚಿತಕೇಶಾಭರಣದಂತಿದೆ. ಸಾರಸಪಕ್ಷಿಗಳ ಕಲಕಲಧ್ವನಿಯೇ ಅವಳ ಕಾಲುಕಡಗದ ಧ್ವನಿಯಂತಿದೆ. ಮಾಧವೀಲತೆಯೇ ಆಕೆಯ ಡಾಬಿನಂತಿದೆ. ಮದದಿಂದ ಕೂಡಿದ ಹಂಸಪಕ್ಷಿಯ ನಡೆಯೇ ಅವಳ ನಡಿಗೆಯಂತಿದೆ.

**ಪುತ್ರಜೀವಾಂಶುಕನ್ಯಸ್ತರೋಮರಾಜಿವಿರಾಜಿತಾ ।**
**ವಸಂತಲಕ್ಷ್ಮೀಃ ಸಂಪ್ರಾಪ್ತಾ ಬ್ರಹ್ಮನ್ ಬದರಿಕಾಶ್ರಮೇ ॥೧೮॥**

ಕದಂಬವೃಕ್ಷದ ಕೆಳಗೆ ಬೆಳೆದಿರುವ ಪುತ್ರಜೀವವೃಕ್ಷಗಳೇ ಅವಳ ರೋಮರಾಜಿಗಳಂತೆ ತೋರುತ್ತಿವೆ. ಓ ಬ್ರಹ್ಮಜ್ಞಾನಿಯಾದ ಸೋದರನೇ, ಹೀಗೆ ವಸಂತಲಕ್ಷ್ಮಿಯೂ ಈ ಬದರಿಕಾಶ್ರಮದಲ್ಲಿ ಆವಿರ್ಭವಿಸಿರುತ್ತಾಳೆ.

**ಅಕಾಲೇ ಕಿಮಿಯಂ ಪ್ರಾಪ್ತಾ ವಿಸ್ಮಯೋಽಯಂ ಮಮಾಧುನಾ ।**
**ತಪೋವಿಘ್ನಕರಾ ನೂನಂ ದೇವರ್ಷೇ ಪರಿಚಿಂತಯ ॥೧೯॥**

ಓ ಸೋದರನಾದ ದೇವರ್ಷಿಯೇ, ಕಾಲವಲ್ಲದ ಈ ಕಾಲದಲ್ಲಿ ಈ ವಸಂತಲಕ್ಷ್ಮಿಯು ಪ್ರಾಪ್ತವಾದುದು ಏಕೆ ? ಇದನ್ನು ನೋಡಿ ನನಗೆ ಆಶ್ಚರ್ಯವುಂಟಾಗಿರುತ್ತದೆ. ನೀನೂ ಇದನ್ನು ಆಲೋಚಿಸು. ಇವೆಲ್ಲವೂ ಖಂಡಿತವಾಗಿ ತಪಸ್ಸಿಗೆ ವಿಘ್ನವನ್ನುಂಟುಮಾಡುವವಲ್ಲವೇ ?

**ಶ್ರೂಯತೇ ಸುರನಾರೀಣಾಂ ಗಾನಂ ಧ್ಯಾನವಿನಾಶನಂ ।**
**ಆವಯೋಸ್ತಪಿಭಂಗಾಯ ಕೃತಂ ಮಘವತಾ ಕಿಲ ॥೨೦॥**

ಧ್ಯಾನವನ್ನು ಹಾಳುಮಾಡುವ ಅಪ್ಸರಸ್ತ್ರೀಯರ ಸಂಗೀತದ ಕಂಠಸ್ವರವು ಕೇಳಿಬರುತ್ತಿದೆ. ಇವೆಲ್ಲವೂ ನಮ್ಮಿಬ್ಬರ ತಪಸ್ಸಿಗೆ ವಿಘ್ನವನ್ನುಂಟುಮಾಡಲು ಇಂದ್ರನಿಂದ ಏರ್ಪಡಿಸಲ್ಪಟ್ಟಿರಬೇಕಲ್ಲವೇ ?

ಋತುರಾಡನ್ಯಥಾಕಾಲೇ ಪ್ರೀತಿಂ ಸಂಜನಯೇತ್ಕಥಂ ।
ವಿಘ್ನೋಽಯಂ ವಿಹಿತೋ ಭಾತಿ ಭೀತೇನಾಽಸುರಶತ್ರುಣಾ ॥೨೧॥

ಹಾಗಲ್ಲದಿದ್ದರೆ, ಋತುರಾಜನೆನಿಸಿದ ವಸಂತನು ಈ ಅಕಾಲದಲ್ಲಿ ನಮ್ಮ ಮನಸ್ಸಿನಲ್ಲಿ ಕಾಮಭಾವವನ್ನುಂಟುಮಾಡಿರುವುದನ್ನು ನೋಡಿದರೆ, ಇಂದ್ರನೇ ನಮ್ಮ ತಪಸ್ಸಿನಿಂದ ಹೆದರಿ ಈ ರೀತಿಯಲ್ಲಿ ತಪೋವಿಘ್ನವನ್ನುಂಟುಮಾಡಿರಬೇಕೆಂದು ತೋರಿಬರುತ್ತಿದೆ.

ವಾತಾಃ ಸುಗಂಧಾಃ ಶೀತಾಶ್ಚ ಸಮಾಯಾಂತಿ ಮನೋಹರಾಃ ।
ನಾನ್ಯತ್ಕಾರಣಮಸ್ತೀಹ ಶತಕ್ರತುಕೃತಿಂ ವಿನಾ ॥೨೨॥

ಸುಗಂಧದಿಂದಲೂ ತಂಪಿನಿಂದಲೂ ಕೂಡಿದ ಮನೋಹರವಾದ ಮಂದಮಾರುತವು ಬೀಸುತ್ತಿದೆ. ಇದಕ್ಕೆಲ್ಲವೂ ಇಂದ್ರನ ಕೆಲಸದ ಹೊರತು ಬೇರೆ ಕಾರಣವು ಯಾವುದೂ ಇರುವುದಿಲ್ಲವು.

ಇತಿ ಬ್ರುವತಿ ವಿಪ್ರಾಗ್ರ್ಯೇ ದೇವೇ ನಾರಾಯಣೇ ವಿಭೌ ।
ಸರ್ವೇ ದೃಷ್ಟಿಪಥಂ ಪ್ರಾಪ್ತಾ ಮನ್ಮಥಪ್ರಮುಖಾಸ್ತದಾ ॥೨೩॥

ಬ್ರಹ್ಮರ್ಷಿಗಳಲ್ಲಿ ಶ್ರೇಷ್ಠನಾದ ನಾರಾಯಣನು ನರನಿಗೆ ಈ ರೀತಿಯಲ್ಲಿ ಹೇಳುತ್ತಿರಲು ಹಾಗೆಯೇ ಮನ್ಮಥನೇ ಮೊದಲಾದ ಅಪ್ಸರೆಯರೂ, ವಸಂತನೂ ಅವರ ದೃಷ್ಟಿಗೆ ಗೋಚರಿಸಿದರು.

ದದರ್ಶ ಭಗವಾನ್ಸರ್ವಾನ್ನರೋ ನಾರಾಯಣಸ್ತಥಾ ।
ವಿಸ್ಮಯಾವಿಷ್ಟಮನಸೌ ಬಭೂವತುರುಭಾವಪಿ ॥೨೪॥

ಮಹಾಮಹಿಮಶಾಲಿಗಳಾದ ಆ ನರನಾರಾಯಣರಿಬ್ಬರೂ ಅವರೆಲ್ಲರನ್ನೂ ನೋಡಿ ಹಾಗೆಯೇ ಆಶ್ಚರ್ಯದಿಂದ ಪರವಶವಾದ ಮನಸ್ಸುಳ್ಳವರಾದರು.

ಮನ್ಮಥಂ ಮೇನಕಾಂ ಚೈವ ರಂಭಾಂ ಚೈವ ತಿಲೋತ್ತಮಾಂ ।
ಪುಷ್ಪಗಂಧಾಂ ಸುಕೇಶೀಂ ಚ ಮಹಾಶ್ವೇತಾಂ ಮನೋರಮಾಂ ॥೨೫॥

ಪ್ರಮದ್ವರಾಂ ಘೃತಾಚೀಂ ಚ ಗೀತಜ್ಞಾಂ ಚಾರುಹಾಸಿನೀಂ ।
ಚಂದ್ರಪ್ರಭಾಂ ಚ ಸೋಮಾಂ ಚ ಕೋಕಿಲಾಲಾಪಮಂಡಿತಾಂ ॥೨೬॥

**ವಿದ್ಯುನ್ಮಾಲಾಂಬುಜಾಕ್ಷೀಂ ಚ ತಥಾ ಕಾಂಚನಮಾಲಿನೀಂ ।**
**ಏತಾಶ್ಚಾನ್ಯಾ ವರಾರೋಹಾ ದೃಷ್ಟ್ವಾಸ್ತಾಭ್ಯಾಂ ತದಾಂತಿಕೇ ॥೨೭॥**

**ತಾಸಾಂ ದ್ವ್ಯಷ್ಟಸಹಸ್ರಾಣಿ ಪಂಚಾಶದಧಿಕಾನಿ ಚ ।**
**ವೀಕ್ಷ್ಯ ತೌ ವಿಸ್ಮಿತೌ ಜಾತೌ ಕಾಮಸೈನ್ಯಂ ಸುವಿಸ್ತರಂ ॥೨೮॥**

ಮತ್ತು ಅಲ್ಲಿ ಮನ್ಮಥನನ್ನೂ, ಮೇನಕೆ, ರಂಭೆ, ತಿಲೋತ್ತಮೆ, ಹೂವಿನ ಗಂಧದಿಂದ ಕೂಡಿದ ಸುಕೇಶೀ ಮಹಾಶ್ವೇತಾ, ಮನೋರಮಾ, ಹೆಂಗಸರಲ್ಲಿ ಶ್ರೇಷ್ಠಳಾದ ಗಾನವಿಶಾರದೆಯಾದ ಮತ್ತು ಮನೋಹರವಾದ ಮುಗುಳನಗೆಯಿಂದ ಕೂಡಿದ ಘೃತಾಚೀ, ಕೋಕಿಲೆಯ ಆಲಾಪದಂತೆ ಕಂಠಧ್ವನಿಯುಳ್ಳ ಚಂದ್ರಪ್ರಭೆ, ಸೋಮಾ, ವಿದ್ಯುನ್ಮಾಲೆ, ಅಂಬುಜಾಕ್ಷೀ, ಕಾಂಚನಮಾಲಿನೀ, ಇವರೇ ಮೊದಲಾದ ತುಂಬ, ಸುಖಕರವಾದ ಇನ್ನೂ ಅನೇಕರಾದ ಅಪ್ಸರಸ್ತ್ರೀರತ್ನಗಳಿಂದ ಕೂಡಿದ, ಹದಿನಾರು ಸಾವಿರದ ಐವತ್ತು ಸಂಖ್ಯೆಯುಳ್ಳ ಆ ಮನ್ಮಥನ ವಿಶಾಲವಾದ ಸೈನ್ಯವನ್ನೂ ತಮ್ಮ ಸಮೀಪದಲ್ಲಿರುವುದನ್ನು ನೋಡಿ ಅವರಿಬ್ಬರೂ ಆಶ್ಚರ್ಯಮಗ್ನರಾದರು.

**ಪ್ರಣಮ್ಯಾಗ್ರೇ ಸ್ಥಿತಾಃ ಸರ್ವಾ ದೇವವಾರಾಂಗನಾಸ್ತದಾ ।**
**ದಿವ್ಯಾಭರಣಭೂಷಾಢ್ಯಾ ದಿವ್ಯಮಾಲ್ಯೋಪಶೋಭಿತಾಃ ॥೨೯॥**

ಶ್ರೇಷ್ಠವಾದ ಆಭರಣಗಳಿಂದಲೂ, ಸುಗಂಧವುಳ್ಳ ಹೂವಿನ ಸರಗಳಿಂದಲೂ ಭೂಷಿತರಾದ ಆ ದೇವಲೋಕದ ವೇಶ್ಯಾಸ್ತ್ರೀಯರಾದ ನಾರಿಯರೆಲ್ಲರೂ ನರನಾರಾಯಣರನ್ನು ಆಗ ನಮಸ್ಕರಿಸಿ ಅವರ ಮುಂದೆ ನಿಂತುಕೊಂಡರು.

**ಜಗುಶ್ಚ ಲೀನ ತಾಃ ಸರ್ವಾಃ ಪೃಥಿವ್ಯಾಮತಿದುರ್ಲಭಂ ।**
**ತತ್ತಥಾವಸ್ಥಿತಂ ದಿವ್ಯಂ ಮನ್ಮಥಾದಿವಿವರ್ಧನಂ ॥೩೦॥**

ಅವರೆಲ್ಲರೂ, ಭೂಮಿಯಲ್ಲಿ ಮಾನವರಿಗೆ ಸಾಮಾನ್ಯವಾಗಿ ದುರ್ಲಭವಾದಂಥ ಗಾನವನ್ನು ಒಬ್ಬರನ್ನೊಬ್ಬರು ಮೀರಿಸುವಂತೆ ಶ್ರಾವ್ಯವಾಗಿ ಹಾಡಿದರು. ಉತ್ತಮವಾದ ಆ ಸಂಗೀತವು ಸ್ವರ್ಗೀಯಗಾನದಂತೆಯೇ ಇದ್ದು ಕೇಳುವವರ ಮನಸ್ಸಿನಲ್ಲಿ ಕಾಮಭಾವ ಮುಂತಾದ ಆಶೆಗಳನ್ನು ಬೆಳೆಯಿಸುತ್ತಿತ್ತು.

**ಶುಶ್ರಾವ ಭಗವಾನ್ವಿಷ್ಣುರ್ನರರೋ ನಾರಾಯಣಸ್ತದಾ ।**
**ಶ್ರುತ್ವಾ ಪ್ರೋವಾಚ ತಾಸ್ತತ್ರ ಪ್ರೀತ್ಯಾ ನಾರಾಯಣೋ ಮುನಿಃ ॥೩೧॥**

ಆಗ ಆ ಗಾನವೆನ್ನು ವಿಷ್ಣುರೂಪರಾದ, ನರನೂ ನಾರಾಯಣನೂ ಕೇಳಿದರು. ಅವರಲ್ಲಿ ನಾರಾಯಣನು ಆ ಸ್ತ್ರೀಯರನ್ನು ಕುರಿತು ಪ್ರೇಮದೊಡನೆ ಹೀಗೆ ಹೇಳಿದನು.

**ಆಸ್ಯತಾಂ ಸುಖಮತ್ರೈವ ಕರೋಮ್ಯಾತಿಥ್ಯಮುದ್ಭುತಂ ।**
**ಭವಂತ್ಯೋಽತಿಥಿಧರ್ಮೇಣ ಪ್ರಾಪ್ತಾಃ ಸ್ವರ್ಗಾತ್ಸುಮಧ್ಯಮಾಃ ॥೩೨॥**

ನೀವೆಲ್ಲರೂ ಇಲ್ಲಿ ಸುಖವಾಗಿ ಕುಳಿತು ವಿಶ್ರಮಿಸಿಕೊಳ್ಳಿರಿ. ಸುಂದರವಾದ ನಡುವಿನಿಂದ ಶೋಭಿಸುವ ಎಲೌ ಮಹಿಳೆಯರೇ, ನಿವೆಲ್ಲರೂ ಸ್ವರ್ಗದಿಂದ ಅತಿಥಿಗಳಾಗಿ ಇಲ್ಲಿಗೆ ಬಂದಿರುತ್ತೀರಿ. ನಿಮಗೆಲ್ಲರಿಗೂ ನಾನು ಉತ್ಕೃಷ್ಟವಾದ ಅತಿಥಿ ಸತ್ಕಾರವನ್ನು ಈಗ ಮಾಡುವೆನು.

॥ ವ್ಯಾಸ ಉವಾಚ ॥

**ಸಾಭಿಮಾನಸ್ತು ಸಂಜಾತಸ್ತದಾ ನಾರಾಯಣೋ ಮುನಿಃ ।**
**ಇಂದ್ರೇಣ ಪ್ರೇಷಿತಾ ನೂನಂ ತಥಾ ವಿಘ್ನಚಿಕೀರ್ಷಯಾ ॥೩೩॥**

ವ್ಯಾಸನು ಹೇಳಿದನು—ಆಗ ಆ ನಾರಾಯಣಋಷಿಯೂ ಅಹಂಕಾರವುಳ್ಳವನಾದನು. ಮತ್ತು ಅವರು ತನ್ನ ತಪಸ್ಸಿನ ವಿಘ್ನವನ್ನುಂಟುಮಾಡುವುದಕ್ಕಾಗಿ ಇಂದ್ರನಿಂದ ಕಳುಹಿಸಲ್ಪಟ್ಟಿರುವರೆಂಬದು ನಿಶ್ಚಯವು ಎಂದೂ ತಿಳಿದನು.

**ವರಾಕ್ಯಃ ಕಾ ಇಮಾಃ ಸರ್ವಾಃ ಸೃಜಾಮ್ಯದ್ಯ ನವಾಃ ಕಿಲ ।**
**ಏತಾಭ್ಯೋ ದಿವ್ಯರೂಪಾಶ್ಚ ದರ್ಶಯಾಮಿ ತಪೋಬಲಂ ॥೩೪॥**

ಕೆಟ್ಟವರೂ ಅಲ್ಪರೂ ಆದ ಈ ಅಪ್ಸರಸ್ತ್ರೀಯರು ಎಷ್ಟುಮಾತ್ರದವರು ? ಈ ಎಲ್ಲರ ಸೌಂದರ್ಯಕ್ಕಿಂತಲೂ ಅತಿಶಯವಾಗಿ ದಿವ್ಯರೂಪವುಳ್ಳ ಬೇರೆ ಸ್ತ್ರೀಯರನ್ನು ಹೊಸದಾಗಿ ಉಂಟುಮಾಡುತ್ತೇನೆ. ನನ್ನ ತಪಸ್ಸಿನ ಶಕ್ತಿಯನ್ನು ಇವರಿಗೆ ತೋರಿಸುತ್ತೇನೆ ಎಂದು ಅಹಂಭಾವದಿಂದ ಕೂಡಿದವನಾದನು.

**ಇತಿ ಸಂಚಿಂತ್ಯ ಮನಸಾ ಕರೇಣೋರುಂ ಪ್ರತಾಡ್ಯ ವೈ ।**
**ತರಸೋತ್ಪಾದಯಾಮಾಸ ನಾರೀಂ ಸರ್ವಾಂಗಸುಂದರೀಂ ॥೩೫॥**

ಈ ರೀತಿಯಾಗಿ ಮನಸ್ಸಿನಲ್ಲಿ ಯೋಚಿಸಿ ಆ ನಾರಾಯಣಋಷಿಯು ಕೈಯಿಂದ ತನ್ನ ತೊಡೆಯನ್ನು ತಟ್ಟಿದನು. ಕೂಡಲೇ ಸರ್ವಾವಯವ ಸುಂದರಿಯಾದ ಸ್ತ್ರೀಯೊಬ್ಬಳನ್ನು ಸೃಷ್ಟಿಸಿದನು.

**ನಾರಾಯಣೋರುಸಂಭೂತಾ ಹ್ಯೂರ್ವಶೀತಿ ತತಃ ಶುಭಾ ।**
**ದದೃಶುಸ್ತಾಃ ಸ್ಥಿತಾಸ್ತತ್ರ ವಿಸ್ಮಯಂ ಪರಮಂ ಯಯುಃ ॥೩೬॥**

ನಾರಾಯಣಋಷಿಯ ತೊಡೆಯಿಂದ ಜನಿಸಿದ ಶೋಭನಾಂಗಿಯಾದ ಆ ಊರ್ವಶಿಯನ್ನು ಅಲ್ಲಿ ಕೂಡಿದ್ದ ಅಪ್ಸರೆಯರೆಲ್ಲರೂ ನೋಡಿ ಪರಮಾಶ್ಚರ್ಯವನ್ನು ಹೊಂದಿದರು. ಅವಳು ನಾರಾಯಣಋಷಿಯ ತೊಡೆಯಿಂದ ಉಂಟಾದುದರಿಂದ ಆವಳಿಗೆ ಊರ್ವಶೀ ಎಂದು ಹೆಸರು ಪ್ರಸಿದ್ಧಿಯಾಯಿತು.

**ತಾಸಾಂ ಚ ಪರಿಚರ್ಯಾರ್ಥಂ ತಾವತೀಶ್ಚಾತಿಸುಂದರೀಃ ।**
**ಪ್ರಾದುಶ್ಚಕಾರ ತರಸಾ ತದಾ ಮುನಿರಸಂಭ್ರಮಃ ॥೩೭॥**

ಆ ಮುನಿಯು ಶಾಂತನಾಗಿರುತ್ತಾ ಗಾಬರಿ ಆಯಾಸಗಳಿಲ್ಲದೆ, ಆ ಹದಿನಾರು ಸಾವಿರದ ಐವತ್ತು ಜನ ಅಪ್ಸರಸ್ತ್ರೀಯರಿಗೂ ಉಪಚಾರಗಳನ್ನು ಮಾಡಲು, ಅಷ್ಟು ಸಂಖ್ಯೆಯ ಸುಂದರಿಯರನ್ನೂ ಪ್ರತ್ಯೇಕವಾಗಿ ಆಗಲೇ ಸೃಷ್ಟಿಸಿದನು.

**ಗಾಯಂತ್ಯಶ್ಚ ಹಸಂತ್ಯಶ್ಚ ನಾನೋಪಾಯನಪಾಣಯಃ ।**
**ಪ್ರಣೇಮುಸ್ತಾ ಮುನೀ ಸರ್ವಾಃ ಸ್ಥಿತಾಃ ಕೃತ್ವಾಂಜಲಿಂ ಪುರಃ ॥೩೮॥**

ಆ ಅಪ್ಸರಸ್ತ್ರೀಯರೆಲ್ಲರೂ ನಾನಾವಿಧವಾದ ಪರಿಕರಣಗಳನ್ನೂ ಕಾಣಿಕೆಗಳನ್ನೂ ಕೈಯಲ್ಲಿ ಹಿಡಿದುಕೊಂಡು ಬಂದು, ತಮ್ಮ ಮಂದಹಾಸದಿಂದಲೂ, ಗಾನದಿಂದಲೂ ಶೋಭಿಸುತ್ತಾ ಆ ಮುನೀಗಳೀರ್ವರ ಮುಂದೆ ನಿಂತು ಕೈಗಳನ್ನು ಜೋಡಿಸಿಕೊಂಡು ನಮಸ್ಕರಿಸಿದರು.

**ತಾಂ ವೀಕ್ಷ್ಯ ವಿಭ್ರಮಕರೀಂ ತಪಸೋಂ ವಿಭೂತಿಂ**
**ದೇವಾಂಗನಾ ಹಿ ಮುಮುಹುಃ ಪ್ರವಿಮೋಹಯಂತ್ಯಃ ।**
**ಊಚುಶ್ಚ ತೌ ಪ್ರಮುದಿತಾನನಪದ್ಮಶೋಭಾ**
**ರೋಮೋದ್ಗಮೋಲ್ಲಸಿತಚಾರುನಿಜಾಂಗವಲ್ಲ್ಯಃ ॥೩೯॥**

ಇನ್ನೊಬ್ಬರನ್ನು ಮೋಹಗೊಳಿಸಲು ಸಮರ್ಥರಾದ ಆ ದೇವಸ್ತ್ರೀಯರು ತಮ್ಮನ್ನೂ ಮೋಹಗೊಳಿಸುತ್ತಿರುವ, ಆ ನರನಾರಾಯಣಋಷಿಗಳ ತಪಸ್ಸಿನ ಪ್ರಭಾವವನ್ನು ನೋಡಿ ಮೋಹಗೊಂಡವರಾದರು. ಆ ಆಶ್ಚರ್ಯದಿಂದ ಉಂಟಾದ ರೋಮಾಂಚದಿಂದ ಮನೋಹರವಾದ ಬಳ್ಳಿಯಂತೆ ತಿಳ್ಳಗೆ ಬೆಳ್ಳಗೆ ಬಳುಕುತ್ತಿರುವ

ದೇಹವುಳ್ಳವರೂ, ಪದ್ಮದಂತೆ ಸುಂದರವಾದ ಮುಖವೂ ಉಳ್ಳ ಆ ಸ್ತ್ರೀಯರು ಸಂತೋಷಗೊಂಡು ನರನಾರಾಯಣರನ್ನು ಕುರಿತು ಹೀಗೆ ಹೇಳಿದರು.

ಕುರ್ಯುಃ (ರ್ಮಃ) ಕಥಂ ಸ್ತುತಿಮಹೋ ತಪಸೋ ಮಹತ್ತ್ವಂ
ಧೈರ್ಯಂ ತಥೈವ ಭವತಾಮಭಿವೀಕ್ಷ್ಯ ಬಾಲಾಃ ।
ಅಸ್ಮತ್ಕಟಾಕ್ಷವಿಷದಿಗ್ಧಶರೇಣ ದಗ್ಧಃ
ಕೋ ವಾ ನ ತತ್ರ ಭವತಾಂ ಮನಸೋ ವ್ಯಥಾ ನ ॥೪೦॥

ಏನೂ ತಿಳಿಯದ ಬಾಲೆಯರಾದ ನಾವು ನಿಮ್ಮ ತಪಸ್ಸಿನ ಮಹಾಶಕ್ತಿಯ ಮಹಿಮೆಯನ್ನೂ ಮತ್ತು ನಿಮ್ಮ ಧೈರ್ಯವನ್ನೂ ನೋಡಿ ಹೇಗೆತಾನೇ ನಿಮ್ಮನ್ನು ಹೊಗಳಲು ಸಮರ್ಥರಾಗುವೆವು? ಏಕೆಂದರೆ, ಭೂಮಿಯಲ್ಲಿ, ನಮ್ಮ ಕಟಾಕ್ಷವೀಕ್ಷಣ ವೆಂಬ ವಿಷದಿಂದ ಕೂಡಿದ ಬಾಣದಿಂದ ಪೀಡಿತನಾಗದಿರುವವನು ಯಾವವನಿರು ತ್ತಾನೆ? ಆದರೆ, ನಿಮಗೆ ಅದರಿಂದಲೂ ಮನಸ್ಸಿನಲ್ಲಿ ಸ್ವಲ್ಪವೂ ವ್ಯಥೆಯು ಉಂಟಾಗ ಲಿಲ್ಲವು ಎಂಬುದು ಆಶ್ಚರ್ಯವಾಗಿರುತ್ತದೆ.

ಜ್ಞಾತೌ ಯುವಾಂ ನರಹರೇಃ ಪರಮಾಂಶಭೂತೌ
ದೇವೌ ಮುನೀ ಶಮದಮಾದಿನಿಧೀ ಸದೈವ ।
ಸೇವಾನಿಮಿತ್ತಮಿಹ ನೋ ಗಮನಂ ನ ಕಾಮಂ
ಕಾರ್ಯಂ ಹರೇಃ ಶತಮುಖಸ್ಯ ವಿಧಾತುಮೇವ ॥೪೧॥

ಓ ಋಷಿಗಳೇ, ನರಹರಿಯ ಎಂದರೆ, ನೃಸಿಂಹಾವತಾರಮಾಡಿದ ಮಹಾ ವಿಷ್ಣುವಿನ ಶ್ರೇಷ್ಠವಾದ ಅಂಶದಿಂದ ಉತ್ಪನ್ನರಾದ ನೀವಿಬ್ಬರೂ ಶಮದಮ ಮೊದ ಲಾದ ಗುಣಗಳಿಗೆ ಗಣಿಯಂತೆ ಇರುತ್ತಾ, ತೇಜೋರೂಪರಾದ ದೇವರ್ಷಿಗಳಾಗಿ ಇರುವಿರಿ ಎಂಬದು ನಮಗೆ ಈಗ ತಿಳಿದುಬಂದಿರುತ್ತದೆ. ನಾವು ಇಲ್ಲಿಗೆ ಬಂದಿರುವುದು ನಿಮ್ಮ ಸೇವೆಯನ್ನು ಮಾಡಬೇಕೆಂಬ ಉದ್ದೇಶದಿಂದಲೇ ಅಲ್ಲವು. ಮತ್ತೇನೆಂದರೆ, ಇಂದ್ರನ ಆಜ್ಞೆಯನ್ನು ನೆರವೇರಿಸಿ ನಿಮ್ಮ ತಪಸ್ಸಿಗೆ ಭಂಗವನ್ನುಂಟುಮಾಡಲು ನಾವು ಬಂದಿರುವೆವೇ ಹೊರತು ಇನ್ನಾವ ಉದ್ದೇಶದಿಂದಲೂ ಅಲ್ಲವು.

ಭಾಗ್ಯೇನ ಕೇನ ಯುವಯೋಃ ಕಿಲ ದರ್ಶನಂ ನಃ
ಸಂಪಾದಿತಂ ನ ವಿದಿತಂ ಖಲು ಸಂಚಿತಂ ತತ್ ।

**ಚಿತ್ತಂ ಕ್ಷಮಂ ನಿಜಜನೇ ವಿಹಿತಂ ಯುವಾಭ್ಯಾ**
**ಮಸ್ಮದ್ವಿಧೇ ಕಿಲ ಕೃತಾಗಸಿತಾಪಮುಕ್ತಂ ॥೪೨॥**

ಪುಣ್ಯಕರವೂ ಸಂತೋಷಕರವೂ ಆಗಿರುವ ನಿಮ್ಮ ಈ ದರ್ಶನವು ನಮ್ಮಂತಹರಿಗೆ ಯಾವ ಪುಣ್ಯದಿಂದ ಆಯಿತೋ ಅಂತಹ ಪುಣ್ಯವನ್ನು ನಾವು ಸಂಪಾದನೆ ಮಾಡಿದ್ದೆವೆಂಬುದೂ ನಮಗೆ ತಿಳಿದಿರಲಿಲ್ಲವು. ನಾವು ನಿಮಗೆ ತೊಂದರೆ ಮಾಡಬೇಕೆಂಬ ಉದ್ದೇಶದಿಂದ ಬಂದವರಾದರೂ ನಮ್ಮಂತಹರ ವಿಷಯದಲ್ಲೂ ನೀವು ತಾಪವನ್ನುಂಟುಮಾಡುವ ಕೋಪ ಶಾಪಗಳನ್ನು ಉಪಯೋಗಿಸದೆ, ನಿಮ್ಮ ಸ್ವಂತ ಬಂಧುಜನಗಳಂತೆಯೇ ನಮ್ಮನ್ನು ತಿಳಿದು, ನಮ್ಮ ವಿಷಯದಲ್ಲಿ ಕ್ಷಮೆಯನ್ನು ತೋರಿಸಿ ಸತ್ಕರಿಸಿರುವಿರಿ.

**ಕುರ್ವಂತಿ ನೈವ ವಿಬುಧಾಸ್ತಪಸೋ ವ್ಯಯಂ ನೈ**
**ಶಾಪೇನ ತುಚ್ಛಫಲದೇನ ಮಹಾನುಭಾವಾಃ ॥೪೩॥**

ವಿವೇಕಿಗಳೂ ತಪೋಧನರೂ ಆದ ಮಹಾನುಭಾವರು, ಅಲ್ಪವೂ ಹೀನವೂ ಆದ ಫಲವನ್ನುಂಟುಮಾಡುವ ಶಾಪಪ್ರದಾನದಿಂದ ತಮ್ಮ ತಪಸ್ಸನ್ನು ವ್ಯರ್ಥವಾಗಿ ಕಳೆದುಕೊಳ್ಳುವುದಿಲ್ಲವು. ಅದೇ ರೀತಿಯಲ್ಲಿ ನೀವೂ ಮಾಡಿದವರಾಗಿದ್ದೀರಿ.

॥ ವ್ಯಾಸ ಉವಾಚ ॥

**ಇತ್ಥಂ ನಿಶಮ್ಯ ವಚನಂ ಸುರಕಾಮಿನೀನಾಂ**
**ತಾವೂಚತುರ್ಮುನಿವರೌ ವಿನಯಾನತಾನಾಂ ।**
**ಪ್ರೀತೌ ಪ್ರಸನ್ನವದನೌ ಜಿತಕಾಮಲೋಭೌ**
**ಧರ್ಮಾತ್ಮಜೌ ನಿಜತಪೋರುಚಿಶೋಭಿತಾಂಗೌ ॥**

ವ್ಯಾಸಮಹರ್ಷಿಯು ಹೇಳಿದನು—ಸ್ವರ್ಗದ ಮಹಿಳೆಯರ ಈ ಮಾತುಗಳನ್ನು ಕೇಳಿ ಸಂತೋಷದಿಂದ ಅನುಗ್ರಹವನ್ನು ಸೂಚಿಸುವ ಮುಖವುಳ್ಳವರೂ, ಕಾಮಲೋಭಗಳನ್ನು ಜಯಿಸಿರುವವರೂ ಆದ, ಧರ್ಮದೇವನ ಪುತ್ರರಾದ, ತಮ್ಮ ತಪಸ್ಸಿನ ಕಾಂತಿಯಿಂದ ಪ್ರಕಾಶಿಸುತ್ತಿರುವ ಆ ಋಷಿಶ್ರೇಷ್ಠರಿಬ್ಬರೂ, ವಿನಯದಿಂದ ತಲೆಯನ್ನು ಬಗ್ಗಿಸಿ ನಿಂತುಕೊಂಡಿರುವ ಆ ಸುರನಾರಿಯರನ್ನು ಕುರಿತು ಹೀಗೆ ಹೇಳಿದರು.

|| ನರನಾರಾಯಣಾವೂಚತುಃ ||

**ಬ್ರುವಂತು ವಾಂಛಿತಾನ್ಕಾಮಾನ್ದದಾವಸ್ತುಷ್ಟಮಾನಸೌ ॥೪೪॥**

ನರನಾರಾಯಣಋಷಿಗಳು ಹೇಳಿದರು—ನಿಮಗೆ ಬೇಕಾದ ವರಗಳನ್ನು ಕೇಳಿ. ನಾವು ಸಂತುಷ್ಟಮನಸ್ಕರಾಗಿ ಅವುಗಳನ್ನು ನಿಮಗೆ ಕೊಡುವೆವು.

**ಯಾಂತು ಸ್ವರ್ಗಂ ಗೃಹೀತ್ವೇಮಾಮುರ್ವಶೀಂ ಚಾರುಲೋಚನಾಂ ।**
**ಉಪಾಯನಮಿಯಂ ಬಾಲಾ ಗಚ್ಛತ್ವದ್ಯ ಮನೋಹರಾ ॥೪೫॥**

ಮನೋಹರವಾದ ಕಣ್ಣುಳ್ಳ ಸುಂದರಿಯಾದ ಈ ಊರ್ವಶಿಯನ್ನು ಕರೆದು ಕೊಂಡು ನೀವು ಸ್ವರ್ಗಕ್ಕೆ ಹೋಗಿರಿ. ಈ ಸುಂದರಾಂಗಿಯಾದ ಬಾಲೆಯನ್ನು ಇಂದ್ರನಿಗೆ ಕಾಣಿಕೆಯಾಗಿ ನಾವು ಅನುಗ್ರಹಿಸಿರುವೆವು.

**ದತ್ತಾಽಽವಾಭ್ಯಾಂ ಮಘವತಃ ಪ್ರೀಣನಾಯೋರುಸಂಭವಾ ।**
**ಸ್ವಸ್ತ್ಯಸ್ತು ಸರ್ವದೇವೇಭ್ಯೋ ಯಥೇಷ್ಟಂ ಪ್ರವ್ರಜಂತು ಚ ॥೪೬॥**
**ನ ಕಸ್ಯಾಪಿ ತಪೋವಿಘ್ನಂ ಪ್ರಕರ್ತವ್ಯಮತಃಪರಂ ॥**

ಇಂದ್ರನ ಸಂತೋಷವನ್ನುಂಟುಮಾಡುವುದಕ್ಕಾಗಿ ಈ ಊರುಜನ್ಯಳಾದ ಸುಂದರಿಯನ್ನು ನಾವು ಬಹುಮಾನವಾಗಿ ಕೊಟ್ಟಿರುತ್ತೇವೆ. ಸಮಸ್ತದೇವತೆಗಳಿಗೂ ಮಂಗಳವುಂಟಾಗಲಿ. ನೀವುಗಳು ಇವಳನ್ನು ಕರೆದುಕೊಂಡು ನಿಮ್ಮ ಇಷ್ಟಬಂದಂತೆ ಹೋಗಬಹುದು. ಆದರೆ ಇನ್ನುಮುಂದೆ ಯಾರಿಗೂ ತಪೋವಿಘ್ನವನ್ನು ಮಾತ್ರ ಮಾಡಕೂಡದು.

|| ದೇವ್ಯಊಚುಃ ||

**ಕ್ವ ಗಚ್ಛಾಮೋ ಮಹಾಭಾಗ ಪ್ರಾಪ್ತಾಸ್ತೇ ಪಾದಪಂಕಜಂ ।**
**ನಾರಾಯಣ ಸುರಶ್ರೇಷ್ಠ ಭಕ್ತ್ಯಾ ಪರಮಯಾ ಮುದಾ ॥೪೭॥**

ಆ ಸುರಾಂಗನೆಯರು ಹೇಳಿದರು—ಪುಣ್ಯಶಾಲಿಯಾದ ಓ ನಾರಾಯಣನೇ, ಹೆಚ್ಚಾದ ಪ್ರೇಮ ಮತ್ತು ಭಕ್ತಿಸಂತೋಷಗಳಿಂದ ಕೂಡಿ ನಿನ್ನ ಪಾದಾರವಿಂದವನ್ನು ಕುರಿತು ಬಂದ ನಾವು ಇನ್ನು ಎಲ್ಲಿಗೆ ಹೋಗೋಣ?

ವಾಂಛಿತಂ ಚೇದ್ವರಂ ನಾಥ ದದಾಸಿ ಮಧುಸೂದನ ।
ತುಷ್ಟಃ ಕಮಲಪತ್ರಾಕ್ಷ ಬ್ರವೀಮೋ ಮನಸೇಪ್ಸಿತಂ ॥೪೮॥

ಕಮಲಪತ್ರದಂತೆ ವಿಶಾಲವಾದ ನೇತ್ರಗಳುಳ್ಳ ಸ್ವಾಮಿಯಾದ ಮಧುಸೂದನನೇ ನೀನು ಸಂತುಷ್ಟನಾಗಿ ನಮ್ಮ ಮನೋರಥವನ್ನು ನೆರವೇರಿಸುವುದಾದರೆ ನಾವು ನಮ್ಮ ಮನಸ್ಸಿನ ಇಷ್ಟಾರ್ಥವನ್ನು ವಿಜ್ಞಾಪಿಸುವೆವು.

ಪತಿಸ್ತ್ವಂ ಭವ ದೇವೇಶ ವರಮೇನಂ ಪರಂತಪ ।
ಭವಾಮಃ ಪ್ರೀತಿಯುಕ್ತಾಸ್ತ್ವಾಂ ಸೇವಿತುಂ ಜಗದೀಶ್ವರ ॥೪೯॥

ಎಲೈ ಪರಾಕ್ರಮಶಾಲಿಯೇ ನೀನು ನಮಗೆಲ್ಲರಿಗೂ ಪತಿಯಾಗಬೇಕು. ಇದೇ ನಾವು ಕೇಳುವ ವರವು. ಎಲೈ ಜಗದೊಡೆಯನೇ ನಾವು ನಿನ್ನನ್ನು ಪ್ರೀತಿಯಿಂದಲೂ ಭಕ್ತಿಯಿಂದಲೂ ಸೇವಿಸುತ್ತೇವೆ.

ತ್ವಯಾ ಚೋತ್ಪಾದಿತಾ ನಾರ್ಯಃ ಸಂತ್ಯನ್ಯಾಶ್ಚಾರುಲೋಚನಾಃ ।
ಊರ್ವಶ್ಯಾದ್ಯಾಸ್ತಥಾ ಯಾಂತು ಸ್ವರ್ಗಂ ವೈ ಭವದಾಜ್ಞಯಾ ॥೫೦॥

ನೀನು ಸೃಷ್ಟಿಮಾಡಿರುವ ಸುಂದರಿಯರಾದ ಊರ್ವಶಿ ಮೊದಲಾದ ಈ ಹದಿನಾರು ಸಾವಿರದ ಐವತ್ತು ಮಂದಿ ಸ್ತ್ರೀಯರು ನಿನ್ನ ಆಜ್ಞೆಯಂತೆ ಸ್ವರ್ಗವನ್ನು ಕುರಿತು ಪ್ರಯಾಣ ಮಾಡಲಿ.

ಸ್ತ್ರೀಣಾಂ ಷೋಡಶಸಾಹಸ್ರಂ ತಿಷ್ಠತ್ವತ್ರ ಶತಾರ್ಧಕಂ ।
ಸೇವಾಂ ತೇऽತ್ರ ಕರಿಷ್ಯಾಮೋ ಯುವಯೋಸ್ತಾಪಸೋತ್ತಮೌ ॥೫೧॥

ಓ ಮುನಿಶ್ರೇಷ್ಠರೇ, ನಾವು ಹದಿನಾರು ಸಾವಿರದ ಐವತ್ತು ಮಂದಿ ಸ್ತ್ರೀಯರೂ ಇಲ್ಲಿಯೇ ಇದ್ದು ನಿಮ್ಮಿಬ್ಬರ ಸೇವೆಯನ್ನು ಮಾಡುತ್ತಿರುವೆವು.

ವಾಂಛಿತಂ ದೇಹಿ ದೇವೇಶ ಸತ್ಯವಾಗ್ಭವ ಮಾಧವ ।
ಆಶಾಭಂಗೋ ಹಿ ನಾರೀಣಾಂ ಹಿಂಸನಂ ಪರಿಕೀರ್ತಿತಂ ॥೫೨॥

ಕಾಮಾರ್ತಾನಾಂ ಚ ಮುನಿಭಿರ್ಧರ್ಮಜ್ಞೈಸ್ತತ್ತ್ವದರ್ಶಿಭಿಃ ।
ಭಾಗ್ಯಯೋಗಾದಿಹ ಪ್ರಾಪ್ತಾಃ ಸ್ವರ್ಗಾತ್ಪ್ರೇಮಪರಿಪ್ಲುತಾಃ ॥೫೩॥

ಓ ದೇವತೆಗಳಿಗೆಲ್ಲ ಒಡೆಯನಾದ ಲಕ್ಷ್ಮೀಪತಿಯಾದ ನಾರಾಯಣನೇ, ಈ ನಮ್ಮ ಕೋರಿಕೆಯನ್ನು ನೆರವೇರಿಸಿ ನೀನು ಹೇಳಿದ ಮಾತನ್ನು ನಡೆಸುವುದರಿಂದ ಸತ್ಯವಾಕ್ಯನಾಗು. ಕಾಮಬಾಧೆಯಿಂದ ಪೀಡಿತರಾದ ಸ್ತ್ರೀಯರ ಆಶಾಭಂಗವನ್ನುಂಟು ಮಾಡುವುದು ಕೇವಲ ಹಿಂಸಾಕಾರ್ಯವನ್ನು ಮಾಡಿದಂತೆಯೇ ಎಂದು ಧರ್ಮಸೂಕ್ಷ್ಮ ವನ್ನು ಬಲ್ಲ ತತ್ತ್ವಜ್ಞಾನಿಗಳು ಹೇಳಿರುವರು. ಪೂರ್ವ ಜನ್ಮಗಳಲ್ಲಿ ನಾವು ಸಂಪಾದಿಸಿದ್ದ ಪುಣ್ಯವಶದಿಂದ ನಾವುಗಳು ಪ್ರೇಮದಿಂದ ತುಂಬಿದ ಹೃದಯವುಳ್ಳವರಾಗಿ ಸ್ವರ್ಗದಿಂದ ಇಲ್ಲಿಗೆ ಬಂದಿರುವೆವು.

**ತ್ಯಕ್ತುಂ ನಾರ್ಹಸಿ ದೇವೇಶ ಸಮರ್ಥೋಽಸಿ ಜಗತ್ಪತೇ ।**

ಓ ಜಗದೀಶನೇ ನಮ್ಮ ಕೋರಿಕೆಯನ್ನು ನೆರವೇರಿಸದೆ ನಮ್ಮನ್ನು ತಿರಸ್ಕರಿಸುವುದು ನಿನಗೆ ಯುಕ್ತವಲ್ಲವು. ನಮ್ಮನ್ನೆಲ್ಲರನ್ನೂ ರಕ್ಷಿಸಲು ನೀನು ಸಮರ್ಥನಾಗಿಯೇ ಇರುವೆ.

॥ ನಾರಾಯಣ ಉವಾಚ ॥

**ಪೂರ್ಣಂ ವರ್ಷಸಹಸ್ರಂ ತು ತಪಸ್ತಪ್ತಂ ಮಯಾಽತ್ರ ವೈ ॥೩೪॥**
**ಜಿತೇಂದ್ರಿಯೇಣ ಚಾರ್ವಂಗ್ಯಃ ಕಥಂ ಭಂಗಂ ಕರೋಮ್ಯತಃ ।**

ನಾರಾಯಣನು ಹೇಳಿದನು—ಎಲೈ ಸುಂದರಾಂಗಿಯರೇ, ನಾನು ಇಲ್ಲಿ ಸಂಪೂರ್ಣವಾಗಿ ಒಂದು ಸಾವಿರ ವರ್ಷಗಳ ಕಾಲ ಜಿತೇಂದ್ರಿಯನಾಗಿ ತಪಸ್ಸನ್ನು ಆಚರಿಸಿದೇನೆ. ಈರೀತಿ ನಡೆಯಿಸಿದ ತಪಸ್ಸಿಗೆ ಈಗ ಹೇಗೆ ಭಂಗವನ್ನು ತಂದುಕೊಳ್ಳಲಿ?

**ನೇಚ್ಛಾ ಕಾಮೇ ಸುಖೇ ಕಾಚಿತ್ಸುಖಧರ್ಮವಿನಾಶಕೇ ॥೩೫॥**
**ಪಶೂನಾಮಪಿ ಸಾಧರ್ಮ್ಯೇ ರಮೇತ ಮತಿಮಾನ್ಕಥಂ ।**

ಆದಕಾರಣದಿಂದ ನಿತ್ಯವೂ ಶುದ್ಧವೂ ಆದ ಸುಖವನ್ನು ದೊರಕಿಸುವ ಧರ್ಮಕ್ಕೆ ನಾಶವನ್ನುಂಟುಮಾಡುವ, ತುಚ್ಛವಾಗಿರುವ ಈ ಕಾಮಸುಖದಲ್ಲಿ ನನಗೆ ಇಚ್ಛೆಯಿಲ್ಲವು. ಪಶುಗಳು ಮಾತ್ರ ಸಂತೋಷವನ್ನು ಹೊಂದುವ ಈ ಕಾಮಸುಖವನ್ನು ತಿಳಿವಳಿಕೆ ವಿವೇಚನೆಗಳುಳ್ಳ ಮಾನವನು ಹೇಗೆತಾನೇ ಅನುಭವಿಸಿ ಸಂತೋಷಪಟ್ಟಾನು?

|| ಅಪ್ಸರಸ ಊಚುಃ ||

**ಶಬ್ದಾದೀನಾಂ ಚ ಪಂಚಾನಾಂ ಮಧ್ಯೇ ಸ್ಪರ್ಶಸುಖಂ ವರಂ ||೫೬||**
**ಆನಂದರಸಮೂಲಂ ವೈ ನಾನ್ಯದಸ್ತಿ ಸುಖಂ ಕಿಲ ।**

ಅಪ್ಸರೆಯರು ಹೇಳಿದರು—ಓ ನಾರಾಯಣನೇ, ಶಬ್ದವೇ ಮೊದಲಾದ ಐದು ವಿಷಯಸುಖಗಳಲ್ಲಿ ಸ್ಪರ್ಶಸುಖವು ಶ್ರೇಷ್ಠವಾದುದು. ಏಕೆಂದರೆ ಅದು ಆನಂದದ ರುಚಿಯನ್ನು ಅನುಭವಿಸುವುದಕ್ಕೆ ಮೂಲಭೂತವಾಗಿದೆ. ಮತ್ತೆ ಯಾವುದೂ ಅಂತಹ ಸುಖಕ್ಕೆ ಕಾರಣವಾದುದಲ್ಲವು.

**ಅತೋಽಸ್ಮಾಕಂ ಮಹಾರಾಜ ವಚನಂ ಕುರು ಸರ್ವಥಾ ||೫೭||**
**ನಿರ್ಭರಂ ಸುಖಮಾಸಾದ್ಯ ಚರಸ್ವ ಗಂಧಮಾದನೇ ।**

ಓ ಪ್ರಭುವೇ ನಮಗೆಲ್ಲರಿಗೂ ನಿನ್ನ ಸ್ಪರ್ಶಸುಖವನ್ನು ಕೊಟ್ಟು ನಮ್ಮ ಕೋರಿಕೆಯನ್ನು ನೆರವೇರಿಸಿ ನೀನು ಕೊಟ್ಟ ವಾಗ್ದಾನವನ್ನು ನೆರವೇರಿಸು ಮತ್ತು ಅಪಾರ ಸುಖವನ್ನನುಭವಿಸುತ್ತಾ ಈ ಗಂಧಮಾದನ ಪರ್ವತದಲ್ಲಿ ವಿಹರಿಸುವವನಾಗು.

**ಯದಿ ವಾಂಛಸಿ ನಾಕಂ ತ್ವಂ ನಾಧಿಕೋ ಗಂಧಮಾದನಾತ್ ||೫೮||**
**ರಮಸ್ವಾತ್ರ ಶುಭೇ ಸ್ಥಾನೇ ಪ್ರಾಪ್ಯ ಸರ್ವಾಃ ಸುರಾಂಗನಾಃ ।**

ನಿನಗೆ ಸ್ವರ್ಗವು ಬೇಕೆಂದು ಇಷ್ಟವಿದ್ದಲ್ಲಿ ಈ ಗಂಧಮಾದನ ಪರ್ವತವು ಸ್ವರ್ಗಕ್ಕಿಂತಲೂ ಅಧಿಕ ಸುಖಕರವಾಗಿ ಪರಿಣಮಿಸುವುದು. ಈ ಮಂಗಳಕರವಾದ ಪ್ರದೇಶದಲ್ಲಿ ಈ ಸುರಾಂಗನೆಯರಾದ ಅಪ್ಸರೆಯರೊಡನೆ ಕ್ರೀಡಿಸುವವನಾಗು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಷಷ್ಠೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಆರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಸಪ್ತಮೋಽಧ್ಯಾಯಃ ||

### ಏಳನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಇತ್ಯಾಕರ್ಣ್ಯ ವಚಸ್ತಾಸಾಂ ಧರ್ಮಪುತ್ರಃ ಪ್ರತಾಪವಾನ್ ।**
**ವಿಮರ್ಶಮಕರೋಚ್ಚಿತ್ತೇ ಕಿಂ ಕರ್ತವ್ಯಂ ಮಯಾಽಧುನಾ ॥೧॥**

ವ್ಯಾಸಮಹರ್ಷಿಯು ಹೇಳಿದನು—ಧರ್ಮದೇವನ ಮಗನೂ ಪರಾಕ್ರಮಶಾಲಿಯೂ ಆದ ಆ ನಾರಾಯಣನು ಅಪ್ಸರೆಯರ ಮಾತನ್ನು ಕೇಳಿ ಈಗ ಏನನ್ನು ಮಾಡಬೇಕೆಂದು ಮನಸ್ಸಿನಲ್ಲಿ ವಿಮರ್ಶಿಸತೊಡಗಿದನು.

**ಹಾಸ್ಯೋಽಹಂ ಮುನಿವೃಂದೇಷು ಭವಿಷ್ಯಾಮ್ಯದ್ಯ ಸಂಗಮಾತ್ ।**
**ಅಹಂಕಾರಾದಿದಂ ಪ್ರಾಪ್ತಂ ದುಃಖಂ ನಾತ್ರ ವಿಚಾರಣಾ ॥೨॥**
**ಮೂಲಂ ಧರ್ಮವಿನಾಶಸ್ಯ ಪ್ರಥಮಂ ಯದಹಂಕೃತಿಃ ।**

ನಾನು ಈಗ ಇವರ ಕೋರಿಕೆಯಂತೆ ಇವರೊಡನೆ ಸಮಾಗಮವನ್ನು ನಡೆಯಿಸುವುದಾದರೆ, ಮುನಿಗಳ ಸಮೂಹದಲ್ಲಿ ಅಪಹಾಸ್ಯಕ್ಕೀಡಾಗುವೆನು. ನನ್ನ ಅಹಂಕಾರದಿಂದಲೇ ನನಗೆ ಈ ಸಂಕಟವು ಒದಗಿದೆ. ಆದುದರಿಂದ ಇದನ್ನು ಇನ್ನು ಹೆಚ್ಚಾಗಿ ವಿಮರ್ಶಿಸುವುದು ಅನಾವಶ್ಯಕವು. ಏಕೆಂದರೆ, ಈ ಅಹಂಕಾರವೆಂಬುದು ಧರ್ಮದ ನಾಶಕ್ಕೆ ಮೊದಲನೆಯದೂ, ಮುಖ್ಯವೂ ಆಗಿರುವ ಕಾರಣವು.

**ಮೂಲಂ ಸಂಸಾರವೃಕ್ಷಸ್ಯ ಯತಃ ಪ್ರೋಕ್ತೋ ಮಹಾತ್ಮಭಿಃ ।**
**ದೃಷ್ಟ್ವಾ ಮೌನಂ ಸಮಾಧಾಯ ನ ಸ್ಥಿತೋಽಹಂ ಸಮಾಗತಂ ॥೩॥**

ಈ ಸಂಸಾರವೆಂಬ ವೃಕ್ಷಕ್ಕೆ ಈ ಅಹಂಕಾರವೇ ಬೀಜವೆಂಬುದಾಗಿ ಮಹಾತ್ಮರಾದ ಋಷಿಗಳೂ ಹೇಳಿರುತ್ತಾರೆ. ಈ ಅಪ್ಸರೆಯರ ಸಮೂಹವು ಬಂದುದನ್ನು ನೋಡಿ ನಾನು ಸುಮ್ಮನಿರದೇ ಹೋದೆನು. ಈಗ ಈ ಸಂಕಟಕ್ಕೆ ಗುರಿಯಾಗಿದ್ದೇನೆ.

**ವಾರಾಂಗನಾಗಣಂ ಜುಷ್ಟಂ ತೇನಾಽಽಸಂ ದುಃಖಭಾಜನಂ ।**
**ಉತ್ಪಾದಿತಾಸ್ತಥಾ ನಾರ್ಯೋ ಮಯಾ ಧರ್ಮವ್ಯಯೇನ ವೈ ॥೪॥**

ಅಲ್ಲದೆ, ನನ್ನ ಈ ತಪಸ್ಸಿನ ಶಕ್ತಿಯನ್ನು ವ್ಯರ್ಥವಾಗಿ ವೆಚ್ಚಮಾಡಿ ಈ ಸ್ತ್ರೀಯರನ್ನೆಲ್ಲಾ ಸುಮ್ಮನೆ ಸೃಷ್ಟಿಸಿದೆನು. ಮತ್ತು ಇವರಲ್ಲಿ ನಾನು ಅಭಿಮಾನ ಆಸಕ್ತಿಯುಳ್ಳವನಾದೆನು. ಆದುದರಿಂದ ಈ ಕ್ಲೇಶಕ್ಕೆ ಗುರಿಯಾಗಿದೇನೆ.

**ತಾಸ್ತು ಮಾಂ ಬಾಧಿತುಂ ವೃತ್ತಾಃ ಕಾಮಾರ್ತಾಃ ಪ್ರಮದೋತ್ತಮಾಃ ।**
**ಊರ್ಣನಾಭಿರಿವಾದ್ಯಾಽಹಂ ಜಾಲೇನ ಸ್ವಕೃತೇನ ವೈ ॥೫॥**

ಈ ಅಭಿಮಾನದ ಫಲವಾಗಿ ಉಂಟಾದ ಉತ್ತಮರಾದ ಈ ಅಪ್ಸರಸ್ತ್ರೀಯರೆಲ್ಲರೂ ಮದನಾವಸ್ಥೆಯಿಂದ ಕೂಡಿ ನನ್ನನ್ನು ತೊಂದರೆಪಡಿಸಲು ಪ್ರವೃತ್ತರಾಗಿದಾರೆ. ಆದುದರಿಂದಲೇ ಈಗ ನಾನು ಜೇಡರ ಹುಳುವಿನಂತೆ ನನ್ನಿಂದಲೇ ರಚಿಸಲ್ಪಟ್ಟಿರುವ ಬಲೆಯಲ್ಲಿ ನಾನೇ ಕಟ್ಟಿಗೆ ಸಿಕ್ಕಿಬಿದ್ದು ಇರುತ್ತೇನೆ.

**ಬದ್ಧೋಽಸ್ಮಿ ಸುದೃಢೇನಾತ್ರ ಕಿಂ ಕರ್ತವ್ಯಮಿತಃ ಪರಂ ।**
**ಯದಿ ಚಿಂತಾಂ ಸಮುತ್ಸೃಜ್ಯ ಸಂತ್ಯಜಾಮ್ಯಬಲಾ ಇಮಾಃ ॥೬॥**

ಗಟ್ಟಿಯಾಗಿರುವ ಈ ಬಂಧನದಿಂದ ನಾನು ಬಲವಾಗಿ ಕಟ್ಟಲ್ಪಟ್ಟಿರುವೆನು. ಹೀಗಿರುವಲ್ಲಿ ಈಗ ನಾನು ಇಲ್ಲಿಂದ ಮುಂದೆ ಏನನ್ನು ಮಾಡಲಿ? ಎಂದು ಚಿಂತಿಸಿದನು. ಅಲ್ಲದೆ ಈಗ ನಾನು ಈ ಚಿಂತಿಸುವುದನ್ನು ಬಿಟ್ಟು ಈ ಅಪ್ಸರೆಯರೆಲ್ಲರನ್ನೂ ಬಲಾತ್ಕಾರದಿಂದ ತ್ಯಜಿಸಿಬಿಟ್ಟರೆ,

**ಶಪ್ತ್ವಾ ಭ್ರಷ್ಟಾ ವ್ರಜಿಷ್ಯಂತಿ ಸರ್ವಾ ಭಗ್ನಮನೋರಥಾಃ ।**
**ಮುಕ್ತೋಽಹಂ ಸಂಚರಿಷ್ಯಾಮಿ ವಿಜನೇ ಪರಮಂ ತಪಃ ॥೭॥**

ಧರ್ಮನಾಶಕರಾದ ಆ ಅಪ್ಸರೆಯರೆಲ್ಲರೂ ಆಶಾಭಂಗದಿಂದ ಕೂಡಿದವರಾಗಿ ನನ್ನನ್ನು ಶಪಿಸಿ ಹೊರಟುಹೋಗುವರು. ಆ ರೀತಿಯಿಂದಲಾದರೂ ಅವರಿಂದ

ಬಿಡುಗಡೆಯನ್ನು ಹೊಂದಿ, ನಾನು ನಿರ್ಜನವಾದ ಪ್ರದೇಶದಲ್ಲಿ ಸಂಚರಿಸುತ್ತಾ ಶ್ರೇಷ್ಠವಾದ ತಪಸ್ಸನ್ನು ಪುನಃ ಆಚರಿಸುವೆನು.

**ತಸ್ಮಾತ್ಕ್ರೋಧಂ ಸಮುತ್ಪಾದ್ಯ ತ್ಯಕ್ಷ್ಯಾಮಿ ಸುಂದರೀಗಣಂ ।**

ಆದುದರಿಂದ ಕೋಪವನ್ನು ಅಭಿನಯಿಸಿಯಾದರೂ ಈ ಹೆಂಗಸರ ಸಮೂಹವನ್ನು ಬಿಟ್ಟುಬಿಡುತ್ತೇನೆ.

|| ವ್ಯಾಸ ಉವಾಚ ||

**ಇತಿ ಸಂಚಿಂತ್ಯ ಮನಸಾ ಮುನಿರ್ನಾರಾಯಣಸ್ತದಾ ||೮||**
**ವಿಮರ್ಶಮಕರೋಚ್ಚಿತ್ತೇ ಸುಖೋತ್ಪಾದನಸಾಧನೇ ।**

ವ್ಯಾಸನು ಹೇಳಿದನು—ಈ ರೀತಿಯಾಗಿ ತಾಪಸನಾದ ಆ ನಾರಾಯಣನು ಆಗ ಮನಸ್ಸಿನಲ್ಲಿ ಆಲೋಚಿಸಿ, ಸುಖವನ್ನುಂಟುಮಾಡುವ ಸಾಧನದಲ್ಲಿ ಯಾವುದು ಒಳ್ಳೆಯದು ಎಂದು ವಿಚಾರಪೂರ್ವಕವಾಗಿ ಅದರದರ ಗುಣದೋಷಗಳನ್ನೂ, ಸಾಧಕ ಬಾಧಕಗಳನ್ನೂ, ಆಕ್ಷೇಪಸಮಾಧಾನಗಳನ್ನೂ ಊಹಿಸುತ್ತಾ ಪುನಃ ವಿಮರ್ಶಿಸಿದನು.

**ದ್ವಿತೀಯೋऽಯಂ ಮಹಾಶತ್ರುಃ ಕ್ರೋಧಃ ಸಂತಾಪಕಾರಕಃ ||೯||**
**ಕಾಮಾದಪ್ಯಧಿಕೋ ಲೋಕೇ ಲೋಭಾದಪಿ ಚ ದಾರುಣಃ ।**

ಅಲ್ಲದೆ, ಕಾಮವು ಮೊದಲನೆಯ ಶತ್ರುವಾದರೆ, ಈ ಕೋಪವೆಂಬುದು ಎರಡನೆಯ ಶತ್ರುವಾಗಿದೆ. ಮತ್ತು ಹೆಚ್ಚಾಗಿ ಸಂಕಟವನ್ನುಂಟುಮಾಡತಕ್ಕುದೂ ಆಗಿದೆ. ಮತ್ತು ಇದು ಸುಖಕ್ಕೆ ದೊಡ್ಡದಾದ ಶತ್ರುವು. ಅಲ್ಲದೆ ಈ ಕೋಪವೆಂಬುವುದು ಪ್ರಪಂಚದಲ್ಲಿ ಕಾಮಕ್ಕಿಂತಲೂ, ಲೋಭಕ್ಕಿಂತಲೂ ಭಯಂಕರವಾದ ಪರಿಣಾಮಕಾರಿಯಾದುದು. ಏಕೆಂದರೆ,

**ಕ್ರೋಧಾಭಿಭೂತಃ ಕುರುತೇ ಹಿಂಸಾಂ ಪ್ರಾಣವಿಘಾತಿನೀಂ ||೧೦||**
**ದುಃಖದಾಂ ಸರ್ವಭೂತಾನಾಂ ನರಕಾರಾಮದೀರ್ಘಿಕಾಂ ।**

ಕೋಪದ ಆವೇಶದಿಂದ ಮನುಷ್ಯನು ಪ್ರಾಣವನ್ನೂ ಕೂಡ ನಾಶಮಾಡುವಂತಹ ಹಿಂಸೆಯನ್ನು ಮಾಡುವನು. ಮತ್ತು ಕ್ರೋಧದ ಆವೇಶದಿಂದ ಮನು

ಷ್ಯನು ಎಲ್ಲ ಪ್ರಾಣಿಗಳಿಗೂ ಸಂಕಟವನ್ನುಂಟುಮಾಡುವ ನರಕವೆಂಬ ತೋಟಕ್ಕೆ ಸರ್ವದಾ ನೀರಿನ ಆಸರೆಯಾದ ನದಿಯಂತಿರುವ ಹಿಂಸೆಯನ್ನು ಮಾಡುತ್ತಾನೆ.

**ಯಥಾಗ್ನಿರ್ಘರ್ಷಣಾಜ್ಜಾತಃ ಪಾದಪಂ ಪ್ರದಹೇತ್ತಥಾ ॥೧೧॥**
**ದೇಹೋತ್ಪನ್ನಸ್ತಥಾ ಕ್ರೋಧೋ ದೇಹಂ ದಹತಿ ದಾರುಣಃ ।**

ಗಿಡಮರಗಳ ಕೊಂಬೆಗಳು ಗಾಳಿಯಲ್ಲಿ ಒಂದನ್ನೊಂದು ತಿಕ್ಕಲು ಆ ಘರ್ಷಣ ದಿಂದ ಹುಟ್ಟುವ ಅಗ್ನಿಯು ಆ ಮರಗಳನ್ನೇ ಸುಡುವಂತೆ, ನಮ್ಮ ದೇಹದಲ್ಲೇ ಹುಟ್ಟಿದ ಈ ಕ್ರೋಧವು ನಮ್ಮ ದೇಹವನ್ನೇ ಸುಡುವುದು, ಎಂದರೆ ಸಂಕಟಕ್ಕೀಡಾ ಗುವಂತೆ ಮಾಡುವುದು.

॥ ವ್ಯಾಸ ಉವಾಚ ॥

**ಇತಿ ಸಂಚಿಂತ್ಯಮಾನಂ ತಂ ಭ್ರಾತರಂ ದೀನಮಾನಸಂ ॥೧೨॥**
**ಉವಾಚ ವಚನಂ ತಥ್ಯಂ ನರೋ ಧರ್ಮಸುತೋಽನುಜಃ ।**

ವ್ಯಾಸಮುನಿಯು ಹೇಳಿದನು—ಈ ರೀತಿಯಲ್ಲಿ ಆಲೋಚಿಸುತ್ತಿರುವ, ಪಶ್ಚಾ ತ್ತಾಪ ದುಃಖದಿಂದ ಕಂಗೆಟ್ಟಿರುವ ಮನಸ್ಸುಳ್ಳ, ಅಣ್ಣನಾದ ನಾರಾಯಣನನ್ನು ನೋಡಿ, ಧರ್ಮದೇವನ ಮಗನೂ ತಮ್ಮನೂ ಆದ ನರನು ಹಿತವಾದ ಮಾತನ್ನು ಅವನನ್ನು ಕುರಿತು ಹೀಗೆ ಹೇಳಿದನು—

॥ ನರ ಉವಾಚ ॥

**ನಾರಾಯಣ ಮಹಾಭಾಗ ಕೋಪಂ ಯಚ್ಛ ಮಹಾಮತೇ ॥೧೩॥**
**ಶಾಂತಂ ಭಾವಂ ಸಮಾಶ್ರಿತ್ಯ ನಾಶಯಾಹಂಕೃತಿಂ ಪರಾಂ ।**

ಎಲೈ ಪೂಜ್ಯನಾದ ನಾರಾಯಣನೇ, ಈ ಕೆಟ್ಟ ಕೋಪವನ್ನು ಬಿಟ್ಟುಬಿಡು. ನೀನು ಮಹಾಬುದ್ಧಿಶಾಲಿಯು. ಆದುದರಿಂದ ಮನಸ್ಸಿನ ಸಮಾಧಾನವನ್ನು ಹೊಂದಿ ಕೋಪಕ್ಕೆ ಮೂಲಕಾರಣವಾದ ಹೆಚ್ಚಾದ ಅಹಂಕಾರವನ್ನು ನಾಶಮಾಡು.

**ಪುರಾಹಂಕಾರದೋಷೇಣ ತಪೋ ನಷ್ಟಂ ಕಿಲಾವಯೋಃ ॥೧೪॥**

**ಸಂಗ್ರಾಮಶ್ಚಾಭವತ್ತಾಭ್ಯಾಂ ಭಾವಾಭ್ಯಾಮಸುರೇಣ ಹ ।**
**ದಿವ್ಯವರ್ಷಸಹಸ್ರಂ ತು ಪ್ರಹ್ಲಾದೇನ ಮಹಾದ್ಭುತಂ ॥೧೫॥**

ಏತಕ್ಕೆಂದರೆ, ಹಿಂದೆ ಈರೀತಿಯಲ್ಲಿ ನಾವು ಅಹಂಕಾರಪರವಶರಾದುದರಿಂದ ನಮ್ಮ ತಪಸ್ಸಿನ ಫಲವೆಲ್ಲವೂ ನಾಶವಾಯಿತು. ಮತ್ತು ಈ ಅಹಂಕಾರಕೋಪಗಳ ದೆಸೆಯಿಂದಲೇ ನಮಗೆ ರಾಕ್ಷಸನಾದ ಪ್ರಹ್ಲಾದನೊಡನೆ ದೇವಮಾನದ ಸಾವಿರ ವರ್ಷಗಳವರೆಗೂ ಯುದ್ಧವೂ ಪ್ರಾಪ್ತವಾಯಿತು.

**ದುಃಖಂ ಬಹುತರಂ ಪ್ರಾಪ್ತಂ ತತ್ರಾವಾಭ್ಯಾಂ ಸುರೋತ್ತಮ ।**
**ತಸ್ಮಾತ್ಕ್ರೋಧಂ ಪರಿತ್ಯಜ್ಯ ಶಾಂತೋ ಭವ ಮುನೀಶ್ವರ ॥೧೬॥**
**ಶಾಂತತ್ವಂ ತಪಸೋ ಮೂಲಂ ಮುನಿಭಿಃ ಪರಿಕೀರ್ತಿತಂ ।**

ಆ ಸಂದರ್ಭದಲ್ಲಿ ಇನ್ನೂ ಅನೇಕ ವಿಧವಾದ ಸಂಕಟಗಳೂ ನಮಗೆ ಒದಗಿದುವು. ಆ ಕಾರಣದಿಂದ ಓ ಮುನಿಶ್ರೇಷ್ಠನೇ, ಈ ಕೋಪವನ್ನು ಬಿಟ್ಟು ಮನಸ್ಸಿನ ಸಮಾಧಾನವನ್ನು ಹೊಂದು. ಶಾಂತಿಯಿಂದ ಇರುವುದೇ ತಪಸ್ಸಿನ ಸಿದ್ಧಿಗೂ, ಸಾರ್ಥಕತೆಗೂ, ಮುಖ್ಯವೂ, ಮೂಲಭೂತವೂ ಆಗಿರುವ ಕಾರಣವು ಎಂದು ಋಷಿಗಳೆಲ್ಲರೂ ಹೇಳಿರುತ್ತಾರೆ.

|| ವ್ಯಾಸ ಉವಾಚ ||

**ಇತಿ ತಸ್ಯ ವಚಃ ಶ್ರುತ್ವಾ ಶಾಂತೋಽಭೂದ್ಧರ್ಮನಂದನಃ ।**

ವ್ಯಾಸಮುನಿಯು ಹೇಳಿದನು—ತನ್ನ ಸಹೋದರನ ಈ ಮಾತನ್ನು ಕೇಳಿ ನಾರಾಯಣನು ಕೋಪವನ್ನು ಬಿಟ್ಟು ಮನಶ್ಶಾಂತಿಯನ್ನು ಪಡೆದನು.

|| ಜನಮೇಜಯ ಉವಾಚ ||

**ಸಂಶಯೋಽಯಂ ಮುನಿಶ್ರೇಷ್ಠ ಪ್ರಹ್ಲಾದೇನ ಮಹಾತ್ಮನಾ ॥೧೭॥**
**ವಿಷ್ಣುಭಕ್ತೇನ ಶಾಂತೇನ ಕಥಂ ಯುದ್ಧಂ ಕೃತಂ ಪುರಾ ।**

ಜನಮೇಜಯರಾಜನು ಕೇಳಿದನು—ಮುನಿಗಳಲ್ಲೆಲ್ಲ ಶ್ರೇಷ್ಠನಾದ ವ್ಯಾಸನೇ, ಮಹಾಪುರುಷನೂ, ವಿಷ್ಣುಭಕ್ತಿಯುತನೂ, ಶಾಂತಸ್ವಭಾವದವನೂ ಆದ ಪ್ರಹ್ಲಾದನೊಡನೆ ಪೂರ್ವಕಾಲದಲ್ಲಿ ಈ ನರನಾರಾಯಣರು ಹೇಗೆ ಯುದ್ಧವನ್ನು ಮಾಡಿದರು? ಈ ಸಂಶಯವು ನನ್ನನ್ನು ಬಾಧಿಸುತ್ತಿರುವುದು.

**ಕೃತವಂತೌ ಕಥಂ ಯುದ್ಧಂ ನರನಾರಾಯಣಾವೃಷೀ ॥೧೮॥**

**ತಾಪಸೌ ಧರ್ಮಪುತ್ರೌ ದ್ವೌ ಸುಶಾಂತಮಾನಸಾವುಭೌ ।**
**ಸಮಾಗಮಃ ಕಥಂ ಜಾತಸ್ತಯೋರ್ದೈತ್ಯಸುತಸ್ಯ ಚ ॥೧೯॥**

ಧರ್ಮದೇವನ ಪುತ್ರರಾದ ಆ ನರನಾರಾಯಣ ಋಷಿಗಳೀರ್ವರೂ ತಾಪಸೋತ್ತಮರು, ಬಹಳ ಶಾಂತಸ್ವಭಾವದವರು. ಇಂತಹವರು ಪಾಪಕಾರ್ಯವಾದ ಯುದ್ಧದಲ್ಲಿ ಹೇಗೆ ತೊಡಗಿದರು ? ಮತ್ತು ಈ ಋಷಿಗಳಿಗೂ ದೈತ್ಯಪುತ್ರನಾದ ಪ್ರಹ್ಲಾದನಿಗೂ ಹೇಗೆ ಪರಸ್ಪರ ಸಮಾಗಮವುಂಟಾಯಿತು ?

**ಸಂಗ್ರಾಮಸ್ತು ಕಥಂ ತಾಭ್ಯಾಂ ಕೃತಸ್ತೇನ ಮಹಾತ್ಮನಾ ।**
**ಪ್ರಹ್ಲಾದೋಽಪ್ಯತಿಧರ್ಮಾತ್ಮಾ ಜ್ಞಾನವಾನ್ವಿಷ್ಣುತತ್ಪರಃ ॥೨೦॥**

ಆ ಪ್ರಹ್ಲಾದನಾದರೋ ಬಹಳ ಧರ್ಮಾತ್ಮನು, ಜ್ಞಾನಿಯು, ವಿಷ್ಣುವಿನಲ್ಲಿ ಪರಮಭಕ್ತಿಯುಳ್ಳವನು. ಇಂಥವನು ಆ ತಪಸ್ವಿಗಳೊಡನೆ ಹೇಗೆ ಯುದ್ಧವನ್ನು ಮಾಡಿದನು ?

**ನರನಾರಾಯಣೌ ತದ್ವತ್ತಾಪಸೌ ಸತ್ತ್ವಸಂಸ್ಥಿತೌ ।**
**ತೇನ ತಾಭ್ಯಾಂ ಸಮುದ್ಭೂತಂ ವೈರಂ ಯದಿ ಪರಸ್ಪರಂ ॥೨೧॥**

ಹಾಗೆಯೇ ತಪಸ್ವಿಗಳಾದ ನರನಾರಾಯಣರೂ ಸಾತ್ತ್ವಿಕಭಾವದಿಂದ ಪರಿಪೂರ್ಣವಾಗಿ ಕೂಡಿರುವವರು. ಅಂಥವರೊಡನೆಯೂ ವಿಷ್ಣುಭಕ್ತನಾದ ಪ್ರಹ್ಲಾದನಿಗೆ ಪರಸ್ಪರ ದ್ವೇಷವುಂಟಾಗುವುದೆಂದರೆ,

**ತದಾ ತಪಸಿ ಧರ್ಮೇ ಚ ಶ್ರಮ ಏವ ಹಿ ಕೇವಲಂ ।**
**ಕ್ವ ಜಪಃ ಕ್ವ ತಪಶ್ಚರ್ಯಾ ಪುರಾ ಸತ್ಯಯುಗೇಽಪಿ ಚ ॥೨೨॥**
**ತಾದೃಶೈರ್ನ ಜಿತಂ ಚಿತ್ತಂ ಕ್ರೋಧಾಹಂಕಾರಸಂವೃತಂ ।**

ಆಗ ತಪಸ್ಸು ಮಾಡುವುದು, ಧರ್ಮಮಾರ್ಗದಲ್ಲಿ ನಡೆಯುವುದು ಇವುಗಳು ಕೇವಲ ಶ್ರಮವಲ್ಲದೆ ಮತ್ತೇನು ? ಆ ಸತ್ಯಯುಗದಲ್ಲಿಯೂ ಕೂಡ ಅವರು ಮಾಡಿದ ಜಪತಪಾದಿಗಳು ಎಲ್ಲಿ ಹೋದುವು ? ಅಂತಹ ತಾಪಸೋತ್ತಮರು ಸಹ ಕೋಪ, ಅಹಂಕಾರ ಮುಂತಾದ ದುಷ್ಟಭಾವನೆಗಳುಳ್ಳ ತಮ್ಮ ಮನಸ್ಸನ್ನು ಗೆಲ್ಲಲಾರದೆ ಹೋದರಲ್ಲ !

**ನ ಕ್ರೋಧೋ ನ ಚ ಮಾತ್ಸರ್ಯಮಹಂಕಾರಾಂಕುರಂ ವಿನಾ ॥೨೩॥**
**ಅಹಂಕಾರಾತ್ಸಮುತ್ಪನ್ನಾಃ ಕಾಮಕ್ರೋಧಾದಯಃ ಕಿಲ ।**

ಮೊಳಕೆಯಂತಿರುವ ಅಹಂಕಾರವಿಲ್ಲದೆ ಕ್ರೋಧವೂ, ಅಸೂಯೆಯೂ ಹುಟ್ಟು ವುದಿಲ್ಲ. ಆದುದರಿಂದ ಅಹಂಕಾರದಿಂದಲೇ ಕಾಮಕ್ರೋಧವೇ ಮೊದಲಾದ ಅರಿ ಷಡ್ವರ್ಗಗಳು ಹುಟ್ಟುವುವು.

**ವರ್ಷಕೋಟಿಸಹಸ್ರಂ ತು ತಪಃ ಕೃತ್ವಾತಿದಾರುಣಂ ॥೨೪॥**
**ಅಹಂಕಾರಾಂಕುರೇ ಜಾತೇ ವ್ಯರ್ಥಂ ಭವತಿ ಸರ್ವಥಾ ।**

ಸಹಸ್ರಕೋಟಿವರ್ಷಗಳವರೆಗೂ ಆಚರಿಸಿದ ಅತ್ಯುಗ್ರವಾದ ತಪಸ್ಸೆಲ್ಲವೂ, ಅಹಂಕಾರದ ಮೊಳಕೆಯು ಹುಟ್ಟಿದ ಕೂಡಲೇ ಖಂಡಿತವಾಗಿಯೂ ವ್ಯರ್ಥ ವಾಗುವುದು.

**ಯಥಾ ಸೂರ್ಯೋದಯೇ ಜಾತೇ ತಮೋರೂಪಂ ನ ತಿಷ್ಠತಿ ॥೨೫॥**
**ಅಹಂಕಾರಾಂಕುರಸ್ಯಾಗ್ರೇ ತಥಾ ಪುಣ್ಯಂ ನ ತಿಷ್ಠತಿ ।**

ಸೂರ್ಯನು ಹುಟ್ಟಿದ ಕೂಡಲೇ ಕತ್ತಲೆಯು ಹೇಗೆ ಸ್ವಲ್ಪವೂ ನಿಲ್ಲುವು ದಿಲ್ಲವೋ ಹಾಗೆಯೇ, ಅಹಂಕಾರವು ಹುಟ್ಟಿದರೆ ಪುಣ್ಯವು ಒಂದು ಕ್ಷಣವೂ ನಿಲ್ಲು ವುದಿಲ್ಲವು.

**ಪ್ರಹ್ಲಾದೋಽಪಿ ಮಹಾಭಾಗ ಹರಿಣಾ ಸಮಯುಧ್ಯತ ॥೨೬॥**
**ತದಾ ವ್ಯರ್ಥಂ ಕೃತಂ ಸರ್ವಂ ಸುಕೃತಂ ಕಿಲ ಭೂತಲೇ ।**

ಓ ಪುಣ್ಯಶಾಲಿಯೇ ಪ್ರಹ್ಲಾದನೂ ಕೂಡ ವಿಷ್ಣುವಿನೊಡನೆ ಯುದ್ಧಮಾಡಿದ ನೆಂದಮೇಲೆ, ಅವನು ಭೂಲೋಕದಲ್ಲಿ ಮಾಡಿದ್ದ ಪುಣ್ಯವೆಲ್ಲವೂ ವ್ಯರ್ಥವಾಯಿ ತಲ್ಲವೇ ?

**ನರನಾರಾಯಣೌ ಶಾಂತೌ ವಿಹಾಯ ಪರಮಂ ತಪಃ ॥೨೭॥**
**ಕೃತವಂತೌ ಯದಾ ಯುದ್ಧಂ ಕ್ವ ಶಮಃ ಸುಕೃತಂ ಪುನಃ ।**

ಶಾಂತರಾದ ನರನಾರಾಯಣರೂ ತಾವು ಮಾಡುವ ತಪಸ್ಸನ್ನು ಬಿಟ್ಟು ಪ್ರಹ್ಲಾದನೊಡನೆ ಯುದ್ಧವನ್ನು ಮಾಡಿದರೆಂದಮೇಲೆ, ಶಾಂತಿಯೂ, ಪುಣ್ಯವೂ ಎಲ್ಲಿ ಹೋದುವು ? ಅವು ಇದ್ದರೂ ಕಾರ್ಯಕಾರಿಯಾಗಲಿಲ್ಲವಾದುದರಿಂದ ಇಲ್ಲದ ಹಾಗೆಯೇ ಆಯಿತು.

**ಈದೃಗ್ಭ್ಯಾಂ ಸತ್ತ್ವಯುಕ್ತಾಭ್ಯಾಮಜೇಯಾ ಯದ್ಯಹಂಕೃತಿಃ ॥೨೮॥**
**ಮಾದೃಶಾನಾಂ ಚ ಕಾ ವಾರ್ತಾ ಮುನೇಽಹಂಕಾರಸಂಕ್ಷಯೇ ।**

ಈ ರೀತಿಯಾದ ಕೇವಲ ಸತ್ತ್ವಗುಣದಿಂದಲೇ ಕೂಡಿದ ನರನಾರಾಯಣ ಋಷಿಗಳಿಂದಲೇ ಈ ಅಹಂಕಾರವನ್ನು ಗೆಲ್ಲಲು ಆಗಲಿಲ್ಲವೆಂದಮೇಲೆ, ನಮ್ಮಂಥವರಿಂದ ಈ ಅಹಂಕಾರವನ್ನು ನಾಶಮಾಡುವುದು ಸಾಧ್ಯವಾಗುವುದೇನು ?

**ಅಹಂಕಾರಪರಿತ್ಯಕ್ತಃ ಕೋಽಪ್ಯಸ್ತಿ ಭುವನತ್ರಯೇ ॥೨೯॥**
**ನ ಭೂತೋ ಭವಿತಾ ನೈವ ಯಸ್ತ್ಯಕ್ತಸ್ತೇನ ಸರ್ವಥಾ ।**

ಹಾಗಾದಲ್ಲಿ ಈ ಅಹಂಕಾರದಿಂದ ಬಿಡಲ್ಪಟ್ಟ ಮನುಷ್ಯನು ಈ ಮೂರು ಲೋಕಗಳಲ್ಲಿ ಒಬ್ಬನಾದರೂ ಇರುವನೇನು ? ಆ ಅಹಂಕಾರದಿಂದ ಬಿಡಲ್ಪಟ್ಟವನು ಹಿಂದೆ ಇರಲಿಲ್ಲವು ಮುಂದೆ ಖಂಡಿತವಾಗಿಯೂ ಹುಟ್ಟುವುದಿಲ್ಲವು.

**ಮುಚ್ಯತೇ ಲೋಹನಿಗಡೈರ್ಬದ್ಧಃ ಕಾಷ್ಠಮಯೈಸ್ತಥಾ ॥೩೦॥**
**ಅಹಂಕಾರನಿಬದ್ಧಸ್ತು ನ ಕದಾಚಿದ್ವಿಮುಚ್ಯತೇ ।**

ಲೋಹಮಯವಾದ ಸರಪಣಿಗಳಿಂದಾಗಲಿ, ಮರದ ಕೋಳದಿಂದಾಗಲಿ, ಬಂಧಿಸಲ್ಪಟ್ಟವನು ಹೇಗಾದರೂ ಬಿಡುಗಡೆಯನ್ನು ಹೊಂದುವನು. ಆದರೆ ಅಹಂಕಾರದಿಂದ ಆವರಿಸಲ್ಪಟ್ಟಿರುವವನು ಮಾತ್ರ ಎಂದಿಗೂ ಅದರಿಂದ ಬಿಡುಗಡೆಯನ್ನು ಹೊಂದುವುದಿಲ್ಲವು.

**ಅಹಂಕಾರಾವೃತಂ ಸರ್ವಂ ಜಗತ್ಸ್ಥಾವರಜಂಗಮಮ್ ॥೩೧॥**

ಏಕೆಂದರೆ, ಈ ಸ್ಥಾವರಜಂಗಮರೂಪವಾದ ಪ್ರಪಂಚವೆಲ್ಲವೂ ಈ ಅಹಂಕಾರದಿಂದ ಆವರಿಸಲ್ಪಟ್ಟದೆಯೇ ಹೊರತು ಬಿಟ್ಟಿಲ್ಲವು.

**ಭ್ರಮತ್ಯೇವ ಹಿ ಸಂಸಾರೇ ವಿಷ್ಠಾಮೂತ್ರಪ್ರದೂಷಿತೇ ।**
**ಬ್ರಹ್ಮಜ್ಞಾನಂ ಕುತಸ್ತಾವತ್ಸಂಸಾರೇ ಮೋಹಸಂವೃತೇ ॥೩೨॥**

ಮಲಮೂತ್ರಾದಿಗಳಿಂದ ಕೂಡಿ, ತುಂಬ ಕೊಳಕಿನಿಂದಲೂ ದುಃಖದಿಂದಲೂ ಅಸಹ್ಯವಾಗಿರುವ ಗರ್ಭವಾಸ, ಜನನ, ಮರಣಗಳ ಪರಂಪರೆಯೆಂಬ ಈ ಸಂಸಾರದ ಸುಳಿಯಲ್ಲಿಯೇ ಜೀವವು ಸುತ್ತುತ್ತಿರುತ್ತದೆ. ಈ ದೇಹವು, ಹೆಂಡತಿ, ಮಕ್ಕಳು, ಮನೆ, ಆಸ್ತಿ ಮುಂತಾದುದರಲ್ಲಿ, ನಾನು ನನ್ನದೆಂಬ ಭ್ರಾಂತಿಯಿಂದ ಕೂಡಿದ ಈ ಸಂಸಾರ ದಲ್ಲಿರುವ ಜನಗಳಿಗೆ ಬ್ರಹ್ಮಜ್ಞಾನವು ಹೇಗೆ ಲಭಿಸುವುದು?

**ಮತಂ ಮೀಮಾಂಸಕಾನಾಂ ವೈ ಸಂಮತಂ ಭಾತಿ ಸುವ್ರತ ।**
**ಮಹಾಂತೋಽಪಿ ಸದಾ ಯುಕ್ತಾಃ ಕಾಮಕ್ರೋಧಾದಿಭಿರ್ಮುನೇ ॥೩೩॥**

ಒಳ್ಳೆಯ ನಿಯಮಗಳನ್ನು ಪಾಲಿಸುವುದರಲ್ಲಿ ಆಸಕ್ತನಾದ ವ್ಯಾಸಮಹರ್ಷಿಯೇ, ಆದುದರಿಂದ ಕರ್ಮವನ್ನು ಮಾಡುವುದೇ ಮುಖ್ಯವು. ಈ ಬ್ರಹ್ಮಜ್ಞಾನವನ್ನೂ ಅದರಿಂದ ಮೋಕ್ಷವನ್ನೂ ಎಂದರೆ ಸಂಸಾರದಿಂದ ಬಿಡುಗಡೆಯನ್ನೂ ಪಡೆಯುವುದು ಎಂಬುದೆಲ್ಲವೂ ಅಸಂಭವವು. ಏಕೆಂದರೆ, ಈ ಸಂಸಾರವು ಅನಾದಿಯಾಗಿಯೂ, ಆದುದರಿಂದಲೇ ಅನಂತವಾಗಿಯೂ ಇದೆ. ಕರ್ಮವನ್ನು ಮಾಡುವುದು ಜೀವರಿಗೆ ಸ್ವಾಭಾವಿಕವೂ ಅನಿವಾರ್ಯವೂ ಆಗಿದೆ. ಆಕಾರಣದಿಂದ ವಿವೇಕಿಯಾದವನು ಒಳ್ಳೆಯ ಕರ್ಮಗಳನ್ನು ಮಾಡುತ್ತಾ ಐಹಿಕಾಮುಷ್ಮಿಕಗಳಾದ ಒಳ್ಳೆಯ ಸುಖಫಲಗಳನ್ನು ಪಡೆಯುತ್ತಲೂ, ಪ್ರತೀಕಾರದಿಂದ ದುಃಖವನ್ನು ನಿವಾರಿಸಿಕೊಳ್ಳುತ್ತಲೂ ಇರುವುದೇ ಜಾಣತನವು. ಈ ರೀತಿಯಲ್ಲಿ ಕೇವಲ ಕರ್ಮವನ್ನು ಮಾಡುವುದರಿಂದಲೇ ತನ್ನ ಇಷ್ಟಾರ್ಥವನ್ನು ಸಂಪಾದಿಸಿಕೊಳ್ಳಬೇಕು. ಆದುದರಿಂದ ಎಲ್ಲರಿಗೂ ಕರ್ಮವೇ ಮುಖ್ಯವಾದುದು ಎಂದು ಹೇಳುವ ಮೀಮಾಂಸಕರ ಮತವು ಚನ್ನಾಗಿರುತ್ತದೆಂದು ನನಗೆ ಕಾಣುತ್ತಿದೆ. ಅಲ್ಲದೆ, ಮಹಾತ್ಮರಾದ ಮುನಿಗಳೂ ಕೂಡ ಕಾಮಕ್ರೋಧಾದಿಗಳಿಂದ ಕೂಡಿರುವುದು ಕಂಡುಬರುತ್ತದೆಯೇ ಹೊರತು, ಅವನ್ನು ಬಿಟ್ಟಿರುವುದು ಕಾಣಬರುತ್ತಿಲ್ಲವು. ಆದುದರಿಂದ ಕರ್ಮಾಚರಣೆಯಲ್ಲಿ, ಅದರಲ್ಲೂ ಸುಖಜನಕವಾದ ಸತ್ಕರ್ಮಾಚರಣೆಯಲ್ಲಿರುವುದೇ ಎಲ್ಲರಿಗೂ ಶ್ರೇಯಸ್ಕರವಾದುದೆಂದೂ ಜ್ಞಾನದಿಂದ ಕರ್ಮದ, ಸಂಸಾರದ, ಬಿಡುಗಡೆಯಾಗದೆಂದೂ ತೋರುತ್ತದೆ.

**ಮಾದೃಶಾನಾಂ ಕಲಾವಸ್ಮಿನ್ ಕಾ ಕಥಾ ಮುನಿಸತ್ತಮ ।**

ಆದುದರಿಂದ, ಪುಣ್ಯಯುಗವೆಂದು ಪ್ರಸಿದ್ಧವಾದ ಕೃತ-ತ್ರೇತಾಯುಗಗಳಲ್ಲೂ ಇದ್ದ ದೊಡ್ಡ ಮುನಿಗಳೂ ಅಹಂಕಾರ, ಕರ್ಮಾಚರಣೆಯನ್ನು ಬಿಡಲಿಲ್ಲವೆಂದಮೇಲೆ ಈ ಕಲಿಯುಗದಲ್ಲಿ ನಮ್ಮಂಥವರಿಂದ ಅದೆಲ್ಲವನ್ನೂ ಬಿಡಲು ಸಾಧ್ಯವಾಗುವುದೇ ? ಅಂತಹ ಋಷಿಗಳ ಜೀವನಕ್ರಮವೇ ಆ ರೀತಿಯಾದಲ್ಲಿ ಇನ್ನು ನಮ್ಮಂಥವರ ಪಾಡೇನು ?

|| ವ್ಯಾಸ ಉವಾಚ ||

**ಕಾರ್ಯಂ ನೈ ಕಾರಣಾದ್ಭಿನ್ನಂ ಕಥಂ ಭವತಿ ಭಾರತ ||೩೪||**

**ಕಟಕಂ ಕುಂಡಲಂ ಚೈವ ಸುವರ್ಣಸದೃಶಂ ಭವೇತ್ ।**
**ಅಹಂಕಾರೋದ್ಭವಂ ಸರ್ವಂ ಬ್ರಹ್ಮಾಂಡಂ ಸಚರಾಚರಂ ||೩೫||**

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ ಕೇಳು—ಎಂತಹ ಕಾರಣದಿಂದ ಕಾರ್ಯವು ಹುಟ್ಟುತ್ತದೆಯೋ ಕಾರ್ಯವೂ ಅಂತಹ ಕಾರಣದ ಸ್ವಭಾವವುಳ್ಳದ್ದಾಗಿಯೇ ಇರುತ್ತದೆ. ಹೇಗೆಂದರೆ, ಚಿನ್ನದಿಂದ ಮಾಡಿದ ಬಳೆ ಕುಂಡಲ ಮುಂತಾದ ಆಭರಣಗಳು ಚಿನ್ನದ ಸ್ವಭಾವವುಳ್ಳವಾಗಿಯೇ ಇರುತ್ತವೆಯೇ ಹೊರತು ಬೇರೆ ಯಾವುದಾದರೂ ಲೋಹದ ಧರ್ಮವುಳ್ಳವಾಗುವುವೇನು ? ಹಾಗೆಯೇ ಈ ಸ್ಥಾವರಜಂಗಮರೂಪವಾದ ಪ್ರಪಂಚವೆಲ್ಲವೂ ಅಹಂಕಾರವೆಂಬ ಕಾರಣದಿಂದ ಹುಟ್ಟಿರುತ್ತದೆ. ಇದರ ಕಾರ್ಯವೂ ಕೂಡ ಅಹಂಕಾರದ ಧರ್ಮಗಳಿಂದಲೇ ಕೂಡಿರುತ್ತದೆಂಬುದು ಸ್ವಾಭಾವಿಕವೂ ಅನಿವಾರ್ಯವೂ ಆಗಿರುತ್ತದೆ.

**ಪಟಸ್ತಂತುವಶಃ ಪ್ರೋಕ್ತಸ್ತದ್ವಿಯುಕ್ತಃ ಕಥಂ ಭವೇತ್ ।**
**ಮಾಯಾಗುಣೈಸ್ತ್ರಿಭಿಃ ಸರ್ವಂ ರಚಿತಂ ಸ್ಥಿರಜಂಗಮಂ ||೩೬||**

**ಸತೃಣಂ ಸ್ತಂಬಪರ್ಯಂತಂ ಕಾ ತತ್ರ ಪರಿದೇವನಾ ।**

ಅದರಂತೆಯೇ ಬಟ್ಟೆಯೂ ಅದರ ಕಾರಣಗಳಾದ ದಾರಗಳ ಸ್ವಭಾವವುಳ್ಳದಾಗಿ ಹೇಗಿರುತ್ತದೆಯೋ, ದಾರದ ಗುಣವನ್ನು ಬಿಟ್ಟು ಬಟ್ಟೆಯು ಎಲ್ಲಿಯೂ ಹೇಗೆ ಇರುವುದಿಲ್ಲವೋ ಹಾಗೆಯೇ, ಈ ಪ್ರಪಂಚವೂ ಅದಕ್ಕೆ ಕಾರಣವಾದ ಅಹಂಕಾರದ ಧರ್ಮದಿಂದ ಕೂಡಿರುತ್ತದೆ. ಅದನ್ನು ಬಿಟ್ಟಿರುವುದಿಲ್ಲವು. ಬ್ರಹ್ಮನಿಂದ ಮೊದಲು ಮಾಡಿ ಕಡ್ಡಿಯವರೆಗಿರುವ ಈ ಚರಾಚರಪ್ರಪಂಚವೆಲ್ಲವೂ ಸತ್ತ್ವರಜ

ಸ್ತಮಸ್ಸೆಂಬ ಮೂರು ಗುಣಗಳುಳ್ಳ ಮಾಯೆಯಿಂದ ರಚಿಸಲ್ಪಟ್ಟಿರುವುದು. ಆದುದ ರಿಂದ ಓ ದೊರೆಯೇ ಆದಕ್ಕಾಗಿ ದುಃಖಪಡಬೇಕಾದುದಿಲ್ಲವು.

**ಬ್ರಹ್ಮಾ ವಿಷ್ಣುಸ್ತಥಾ ರುದ್ರಸ್ತೇ ಚಾಹಂಕಾರಮೋಹಿತಾಃ ॥೩೭॥**
**ಭ್ರಮಂತ್ಯಸ್ಮಿನ್ಮಹಾಗಾಧೇ ಸಂಸಾರೇ ನೃಪಸತ್ತಮ ।**

ಓ ದೊರೆಗಳಲ್ಲಿ ಶ್ರೇಷ್ಠನಾದವನೇ, ಅಷ್ಟೇ ಅಲ್ಲದೆ, ಬ್ರಹ್ಮ, ವಿಷ್ಣು, ರುದ್ರ ಮುಂತಾದ ದೊಡ್ಡವರೂ ಕೂಡ ಈ ಮಾಯೆಯ ಕಾರ್ಯವಾದ ಅಹಂಕಾರದಿಂದ ಕೂಡಿದವರಾಗಿರುತ್ತಾ ಅಪಾರವಾದ, ಅಗಾಧವಾದ ಈ ಸಂಸಾರದಲ್ಲಿ ಸುತ್ತುತ್ತಿ ದ್ದಾರೆ. ಇದು ಎಲ್ಲರಿಗೂ ಅನಿವಾರ್ಯವಾಗಿರುವುದರಿಂದ ನೀನು ಏತಕ್ಕಾಗಿ ಯೋಚಿಸುವೆ?

**ವಸಿಷ್ಠನಾರದಾದ್ಯಾಶ್ಚ ಮುನಯೋ ಜ್ಞಾನಿನಃ ಪರಂ**
**ತೇಽಭಿಭೂತಾಃ ಸಂಸರಂತಿ ಸಂಸಾರೇಽಸ್ಮಿನ್ಪುನಃ ಪುನಃ ।**

ವಸಿಷ್ಠನಾರದರೇ ಮೊದಲಾದ ಮಹಾ ಜ್ಞಾನಿಗಳಾದ ಮುನಿಗಳೂ ಕೂಡ ಈ ಅಹಂಕಾರ, ಕಾಮ ಮೊದಲಾದ ಭಾವಗಳಿಂದ ಪರವಶರಾಗಿ ಈ ಸಂಸಾರ ಪರಂಪರೆಯಲ್ಲಿ ಸಿಕ್ಕಿ ಪುನಃ ಪುನಃ ಹುಟ್ಟಿ ಸಾಯುತ್ತಾ ಸುತ್ತುತ್ತಿರುವರು.

**ನ ಕೋಽಪ್ಯಸ್ತಿ ನೃಪಶ್ರೇಷ್ಠ ತ್ರಿಷು ಲೋಕೇಷು ದೇಹಭೃತ್ ॥೩೯॥**
**ಏಭಿರ್ಮಾಯಾಗುಣೈರ್ಮುಕ್ತಃ ಶಾಂತ ಆತ್ಮಸುಖೇ ಸ್ಥಿತಃ ।**

ಓ ರಾಜಶ್ರೇಷ್ಠನೇ, ಮೂರು ಲೋಕದಲ್ಲಿಯೂ ಇರುವ ದೇಹಧಾರಿಗಳಾದ ಸಮಸ್ತ ಮಾನವರಲ್ಲಿ, ಈ ಮಾಯೆಯ ಗುಣಗಳಿಂದ ಬಿಡಲ್ಪಟ್ಟು, ಶಾಂತನೂ, ಆತ್ಮಸುಖದಲ್ಲಿ ತಪ್ಪದೆ ನೆಲಸಿರುವವನೂ ಆಗಿರುವಂಥ ಮನುಷ್ಯನೊಬ್ಬನೂ ದೊರೆ ಯುವುದಿಲ್ಲವು.

**ಕಾಮಕ್ರೋಧೌ ತಥಾ ಲೋಭೋ ಮೋಹೋಽಹಂಕಾರಸಂಭವಃ ॥೪೦॥**
**ನ ಮುಂಚಂತಿ ನರಂ ಸರ್ವಂ ದೇಹವಂತಂ ನೃಪೋತ್ತಮ ।**

ಓ ರಾಜೋತ್ತಮನೇ, ಅಹಂಕಾರದಿಂದ ಹುಟ್ಟಿದ ಕಾಮ, ಕ್ರೋಧ, ಲೋಭ, ಮೋಹ ಇವುಗಳು ದೇಹವನ್ನು ಧರಿಸಿರುವ ಎಲ್ಲ ಮಾನವರಲ್ಲಿ ಪ್ರತಿ

ಯೊಬ್ಬನನ್ನೂ ಬಿಡುವುದಿಲ್ಲ. ಎಂದರೆ ಪ್ರತಿಯೊಬ್ಬನಲ್ಲಿಯೂ ಇವುಗಳು ಇದ್ದೇ ಇರುತ್ತವೆ.

**ಅಧೀತ್ಯ ವೇದಶಾಸ್ತ್ರಾಣಿ ಪುರಾಣಾನಿ ವಿಚಿಂತ್ಯ ಚ ॥೪೧॥**

**ಕೃತ್ವಾ ತೀರ್ಥಾಟನಂ ದಾನಂ ಧ್ಯಾನಂ ಚೈವ ಸುರಾರ್ಚನಂ ।**
**ಕರೋತಿ ವಿಷಯಾಸಕ್ತಃ ಸರ್ವಂ ಕರ್ಮ ಚ ಚೌರವತ್ ॥೪೨॥**

**ವಿಚಾರಯತಿ ನೋ ಪೂರ್ವಂ ಕಾಮಮೋಹಮದಾನ್ವಿತಃ ।**

ವೇದಶಾಸ್ತ್ರಪುರಾಣಗಳನ್ನು ಚನ್ನಾಗಿ ಓದಿ ತಿಳಿದು, ಪವಿತ್ರವಾದ ತೀರ್ಥಗಳ ಮತ್ತು ಕ್ಷೇತ್ರಗಳ ಯಾತ್ರೆಯನ್ನು ಮಾಡಿ, ದಾನಗಳನ್ನೂ, ದೇವತೆಗಳ ಅರ್ಚನೆಯನ್ನೂ, ಧ್ಯಾನವನ್ನೂ ನೇರವೇರಿಸಿರುವಂಥವರೂ, ಇಂದ್ರಿಯಗಳ ವಿಷಯಗಳನ್ನು ಅನುಭವಿಸಲು ಆಶೆಯುಳ್ಳವರಾಗಿ, ಆ ಕಾಮದಿಂದಲೂ, ಅದರಿಂದ ಉಂಟಾಗುವ ಭ್ರಾಂತಿಯಿಂದಲೂ ಪರವಶರಾಗಿ ಕಾರ್ಯಾರಂಭದಲ್ಲಿ ಅದರ ಸಾಧಕಬಾಧಕಗಳನ್ನು ವಿವೇಚನೆಯಿಂದ ವಿಮರ್ಶಿಸುವುದಿಲ್ಲವು. ಈ ಅವಿವೇಕದಿಂದ ಅವರೂ ಕಳ್ಳರಂತೆ ಕಾಮಮೋಹ ಮದಗಳಿಂದ ಕೂಡಿದವರಾಗಿ ಡಾಂಭಿಕತನದಿಂದ ವ್ಯವಹರಿಸುತ್ತಿರುತ್ತಾರೆ.

**ಕೃತಯುಗೇऽಪಿ ತ್ರೇತಾಯಾಂ ದ್ವಾಪರೇ ಕುರುನಂದನ ॥೪೩॥**
**ವಿದ್ಯೋऽತ್ರಾಸ್ತಿ ಚ ಧರ್ಮೋऽಪಿ ಕಾ ಕಥಾದ್ಯ ಕಲೌ ಪುನಃ ।**

ಎಲೈ ಕುರುವಂಶಾಹ್ಲಾದಕನೇ, ಕೃತ, ತ್ರೇತ, ದ್ವಾಪರಯುಗಗಳಲ್ಲಿಯೂ ಇಂಥಾ ಸ್ಥಿತಿಯು ಇತ್ತು. ಹಾಗಿರುವಲ್ಲಿ ಈ ಕಲಿಯುಗದಲ್ಲಿಯೂ ಆ ರೀತಿಯೇ, ಎಂದರೆ ಧರ್ಮಕ್ಕೆ ಅಹಂಕಾರ ಮುಂತಾದ ದೋಷಗಳಿಂದ ಧಕ್ಕೆ ತಗಲಿರುವಿಕೆಯು, ಇರುವುದು ಎಂದರೆ ಆಶ್ಚರ್ಯವೇನು ?

**ಸ್ಪರ್ಧಾ ಸದೈವ ಸದ್ರೋಹಾ ಲೋಭಾಮರ್ಷೌ ಚ ಸರ್ವದಾ ॥೪೪॥**
**ಏವಂ ವಿಧೋऽಸ್ತಿ ಸಂಸಾರೇ ನಾತ್ರ ಕಾರ್ಯಾ ವಿಚಾರಣಾ ।**

ಈ ಕಾಮ, ಲೋಭ, ಕೋಪ, ಅಪಕಾರ, ಪ್ರತೀಕಾರ, ಮೋಸ ಇವುಗಳ ಸ್ಪರ್ಧೆಯು ಯಾವಾಗಲೂ ಇದ್ದೇ ಇರುತ್ತದೆ. ಈ ಸಂಸಾರವು ಎಂದರೆ ಜನರ

ವ್ಯವಹಾರವೆಲ್ಲವೂ ಇಂತಹ ರೀತಿಯಿಂದ ಕೂಡಿರುತ್ತದೆ. ಈ ವಿಷಯದಲ್ಲಿ ಸಂದೇಹ ಮತ್ತು ಆತಂಕದ ಯೋಚನೆಯನ್ನು ಮಾಡಬೇಕಾದುದಿಲ್ಲವು.

**ಸಾಧವೋ ವಿರಲಾ ಲೋಕೇ ಭವಂತಿ ಗತಮತ್ಸರಾಃ ॥೪೫॥**
**ಜಿತಕ್ರೋಧಾ ಜಿತಾಮರ್ಷಾ ದೃಷ್ಟಾಂತಾರ್ಥಂ ವ್ಯವಸ್ಥಿತಾಃ ।**

ಮತ್ಸರವನ್ನು ಎಂದರೆ ಇತರರ ಮೇಲ್ಮೆಯನ್ನು ಸಹಿಸದಿರುವಿಕೆಯನ್ನೂ, ಕ್ರೋಧವನ್ನು ಎಂದರೆ ಆಮರಣಾಂತವಾಗಿ ದ್ವೇಷವನ್ನು ಸಾಧಿಸುವಿಕೆಯನ್ನೂ, ಪ್ರತೀಕಾರ ಎಂದರೆ ಮಾಡಿದ ಅಪಕಾರಕ್ಕೆ ಪುನಃ ಪ್ರತ್ಯಪಕಾರವನ್ನು ಮಾಡುವುದು ಎಂಬ ಅಮರ್ಷ ಅಥವಾ ಕೋಪವನ್ನೂ, ಇಂತಹ ದೋಷಗಳನ್ನು ಜಯಿಸಿರುವ ಸಾಧುಗಳು ಎಲ್ಲೋ ಒಬ್ಬಿಬ್ಬರು, ದೇವಿಯ ಕೃಪೆಯಿಂದ ಜನರಿಗೆ ಮಾದರಿಗಾಗಿಯೂ ಉದಾಹರಣೆಗಾಗಿಯೂ ಜನಿಸುವರು. ಈ ಪ್ರಾಪಂಚಿಕವಾದ ವ್ಯವಹಾರವೆಲ್ಲಕ್ಕೂ ಅಹಂಕಾರದ ಧಕ್ಕೆಯು ಬಡಿದಿದೆ. ಆ ಅಹಂಕಾರವು ಮಾಯೆಯಿಂದ ಎಂದರೆ, ಅವಿವೇಕ ಅಜ್ಞಾನಗಳಿಂದ ಉಂಟಾಗಿದೆ. ಈ ಮಾಯೆಯನ್ನು ಉಪಾಧಿಯಾಗಿ ಎಂದರೆ ಹತೋಟಿಯಲ್ಲಿರುವ ಸಾಧನವಾಗಿ ಪಡೆದಿರುವ ಹಿರಣ್ಯಗರ್ಭ ಬ್ರಹ್ಮಸ್ವರೂಪಳಾದ ದೇವಿಯನ್ನು ಆರಾಧನೆಮಾಡಿದರೆ ಮಾತ್ರ ಜನರು ಈ ಅಹಂಕಾರದಿಂದ ಪಾರಾಗಬಹುದು ಎಂಬುದು ವ್ಯಾಸಮಹರ್ಷಿಯ ತಾತ್ಪರ್ಯವು.

|| ರಾಜೋವಾಚ ||

**ತೇ ಧನ್ಯಾಃ ಕೃತಪುಣ್ಯಾಸ್ತೇ ಮದಮೋಹವಿವರ್ಜಿತಾಃ ॥೪೬॥**
**ಜಿತೇಂದ್ರಿಯಾಃ ಸದಾಚಾರಾ ಜಿತಂ ತೈರ್ಭುವನತ್ರಯಂ ।**

ಜನಮೇಜಯರಾಜನು ಹೇಳಿದನು—ಮಿತಿಮೀರಿದ ಆಶೆ, ಧನ ಇವುಗಳಿಂದುಂಟಾದ ಮದ, ಇದರಿಂದುಂಟಾಗುವ ಅಜ್ಞಾನಮೋಹಾದಿಗಳಿಂದ ಬಿಡಲ್ಪಟ್ಟ ಸಾಧುಸತ್ಪುರುಷರೇ ಧನ್ಯರು ಮತ್ತು ಪುಣ್ಯವಂತರು. ಈ ಮೂರುಲೋಕಗಳಲ್ಲಿರುವ ಜನರಲ್ಲಿ ಅಂತಹ ಒಳ್ಳೆಯ ನಡತೆಯುಳ್ಳವರೇ ಎಲ್ಲರಿಗಿಂತಲೂ ಉತ್ತಮರಾಗಿರುತ್ತಾರೆ. ಅವರು ಇಂದ್ರಿಯಗಳ ಚಾಪಲ್ಯವನ್ನು ಗೆದ್ದವರೂ ಈ ಮೂರು ಲೋಕಗಳಲ್ಲಿರುವವರೆಲ್ಲರನ್ನು ಮೀರಿಸಿದವರೂ ಆಗಿರುತ್ತಾರೆ. ಆದುದರಿಂದ ಅವರೇ ಧನ್ಯರಲ್ಲವೇ ?

**ದುನೋಮಿ ಪಾತಕಂ ಸ್ಮೃತ್ವಾ ಪಿತುರ್ಮಮ ಮಹಾತ್ಮನಃ ॥೪೭॥**

**ಕೃತಸ್ತಪಸ್ವಿನಃ ಕಂಠೇ ಮೃತಸರ್ಪೋ ಹ್ಯಘಂ ವಿನಾ ।**
**ಅತಸ್ತಸ್ಯ ಮುನಿಶ್ರೇಷ್ಠ ಭವಿತಾ ಕಿಂ ಮಮಾಗ್ರತಃ ॥೪೮॥**

ಆದುದರಿಂದ ಇಹಸಂಸಾರದ ಇಂತಹ ಸ್ಥಿತಿಯನ್ನೂ, ನನ್ನ ತಂದೆಯ ಪಾಪ ಕಾರ್ಯವನ್ನೂ ನೆನಸಿಕೊಳ್ಳುವುದರಿಂದ ನನಗೆ ಮನಸ್ಸು ಬಹಳವಾಗಿ ನೋಯುತ್ತಿರುವುದು. ಸ್ವಲ್ಪವೂ ಪಾಪಕಾರಣವಿಲ್ಲದೆ, ತಪಸ್ಸನ್ನು ಮಾಡುತ್ತಿದ್ದ ಋಷಿಯ ಕೊರಳಿಗೆ ಸತ್ತಹಾವನ್ನು ಹಾರದಂತೆ ಹಾಕಿದನು. ಅದರಿಂದ ಆ ನನ್ನ ತಂದೆಗೆ ನನ್ನ ಕಣ್ಣುಮುಂದೆಯೇ ಎಂತಹ ವಿಪತ್ತು ಉಂಟಾಯಿತು? ಇನ್ನೂ ಎಂತಹ ದುರ್ಗತಿಯು ಉಂಟಾಗುವುದೋ ತಿಳಿಯೆನು.

**ನ ಜಾನೇ ಬುದ್ಧಿಸಂಮೋಹಾತ್ಕಿಂ ವಾ ಕಾರ್ಯಂ ಭವಿಷ್ಯತಿ ।**
**ಮಧು ಪಶ್ಯತಿ ಮೂಢಾತ್ಮಾ ಪ್ರಪಾತಂ ನೈವ ಪಶ್ಯತಿ ॥೪೯॥**

ಬುದ್ಧಿಯನ್ನು ಮಂಕುಮಾಡುವ ಈ ಮೋಹದಿಂದ ಎಂತಹ ಪಾಪಕಾರ್ಯವು ನಮ್ಮಿಂದ ಉಂಟಾಗುವುದೆಂಬುದನ್ನು ತಿಳಿಯಲಾರದೆ ಇದೇನೆ. ಕೋಪಾಹಂಕಾರಗಳಿಂದ ಮೂಢನಾದವನು, ಸಿಹಿಯಾಗಿರುವುದನ್ನು ನೋಡುವನೇ ಹೊರತು ಅದರ ಹಿಂದಿರುವ ದೊಡ್ಡ ಪಾಪದ ಹಳ್ಳವನ್ನು ನೋಡುವುದೇ ಇಲ್ಲವು.

**ಕರೋತಿ ನಿಂದಿತಂ ಕರ್ಮ ನರಕಾನ್ನ ಬಿಭೇತಿ ಚ ।**
**ಕಥಂ ಯುದ್ಧಂ ಪುರಾವೃತ್ತಂ ವಿಸ್ತರಾತ್ತದ್ವದಸ್ವ ಮೇ ॥೫೦॥**

ಅಂಥವನು ಪಾಪಕಾರ್ಯಗಳನ್ನೇ ಮಾಡುವನು, ಮತ್ತು ನರಕಕ್ಕೆ ಸ್ವಲ್ಪವೂ ಹೆದರುವುದೇ ಇಲ್ಲವು. ಆದುದು ಆಗಿಹೋಗಿದೆ. ಇರಲಿ; ಗತಿಸಿದುದಕ್ಕೆ ಎಷ್ಟು ಪಶ್ಚಾತ್ತಾಪಪಟ್ಟೇನು? ಆದರೂ ವಿವೇಕದಿಂದ ಮುಂದಿನ ನಡವಳಿಕೆಯನ್ನು ಸರಿಪಡಿಸಿಕೊಳ್ಳಬೇಕು. ಆದುದರಿಂದ ಓ ಮುನಿಶ್ರೇಷ್ಠನೇ, ಹಿಂದೆ ನರನಾರಾಯಣರಿಗೆ ಯುದ್ಧವು ಹೇಗೆ ಉಂಟಾಯಿತೆಂಬುದನ್ನು ವಿಸ್ತಾರವಾಗಿ ನನಗೆ ತಿಳಿಸುವವನಾಗು.

**ಪ್ರಹ್ಲಾದೇನ ಯಥಾ ಚೋಗ್ರಂ ನರನಾರಾಯಣಸ್ಯ ವೈ ।**
**ಪ್ರಹ್ಲಾದಸ್ತು ಕಥಂ ಯಾತಃ ಪಾತಾಲಾತ್ತದ್ವದಸ್ವ ಮೇ ॥೫೧॥**

ಪ್ರಹ್ಲಾದನಿಗೂ ನರನಾರಾಯಣರಿಗೂ ಘೋರಯುದ್ಧವು ಹೇಗೆ ಉಂಟಾಯಿತು? ಪಾತಾಳದಿಂದ ಪ್ರಹ್ಲಾದನು ಹೇಗೆ ಹೊರಟು ಬಂದನು? ಅದನ್ನು ನನಗೆ ತಿಳಿಸು.

**ಸಾರಸ್ವತೇ ಮಹಾತೀರ್ಥೇ ಪುಣ್ಯೇ ಬದರಿಕಾಶ್ರಮೇ ।**
**ನರನಾರಾಯಣೌ ಶಾಂತೌ ತಾಪಸೌ ಮುನಿಸತ್ತಮೌ ॥೫೨॥**

**ಕೃತವಂತೌ ತಥಾ ಯುದ್ಧಂ ಹೇತುನಾ ಕೇನ ಮಾನದ ।**

ಅಭಿಮಾನವನ್ನು ನಾಶಮಾಡುವ, ಗೌರವಾರ್ಹನಾದ, ಓ ವ್ಯಾಸಮುನಿಯೇ, ಪುಣ್ಯಕರವಾದ ಸರಸ್ವತೀ ತೀರ್ಥದ ಬದರಿಕಾಶ್ರಮದಲ್ಲಿ ತಪಸ್ಸನ್ನು ಮಾಡುತ್ತಿದ್ದ ಶಾಂತರಾದ, ಮುನಿಶ್ರೇಷ್ಠರಾದ ನರನಾರಾಯಣರು ಯಾವ ಕಾರಣದಿಂದ ಯುದ್ಧವನ್ನು ಮಾಡಿದರು ?

**ವೈರಂ ಭವತಿ ವಿತ್ತಾರ್ಥಂ ದಾರಾರ್ಥಂ ವಾ ಪರಸ್ಪರಂ ॥೫೩॥**
**ಏಷಣಾರಹಿತೌ ಕಸ್ಮಾಚ್ಚಕ್ರತುಃ ಪ್ರಧನಂ ಮಹತ್ ।**

ಸಾಮಾನ್ಯವಾಗಿ ಧನಾಪೇಕ್ಷೆಯಿಂದಲಾಗಲಿ, ಅಥವಾ ಸ್ತ್ರೀಯ ವಿಷಯವಾಗಿಯಾಗಲಿ, ಪರಸ್ಪರ ದ್ವೇಷವೂ ಯುದ್ಧವೂ ಸಂಭವಿಸುವುದು. ಇವೆರಡರಿಂದಲೂ ಬಿಡಲ್ಪಟ್ಟ ನರನಾರಾಯಣರು ಮಹಾಯುದ್ಧವನ್ನು ಹೇಗೆ ಮಾಡಿದರು ?

**ಪ್ರಹ್ಲಾದೋಽಪಿ ಚ ಧರ್ಮಾತ್ಮಾ ಜ್ಞಾತ್ವಾ ದೇವೌ ಸನಾತನೌ ॥೫೪॥**

**ಕೃತವಾನ್ ಸ ಕಥಂ ಯುದ್ಧಂ ನರನಾರಾಯಣೌ ಮುನೀ ।**
**ಏತದ್ವಿಸ್ತರತೋ ಬ್ರಹ್ಮಞ್ಶ್ರೋತುಮಿಚ್ಛಾಮಿ ಕಾರಣಂ ॥೫೫॥**

ಪ್ರಹ್ಲಾದನೂ ಕೂಡ ಧರ್ಮವನ್ನು ತಿಳಿದಿದ್ದರೂ, ನರನಾರಾಯಣರನ್ನು ತಪಸ್ವಿಗಳೂ ಅನಾದಿನಿತ್ಯರೂ ದೇವಾಂಶಸಂಭೂತರೂ ಆಗಿದಾರೆಂದು ತಿಳಿದಿದ್ದರೂ. ಅವರೊಡನೆ ಯುದ್ಧವನ್ನು ಹೇಗೆ ಮಾಡಿದನು ? ಈ ವಿಚಾರವನ್ನು ಕೇಳಲಪೇಕ್ಷಿಸುತ್ತೇನೆ. ಓ ಬ್ರಾಹ್ಮಣಶ್ರೇಷ್ಠನೇ, ಇವೆಲ್ಲಕ್ಕೂ ಕಾರಣವನ್ನು ವಿಸ್ತಾರವಾಗಿ ನನಗೆ ತಿಳಿಸುವವನಾಗು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ಸಪ್ತಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಅಷ್ಟಮೋಽಧ್ಯಾಯಃ ||

### ಎಂಟನೆಯ ಅಧ್ಯಾಯವು

|| ಸೂತ ಉವಾಚ ||

**ಇತಿ ಪೃಷ್ಟಸ್ತದಾ ವಿಪ್ರೋ ರಾಜ್ಞಾ ಪಾರಿಕ್ಷಿತೇನ ವೈ ।**
**ಉವಾಚ ವಿಸ್ತರಾತ್ಸರ್ವಂ ವ್ಯಾಸಃ ಸತ್ಯವತೀಸುತಃ ॥೧॥**

ಸೂತಮಹರ್ಷಿಯು ಹೇಳಿದನು— ಈ ರೀತಿಯಾಗಿ ಪರೀಕ್ಷಿದ್ರಾಜನ ಪುತ್ರನಾದ ಜನಮೇಜಯರಾಜನು ವ್ಯಾಸಮುನಿಯನ್ನು ಪ್ರಶ್ನಿಸಲಾಗಿ, ಸತ್ಯವತೀಪುತ್ರನಾದ ವ್ಯಾಸಮುನಿಯು ವಿಸ್ತಾರವಾಗಿ ಎಲ್ಲವನ್ನೂ ವಿವರಿಸಲು ಹೀಗೆ ಹೇಳತೊಡಗಿದನು.

**ಜನಮೇಜಯೋಽಪಿ ಧರ್ಮಾತ್ಮಾ ನಿರ್ವೇದಂ ಪರಮಂ ಗತಃ ।**
**ಚಿತ್ತಂ ದುಶ್ಚರಿತಂ ಮತ್ವಾ ವೈರಾಟೀತನಯಸ್ಯ ವೈ ॥೨॥**

**ತಸ್ಯೈವೋದ್ಧರಣಾರ್ಥಾಯ ಚಕಾರ ಸತತಂ ಮನಃ ।**
**ವಿಪ್ರಾವಮಾನಪಾಪೇನ ಯಮಲೋಕಂ ಗತಸ್ಯ ವೈ ॥೩॥**

ವಿರಾಟರಾಜನ ಮಗಳಾದ ಉತ್ತರೆಯಲ್ಲಿ ಜನಿಸಿದ ತನ್ನ ತಂದೆಯಾದ ಪರೀಕ್ಷಿತಮಹಾರಾಜನ ಮನಸ್ಸು ಕೆಟ್ಟ ನಡವಳಿಕೆಯುಳ್ಳದ್ದಾಗಿತ್ತೆಂಬುದನ್ನು ತಿಳಿದವನಾಗಿ, ಧರ್ಮಾತ್ಮನಾದ ಜನಮೇಜಯನು ಅತಿಯಾಗಿ ಬೇಸರವನ್ನೂ ವೈರಾಗ್ಯವನ್ನೂ ಪಡೆದನು. ಆದರೂ ಬ್ರಾಹ್ಮಣನಿಗೆ ಅವಮಾನ ತಿರಸ್ಕಾರಗಳನ್ನು ತೋರಿಸಿದುದರಿಂದ ಉಂಟಾದ ಪಾಪದಿಂದ ಯಮಲೋಕವನ್ನು ಪಡೆದಿದ್ದ ಅವನ ದುರ್ಗತಿ

ಯನ್ನು ದೂರಮಾಡಿ ಅವನನ್ನು ಉದ್ಧಾರಮಾಡಲು ಮನಸ್ಸಿನಲ್ಲಿ ಯಾವಾಗಲೂ ಸಂಕಲ್ಪಿಸಿಕೊಳ್ಳುತ್ತಿದ್ದನು.

ಪುನ್ನಾಮನರಕಾದ್ಯಸ್ಮಾತ್ತ್ರಾಯತೇ ಪಿತರಂ ಸ್ವಕಂ ।
ಪುತ್ರೇತಿ ನಾಮ ಸಾರ್ಥಂ ಸ್ಯಾತ್ತೇನ ತಸ್ಯ ಮುನೀಶ್ವರಾಃ ॥೪॥

ಎಲೈ ಶೌನಕಾದಿ ಮುನಿಶ್ರೇಷ್ಠರೇ ಕೇಳಿರಿ. ಏಕೆಂದರೆ ಮಗನಾದವನು ಪುನ್ನಾಮಕವಾದ ನರಕದಿಂದ ತನ್ನ ತಂದೆಯನ್ನು ಕಾಪಾಡುವುದರಿಂದ ಪುತ್ರನೆಂಬ ಅನ್ವರ್ಥನಾಮವನ್ನು ಹೊಂದುವನು. ಆದುದರಿಂದ ಜನಮೇಜಯರಾಜನೂ ಆ ರೀತಿಯಲ್ಲಿ ನಿಶ್ಚಯಮಾಡಿಕೊಂಡನು.

ಸರ್ಪದಷ್ಟಂ ನೃಪಂ ಶ್ರುತ್ವಾ ಹರ್ಮ್ಯೋಪರಿ ಮೃತಂ ತಥಾ ।
ವಿಪ್ರಶಾಪಾದೌತ್ತರೇಯಂ ಸ್ನಾನದಾನವಿವರ್ಜಿತಂ ॥೫॥
ಪಿತುರ್ಗತಿಂ ನಿಶಮ್ಯಾಸೌ ನಿರ್ವೇದಂ ಗತವಾನ್ನೃಪಃ ।

ಬ್ರಾಹ್ಮಣನ ಶಾಪದಿಂದ ಹಾವಿನಿಂದ ಕಡಿಯಲ್ಪಟ್ಟು, ಔರ್ಧ್ವದೈಹಿಕಸಂಸ್ಕಾರವನ್ನು ಹೊಂದದ, ಎಂದರೆ ಶುದ್ಧಿಯನ್ನೂ ಸಂಸ್ಕಾರವನ್ನೂ ಸದ್ಗತಿಯನ್ನೂ ಪಡೆಯದಿದ್ದ, ಅರಮನೆಯ ಮೇಲುಭಾಗದಲ್ಲೇ ಸ್ನಾನ ದಾನ ಮುಂತಾದ ಅಂತ್ಯಕರ್ಮಗಳಿಲ್ಲದೆಯೇ ಸತ್ತ, ಉತ್ತರೆಯ ಮಗನಾದ, ತನ್ನ ತಂದೆಯ ದುರ್ಗತಿಯನ್ನು ಕೇಳಿ ತಿಳಿದ ಈ ಜನಮೇಜಯರಾಜನು ಬೇಸರವೈರಾಗ್ಯಗಳನ್ನು ಹೊಂದಿದನು.

ಪಾರಿಕ್ಷಿತೋ ಮಹಾಭಾಗಃ ಸಂತಪ್ತೋ ಭಯವಿಹ್ವಲಃ ॥೬॥

ಪಪ್ರಚ್ಛಾಥ ಮುನಿಂ ವ್ಯಾಸಂ ಗೃಹಾಗತಮನಿಂದಿತಃ ।
ನರನಾರಾಯಣಸ್ಯೇಮಾಂ ಕಥಾಂ ಪರಮವಿಸ್ತೃತಾಂ ॥೭॥

ಮತ್ತು ಧರ್ಮಾಚರಣೆಯಲ್ಲಿ ಲೋಪದಿಂದ ಉಂಟಾದ ಭಯದಿಂದ ವ್ಯಾಕುಲಗೊಂಡವನಾಗಿ ಪಶ್ಚಾತ್ತಾಪಪಡುತ್ತಿರುವ, ಭಾಗ್ಯಶಾಲಿಯೂ,ಪರೀಕ್ಷಿದ್ರಾಜನ ಮಗನೂ, ದೂಷಣೆಗೆ ಅನರ್ಹನೂ ಆದ ಜನಮೇಜಯರಾಜನು ತನ್ನ ಮನೆಗೆ ಬಂದಿರುವ ಶ್ರೇಷ್ಠನಾದ ವ್ಯಾಸನನ್ನು ಕುರಿತು ನರನಾರಾಯಣರ ವಿಸ್ತಾರವಾದ ಈ ಕಥೆಯನ್ನು ಹೇಳೆಂದು ಕೇಳಿದನು.

ಜನರ ಇಹಜೀವನದಲ್ಲಿ ಬಂದೊದಗುವ ಕಷ್ಟಗಳನ್ನು ಪರಿಹರಿಸಿಕೊಳ್ಳಲೂ, ಸಮಸ್ಯೆಗಳನ್ನು ಬಿಡಿಸಲೂ ತೋರದಿರುವಾಗ, ಪುರಾಣಗಳನ್ನು ಕೇಳುವುದರಿಂದ ಸರಿಯಾದ ದಾರಿಯನ್ನು ತಿಳಿದುಕೊಳ್ಳಬಹುದು. ಏಕೆಂದರೆ ಅವುಗಳಲ್ಲಿ ಹಿಂದಿನ ಕಾಲದಲ್ಲಿದ್ದ ಸತ್ಪುರುಷರು ಇಂತಹ ಪ್ರಸಂಗಗಳಲ್ಲಿ ಹೇಗೆ ನಡೆದುಕೊಂಡರೆಂಬು ದನ್ನು ವರ್ಣಿಸಿರುತ್ತದೆ.

|| ವ್ಯಾಸ ಉವಾಚ ||

**ಸ ಯದಾ ನಿಹತೋ ರೌದ್ರೋ ಹಿರಣ್ಯಕಶಿಪುರ್ನೃಪ ।**
**ಅಭಿಷಿಕ್ತಸ್ತದಾ ರಾಜ್ಯೇ ಪ್ರಹ್ಲಾದೋ ನಾಮ ತತ್ಸುತಃ ॥೮॥**

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ, ನೃಸಿಂಹರೂಪ ದಲ್ಲಿ ಅವತರಿಸಿದ ವಿಷ್ಣುವಿನಿಂದ, ಭಯಂಕರನಾದ ಹಿರಣ್ಯಕಶಿಪುವು ಸಂಹರಿಸಲ್ಪ ಡಲು, ಆಗ ರಾಜ್ಯದಲ್ಲಿ ಅವನ ಮಗನಾದ ಪ್ರಹ್ಲಾದನು ಅಭಿಸಿಕ್ತನಾಗಿ ರಾಜ ನಾದನು.

**ತಸ್ಮಿಞ್ಶಾಸತಿ ದೈತ್ಯೇಂದ್ರೇ ದೇವಬ್ರಾಹ್ಮಣಪೂಜಕೇ ।**
**ಮಖೈರ್ಭೂರ್ಮ್ಯಾಂ ನೃಪತಯೋ ಯಜಂತಃ ಶ್ರದ್ಧಯಾನ್ವಿತಾಃ ॥೯॥**

ದೇವಬ್ರಾಹ್ಮಣರನ್ನು ಗೌರವದಿಂದ ಕಾಣುವ ದೈತ್ಯೇಂದ್ರನಾದ ಆ ಪ್ರಹ್ಲಾದನು ರಾಜ್ಯಭಾರವನ್ನು ಮಾಡುತ್ತಿರಲಾಗಿ, ರಾಜರೆಲ್ಲರೂ ಅತ್ಯಂತ ಶ್ರದ್ಧೆಯಿಂದ ಕೂಡಿದವರಾಗಿ ಯಜ್ಞಯಾಗಾದಿಧರ್ಮಗಳನ್ನು ಭೂಲೋಕದಲ್ಲಿ ನೆರವೇರಿಸುತ್ತಿದ್ದರು.

**ಬ್ರಾಹ್ಮಣಾಶ್ಚ ತಪೋಧರ್ಮತೀರ್ಥಯಾತ್ರಾಶ್ಚ ಕುರ್ವತೇ ।**
**ವೈಶ್ಯಾಶ್ಚ ಸ್ವಸ್ವವೃತ್ತಿಸ್ಥಾಃ ಶೂದ್ರಾಃ ಶುಶ್ರೂಷಣೇ ರತಾಃ ॥೧೦॥**

ಅವನ ರಾಜ್ಯಭಾರಕಾಲದಲ್ಲಿ, ಬ್ರಾಹ್ಮಣರು ತಪಸ್ಸು ತೀರ್ಥಯಾತ್ರೆ ಮೊದ ಲಾದ ತಮ್ಮ ತಮ್ಮ ಧರ್ಮಗಳನ್ನು ಆಚರಿಸುತ್ತಿದ್ದರು. ಹಾಗೆಯೇ ವೈಶ್ಯರೂ ತಮ್ಮ ತಮ್ಮ ವ್ಯಾಪಾರ ಮುಂತಾದ ವೃತ್ತಿಗಳಲ್ಲಿ ನಿರತರಾಗಿಯೂ, ಶೂದ್ರರು ದ್ವಿಜರ ಶುಶ್ರೂಷಣೆಯಲ್ಲಿ ಆಸಕ್ತರಾಗಿಯೂ ವರ್ತಿಸುತ್ತಿದ್ದರು.

**ನೃಸಿಂಹೇನ ಚ ಪಾತಾಲೇ ಸ್ಥಾಪಿತಃ ಸೋಽಥ ದೈತ್ಯರಾಟ್ ।**
**ರಾಜ್ಯಂ ಚಕಾರ ತತ್ರೈವ ಪ್ರಜಾಪಾಲನತತ್ಪರಃ ॥೧೧॥**

ಆಮೇಲೆ ಪರಮಾತ್ಮನಾದ ನೃಸಿಂಹನಿಂದ ಆ ರಾಕ್ಷಸರಾಜನಾದ ಪ್ರಹ್ಲಾದನು ಪಾತಾಳಲೋಕದಲ್ಲಿ ರಾಜನಾಗಿ ಸ್ಥಾಪಿಸಲ್ಪಟ್ಟವನಾಗಿ ಅಲ್ಲಿಯೇ ಪ್ರಜೆಗಳನ್ನು ಆಸಕ್ತಿಯಿಂದ ಕಾಪಾಡುತ್ತಾ ರಾಜ್ಯಭಾರವನ್ನು ಮಾಡುತ್ತಿದ್ದನು.

**ಕದಾಚಿದ್ಭೃಗುಪುತ್ರೋಽಥ ಚ್ಯವನಾಖ್ಯೋ ಮಹಾತಪಾಃ ।**
**ಜಗಾಮ ನರ್ಮದಾಂ ಸ್ನಾತುಂ ತೀರ್ಥಂ ವೈ ವ್ಯಾಹೃತೀಶ್ವರಂ ॥೧೨॥**

ಒಂದಾನೊಂದು ಸಮಯದಲ್ಲಿ ಭೃಗುಋಷಿಯ ಮಗನಾದ ಮಹಾತಪಸ್ವಿಯಾದ ಚ್ಯವನನೆಂಬ ಋಷಿಯು, ವ್ಯಾಹೃತೀಶ್ವರ ಎಂದು ಪ್ರಸಿದ್ಧವಾದ ನರ್ಮದಾ ನದಿಯ ತೀರ್ಥದಲ್ಲಿ ಸ್ನಾನಮಾಡಲು ಹೋದನು.

**ರೇವಾಂ ಮಹಾನದೀಂ ದೃಷ್ಟ್ವಾ ತತಸ್ತಸ್ಯಾಮುಪಾತರತ್ ।**
**ಉತ್ತರಂತಂ ಪ್ರಜಗ್ರಾಹ ನಾಗೋ ವಿಷಭಯಂಕರಃ ॥೧೩॥**

ಸಮುದ್ರಗಾಮಿನಿಯಾದ ಆ ನರ್ಮದಾಮಹಾನದಿಯನ್ನು ಕಂಡು ಅದರಲ್ಲಿ ಸ್ನಾನಮಾಡಲು ಇಳಿದನು. ಸ್ನಾನವನ್ನು ಮಾಡಿ ಮೇಲಕ್ಕೆ ಬರುತ್ತಿದ್ದ ಅವನನ್ನು ಭಯಂಕರವಾದ ಒಂದು ಮಹಾವಿಷಸರ್ಪವು ಹಿಡಿದುಕೊಂಡಿತು.

**ಗೃಹೀತೋ ಭಯಭೀತಸ್ತು ಪಾತಾಲೇ ಮುನಿಸತ್ತಮಃ ।**
**ಸಸ್ಮಾರ ಮನಸಾ ವಿಷ್ಣುಂ ದೇವದೇವಂ ಜನಾರ್ದನಂ ॥೧೪॥**

ಆ ಪಾತಾಳಲೋಕದಲ್ಲಿ ಮಹಾಸರ್ಪದಿಂದ ಹಿಡಿಯಲ್ಪಟ್ಟ ಆ ಋಷಿಶ್ರೇಷ್ಠನು ಅಪಾಯದಿಂದ ಹೆದರಿದವನಾಗಿ, ದೇವತೆಗಳ ಒಡೆಯನಾದ, ದುಷ್ಟರನ್ನು ದಂಡಿಸುವ ಶ್ರೀಮಹಾವಿಷ್ಣುವನ್ನು ಮನಸ್ಸಿನಲ್ಲಿ ನೆನೆದನು.

**ಸಂಸ್ಮೃತೇ ಪುಂಡರೀಕಾಕ್ಷೇ ನಿರ್ವಿಷೋಽಭೂನ್ಮಹೋರಗಃ ।**
**ನ ಪ್ರಾಪ ಚ್ಯವನೋ ದುಃಖಂ ನೀಯಮಾನೋ ರಸಾತಲಂ ॥೧೫॥**

ಮನಸ್ಸಿನಲ್ಲಿ ಜನಾರ್ದನನನ್ನು ನೆನೆದಕೂಡಲೇ ಆ ಮಹಾಸರ್ಪವು ವಿಷರಹಿತವಾಗಿ ಅವನನ್ನು ಬಾಧಿಸಲು ಶಕ್ತಿಯಿಲ್ಲದ್ದಾಯಿತು. ಆ ಸರ್ಪವು ಅವನನ್ನು ರಸಾತಲಕ್ಕೆ ಎಳೆದುಕೊಂಡು ಹೋಗುತ್ತಿದ್ದರೂ ಅದರಿಂದ ಆ ಮುನಿಗೆ ಏನೂ ದುಃಖವುಂಟಾಗಲಿಲ್ಲವು.

**ದ್ವಿಜಿಹ್ವೇನ ಮುನಿಸ್ಸ್ಪೃಷ್ಟೋ ನಿರ್ವಿಣ್ಣೇನಾತಿಶಂಕಿನಾ ।**
**ಮಾಂ ಶಪೇತ ಮುನಿಃ ಕ್ರುದ್ಧಸ್ತಾಪಸೋಽಯಂ ಮಹಾನಿತಿ ॥೧೬॥**

ತಪಸ್ವಿಯೂ ಮಹಾನುಭಾವನೂ ಆಗಿರುವ ಈ ಋಷಿಯು ಕೋಪಾಕ್ರಾಂತನಾಗಿ ನನಗೆ ಶಾಪವನ್ನು ಕೊಟ್ಟಾನೆಂದು ಊಹಿಸಿ, ಬಹಳ ಭಯಪಟ್ಟು ಆ ಸರ್ಪವು ಅವನನ್ನು ಬಿಟ್ಟುಬಿಟ್ಟಿತು.

**ಚಚಾರ ನಾಗಕನ್ಯಾಭಿಃ ಪೂಜಿತೋ ಮುನಿಸತ್ತಮಃ ।**
**ವಿವೇಶಾಪ್ಯಥ ನಾಗಾನಾಂ ದಾನವಾನಾಂ ಮಹತ್ಪುರಂ ॥೧೭॥**

ಅನಂತರವಲ್ಲಿ ಮುನಿಶ್ರೇಷ್ಠನು ರಸಾತಲದಲ್ಲಿದ್ದ ನಾಗಕನ್ನಿಕೆಯರಿಂದ ಗೌರವಸತ್ಕಾರಗಳನ್ನು ಹೊಂದಿ ಅಲ್ಲಲ್ಲಿ ಸಂಚರಿಸುತ್ತಾ, ಕಡೆಗೆ ನಾಗದೇವತೆಗಳ ಮತ್ತು ರಾಕ್ಷಸರ ರಾಜಧಾನಿಯಾದ ಒಂದು ದೊಡ್ಡ ನಗರವನ್ನು ಪ್ರವೇಶಿಸಿದನು.

**ಕದಾಚಿದ್ಭೃಗುಪುತ್ರಂ ತಂ ವಿಚರಂತಂ ಪುರೋತ್ತಮೇ ।**
**ದದರ್ಶ ದೈತ್ಯರಾಜೋಽಸೌ ಪ್ರಹ್ಲಾದೋ ಧರ್ಮವತ್ಸಲಃ ॥೧೮॥**

ಆ ಭೃಗುಪುತ್ರನಾದ ಚ್ಯವನಋಷಿಯು ಆ ಮಹಾನಗರದಲ್ಲಿ ಸಂಚರಿಸುತ್ತಿರಲು, ಒಂದಾನೊಂದು ಸಮಯದಲ್ಲಿ, ಧರ್ಮಪರಾಯಣನಾದ ಪ್ರಹ್ಲಾದನೆಂಬ ದೈತ್ಯರಾಜನು ಅವನನ್ನು ನೋಡಿದನು.

**ದೃಷ್ಟ್ವಾ ತಂ ಪೂಜಯಾಮಾಸ ಮುನಿಂ ದೈತ್ಯಪತಿಸ್ತದಾ ।**
**ಪಪ್ರಚ್ಛ ಕಾರಣಂ ಕಿಂ ತೇ ಪಾತಾಲಗಮನೇ ವದ ॥೧೯॥**

**ಪ್ರೇಷಿತೋಽಸಿ ಕಿಮಿಂದ್ರೇಣ ಸತ್ಯಂ ಬ್ರೂಹಿ ದ್ವಿಜೋತ್ತಮ ।**
**ದೈತ್ಯವಿದ್ವೇಷಯುಕ್ತೇನ ಮಮ ರಾಜ್ಯದಿದೃಕ್ಷಯಾ ॥೨೦॥**

ಆ ಬಳಿಕ ದೈತ್ಯರಾಜನಾದ ಪ್ರಹ್ಲಾದನು ಆ ಋಷಿಯನ್ನು ಕಂಡು, ಅವನನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ಎಲೈ ಮುನಿಶ್ರೇಷ್ಠನೇ, ನೀನು ಈ ಪಾತಾಳ ಲೋಕಕ್ಕೆ ಬರಲು ಕಾರಣವೇನು ? ರಾಕ್ಷಸದ್ವೇಷಿಯಾದ ಇಂದ್ರನೇನಾದರೂ ನನ್ನ ರಾಜ್ಯದ ಸ್ಥಿತಿಗತಿವೈಭವಾದಿಗಳನ್ನು ನೋಡಿ ತಿಳಿದುಕೊಂಡುಬರಲು ನಿನ್ನನ್ನು ಕಳುಹಿಸಿರುವನೇ ? ನಿಜಸ್ಥಿತಿಯನ್ನು ದಯವಿಟ್ಟು ಹೇಳೆಂದು ಬೆಸಗೊಂಡನು.

|| ಚ್ಯವನ ಉವಾಚ ||

**ಕಿಂ ಮೇ ಮಘವತಾ ರಾಜನ್ ಯದಹಂ ಪ್ರೇಷಿತಃ ಪುನಃ ।**
**ದೂತಕಾರ್ಯಂ ಪ್ರಕುರ್ವಾಣಃ ಪ್ರಾಪ್ತವಾನ್ನಗರೇ ತವ ॥೨೧॥**

ಚ್ಯವನಋಷಿಯು ಪ್ರಹ್ಲಾದರಾಜನನ್ನು ಕುರಿತು ಹೀಗೆ ಹೇಳಿದನು—ಎಲೈ ರಾಜನೇ, ನಾನು ಇಂದ್ರನಿಂದ ಕಳುಹಿಸಲ್ಪಟ್ಟು ನಿನ್ನ ಪಟ್ಟಣಕ್ಕೆ ದೂತಕಾರ್ಯವನ್ನು ಮಾಡುವುದಕ್ಕೆ ಬರಲು ನನಗೆ ಇಂದ್ರನಿಂದ ಆಗಬೇಕಾಗಿರುವುದೇನು ?

**ವಿದ್ಧಿ ಮಾಂ ಭೃಗುಪುತ್ರಂ ತಂ ಸ್ವನೇತ್ರಂ ಧರ್ಮತತ್ಪರಂ ।**
**ಮಾ ಶಂಕಾಂ ಕುರು ದೈತ್ಯೇಂದ್ರ ವಾಸವಪ್ರೇಷಿತಸ್ಯ ವೈ ॥೨೨॥**

ಓ ದೈತ್ಯರಾಜನೇ, ನಾನು ಆ ಪ್ರಸಿದ್ಧನಾದ ಭೃಗುಮಹರ್ಷಿಯ ಮಗನು, ಜ್ಞಾನಚಕ್ಷುಸ್ಸುಳ್ಳವನು, ಧರ್ಮದ ಆಚರಣೆಯಲ್ಲೇ ಶ್ರದ್ಧೆಯುಳ್ಳವನು ಈ ವಿಷಯವನ್ನು ನೀನು ಚನ್ನಾಗಿ ತಿಳಿದು, ಇಂದ್ರನಿಂದ ಕಳುಹಿಸಲ್ಪಟ್ಟ ದೂತನೆಂಬ ವಿಷಯವಾದ ಸಂಶಯವನ್ನು ಬಿಟ್ಟುಬಿಡು. ನಾನಾಗಿಯೇ ಸ್ವತಂತ್ರನಾಗಿ ಬಂದಿರುತ್ತೇನೆ.

**ಸ್ನಾನಾರ್ಥಂ ನರ್ಮದಾಂ ಪ್ರಾಪ್ತಃ ಪುಣ್ಯತೀರ್ಥೇ ನೃಪೋತ್ತಮ ।**
**ನದ್ಯಾಮೇವಾವತೀರ್ಣೋಽಹಂ ಗೃಹೀತಶ್ಚ ಮಹಾಹಿನಾ ॥೨೩॥**

ಓ ರಾಜಶ್ರೇಷ್ಠನೇ, ನಾನು ಇಲ್ಲಿಗೆ ಏತಕ್ಕೆ ಬಂದೆನೆಂಬುದನ್ನು ಹೇಳುವೆನು ಕೇಳು. ನಾನು ನರ್ಮದಾನದಿಯ ಪುಣ್ಯಜಲದಲ್ಲಿ ಸ್ನಾನಮಾಡಲು, ಆ ನದಿಗೆ ಹೋಗಿ, ನೀರಿನಲ್ಲಿ ಇಳಿಯುತ್ತಿರಲು ಒಂದು ದೊಡ್ಡ ಸರ್ಪವು ನನ್ನನ್ನು ಹಿಡಿದುಕೊಂಡಿತು.

**ಜಾತೋಽಸೌ ನಿರ್ವಿಷಃ ಸರ್ಪೋ ವಿಷ್ಣೋಃ ಸಂಸ್ಮರಣಾದಿವ ।**
**ಮುಕ್ತೋಽಹಂ ತೇನ ನಾಗೇನ ಪ್ರಭಾವಾತ್ಸ್ಮರಣಸ್ಯ ವೈ ॥೨೪॥**

ಆಗ ನಾನು ಮಹಾವಿಷ್ಣುವನ್ನು ಸ್ಮರಿಸಿದೆನು. ಆದರಿಂದ ಆ ಸರ್ಪವು ತನ್ನ ವಿಷಶಕ್ತಿಯನ್ನು ಕಳೆದುಕೊಂಡು ನನಗೆ ಅಪಾಯವನ್ನುಂಟುಮಾಡಲು ಶಕ್ತಿಹೀನವಾಯಿತು. ಮತ್ತು ಆ ವಿಷ್ಣುಸ್ಮರಣೆಯ ಮಹಿಮೆಯಿಂದ ಆ ಸರ್ಪವು ನನ್ನನ್ನು ಬಿಟ್ಟುಬಿಟ್ಟಿತು.

**ಅತ್ರಾಽಽಗತೇನ ರಾಜೇಂದ್ರ ಮಯಾಽಽಪ್ತಂ ತವ ದರ್ಶನಂ ।**
**ವಿಷ್ಣುಭಕ್ತೋಽಸಿ ದೈತ್ಯೇಂದ್ರ ತದ್ಭಕ್ತಂ ಮಾಂ ವಿಚಿಂತಯ ॥೨೫॥**

ಓ ದೊರೆಗಳಲ್ಲಿ ಶ್ರೇಷ್ಠನಾದ ಪ್ರಹ್ಲಾದನೇ ಆ ರೀತಿಯಿಂದ ಇಲ್ಲಿಗೆ ಬಂದ ನನಗೆ ನಿನ್ನ ದರ್ಶನವು ದೊರೆಯಿತು. ಎಲೈ ರಾಕ್ಷಸರಾಜನೇ ನೀನು ವಿಷ್ಣು ಭಕ್ತನಾಗಿರುವೆ. ನಾನೂ ಕೂಡ ಆ ವಿಷ್ಣುವಿನ ಭಕ್ತನೆಂದು ತಿಳಿ.

॥ ವ್ಯಾಸ ಉವಾಚ ॥

**ತನ್ನಿಶಮ್ಯ ವಚಃ ಶ್ಲಕ್ಷ್ಣಂ ಹಿರಣ್ಯಕಶಿಪೋಃ ಸುತಃ ।**
**ಪಪ್ರಚ್ಛ ಪರಯಾ ಪ್ರೀತ್ಯಾ ತೀರ್ಥಾನಿ ವಿವಿಧಾನಿ ಚ ॥೨೬॥**

ವ್ಯಾಸನು ಹೇಳಿದನು—ಹಿರಣ್ಯಕಶಿಪುವಿನ ಮಗನಾದ ಆ ಪ್ರಹ್ಲಾದನು ಆ ಋಷಿಯ ಮೃದುಮಧುರವಾದ ಮಾತುಗಳನ್ನು ಕೇಳಿ, ಬಹಳ ಪ್ರೀತಿಯಿಂದ ಅವನನ್ನು ಕುರಿತು ಅವನು ತಿಳಿದಿದ್ದ ಅನೇಕವಾದ ತೀರ್ಥಗಳ ವಿಚಾರವನ್ನು ಕೇಳಿದನು.

॥ ಪ್ರಹ್ರಾದ ಉವಾಚ ॥

**ಪೃಥಿವ್ಯಾಂ ಕಾನಿ ತೀರ್ಥಾನಿ ಪುಣ್ಯಾನಿ ಮುನಿಸತ್ತಮ ।**
**ಪಾತಾಲೇ ಚ ತಥಾಕಾಶೇ ತಾನಿ ನೋ ವದ ವಿಸ್ತರಾತ್ ೨೭॥**

ಪ್ರಹ್ಲಾದನು ಹೇಳಿದನು—ಎಲೈ ಮುನಿಗಳಲ್ಲಿ ಶ್ರೇಷ್ಠನಾದ ಚ್ಯವನಋಷಿಯೇ, ಭೂಮಿಯಲ್ಲಿಯೂ, ಆಕಾಶದಲ್ಲಿಯೂ, ಹಾಗೆಯೇ ಪಾತಾಳದಲ್ಲಿಯೂ ಇರತಕ್ಕ ಶ್ರೇಷ್ಠವಾದ ತೀರ್ಥಗಳು ಯಾವುವು? ಎಂಬುದನ್ನು ವಿಸ್ತಾರವಾಗಿ ನಮಗೆ ತಿಳಿಸುವವನಾಗು.

॥ ಚ್ಯವನ ಉವಾಚ ॥

**ಮನೋವಾಕ್ಕಾಯಶುದ್ಧಾನಾಂ ರಾಜಂಸ್ತೀರ್ಥಂ ಪದೇಪದೇ ।**
**ತಥಾ ಮಲಿನಚಿತ್ತಾನಾಂ ಗಂಗಾಪಿ ಕೀಕಟಾಽಧಿಕಾ ॥೨೮॥**

ಚ್ಯವನಋಷಿಯು ಹೀಗೆ ಹೇಳಿದನು—ಎಲೈ ರಾಜನೇ, ಮನಸ್ಸು, ದೇಹ, ಮಾತು ಎಂಬ ತ್ರಿಕರಣಗಳಲ್ಲಿಯೂ ಶುದ್ಧನಾಗಿರುವವನಿಗೆ ಹೆಜ್ಜೆಹೆಜ್ಜೆಯಲ್ಲಿಯೂ ತೀರ್ಥವೇ ಇರುತ್ತದೆ. ಹಾಗೆಯೇ ಕಾಮ ಕ್ರೋಧಾದಿದೋಷಗಳಿಂದ ಮಲಿನ

ನಾದ ಮನಸ್ಸುಳ್ಳವರಿಗೆ ಪಾವನವಾದ ಗಂಗಾನದಿಯೂ ಕೂಡ ಕೆಟ್ಟ ಸ್ಥಳಕ್ಕಿಂತಲೂ ಕೀಳಾದುದಾಗಿರುತ್ತದೆ.

**ಪ್ರಥಮಂ ಚೇನ್ಮನಃಶುದ್ಧಂ ಜಾತಂ ಪಾಪವಿವರ್ಜಿತಂ ।**
**ತದಾ ತೀರ್ಥಾನಿ ಸರ್ವಾಣಿ ಪಾವನಾನಿ ಭವಂತಿ ವೈ ॥೨೯॥**

ಮೊದಲು ಮನಸ್ಸು ಶುದ್ಧವಾಗಿಯೂ, ಪಾಪರಹಿತವಾಗಿಯೂ ಇದ್ದರೆ ಆಗ ಎಲ್ಲ ತೀರ್ಥಗಳೂ ಪರಿಶುದ್ಧವಾದವುಗಳೇ ಆಗುತ್ತವೆ. ಕೆಟ್ಟದ್ದನ್ನು ಆಲೋಚಿಸದೆ, ಒಳ್ಳೆಯದನ್ನೇ ಇತರರಿಗೂ ತನಗೂ ಬಯಸುವ ಮನಸ್ಸು ಶುದ್ಧವಾಗಿರುತ್ತದೆ. ಸತ್ಯವೂ ಪ್ರಿಯವೂ ಆದ ಮಾತು ಶುದ್ಧವೆನಿಸುತ್ತದೆ. ಪಾಪಕಾರ್ಯಗಳನ್ನು ಮಾಡದೆ ಪರೋಪಕಾರಕ್ಕಾಗಿ ದುಡಿಯುತ್ತಿರುವವರ ಕರ್ಮವೂ ಶುದ್ಧವೆನಿಸುತ್ತದೆ. ಇಂತಹವರಿಗೆ ಸ್ನಾನ, ಶುದ್ಧವಸ್ತ್ರ, ಶುಚಿಯಾದ ಆಹಾರ ಮೊದಲಾದವುಗಳಿಂದ ದೇಹವೂ ನಿರ್ಮಲವಾಗಿರುತ್ತದೆ. ಇದಕ್ಕೆ ತ್ರಿಕರಣಶುದ್ಧಿ ಎಂದೂ ಹೆಸರು.

**ಗಂಗಾತೀರೇ ಹಿ ಸರ್ವತ್ರ ವಸಂತಿ ನಗರಾಣಿ ಚ ।**
**ವ್ರಜಾಶ್ಚೈವಾಕರಾ ಗ್ರಾಮಾಃ ಸರ್ವೇ ಖೇಟಾಸ್ತಥಾ ಪರೇ ॥೩೦॥**

**ನಿಷಾದಾನಾಂ ನಿವಾಸಾಶ್ಚ ಕೈವರ್ತಾನಾಂ ತಥಾಪರೇ ।**
**ಹೂಣವಂಗಖಸಾನಾಂ ಚ ಮ್ಲೇಚ್ಛಾನಾಂ ದೈತ್ಯಸತ್ತಮ ॥೩೧॥**

ಗಂಗಾತೀರದ ಎಲ್ಲ ಕಡೆಗಳಲ್ಲಿಯೂ, ಪಟ್ಟಣಗಳೂ, ಗ್ರಾಮಗಳೂ, ಕೇರಿಗಳೂ, ಹಳ್ಳಿಗಳೂ ಇರುತ್ತವೆ. ಎಲೈ ದೈತ್ಯರಾಜನೇ, ಅವುಗಳಲ್ಲಿ ಬೇಡರು, ಬೆಸ್ತರು, ಹೂಣದೇಶದವರು, ವಂಗದೇಶದವರು, ಬೆಟ್ಟಗುಡ್ಡಗಳ ಜನರು, ಮ್ಲೇಚ್ಛರು ಮೊದಲಾದವರು ವಾಸಮಾಡುತ್ತಿರುತ್ತಾರೆ.

**ಪಿಬಂತಿ ಸರ್ವದಾ ಗಾಂಗಂ ಜಲಂ ಬ್ರಹ್ಮೋಪಮಂ ಸದಾ ।**
**ಸ್ನಾನಂ ಕುರ್ವಂತಿ ದೈತ್ಯೇಂದ್ರ ತ್ರಿಕಾಲಂ ಸ್ವೇಚ್ಛಯಾ ಜನಾಃ ॥೩೨॥**

ಈ ಮೇಲೆ ಹೇಳಿದ ಸ್ಥಳಗಳಲ್ಲಿ ವಾಸಮಾಡುವ ಜನರೆಲ್ಲರೂ ಯಾವಾಗಲೂ ಬ್ರಹ್ಮನಂತೆ ನಿರ್ಮಲವಾದ ಆ ಗಂಗಾನದಿಯ ನೀರನ್ನೇ ಕುಡಿಯುತ್ತಾರೆ. ಮೂರು ಕಾಲಗಳಲ್ಲಿಯೂ ಆ ಜನರು ಗಂಗಾನದಿಯಲ್ಲೇ ಸ್ನಾನವನ್ನೂ ಸ್ವೇಚ್ಛೆಯಿಂದ ಮಾಡುತ್ತಾರೆ. ಗಂಗಾಜಲವು ಸ್ನಾನಮಾಡುವವರ ಪಾಪಗಳನ್ನು ನಿವಾರಿಸುತ್ತಿದ್ದ

ರೂ ತಾನು ಮಾತ್ರ ಪಾಪದ ಲೇಪವನ್ನು ಪಡೆಯದೆ ಯಾವಾಗಲೂ ಶುದ್ಧವಾಗಿರುತ್ತದೆ. ಆದುದರಿಂದ ಅದು ಬ್ರಹ್ಮಕ್ಕೆ ಸಮಾನವಾದುದು ಎಂದು ತಾತ್ಪರ್ಯವು.

ತತ್ರೈಕೋಽಪಿ ವಿಶುದ್ಧಾತ್ಮಾ ನ ಭವತ್ಯೇವ ಮಾರಿಷ ।
ಕಿಂ ಫಲಂ ತರ್ಹಿ ತೀರ್ಥಸ್ಯ ವಿಷಯೋಪಹತಾತ್ಮಸು ॥೩೩॥

ಎಲೈ ರಾಕ್ಷಸಶ್ರೇಷ್ಠನೇ, ಹೀಗೆ ಆ ಜನರು ಗಂಗಾಜಲವನ್ನೇ ಸ್ನಾನಪಾನಾದಿಗಳಿಗೆ ಉಪಯೋಗಿಸಿದರೂ ಕೂಡ, ಅವರಲ್ಲಿ ಒಬ್ಬನೂ ಶುದ್ಧಾತ್ಮನಾಗಿಯೇ ಇರುವುದಿಲ್ಲವು. ಏತಕ್ಕೆಂದರೆ ವಿಷಯಸುಖಗಳಲ್ಲಿ ಆಶೆಯಿಂದ ಆವರಿಸಲ್ಪಟ್ಟಿರುವವರಿಗೆ ಈ ತೀರ್ಥಸ್ನಾನಾದಿಗಳು ನಿಷ್ಫಲವೇ ಆಗಿರುತ್ತವೆ. ಆದುದರಿಂದ ಅವರು ಮಾಡುವ ತೀರ್ಥಸ್ನಾನಾದಿಗಳು ವ್ಯರ್ಥಗಳು ಎಂದು ಹೇಳಬೇಕಾಗುತ್ತದೆ.

ಕಾರಣಂ ಮನ ಏವಾತ್ರ ನಾನ್ಯದ್ರಾಜನ್ವಿಚಿಂತಯ ।
ಮನಃಶುದ್ಧಿಃ ಪ್ರಕರ್ತವ್ಯಾ ಸತತಂ ಶುದ್ಧಿಮಿಚ್ಛತಾ ॥೩೪॥

ಓ ದೊರೆಯೇ, ಏಕೆಂದರೆ, ಇವೆಲ್ಲಕ್ಕೂ ಮನಸ್ಸೇ ಕಾರಣವು. ಬೇರೆ ಯಾವುದೂ ಅಲ್ಲವು ಎಂಬುದನ್ನು ಆಲೋಚಿಸಿನೋಡು. ಆದುದರಿಂದ ಶುದ್ಧವಾಗಿರಬೇಕೆನ್ನುವವನು ಮೊದಲು ಮನಸ್ಸಿನ ನೈರ್ಮಲ್ಯವನ್ನು ಅವಶ್ಯಕವಾಗಿ ಸಂಪಾದಿಸಿಕೊಳ್ಳಬೇಕು. ತೀರ್ಥಸ್ನಾನ ಚಿತ್ತಶುದ್ಧಿಗಳು ಅನ್ಯೋನ್ಯಾಶ್ರಯಿಗಳೂ ಅಲ್ಲವು.

ತೀರ್ಥವಾಸೀ ಮಹಾಪಾಪೀ ಭವೇತ್ತತ್ರಾನ್ಯವಂಚನಾತ್ ।
ತತ್ರೈವಾಚರಿತಂ ಪಾಪಮಾನಂತ್ಯಾಯ ಪ್ರಕಲ್ಪತೇ ॥೩೫॥

ತೀರ್ಥಕ್ಷೇತ್ರಗಳಲ್ಲಿ ವಾಸಮಾಡುವವರು, ಅಲ್ಲಿಗೆ ಬರುವವರನ್ನು ಮೋಸಗೊಳಿಸುವುದರಿಂದ ಮಹಾಪಾಪಿಗಳಾಗುತ್ತಾರೆ. ಪವಿತ್ರವಾದ ತೀರ್ಥಕ್ಷೇತ್ರಗಳಲ್ಲಿ ಮಾಡುವ ಪಾಪವೂ ಒಂದಕ್ಕೆ ಅನಂತದಷ್ಟು ಹೆಚ್ಚು ದುಷ್ಫಲವುಳ್ಳದ್ದಾಗುತ್ತದೆ.

ಯಥೇಂದ್ರವಾರುಣಂ ಪಕ್ವಂ ಮಿಷ್ಟಂ ನೈವೋಪಜಾಯತೇ ।
ಭಾವದುಷ್ಟಸ್ತಥಾ ತೀರ್ಥೇ ಕೋಟಿಸ್ನಾತೋ ನ ಶುಧ್ಯತಿ ॥೩೬॥

ಹಾವುಮೆಕ್ಕೆಕಾಯಿಯು ಹಣ್ಣಾದರೂ ಹೇಗೆ ಸಿಹಿಯಾಗುವುದಿಲ್ಲವೋ ಹಾಗೆಯೇ ದುರ್ಭಾವದಿಂದ ಕೂಡಿದ ಮಾನವನಿಗೆ ಕೋಟಿತೀರ್ಥಗಳ ಸ್ನಾನವೂ ಶುದ್ಧಿಯನ್ನುಂಟುಮಾಡಲಾರದು.

ಪ್ರಥಮಂ ಮನಸಃ ಶುದ್ಧಿಃ ಕರ್ತವ್ಯಾ ಶುಭಮಿಚ್ಛತಾ ।
ಶುದ್ಧೇ ಮನಸಿ ದ್ರವ್ಯಸ್ಯ ಶುದ್ಧಿರ್ಭವತಿ ನಾನ್ಯಥಾ ॥೩೭॥

ಶ್ರೇಯಸ್ಸನ್ನು ಅಪೇಕ್ಷಿಸುವ ಮನುಷ್ಯನು ಮೊದಲು ತನ್ನ ಮನಸ್ಸಿನ ಶುದ್ಧಿಯನ್ನು ಮಾಡಿಕೊಳ್ಳಬೇಕು. ಮನಸ್ಸು ಶುದ್ಧಿಯಾದರೆ ದ್ರವ್ಯಶುದ್ಧಿಯೂ ಉಂಟಾಗುವುದು. ಇದಲ್ಲದೆ ಬೇರೆ ಮಾರ್ಗವು ಇರುವುದಿಲ್ಲವು.

ತಥೈವಾಚಾರಶುದ್ಧಿಃ ಸ್ಯಾತ್ತತಸ್ತೀರ್ಥಂ ಪ್ರಸಿಧ್ಯತಿ ।
ಅನ್ಯಥಾ ತು ಕೃತಂ ಸರ್ವಂ ವ್ಯರ್ಥಂ ಭವತಿ ತತ್ಕ್ಷಣಾತ್ ॥೩೮॥

ಹಿಂದೆ ಹೇಳಿದಂತೆ ದ್ರವ್ಯಶುದ್ಧಿಯುಂಟಾದರೆ ಹಾಗೆಯೇ ಅವನ ಆಚಾರವೂ ಶುದ್ಧವಾಗುತ್ತದೆ. ಅನಂತರದಲ್ಲಿ ಅವನು ಮಾಡಿದ ತೀರ್ಥಸ್ನಾನದ ಫಲವು ಅವನಿಗೆ ಸಿದ್ಧಿಸುವುದು. ಹಾಗಿಲ್ಲದಿದ್ದಲ್ಲಿ ಅವನು ಮಾಡಿದ ಎಲ್ಲ ಕೆಲಸಗಳೂ ಆಕ್ಷಣದಲ್ಲೇ ವ್ಯರ್ಥವಾದಂತೆ ಪರಿಣಮಿಸುವುವು.

ಹೀನವರ್ಣಸ್ಯ ಸಂಸರ್ಗಂ ತೀರ್ಥೇ ಗತ್ವಾ ಸದಾ ತ್ಯಜೇತ್ ।
ಭೂತಾನುಕಂಪನಂ ಚೈವ ಕರ್ತವ್ಯಂ ಕರ್ಮಣಾ ಧಿಯಾ ॥೩೯॥

ಪುಣ್ಯತೀರ್ಥಗಳಿಗೆ ಹೋದಾಗ ನೀಚಜನರ ಸಹವಾಸವನ್ನು ಯಾವಾಗಲೂ ಬಿಟ್ಟುಬಿಡಬೇಕು. ಮತ್ತು ಮನೋವಾಕ್ಕಾಯಗಳಿಂದ ಸರ್ವಪ್ರಾಣಿಗಳಲ್ಲಿಯೂ ದಯೆಯನ್ನು ತೋರಿಸಬೇಕು.

ಯದಿ ಪೃಚ್ಛಸಿ ರಾಜೇಂದ್ರ ತೀರ್ಥಂ ವಕ್ಷ್ಯಾಮ್ಯನುತ್ತಮಂ ॥೩೯॥
ಪ್ರಥಮಂ ನೈಮಿಷಂ ಪುಣ್ಯಂ ಚಕ್ರತೀರ್ಥಂ ಚ ಪುಷ್ಕರಂ ।
ಅನ್ಯೇಷಾಂ ಚೈವ ತೀರ್ಥಾನಾಂ ಸಂಖ್ಯಾ ನಾಸ್ತಿ ಮಹೀತಲೇ ॥೪೦॥
ಪಾವನಾನಿ ಚ ಸ್ಥಾನಾನಿ ಬಹೂನಿ ನೃಪಸತ್ತಮ ।

ಓ ರಾಜಶ್ರೇಷ್ಠನೇ, ಈಗ ಅತ್ಯಂತ ಪುಣ್ಯಕರವಾದ ತೀರ್ಥಗಳನ್ನು ನೀನು ಕೇಳುತ್ತಿರುವೆ. ಅವನ್ನು ಹೇಳುತ್ತೇನೆ. ಪ್ರಾರಂಭದಲ್ಲಿ ನೈಮಿಷಾರಣ್ಯ ತೀರ್ಥವೂ ಪುಣ್ಯಕರವಾದ ಚಕ್ರತೀರ್ಥವೂ ಮತ್ತು ಪುಷ್ಕರತೀರ್ಥವೂ ಅತ್ಯಂತ ಶ್ರೇಷ್ಠವಾದವು

ಗಳು. ಮತ್ತೆ ಬೇರೆ ಪುಣ್ಯಕರವಾದ ತೀರ್ಥಗಳ ಸಂಖ್ಯೆಯು ಅಪಾರವಾಗಿರುತ್ತದೆ. ಪವಿತ್ರವೂ ಶಾಂತವೂ ಆದ ಸ್ಥಾನಗಳು ಇನ್ನೂ ಬಹಳವಾಗಿರುತ್ತವೆ.

|| ವ್ಯಾಸ ಉವಾಚ ||

**ತಚ್ಛ್ರುತ್ವಾ ವಚನಂ ರಾಜಾ ನೈಮಿಷಂ ಗಂತುಮುದ್ಯತಃ ||೪೧||**
**ನೋದಯಾಮಾಸ ದೈತ್ಯಾನ್ಸ್ವೈ ಹರ್ಷನಿರ್ಭರಮಾನಸಃ ।**

ವ್ಯಾಸಮುನಿಯು ಹೇಳಿದನು—ಚ್ಯವನಮಹರ್ಷಿಯು ಮಾತನ್ನು ಕೇಳಿದ ಆ ದೈತ್ಯೇಂದ್ರನಾದ ಪ್ರಹ್ಲಾದನು, ಹರ್ಷದಿಂದ ಕೂಡಿದ ಮನಸ್ಸುಳ್ಳವನಾಗಿ ನೈಮಿಷ ತೀರ್ಥವನ್ನು ಕುರಿತು ಹೊರಡಲು ರಾಕ್ಷಸರೆಲ್ಲರನ್ನೂ ಪ್ರೋತ್ಸಾಹಿಸಿದನು.

|| ಪ್ರಹ್ಲಾದ ಉವಾಚ ||

**ಉತ್ತಿಷ್ಠಂತು ಮಹಾಭಾಗಾ ಗಮಿಷ್ಯಾಮೋಽದ್ಯ ನೈಮಿಷಂ ||೪೨||**
**ದ್ರಕ್ಷ್ಯಾಮಃ ಪುಂಡರೀಕಾಕ್ಷಂ ಪೀತವಾಸಸಮಚ್ಯುತಂ ।**

ಪ್ರಹ್ಲಾದನು ಹೇಳಿದನು—ಎಲೈ ಭಾಗ್ಯಶಾಲಿಗಳೇ, ಏಳಿರಿ. ಈಗಲೇ ನೈಮಿಷಾರಣ್ಯಕ್ಷೇತ್ರವನ್ನು ಕುರಿತು ಹೊರಡೋಣ. ಅಲ್ಲಿ ಕಮಲದಳದಂತೆ ಕಣ್ಣುಳ್ಳ ಪೀತಾಂಬರವನ್ನು ಧರಿಸಿರುವ ಅಚ್ಯುತದೇವನ ದರ್ಶನವನ್ನು ಮಾಡೋಣ.

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ವಿಷ್ಣುಭಕ್ತೇನ ಸರ್ವೇ ತೇ ದಾನವಾಸ್ತದಾ ||೪೩||**
**ತೇನೈವ ಸಹ ಪಾತಾಲಾನ್ನಿರ್ಯಯುಃ ಪರಯಾ ಮುದಾ ।**

ವ್ಯಾಸಮುನಿಯು ಹೇಳಿದನು--ವಿಷ್ಣುಭಕ್ತನಾದ ಪ್ರಹ್ಲಾದನು ಈ ರೀತಿಯಾಗಿ ಹೇಳಲು, ಆಗ ಆ ಎಲ್ಲ ರಾಕ್ಷಸರೂ ಅವನೊಡನೆ ಪರಮಸಂತೋಷದಿಂದ ಕೂಡಿ ಪಾತಾಳದಿಂದ ಹೊರಟರು.

**ತೇ ಸಮೇತ್ಯ ಚ ದೈತೇಯಾ ದಾನವಾಶ್ಚ ಮಹಾಬಲಾಃ ||೪೪||**
**ನೈಮಿಷಾರಣ್ಯಮಾಸಾದ್ಯ ಸ್ನಾನಂ ಚಕ್ರುರ್ಮುದಾನ್ವಿತಾಃ ।**

ಮಹಾಬಲಶಾಲಿಗಳಾದ ದಿತಿಯ ಮಕ್ಕಳೂ, ದನುವಿನ ಮಕ್ಕಳೂ ಆದ ಆ ರಾಕ್ಷಸರು ಎಲ್ಲರೂ ಆನಂದದಿಂದ ಕೂಡಿದವರಾಗಿ ನೈಮಿಷಾರಣ್ಯತೀರ್ಥವನ್ನು ಸೇರಿ ಅಲ್ಲಿ ಸ್ನಾನವನ್ನು ಮಾಡಿದರು.

**ಪ್ರಹ್ಲಾದಸ್ತತ್ರ ತೀರ್ಥೇಷುಚರನ್ದೈತ್ಯೈಃ ಸಮನ್ವಿತಃ ॥೪೫॥**
**ಸರಸ್ವತೀಂ ಮಹಾಪುಣ್ಯಾಂ ದದರ್ಶ ವಿಮಲೋದಕಾಂ ।**

ಪ್ರಹ್ಲಾದನು ಆ ದೈತ್ಯಸಮೂಹದಿಂದ ಕೂಡಿ ಆ ಕ್ಷೇತ್ರಗಳಲ್ಲಿ ಸಂಚರಿಸುತ್ತಾ ತುಂಬ ಪವಿತ್ರವೂ, ನಿರ್ಮಲವಾದ ಜಲವುಳ್ಳದ್ದೂ ಆದ ಸರಸ್ವತೀ ನದಿಯನ್ನು ಕಂಡನು.

**ತೀರ್ಥೇ ತತ್ರ ನೃಪಶ್ರೇಷ್ಠ ಪ್ರಹ್ಲಾದಸ್ಯ ಮಹಾತ್ಮನಃ ॥೪೬॥**
**ಮನಃಪ್ರಸನ್ನಂ ಸಂಜಾತಂ ಸ್ನಾತ್ವಾ ಸಾರಸ್ವತೇ ಜಲೇ ।**

ಎಲೈ ರಾಜೋತ್ತಮನಾದ ಜನಮೇಜಯನೇ, ಮಹಾತ್ಮನಾದ ಆ ಪ್ರಹ್ಲಾದನು ಆ ಸಾರಸ್ವತತೀರ್ಥದಲ್ಲಿ ಸ್ನಾನಮಾಡಿದಮೇಲೆ ಅವನ ಮನಸ್ಸು ಪ್ರಸನ್ನವಾದುದಾಯಿತು.

**ವಿಧಿವತ್ತತ್ರ ದೈತ್ಯೇಂದ್ರಃ ಸ್ನಾನದಾನಾದಿಕಂ ಶುಭೇ ॥೪೭॥**
**ಚಕಾರಾತಿಪ್ರಸನ್ನಾತ್ಮಾ ತೀರ್ಥೇ ಪರಮಪಾವನೇ ।**

ಪರಮಪವಿತ್ರವೂ ಮಂಗಳಕರವೂ ಆದ ಆ ಸಾರಸ್ವತತೀರ್ಥದಲ್ಲಿ ದೈತ್ಯರಾಜನಾದ ಪ್ರಹ್ಲಾದನು, ವಿಧ್ಯುಕ್ತವಾಗಿ ಸ್ನಾನಮಾಡಿ, ಶಾಸ್ತ್ರೋಕ್ತವಾದ ದಾನಾದಿ ಕರ್ಮಗಳನ್ನು ಆಚರಿಸಿದನು. ಅದರಿಂದ ಅವನ ಮನಸ್ಸು ಶಾಂತಿ ಸಂತೋಷಗಳನ್ನು ಹೊಂದಿ ಬಹಳ ಪ್ರಸನ್ನವಾಯಿತು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ಅಷ್ಟಮೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಚತುರ್ಥಸ್ಕಂಧೇ

## || ನವಮೋಽಧ್ಯಾಯಃ ||

## ಒಂಬತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಕುರ್ವಂಸ್ತೀರ್ಥವಿಧಿಂ ತತ್ರ ಹಿರಣ್ಯಕಶಿಪೋಃ ಸುತಃ ।**
**ನ್ಯಗ್ರೋಧಂ ಸುಮಹಚ್ಛಾಯಮಪಶ್ಯತ್ಪುರತಸ್ತದಾ ॥೧॥**

ವ್ಯಾಸಮುನಿಯು ಹೇಳಿದನು—ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನು ಆ ಪುಣ್ಯತೀರ್ಥದಲ್ಲಿ, ತೀರ್ಥಕ್ಷೇತ್ರಗಳಲ್ಲಿ ಆಚರಿಸಬೇಕಾದ ವಿಧಿನಿಯಮಗಳನ್ನು ನೆರವೇರಿಸಿ, ಆ ಬಳಿಕ ತನ್ನ ಮುಂದೆ ವಿಸ್ತಾರವಾದ ನೆರಳಿನಿಂದ ಶೋಭಿಸುತ್ತಿರುವ ಒಂದು ದೊಡ್ಡ ಆಲದಮರವನ್ನು ಕಂಡನು.

**ದದರ್ಶ ಬಾಣಾನಪರಾನ್ನಾನಾಜಾತೀಯಕಾಂಸ್ತದಾ ।**
**ಗೃಧ್ರಪಕ್ಷಯುತಾಂ ಸ್ತೀವ್ರಾಞ್ಶಿಲಾಧೌತಾನ್ಮಹೋಜ್ಜ್ವಲಾನ್ ॥೨॥**

ಆ ಪ್ರಹ್ಲಾದನು ಅಲ್ಲಿ ಚಂದ್ರಶಿಲೆಯಂತೆ ಅಥವಾ ಮಣಿಶಿಲೆಯಂತೆ ಹೊಳೆಯುತ್ತಿರುವ, ತುಂಬ ತೇಜಸ್ವಿಗಳಾಗಿ ಕಾಣಬರುತ್ತಿರುವ ಗರಿಗಳುಳ್ಳ ತೀಕ್ಷ್ಣವಾಗಿರುವ ಬಾಣಗಳನ್ನೂ ಇನ್ನೂ ಅನೇಕವಿಧವಾದ ಭಲ್ಲೆ ಮೊದಲಾದ ಆಯುಧಗಳನ್ನೂ ನೋಡಿದನು.

**ಚಿಂತಯಾಮಾಸ ಮನಸಾ ಯಸ್ಯೇಮೇ ವಿಶಿಖಾಸ್ತ್ವಿಹ ।**
**ಋಷೀಣಾಮಾಶ್ರಮೇ ಪುಣ್ಯೇ ತೀರ್ಥೇ ಪರಮಪಾವನೇ ॥೩॥**

ಋಷಿಗಳು ವಾಸಮಾಡುವ ಪರಮಶ್ರೇಷ್ಠವಾದ ಈ ನೈಮಿಷಾರಣ್ಯ ತೀರ್ಥದಲ್ಲಿ ಈ ಬಾಣಗಳು ಯಾರವು? ಮತ್ತು ಎಲ್ಲಿಯವು? ಎಂದು ಮನಸ್ಸಿನಲ್ಲಿ ಆಲೋಚಿಸಿದನು.

**ಏವಂ ಚಿಂತಯತಾನೇನ ಕೃಷ್ಣಾಜಿನಧರೌ ಮುನೀ ।**
**ಸಮುನ್ನತಜಟಾಭಾರೌ ದೃಷ್ಟೌ ಧರ್ಮಸುತೌ ತದಾ ॥೪॥**

ಈ ರೀತಿಯಲ್ಲಿ ಆಲೋಚಿಸುತ್ತಿರುವ ಆ ಪ್ರಹ್ಲಾದನಿಗೆ, ಕೃಷ್ಣಾಜಿನವನ್ನು ಧರಿಸಿ, ಮೇಲಕ್ಕೆ ಎತ್ತಿಕಟ್ಟಿರುವ ಜಡೆಯುಳ್ಳ, ಧರ್ಮದೇವನ ಮಕ್ಕಳಾದ ಆ ಇಬ್ಬರು ಮುನಿಗಳೂ ಕಾಣಿಸಿದರು.

**ತಯೋರಗ್ರೇ ಧೃತೇ ಶುಭ್ರೇ ಧನುಷೀ ಲಕ್ಷಣಾನ್ವಿತೇ ।**
**ಶಾರ್ಙ್ಗಮಾಜಗವಂ ಚೈವ ತಥಾಕ್ಷಯ್ಯೌ ಮಹೇಷುಧೀ ॥೫॥**

**ಧ್ಯಾನಸ್ಥೌ ತೌ ಮಹಾಭಾಗೌ ನರನಾರಾಯಣಾವೃಷೀ ।**

ಒಳ್ಳೆಯ ಲಕ್ಷಣಗಳಿಂದ ಕೂಡಿ ಪ್ರಕಾಶಿಸುತ್ತಿರುವ ತಮ್ಮ ಮುಂಗಡೆಯಲ್ಲಿ ಶಾರ್ಙ್ಗ ಮತ್ತು ಪಿನಾಕವೆಂಬ ಧನುಸ್ಸುಗಳನ್ನೂ ಮತ್ತು ಯಾವಾಗಲೂ ಮುಗಿದು ಹೋಗದೇ ಇರುವ ಬಾಣಗಳುಳ್ಳ ಬತ್ತಳಿಕೆಗಳನ್ನೂ ಧರಿಸಿರುವ ಏಕಾಗ್ರವಾದ ಧ್ಯಾನದಲ್ಲಿ ಮಗ್ನರಾಗಿರುವ ಮಹಾಪುಣ್ಯಶಾಲಿಗಳಾದ ಆ ನರನಾರಾಯಣರೆಂಬ ಋಷಿಗಳೀರ್ವರು ಗೋಚರವಾದರು.

**ದೃಷ್ಟ್ವಾ ಧರ್ಮಸುತೌ ತತ್ರ ದೈತ್ಯಾನಾಮಧಿಪಸ್ತದಾ ॥೬॥**
**ಕ್ರೋಧರಕ್ತೇಕ್ಷಣಸ್ತೌ ತು ಪ್ರೋವಾಚಾಽಸುರಪಾಲಕಃ ।**

ಏಕಾಂತ ಭಕ್ತಿಧರ್ಮದಲ್ಲಿ ಆಸಕ್ತನಾಗಿದ್ದುದರಿಂದ, ಧರ್ಮಸಂಕರದಿಂದ ಕೂಡಿರುವ ಆ ಋಷಿಗಳನ್ನು ನೋಡಿ ವರ್ಣಧರ್ಮಾತಿಕ್ರಮವನ್ನು ಸಹಿಸದೆ, ರಾಕ್ಷಸರ ಒಡೆಯನಾದ ಪ್ರಹ್ಲಾದನು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಧರ್ಮದೇವನ ಮಕ್ಕಳಾದ ಅವರನ್ನು ಕುರಿತು ಈ ರೀತಿಯಾಗಿ ಹೇಳಿದನು.

**ಕಿಂ ಭವದ್ಭ್ಯಾಂ ಸಮಾರಬ್ಧೋ ದಂಭೋ ಧರ್ಮವಿನಾಶನಃ ॥೭॥**
**ನ ಶ್ರುತಂ ನೈವ ದೃಷ್ಟಂ ಹಿ ಸಂಸಾರೇಽಸ್ಮಿನ್ ಕದಾಪಿ ಹಿ ।**

ಓ ಮುನಿಗಳಿರಾ, ಈ ಸಂಸಾರದ ಈ ಲೌಕಿಕವ್ಯವಹಾರದಲ್ಲಿ ಎಂದೂ ಕೇಳದ ಎಲ್ಲಿಯೂ ನೋಡದ ವರ್ಣಾಶ್ರಮಧರ್ಮಗಳ ವ್ಯವಸ್ಥೆಯನ್ನು ಹಾಳು ಮಾಡುವ ಈ ಮೋಸವು ನಿಮ್ಮಿಂದ ಈಗ ಏಕೆ ಆರಂಭಿಸಲ್ಪಟ್ಟಿದೆ? ಈ ವಿಧವಾದ ಡಂಭವನ್ನು ನಾವು ಎಂದೂ ಕೇಳಿಲ್ಲವು; ಎಲ್ಲಿಯೂ ನೋಡಿಲ್ಲವು.

**ತಪಸಶ್ಚರಣಂ ತೀವ್ರಂ ತಥಾ ಚಾಪಸ್ಯ ಧಾರಣಂ ॥೮॥**

**ವಿರೋಧೋಽಯಂ ಯುಗೇ ಚಾದ್ಯೇ ಕಥಂ ಯುಕ್ತಂ ಕಲಿಪ್ರಿಯಂ ।**

ಉಗ್ರವಾದ ತಪಸ್ಸನ್ನು ಮಾಡುತ್ತಿರುವುದೂ, ಹಾಗೆಯೇ ಯುದ್ಧಮಾಡುವ ಸಲುವಾಗಿ ಧನುಸ್ಸನ್ನು ಧರಿಸಿರುವುದೂ, ಇವೆರಡೂ ಪರಸ್ಪರವಾಗಿ ವಿರೋಧವುಳ್ಳ ನಡೆವಳಿಯಾಗಿವೆ. ಇದು ಕಲಿಗಾಲಕ್ಕೆ ತಕ್ಕುದೆನ್ನಬಹುದಾದರೂ ಈ ಧಾರ್ಮಿಕ ನಾದ ಆದ್ಯಯುಗವೆಂದು ಹೇಳಲ್ಪಡುವ ಕೃತಯುಗಕ್ಕೆ ತಕ್ಕುದಲ್ಲವು.

**ಬ್ರಾಹ್ಮಣಸ್ಯ ತಪೋ ಯುಕ್ತಂ ತತ್ರ ಕಿಂ ಚಾಪಧಾರಣಂ ॥೯॥**

**ಕ್ವ ಜಟಾಧಾರಣಂ ದೇಹೇ ಕ್ವೇಷುಧೀ ಚ ವಿಡಂಬನೌ ।**

**ಧರ್ಮಸ್ಯಾಚರಣಂ ಯುಕ್ತಂ ಯುವಯೋರ್ದಿವ್ಯಭಾವಯೋಃ ॥೧೦॥**

ಬ್ರಾಹ್ಮಣನಾದವನಿಗೆ ತಪಸ್ಸನ್ನು ಮಾಡುವುದೇ ಯುಕ್ತವು. ಅದನ್ನು ಬಿಟ್ಟು ಧನುಸ್ಸನ್ನು ಧರಿಸುವುದೆಂದರೇನು? ಈ ಜಟೆಗಳನ್ನು ಧರಿಸಿರುವುದೆಲ್ಲಿ? ಹಾಗೆಯೇ ಅದರ ಜೊತೆಯಲ್ಲಿಯೇ ಬತ್ತಳಿಕೆಗಳನ್ನೂ ಧರಿಸಿರುವುದೆಲ್ಲಿ? ಇದೇನೋ ಮೋಸದ ನಡೆವಳಿಕೆಯಾಗಿದೆ. ಉತ್ತಮವಾದ ಉದ್ದೇಶವುಳ್ಳವರಂತೆ ಕಾಣುವ ನೀವುಗಳು ಶಾಸ್ತ್ರಗಳಲ್ಲಿ ವಿಧಿಸಿರುವ ನಿಮ್ಮ ವರ್ಣಾಶ್ರಮಧರ್ಮವನ್ನು ಆಚರಿಸು ವುದೇ ಯೋಗ್ಯವಾದುದು.

ತಪಸ್ಸನ್ನು ಆಚರಿಸುವುದೂ, ಧನುರ್ಬಾಣಗಳನ್ನು ಧರಿಸುವುದೂ ಕ್ರಮ ವಾಗಿ ಬ್ರಾಹ್ಮಣರಿಗೂ ಮತ್ತು ಕ್ಷತ್ರಿಯರಿಗೂ ಶಾಸ್ತ್ರದಲ್ಲಿ ಕ್ಲೃಪ್ತವಾಗಿರುವ ವಿಶೇಷ ಧರ್ಮವಾಗಿದೆ. ಅವೆರಡೂ ಒಬ್ಬ ವ್ಯಕ್ತಿಯಲ್ಲೇ ಇರುವುದು ಶಾಸ್ತ್ರರೂಢಿಗಳಿಗೆ ವಿರೋಧವಾಗಿರುತ್ತದೆ ಎಂದು ಪ್ರಹ್ಲಾದನ ಅಭಿಪ್ರಾಯವು. ಆದರೆ, ವಿರೋಧವು ಏತರಿಂದ? ಅಧಿಕಾರವಿಲ್ಲದುದರಿಂದಲೇ? ತಕ್ಕ ಶಕ್ತಿ ಇಲ್ಲದುದರಿಂದಲೇ? ಎಂದು ವಿಕಲ್ಪಮಾಡಿಕೊಂಡು ನರನು ಪ್ರತ್ಯುತ್ತರವನ್ನು ಹೇಳುತ್ತಾನೆ. ಮೊದಲನೆಯ

ಕಾರಣದಿಂದ ಅಲ್ಲವು ; ಏಕೆಂದರೆ, ಬ್ರಾಹ್ಮಣ ಕ್ಷತ್ರಿಯರಿಬ್ಬರಿಗೂ ತಪಸ್ಸು ಯುದ್ಧ ಇವೆರಡರಲ್ಲೂ ಸನ್ನಿವೇಶ ಆವಶ್ಯಕತೆಗಳಿಗೆ ತಕ್ಕಂತೆ ಅಧಿಕಾರವಿರುತ್ತದೆ. ಎರಡನೆಯ ಕಾರಣದಿಂದಲೂ ಅಲ್ಲವು ; ಏಕೆಂದರೆ, ಯಾರಿಗೆ ಶಕ್ತಿ ಇಲ್ಲವೋ ಅವರ ವಿಷಯದಲ್ಲಿ ಹಾಗಾಗಲಿ. ಆದರೂ ಶಕ್ತಿಯುಳ್ಳವರ ವಿಷಯದಲ್ಲಿ ಆ ವಿರೋಧದ ಪ್ರಸಕ್ತಿಯು ಉಂಟಾಗದು ಎಂಬ ಅಭಿಪ್ರಾಯದಿಂದ ನರನು ಪ್ರತ್ಯುತ್ತರವನ್ನು ಹೇಳುತ್ತಾನೆ ಎಂದು ತಾತ್ಪರ್ಯವು,

॥ ವ್ಯಾಸ ಉವಾಚ ॥

**ಇತಿ ತಸ್ಯ ವಚಃ ಶ್ರುತ್ವಾ ನರಃ ಪ್ರೋವಾಚ ಭಾರತ ।**
**ಕಾ ತೇ ಚಿಂತಾತ್ರ ದೈತ್ಯೇಂದ್ರ ವೃಥಾ ತಪಸಿ ಚಾವಯೋಃ ॥೧೧॥**

ವ್ಯಾಸಮುನಿಯು ಹೇಳಿದನು—ಎಲೈ ಭರತಕುಲೋತ್ಪನ್ನನಾದ ಜನಮೇಜಯನೇ ಕೇಳು. ಹೀಗೆ ಪ್ರಹ್ಲಾದನು ಹೇಳಿದ ಮಾತನ್ನು ಕೇಳಿ ನರನು ಅವನನ್ನು ಕುರಿತು ಹೀಗೆ ಹೇಳಿದನು. ಓ ರಾಕ್ಷಸೇಂದ್ರನೇ, ನಮ್ಮಿಬ್ಬರ ಈ ತಪಸ್ಸು ಮುಂತಾದ ನಡೆವಳಿಯ ವಿಷಯದಲ್ಲಿ ನಿನಗೇತಕ ಯೋಚನೆಯು ?

**ಸಾಮರ್ಥ್ಯೇ ಸತಿ ಯಃ ಕುರ್ಯಾತ್ತತ್ಸಂಪದ್ಯೇತ ತಸ್ಯ ಹಿ ।**
**ಆವಾಂ ಕಾರ್ಯದ್ವಯೇ ಮಂದ ಸಮರ್ಥೌ ಲೋಕವಿಶ್ರುತೌ ॥೧೨॥**

ಯಾವ ಮನುಷ್ಯನಿಗೆ ಯಾವ ಕಾರ್ಯವನ್ನು ಮಾಡುವುದರಲ್ಲಿ ಸಾಮರ್ಥ್ಯವಿರುವುದೋ ಅದನ್ನು ಅವನು ಮಾಡಿದರೆ ಅವನಿಗೆ ಅದರ ಫಲವು ಲಭಿಸುತ್ತದೆ. ಓ ಮಂದಬುದ್ಧಿಯೇ ಕೇಳು, ನಾವಿಬ್ಬರೂ ಈ ಎರಡು ಬಗೆಯ ಕಾರ್ಯಗಳಲ್ಲೂ ಎಂದರೆ ಯುದ್ಧದ ಮತ್ತು ಬೇಟೆಯ ಕಾರ್ಯಗಳಿಗೆ ಬೇಕಾದ ಸಾಮರ್ಥ್ಯದಲ್ಲಿಯೂ ಮತ್ತು ತಪಸ್ಸನ್ನು ಆಚರಿಸುವುದರಲ್ಲಿಯೂ ಪ್ರಪಂಚದಲ್ಲೆಲ್ಲಾ ಪ್ರಸಿದ್ಧಿಯನ್ನು ಪಡೆದಿರುವೆವು.

**ಯುದ್ಧೇ ತಪಸಿ ಸಾಮರ್ಥ್ಯಂ ತ್ವಂ ಪುನಃ ಕಿಂ ಕರಿಷ್ಯಸಿ ।**
**ಗಚ್ಛ ಮಾರ್ಗೇ ಯಥಾಕಾಮಂ ಕಸ್ಮಾದತ್ರ ವಿಕತ್ಥಸೇ ॥೧೩॥**

ಹೀಗಿರುವಲ್ಲಿ ಎಂದರೆ ಯುದ್ಧಮಾಡುವುದರಲ್ಲಿಯೂ ತಪಸ್ಸನ್ನು ಮಾಡುವುದರಲ್ಲಿಯೂ ನಮಗೆ ಸಾಮರ್ಥ್ಯವಿರುವುದರಿಂದ ನೀನು ಏನನ್ನು ಮಾಡಲು ಸಮರ್ಥ

ನಾಗಿರುವೆ? ಆದುದರಿಂದ ನೀನು ನಿನ್ನ ದಾರಿಯನ್ನು ಹಿಡಿದು ನಿನಗಿಷ್ಟಬಂದ ಹಾಗೆ ಹೋಗು. ಇಲ್ಲಿ ಏತಕ್ಕಾಗಿ ಜಂಭದ ಮಾತುಗಳನ್ನಾಡುತ್ತಿರುವೆ?

**ಬ್ರಾಹ್ಮಂ ತೇಜೋ ದುರಾರಾಧ್ಯಂ ನ ತ್ವಂ ವೇದ ವಿಮೋಹಿತಃ ।**
**ವಿಪ್ರಚರ್ಚಾ ನ ಕರ್ತವ್ಯಾ ಪ್ರಾಣಿಭಿಃ ಸುಖಮಿಪ್ಸುಭಿಃ ॥೧೪॥**

ಬ್ರಾಹ್ಮಣರ ತಪಸ್ಸಿನ ತೇಜಃಪ್ರಭಾವವನ್ನು ಸಂಪಾದಿಸುವುದು ಸಾಧಾರಣ ಜನರಿಗೆ ಅಸಾಧ್ಯವಾದುದು. ಭ್ರಾಂತಿಯಿಂದ ದಡ್ಡನಾದ ನೀನು ಅದನ್ನು ತಿಳಿಯ ದವನಾಗಿರುವೆ. ಅಲ್ಲದೆ, ಹೇಗೋ ಹಾಗೆ ಸುಖವಾಗಿರಬೇಕೆಂದು ಅಪೇಕ್ಷಿಸುವ ಪ್ರಾಣಿಗಳು ಇಂತಹ ವಿಷಯಗಳಲ್ಲಿ ತಿಳಿದವರೊಡನೆ ಚರ್ಚಿಸಲು ತೊಡಗುವುದು ಸರಿಯಲ್ಲವು.

॥ ಪ್ರಹ್ಲಾದ ಉವಾಚ ॥

**ತಾಪಸೌ ಮಂದಬುದ್ಧೀ ಸ್ಥೋ ವೃಷಾ ವಾಂ ಗರ್ವಮೋಹಿತೌ ।**
**ಮಯಿ ತಿಷ್ಠತಿ ದೈತ್ಯೇಂದ್ರೇ ಧರ್ಮಸೇತುಪ್ರವರ್ತಕೇ ॥೧೫॥**

**ನ ಯುಕ್ತಮೇತತ್ತೀರ್ಥೇಽಸ್ಮಿನ್ನಧರ್ಮಾಚರಣಂ ಪುನಃ ।**
**ಕಾ ಶಕ್ತಿಸ್ತವ ಯುದ್ಧೇಽಸ್ತಿ ದರ್ಶಯಾದ್ಯ ತಪೋಧನ ॥೧೬॥**

ಪ್ರಹ್ಲಾದನು ಹೇಳಿದನು—ನಾವು ಈ ಜನ್ಮದಲ್ಲಿ ನೆರವೇರಿಸುವ ಧರ್ಮಾ ಚರಣೆಯಿಂದ ಮುಂದಿನ ಸದ್ಗತಿಯನ್ನು ಪಡೆಯುತ್ತೇವೆ. ಆದುದರಿಂದ ಇಹ ಲೋಕದಿಂದ ಪರಲೋಕಕ್ಕೆ ಹೋಗಲು ಧರ್ಮವು ಸೇತುವೆಯಂತೆ ಇದೆ. ಅಂತಹ ಧರ್ಮದ ಸೇತುವೆಯನ್ನು ಈ ವರ್ಣಾಶ್ರಮಧರ್ಮದ ಆಚರಣೆಯಿಂದ ಉಳಿಸಿ ಪ್ರಚಾರಮಾಡತಕ್ಕ ರಾಕ್ಷಸರಾಜನಾದ ನಾನಿರುವಲ್ಲಿ ತಾಪಸಿಗಳಾದ ನೀವು ಅಲ್ಪ ಬುದ್ಧಿ ಅಹಂಕಾರಗಳಿಂದಲೂ ಕೂಡಿರುವಿರಿ. ಆದುದರಿಂದ ನೀವು ಇಂತಹ ಪುಣ್ಯಕರ ವಾದ ತೀರ್ಥದಿಂದ ಕೂಡಿರುವ ಕ್ಷೇತ್ರದಲ್ಲಿ ಈ ರೀತಿಯಲ್ಲಿ ಅಧರ್ಮಾಚರಣೆಯನ್ನು ಮಾಡುತ್ತಿರುವುದು ಅನುಚಿತವು. ಎಲೈ ತಪೋನಿಧಿಯೇ, ನಿನಗೆ ಯುದ್ಧಮಾಡುವುದ ರಲ್ಲಿ ಪರಿಶ್ರಮವೆಷ್ಟಿದೆ? ಇದ್ದಲ್ಲಿ ಅದನ್ನು ಈಗ ತೋರಿಸುವವನಾಗು. ಸಮಾನವಾದ ಗುಣಗಳುಳ್ಳ ಎದುರಾಳಿಯನ್ನು ಕಂಡು ಪ್ರಹ್ಲಾದನಲ್ಲೂ ಕ್ಷಾತ್ರವೀರ್ಯವು ಮುಂದಾ ಯಿತೆಂದು ಭಾವವು.

॥ ವ್ಯಾಸ ಉವಾಚ ॥

**ತದಾಽಽಕರ್ಣ್ಯ ವಚಸ್ತಸ್ಯ ನರಸ್ತಂ ಪ್ರತ್ಯುವಾಚ ಹ ।**
**ಯುಧ್ಯಸ್ವಾದ್ಯ ಮಯಾ ಸಾರ್ಧಂ ಯದಿ ತೇ ಮತಿರೀದೃಶೀ ॥೧೭॥**

ವ್ಯಾಸಮುನಿಯು ಹೇಳಿದನು--ಪ್ರಹ್ಲಾದನ ಆ ಮಾತನ್ನು ಕೇಳಿ ನರನು ಹೀಗೆ ಹೇಳಿದನು. ನಿನಗೆ ಈ ರೀತಿಯಾದ ಶಕ್ತಿಯೂ ಬುದ್ಧಿಯೂ ಇದ್ದಲ್ಲಿ ಈಗ ನನ್ನೊಡನೆ ಯುದ್ಧವನ್ನು ಮಾಡು. ವೀರ್ಯದಿಂದ ವೀರ್ಯವು ಮೇಲೇಳುತ್ತದೆ

**ಅದ್ಯ ತೇ ಸ್ಫೋಟಯಿಷ್ಯಾಮಿ ಮೂರ್ಧಾನಮಸುರಾಧಮ ।**
**ಯುದ್ಧೇ ಶ್ರದ್ಧಾ ನ ತೇ ಪಶ್ಚಾದ್ಭವಿಷ್ಯತಿ ಕದಾಚನ ॥೧೮॥**

ಎಲೈ ರಾಕ್ಷಸಾಧಮನೇ, ಈಗಲೇ ಯುದ್ಧದಲ್ಲಿ ನಿನ್ನ ತಲೆಯನ್ನು ಒಡೆದು ಬಿಡುವೆನು. ಆಮೇಲೆ ನಿನಗೆ ಎಂದೆಂದಿಗೂ ಯುದ್ಧದಲ್ಲಿ ಆಸಕ್ತಿಯೇ ಇಲ್ಲದ ಹಾಗಾಗುವುದು. ಪೌರುಷವನ್ನು ಪ್ರತೀಕಾರದಿಂದ ಅಡಗಿಸಲಾಗುವುದಿಲ್ಲವು. ಆದರೂ ಈ ತತ್ತ್ವವನ್ನು ದೊಡ್ಡ ಜನರೂ ಮನಗಂಡು ಆಚರಿಸಲೊಲ್ಲರು. ಈಗಲೂ ಇದು ಹಾಗೆಯೇ ಇದೆ. ಯುದ್ಧದಿಂದ ಯುದ್ಧವು ನಿಲ್ಲದು. ಇದೇ ಮಾಯೆಯ ಗುಣವ, ಅಹಂಕಾರದ ಪ್ರಭಾವವು.

॥ ವ್ಯಾಸ ಉವಾಚ ॥

**ತನ್ನಿಶಮ್ಯ ವಚಸ್ತಸ್ಯ ದೈತ್ಯೇಂದ್ರಃ ಕುಪಿತಸ್ತದಾ ॥**
**ಪ್ರಹ್ಲಾದೋ ಬಲವಾನತ್ರ ಪ್ರತಿಜ್ಞಾಮಾರುರೋಹ ಸಃ ॥**

ವ್ಯಾಸಮುನಿಯು ಹೇಳಿದನು—ನರನ ಆ ಮಾತನ್ನು ಕೇಳಿ ಬಲಶಾಲಿಯಾದ ಆ ದೈತ್ಯರಾಜ ಪ್ರಹ್ಲಾದನು ಬಹಳ ಕೋಪಗೊಂಡು ಒಂದು ಪ್ರತಿಜ್ಞೆಯನ್ನು ಮಾಡಿದನು.

**ಯೇನ ಕೇನಾಪ್ಯುಪಾಯೇನ ಜೇಷ್ಯಾಮಿ ತಾವುಭಾವಪಿ ॥೧೦॥**
**ನರನಾರಾಯಣೌ ದಾಂತಾವೃಷೀ ತಾಪಸಮುನ್ನಿತೌ ॥**

ಬಲಶಾಲಿಗಳೂ ತಾಪಸಶ್ರೇಷ್ಠರೂ ಆದ ಈ ನರನಾರಾಯಣ ಋಷಿಗಳೀರ್ವರನ್ನು ಯಾವುದಾದರೂ ಒಂದು ಉಪಾಯದಿಂದ ಗೆದ್ದೇ ಗೆಲ್ಲುತ್ತೇನೆ.

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ವಚನಂ ದೈತ್ಯಃ ಪ್ರತಿಗೃಹ್ಯ ಶರಾಸನಂ ||೨೦||**
**ಆಕೃಷ್ಯ ತರಸಾ ಚಾಪಂ ಜ್ಯಾಶಬ್ದಂ ಚ ಚಕಾರ ಹ ||**

ವ್ಯಾಸನು ಹೇಳಿದನು—ಪ್ರಹ್ಲಾದನು ಆ ರೀತಿಯಾಗಿ ಪ್ರತಿಜ್ಞೆಯನ್ನು ಮಾಡಿ ಕೂಡಲೇ ತನ್ನ ಬಿಲ್ಲನ್ನು ತೆಗೆದುಕೊಂಡು ಹೆದೆಯನ್ನೇರಿಸಿ ಮಿಡಿದು ಝೇಂಕಾರಮಾಡಿದನು.

**ನರೋಽಪಿ ಧನುರಾದಾಯ ಶರಾಂಸ್ತೀವ್ರಾಞ್ಛಿಲಾಶಿತಾನ್ ||೨೧||**
**ಮುಮೋಚ ಬಹುಶಃ ಕ್ರೋಧಾತ್ಪ್ರಹ್ಲಾದೋಪರಿ ಪಾರ್ಥಿವ ||೨೨||**

ಎಲೈ ಜನಮೇಜಯರಾಜನೇ ಕೇಳು—ನರನೂ ಕೋಪಗೊಂಡವನಾಗಿ ತನ್ನ ಧನುಸ್ಸನ್ನು ತೆಗೆದುಕೊಂಡು ವಜ್ರದೋಪಾದಿಯಲ್ಲಿ ಗಟ್ಟಿಯಾಗಿರತಕ್ಕ ಬಾಣ ಗಳನ್ನು ಪ್ರಹ್ಲಾದನ ಮೇಲೆ ನಾನಾಬಗೆಯಾಗಿ ಪ್ರಯೋಗಿಸಿದನು.

**ತಾನ್ದೈತ್ಯರಾಜಸ್ತಪನೀಯಪುಂಖೈ**
**ಶ್ಚಿಚ್ಛೇದ ಬಾಣೈಸ್ತರಸಾ ಸಮೇತ್ಯ ।**
**ಸಮೀಕ್ಷ್ಯ ಛಿನ್ನಾಂಶ್ಚ ನರಃ ಸ್ವಸೃಷ್ಟಾ**
**ನನ್ಯಾನ್ಮುಮೋಚಾಶು ರುಷಾನ್ವಿತೋ ನ್ವೈ ||೨೩||**

ರಾಕ್ಷಸರ ಒಡೆಯನಾದ ಪ್ರಹ್ಲಾದನು ಕೂಡಲೇ ಚಿನ್ನದ ಗರಿಗಳುಳ್ಳ ತನ್ನ ಉಗ್ರವಾದ ಬಾಣಗಳ ಸಮೂಹದಿಂದ ನರನು ಬಿಟ್ಟ ಬಾಣಗಳೆಲ್ಲವನ್ನೂ ಜಾಗ್ರತೆ ಯಾಗಿ ಕತ್ತರಿಸಿದನು. ತನ್ನ ಬಾಣಗಳು ಅವನಿಂದ ಕತ್ತರಿಸಲ್ಪಟ್ಟುದನ್ನು ಕಂಡು ನರನು ಕೋಪದಿಂದ ಇನ್ನೂ ಅನೇಕ ಬಾಣಗಳನ್ನು ಪ್ರಹ್ಲಾದನ ಮೇಲೆ ಬಿಟ್ಟನು.

**ದೈತ್ಯಾಧಿಪಸ್ತಾನಪಿ ತೀವ್ರವೇಗೈ**
**ಶ್ಛಿತ್ವಾ ಜಘಾನೋರಸಿ ತಂ ಮುನೀಂದ್ರಂ ।**
**ನರೋಽಪಿ ತಂ ಪಂಚಭಿರಾಶುಗೈಶ್ಚ**
**ಕ್ರುದ್ಧೋಽಹನದ್ದೈತ್ಯಪ(ತಿಂ) ಬಾಹುದೇಶೇ ||೨೪||**

ಆ ಬಾಣಗಳನ್ನು ಕೂಡ ಪ್ರಹ್ಲಾದನು ಬೇಗನೆ ಕತ್ತರಿಸಿ ಆ ಮುನಿಯ ಎದೆಯಮೇಲೆ ಹೊಡೆದನು. ಕೂಡಲೇ ನರನೂ ಕೋಪಗೊಂಡವನಾಗಿ ಐದು ಬಾಣಗಳಿಂದ ವೇಗವಾಗಿ ಅವನ ತೋಳಿನ ಮೂಲವನ್ನು ಬಲವಾಗಿ ಹೊಡೆದನು.

**ಸೇಂದ್ರಾಃ ಸುರಾಸ್ತತ್ರ ತಯೋರ್ಹಿ ಯುದ್ಧಂ**
**ದ್ರಷ್ಟುಂ ವಿಮಾನೈರ್ಗಗನಸ್ಥಿತಾಶ್ಚ ।**
**ನರಸ್ಯ ವೀರ್ಯಂ ಯುಧಿ ಸಂಸ್ಥಿತಸ್ಯ**
**ತೇ ತುಷ್ಟುವುರ್ದೈತ್ಯಪತೇಶ್ಚ ಭೂಯಃ** ॥೨೫॥

ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ತಮ್ಮ ವಿಮಾನಗಳಲ್ಲಿ ಕುಳಿತು ಇವರಿಬ್ಬರ ಯುದ್ಧವನ್ನು ನೋಡುವುದಕ್ಕಾಗಿ ಆಕಾಶದಲ್ಲಿ ಬಂದು ಸೇರಿದರು. ಯುದ್ಧ ಮಾಡುತ್ತಿರುವ ನರನ ಮತ್ತು ಪ್ರಹ್ಲಾದನ ಪರಾಕ್ರಮಗಳನ್ನು ಬಹಳವಾಗಿ ಪ್ರಶಂಸಿಸಿದರು.

**ವವರ್ಷ ದೈತ್ಯಾಧಿಪ ಆತ್ತಚಾಪಃ**
**ಶಿಲೀಮುಖಾನಂಬುಧರೋ ಯಥಾಽಽಪಃ ।**
**ಆದಾಯ ಶಾರ್ಙ್ಗಂ ಧನುರಪ್ರಮೇಯಂ**
**ಮುಮೋಚ ಬಾಣಾಞ್ಶಿತ ಹೇಮಪುಂಖಾನ್** ॥೨೬॥

ಮೋಡಗಳು ಮಳೆಯನ್ನು ಹೇಗೆ ಸುರಿಸುತ್ತವೆಯೋ ಹಾಗೆ ರಾಕ್ಷಸಾಧಿಪ ನಾದ ಪ್ರಹ್ಲಾದನು ಬಾಣಗಳನ್ನು ನರನ ಮೇಲೆ ಸುರಿಸಿದನು. ಹಾಗೆಯೇ, ಆಗ ನಾರಾಯಣನೂ ತನ್ನ ಶಾರ್ಙ್ಗಧನುಸ್ಸನ್ನು ತೆಗೆದುಕೊಂಡು ಚಿನ್ನದ ಗರಿಯುಳ್ಳ ತೀಕ್ಷ್ಣವಾದ ಬಾಣಗಳ ಸಮೂಹವನ್ನು ಆ ಪ್ರಹ್ಲಾದನ ಮೇಲೆ ಪ್ರಯೋಗಿಸಿದನು.

**ಬಭೂವ ಯುದ್ಧಂ ತುಮುಲಂ ತಯೋಸ್ತು**
**ಜಯೈಷಿಣೋಃ ಪಾರ್ಥಿವದೇವದೈತ್ಯಯೋಃ ।**
**ವವರ್ಷುರಾಕಾಶಪಥೇ ಸ್ಥಿತಾಸ್ತೇ**
**ಪುಷ್ಪಾಣಿ ದಿವ್ಯಾನಿ ಪ್ರಹೃಷ್ಟಚಿತ್ತಾಃ** ॥೨೭॥

ಪ್ರಹ್ಲಾದನೂ ಭೂಸುರಶ್ರೇಷ್ಠನಾದ ನರನೂ ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಅಭಿಲಾಷೆಯಿಂದ ಕೂಡಿ ಅತ್ಯಂತ ಘೋರವಾಗಿ ಯುದ್ಧವನ್ನು ಮಾಡಿದರು. ಇದನ್ನು

ಆಕಾಶದಲ್ಲಿ ನಿಂತು ನೋಡುತ್ತಿದ್ದ ದೇವತೆಗಳು ಆನಂದದಿಂದ ತುಂಬಿದ ಹೃದಯವುಳ್ಳವರಾಗಿ ದಿವ್ಯವಾದ ಪುಷ್ಪಗಳನ್ನು ಅವರ ಮೇಲೆ ಸುರಿಸಿದರು.

**ಚುಕೋಪ ದೈತ್ಯಾಧಿಪತಿರ್ಹರೌ ಸ**
**ಮುಮೋಚ ಬಾಣಾನತಿತೀವ್ರವೇಗಾನ್ ।**
**ಚಿಚ್ಛೇದ ತಾನ್ಧರ್ಮಸುತಃ ಸುತೀಕ್ಷ್ಣೈ**
**ರ್ಧನುರ್ವಿಮುಕ್ತೈರ್ವಿಶಿಖೈಸ್ತದಾಽಽಶು ॥೨೮॥**

ನಾರಾಯಣನ ವಿಷಯದಲ್ಲಿ ಪ್ರಹ್ಲಾದನು ಕೋಪಗೊಂಡು ಅತಿವೇಗವಾಗಿ ಚಲಿಸುವ ಬಾಣಗಳನ್ನು ಪ್ರಯೋಗಿಸಿದನು. ಧರ್ಮದೇವನ ಮಗನಾದ ನರನೂ ಕೋಪಗೊಂಡು ಕೂಡಲೇ ತನ್ನ ಬಿಲ್ಲಿನಿಂದ ಬಹಳ ವೇಗವಾಗಿ ಹೋಗುವ ಬಾಣಗಳನ್ನು ಬಿಟ್ಟು ಅವನ್ನೆಲ್ಲ ಜಾಗ್ರತೆಯಾಗಿ ಕತ್ತರಿಸಿದನು.

**ತತೋ ನಾರಾಯಣಂ ಬಾಣೈಃ ಪ್ರಹ್ಲಾದಶ್ಚಾತಿಕರ್ಷಿತೈಃ ॥**
**ವವರ್ಷ ಸುಸ್ಥಿತಂ ವೀರಂ ಧರ್ಮಪುತ್ರಂ ಸನಾತನಂ ॥**

ಆಬಳಿಕ ಧೈರ್ಯವಾಗಿ ನಿಂತಿದ್ದ ಧರ್ಮಪುತ್ರನಾದ ಶಾಶ್ವತನಾದ ನಾರಾಯಣನನ್ನು ಕೂಡ ಪ್ರಹ್ಲಾದನು ಬಿಲ್ಲಿನ ಹೆದೆಯನ್ನು ಬಲವಾಗಿ ಎಳೆದು ಬಿಟ್ಟ ಬಾಣಗಳಿಂದ ಸುತ್ತುವರಿಯಲ್ಪಟ್ಟವನನ್ನಾಗಿ ಮಾಡಿದನು.

**ನಾರಾಯಣೋಽಪಿ ತಂ ವೇಗಾನ್ಮುಕ್ತೈರ್ಬಾಣೈಃ ಶಿಲಾಶಿತೈಃ ॥೨೯॥**
**ತುತೋದಾತೀವ ಪುರತೋ ದೈತ್ಯಾನಾಮಧಿಪಂ ಸ್ಥಿತಂ ।**

ಅನಂತರದಲ್ಲಿ ನಾರಾಯಣನೂ ಕೂಡ ವೇಗವಾಗಿ ಹೋಗುವ, ವಜ್ರದಂತಿರುವ ಬಾಣಗಳಿಂದ ಎದುರಿಗಿರುವ ಪ್ರಹ್ಲಾದನನ್ನು ಹೆಚ್ಚಾಗಿ ನೋಯಿಸಿದನು.

**ಸನ್ನಿಪಾತೋಽಂಬರೇ ತತ್ರ ದಿದೃಕ್ಷೂಣಾಂ ಬಭೂವ ಹ ॥೩೦॥**
**ದೇವಾನಾಂ ದಾನವಾನಾಂ ಚ ಕುರ್ವತಾಂ ಜಯಘೋಷಣಂ ।**

ಆ ಯುದ್ಧವನ್ನು ನೋಡುವುದಕ್ಕೆ ಬಂದು ಜಯಶಬ್ದಗಳನ್ನು ಮಾಡುತ್ತಿರುವ ದೇವತೆಗಳಿಂದಲೂ ದಾನವರಿಂದಲೂ ಅಂತರಿಕ್ಷವೆಲ್ಲವೂ ಕಿಕ್ಕಿರಿದು ತುಂಬಿ ಹೋಯಿತು.

**ಉಭಯೋಃ ಶರವರ್ಷೇಣ ಛಾದಿತೇ ಗಗನೇ ತದಾ ॥೩೧॥**

**ದಿವಾಪಿ ರಾತ್ರಿಸದೃಶಂ ಬಭೂವ ತಿಮಿರಂ ಮಹತ್ ॥**

ಹೀಗೆ ಇವರಿಬ್ಬರೂ ಪರಸ್ಪರವಾಗಿ ಯುದ್ಧಮಾಡುತ್ತಾ ಪ್ರಯೋಗಿಸಿದ ಬಾಣ ವೃಷ್ಟಿಯು ಆಕಾಶವನ್ನು ಪೂರ್ತಿಯಾಗಿ ಮುಚ್ಚಿ, ಆಗ ಹಗಲಾಗಿದ್ದರೂ ಕತ್ತಲೆ ಕವಿದುಕೊಂಡು ರಾತ್ರಿಯಂತೆ ತೋರುತ್ತಿತ್ತು.

**ಊಚುಃ ಪರಸ್ಪರಂ ದೇವಾ ದೈತ್ಯಾಶ್ಚಾತೀವ ವಿಸ್ಮಿತಾಃ ।**
**ಅದೃಷ್ಟಪೂರ್ವಂ ಯುದ್ಧಂ ವೈ ವರ್ತತೇಽದ್ಯ ಸುದಾರುಣಂ ॥೩೨॥**

**ದೇವರ್ಷಯೋಽಥ ಗಂಧರ್ವಾ ಯಕ್ಷಕಿನ್ನರಪನ್ನಗಾಃ ।**
**ವಿದ್ಯಾಧರಾಶ್ಚಾರಣಾಶ್ಚ ವಿಸ್ಮಯಂ ಪರಮಂ ಯಯುಃ ॥೩೩॥**

ದೇವತೆಗಳು, ದೈತ್ಯರು, ದೇವರ್ಷಿಗಳು, ಗಂಧರ್ವರು, ಯಕ್ಷರು, ಕಿನ್ನರರು, ಪನ್ನಗರು, ವಿದ್ಯಾಧರರು, ಚಾರಣರು ಇವರು ಎಲ್ಲರೂ ಇಂಥ ಘೋರವಾದ ಯುದ್ಧವು ಹಿಂದೆ ಯಾವಾಗಲೂ ನಡೆದಿರಲಿಲ್ಲವೆಂದು ಒಬ್ಬರಿಗೊಬ್ಬರು ಮಾತನಾಡಿ ಕೊಳ್ಳುತ್ತಾ, ಅತ್ಯಾಶ್ಚರ್ಯವನ್ನು ಹೊಂದಿದರು.

**ನಾರದಃ ಪರ್ವತಶ್ಚೈವ ಪ್ರೇಕ್ಷಣಾರ್ಥಂ ಸ್ಥಿತೌ ಮುನೀ ॥**
**ನಾರದಃ ಪರ್ವತಂ ಪ್ರಾಹ ನೇದೃಶಂ ಚಾಭವತ್ಪುರಾ ।**

ಈ ಯುದ್ಧವನ್ನು ನೋಡಲು ನಾರದ ಪರ್ವತರೂ ಬಂದಿದ್ದರು. ಅವರಲ್ಲಿ ನಾರದನು ಪರ್ವತನನ್ನು ಕುರಿತು ಹೀಗೆ ಹೇಳಿದನು—ಇಂತಹ ಯುದ್ಧವು ಹಿಂದೆ ನಡೆದಿರಲಿಲ್ಲವು.

**ತಾರಕಾಸುರಯುದ್ಧಂ ಚ ತಥಾ ವೃತ್ರಾಸುರಸ್ಯ ಚ ॥೩೪॥**

**ಮಧುಕೈಟಭಯೋರ್ಯುದ್ಧಂ ಹರಿಣಾ ಚೇದೃಶಂ ಕೃತಂ ।**
**ಪ್ರಹ್ಲಾದಃ ಪ್ರಬಲಃ ಶೂರೋ ಯಸ್ಮಾನ್ನಾರಾಯಣೇನ ಚ ॥೩೫॥**

**ಕರೋತಿ ಸದೃಶಂ ಯುದ್ಧಂ ಸಿದ್ಧೇನಾದ್ಭುತಕರ್ಮಣಾ ।**

ಹಿಂದೆ, ತಾರಕಾಸುರನೊಡನೆ ಷಣ್ಮುಖನ ಯುದ್ಧವೂ, ವೃತ್ರಾಸುರನೊಡನೆ ಇಂದ್ರನ ಯುದ್ಧವೂ, ಹಾಗೆಯೇ ಮಧುಕೈಟಭರೊಡನೆ ವಿಷ್ಣುವು ಮಾಡಿದ

ಯುದ್ಧವೂ ಸಹ ಈ ರೀತಿಯಾಗಿರಲಿಲ್ಲ. ಅದ್ಭುತವಾದ ಸಿದ್ಧಿಯನ್ನು ಪಡೆದ ನಾರಾಯಣನೊಡನೆ ಯುದ್ಧಮಾಡುವುದೆಂದರೆ, ಅದರಲ್ಲೂ ಸಮನಾಗಿ ಯುದ್ಧಮಾಡುವುದೆಂದರೆ, ಸಾಮಾನ್ಯವಲ್ಲ. ಆದರೆ ಪ್ರಹ್ಲಾದನು ಪರಾಕ್ರಮವುಳ್ಳವನು, ಅತ್ಯಂತ ಬಲಶಾಲಿಯು. ಆದುದರಿಂದಲೇ ಅವನು ಈ ರೀತಿಯಲ್ಲಿ ಪ್ರಬಲವಾದ ಯುದ್ಧವನ್ನು ಮಾಡುತ್ತಿರುವುದು ಕಾಣಬರುತ್ತಿದೆ.

|| ವ್ಯಾಸ ಉವಾಚ ||

**ದಿನೇ ದಿನೇ ತಥಾ ರಾತ್ರೌ ಕೃತ್ವಾ ಕೃತ್ವಾ ಪುನಃ ಪುನಃ ||೩೭||**
**ಚಕ್ರತುಃ ಪರಮಂ ಯುದ್ಧಂ ತೌ ತದಾ ದೈತ್ಯತಾಪಸೌ ।**

ಪ್ರತಿದಿನವೂ ರಾತ್ರಿಹಗಲೆನ್ನದೆ ಆ ರಾಕ್ಷಸನೂ ಋಷಿಗಳೂ ಘೋರವಾದ ಯುದ್ಧವನ್ನು ಮತ್ತೆ ಮತ್ತೆ ಎಡಬಿಡದೆ ಮಾಡುತ್ತಿದ್ದರು.

**ನಾರಾಯಣಸ್ತು ಚಿಚ್ಛೇದ ಪ್ರಹ್ಲಾದಸ್ಯ ಶರಾಸನಂ ||೩೮||**
**ತರಸೈಕೇನ ಬಾಣೇನ ಸ ಚಾನ್ಯದ್ಧನುರಾದದೇ ।**

ನಾರಾಯಣನಾದರೋ ಜಾಗ್ರತೆಯಾಗಿ ಒಂದು ಬಾಣದಿಂದ ಪ್ರಹ್ಲಾದನ ಬಿಲ್ಲನ್ನು ಕತ್ತರಿಸಿದನು. ಆ ಕೂಡಲೇ ಪ್ರಹ್ಲಾದನು ಬೇರೆ ಬಿಲ್ಲನ್ನು ತೆಗೆದುಕೊಂಡನು.

**ನಾರಾಯಣಸ್ತು ತರಸಾ ಮುಕ್ತ್ವಾನ್ಯಂ ಚ ಶಿಲೀಮುಖಂ ||೩೯||**
**ತದ್ದೈವ ಮಧ್ಯತಶ್ಚಾಪಂ ಚಿಚ್ಛೇದ ಲಘುಹಸ್ತಕಃ ।**

ಪುನಃ ನಾರಾಯಣನು ಕೈಚಳಕವುಳ್ಳವನಾಗಿ ಕೂಡಲೇ ಮತ್ತೊಂದು ಬಾಣವನ್ನು ಬಿಟ್ಟು ಆ ಧನುಸ್ಸನ್ನೂ ಸಹ ಆಗಲೇ ಮಧ್ಯದಲ್ಲಿ ಕತ್ತರಿಸಿದನು.

**ಛಿನ್ನಂ ಛಿನ್ನಂ ಪುನರ್ದೈತ್ಯೋ ಧನುರನ್ಯತ್ಸಮಾದದೇ ||೪೦||**
**ನಾರಾಯಣಸ್ತು ಚಿಚ್ಛೇದ ವಿಶಿಖೈರಾಶು ಕೋಪಿತಃ ।**

ಆ ರೀತಿಯಲ್ಲಿ ನಾರಾಯಣನು ಬಿಲ್ಲನ್ನು ಬಾಣಗಳಿಂದ ಕತ್ತರಿಸುತ್ತಿರಲು, ಪ್ರಹ್ಲಾದನು ಮತ್ತೊಂದು ಬಿಲ್ಲನ್ನು ತೆಗೆದುಕೊಳ್ಳುತ್ತಿದ್ದನು. ಆದರೂ ನಾರಾಯಣನು ಕೋಪಗೊಂಡು ಬೇಗಬೇಗನೆ ಅವನ್ನೆಲ್ಲ ಕತ್ತರಿಸುತ್ತಿದ್ದನು.

**ಛಿನ್ನೇ ಧನುಷಿ ದೈತ್ಯೇಂದ್ರಃ ಪರಿಘಂ ತು ಸಮಾದದೇ ॥೪೧॥**
**ಜಘಾನ ಧರ್ಮಜಂ ತೂರ್ಣಂ ಬಾಹ್ವೋರ್ಮಧ್ಯೇಽತಿಕೋಪನಃ ।**

ಈ ರೀತಿಯಲ್ಲಿ ಬಿಲ್ಲುಗಳನ್ನೆಲ್ಲ ಕತ್ತರಿಸುತ್ತಿರಲಾಗಿ, ಪ್ರಹ್ಲಾದನು ಪರಿಘಾಯುಧವನ್ನು ತೆಗೆದುಕೊಂಡನು. ಮತ್ತು ತುಂಬ ಕೋಪವುಳ್ಳವನಾಗಿ ಧರ್ಮಪುತ್ರನಾದ ನಾರಾಯಣನ ತೋಳಿನ ಮೂಲಪ್ರದೇಶಕ್ಕೆ ಬಲವಾದ ಪೆಟ್ಟನ್ನು ಕೊಟ್ಟನು.

**ತಮಾಯಾಂತಂ ಸ ಬಲವಾನ್ಮಾರ್ಗಣೈರ್ನವಭಿರ್ಮುನಿಃ ॥೪೨॥**
**ಚಿಚ್ಛೇದ ಪರಿಘಂ ಘೋರಂ ದಶಭಿಸ್ತಮತಾಡಯತ್ ।**

ಎದುರಿಸಿ ಬರುತ್ತಿರುವ ಅದನ್ನು ಆ ಪರಾಕ್ರಮಿಯಾದ ಮುನಿಯು ತಡೆದನು. ಒಂಬತ್ತು ಬಾಣಗಳಿಂದ ಭಯಂಕರವಾದ ಅವನ ಪರಿಘಾಯುಧವನ್ನು ಕತ್ತರಿಸಿದನು. ಮತ್ತು ಹತ್ತು ಬಾಣಗಳಿಂದ ಅವನನ್ನು ಬಲವಾಗಿ ಹೊಡೆದನು.

**ಗದಾಮಾದಾಯ ದೈತ್ಯೇಂದ್ರಃ ಸರ್ವಾಯಸಮಯೀಂ ದೃಢಾಂ॥೪೩॥**
**ಜಾನುದೇಶೇ ಜಘಾನಾಶು ದೇವಂ ನಾರಾಯಣಂ ರುಷಾ ।**

ರಾಕ್ಷಸರಾಜನಾದ ಪ್ರಹ್ಲಾದನು ಆಗ ತುಂಬ ಬಲವಾದ ಮತ್ತು ಸಂಪೂರ್ಣವಾಗಿ ಕಬ್ಬಿಣದಿಂದ ನಿರ್ಮಿಸಿರುವ ತನ್ನ ಗದೆಯನ್ನು ತೆಗೆದುಕೊಂಡು ಬೇಗನೆ ಅತಿ ಕೋಪದಿಂದ ಕೂಡಿದವನಾಗಿ ದೇವಾಂಶದಿಂದ ಪ್ರಕಾಶಿಸುತ್ತಿರುವ ನಾರಾಯಣನ ತೊಡೆಯನ್ನು ಬಲವಾಗಿ ಹೊಡೆದನು.

**ಗದಯಾ ಚಾಪಿ ಗಿರಿವತ್ಸಂಸ್ಥಿತಃ ಸ್ಥಿರಮಾನಸಃ ॥೪೪॥**
**ಧರ್ಮಪುತ್ರೋಽತಿಬಲವಾನ್ಮುಮೋಚಾಶು ಶಿಲೀಮುಖಾನ್ ।**

ಗದೆಯಿಂದ ಹೊಡೆದರೂ ಕೂಡ, ಧರ್ಮಪುತ್ರನಾದ ಮತ್ತು ಮಹಾಮಹಿಮಶಾಲಿಯಾದ ನಾರಾಯಣನು ಪರ್ವತದಂತೆ ಸ್ವಲ್ಪವೂ ಚಲಿಸದೆ ಸ್ಥಿರವಾದ ಮನಸ್ಸುಳ್ಳವನಾಗಿ ಎದುರಿಸಿ ನಿಂತು ಅವನ ಮೇಲೆ ಬಾಣಗಳ ಪರಂಪರೆಯನ್ನು ಸುರಿಸಿದನು.

**ಗದಾಂ ಚಿಚ್ಛೇದ ಭಗವಾಂಸ್ತದಾ ದೈತ್ಯಪತೇರ್ದೃಢಾಂ ॥೪೫॥**

**ವಿಸ್ಮಯಂ ಪರಮಂ ಜಗ್ಮುಃ ಪ್ರೇಕ್ಷಕಾ ಗಗನೇ ಸ್ಥಿತಾಃ ।**

ಮತ್ತು ಆ ನಾರಾಯಣನು ರಾಕ್ಷಸರಾಜನ ಬಲವಾದ ಗದೆಯನ್ನೂ ತುಂಡರಿಸಿದನು. ಆಕಾಶದಲ್ಲಿ ನಿಂತು ಇದೆಲ್ಲವನ್ನೂ ನೋಡುತ್ತಿದ್ದ ದೇವತೆಗಳೇ ಮೊದಲಾದವರು ಬಹಳವಾಗಿ ಆಶ್ಚರ್ಯಪಟ್ಟರು.

**ಸ ತು ಶಕ್ತಿಂ ಸಮಾದಾಯ ಪ್ರಹ್ಲಾದಃ ಪರವೀರಹಾ ॥೪೬॥**

**ಚಿಕ್ಷೇಪ ತರಸಾ ಕ್ರುದ್ಧೋ ಬಲಾನ್ನಾರಾಯಣೋರಸಿ ।**

ಆಗ ಪ್ರಹ್ಲಾದನಾದರೋ ಕೋಪಗೊಂಡು ಕೂಡಲೇ ಶಕ್ತಿ ಎಂಬ ಆಯುಧವನ್ನು ಕೈಗೆ ತೆಗೆದುಕೊಂಡು ನಾರಾಯಣನ ಎದೆಯಲ್ಲಿ ಬಲವಾಗಿ ಎಸೆದನು.

**ತಾಮಾಪತಂತೀಂ ಸಂವೀಕ್ಷ್ಯ ಬಾಣೇನೈಕೇನ ಲೀಲಯಾ ॥೪೭॥**

**ಸಪ್ತಧಾ ಕೃತವಾನಾಶು ಸಪ್ತಭಿಸ್ತಂ ಜಘಾನ ಹ ।**

ಬರುತ್ತಿರುವ ಆ ಶಕ್ತಿಯನ್ನು ನೋಡಿ ನಾರಾಯಣನು ಒಂದೇ ಬಾಣದಿಂದ ಅದನ್ನು ಬಹಳ ಲೀಲಾಜಾಲವಾಗಿ ಏಳುಭಾಗವಾಗಿ ತುಂಡರಿಸಿದನು. ಮತ್ತು ಏಳು ಬಾಣಗಳಿಂದ ಆ ಪ್ರಹ್ಲಾದನನ್ನು ಹೊಡೆದನು.

**ದಿವ್ಯವರ್ಷಸಹಸ್ರಂ ತು ತದ್ಯುದ್ಧಂ ಪರಮಂ ತಯೋಃ ॥೪೮॥**

**ಜಾತಂ ವಿಸ್ಮಯದಂ ರಾಜನ್ ಸರ್ವೇಷಾಂ ತತ್ರ ಚಾಶ್ರಮೇ ।**

ಈ ರೀತಿಯಲ್ಲಿ ಶ್ಲಾಘ್ಯವಾದ ಆ ಯುದ್ಧವು ಅವರಿಬ್ಬರಿಗೂ ದೇವಮಾನದಲ್ಲಿ ಒಂದು ಸಾವಿರ ವರ್ಷಗಳ ವರೆಗೂ ಜರುಗಿತು. ಆದುದರಿಂದ ಆ ಆಶ್ರಮದಲ್ಲಿದ್ದವರೆಲ್ಲರಿಗೂ ಅದು ಅತ್ಯಂತ ಆಶ್ಚರ್ಯವನ್ನುಂಟುಮಾಡಿತು.

**ತದಾ ಜಗಾಮ ತರಸಾ ಪೀತವಾಸಾಶ್ಚತುರ್ಭುಜಃ ॥೪೯॥**

**ಪ್ರಹ್ಲಾದಸ್ಯಾಶ್ರಮಂ ತತ್ರ ಜಗಾದ ಚ ಗದಾಧರಃ ।**

**ಚತುರ್ಭುಜೋ ರಮಾಕಾಂತೋ ರಥಾಂಗಧರಪದ್ಮಭೃತ್ ॥೫೦॥**

ಆಗ ನಾಲ್ಕು ಭುಜಗಳುಳ್ಳವನೂ, ಪೀತಾಂಬರಧಾರಿಯೂ, ಶಂಖಚಕ್ರಗದಾಪದ್ಮಧಾರಿಯೂ, ಲಕ್ಷ್ಮೀಪತಿಯೂ ಆದ ವಿಷ್ಣುವು ಬೇಗನೆ ಅಲ್ಲಿಗೆ ಬಂದು ಪ್ರಹ್ಲಾದನನ್ನು ಕುರಿತು ಹೀಗೆ ಹೇಳಿದನು.

**ದೃಷ್ಟ್ವಾ ತಮಾಗತಂ ತತ್ರ ಹಿರಣ್ಯಕಶಿಪೋಃ ಸುತಃ ।**
**ಪ್ರಣಮ್ಯ ಪರಯಾ ಭಕ್ತ್ಯಾ ಪ್ರಾಂಜಲಿಃ ಪ್ರತ್ಯುವಾಚ ಹ ॥೫೧॥**

ಆ ರೀತಿಯಲ್ಲಿ ಬಂದ ಭಗವಂತನಾದ ವಿಷ್ಣುವನ್ನು ಕಂಡು, ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನು ಎರಡು ಕೈಗಳನ್ನು ಜೋಡಿಸಿ ಬಹಳ ಭಕ್ತಿಯಿಂದ ನಮಸ್ಕರಿಸಿ ಈ ಪ್ರಕಾರವಾಗಿ ಸ್ತೋತ್ರಮಾಡಿ ಪಶ್ನೆ ಮಾಡಿದನು.

॥ ಪ್ರಹ್ಲಾದ ಉವಾಚ ॥

**ದೇವದೇವ ಜಗನ್ನಾಥ ಭಕ್ತವತ್ಸಲ ಮಾಧವ ।**
**ಕಥಂ ನ ಜಿತವಾನಾಜಾವಹಮೇತೌ ತಪಸ್ವಿನೌ ।**

ಪ್ರಹ್ಲಾದನು ಕೇಳಿದನು—ದೇವತೆಗಳಿಗೆಲ್ಲ ಒಡೆಯನಾದ, ಪ್ರಪಂಚಕ್ಕೆಲ್ಲ ರಕ್ಷಕನಾದ ಭಕ್ತರನ್ನು ಪ್ರೀತಿಯಿಂದ ರಕ್ಷಿಸುವ ಲಕ್ಷ್ಮೀಪತಿಯಾದ ಮಾಧವನೇ, ನಾನು ಈ ಮುನಿಗಳಿಬ್ಬರನ್ನೂ ಯುದ್ಧದಲ್ಲಿ ಗೆಲ್ಲದಿರಲು ಕಾರಣವೇನು?

**ಸಂಗ್ರಾಮಸ್ತು ಮಯಾ ದೇವ ಕೃತಃ ಪೂರ್ಣಂ ಶತಂ ಸಮಾಃ ॥೫೩॥**
**ಸುರಾಣಾಂ ನ ಜಿತೌ ಕಸ್ಮಾದಿತಿ ಮೇ ವಿಸ್ಮಯೋ ಮಹಾನ್ ।**

ನಾನು ದೇವಮಾನದ ರೀತ್ಯಾ ಪೂರ್ಣವಾಗಿ ಒಂದು ನೂರು ವರ್ಷಗಳ ವರೆಗೂ ಇವರೊಡನೆ ಯುದ್ಧವನ್ನು ನಡೆಸಿದೆನು. ಆದರೂ ಕೂಡ ನಾನು ಏತಕ್ಕೆ ಇವರನ್ನು ಗೆಲ್ಲಲಿಲ್ಲವು? ಎಂಬುದು ನನಗೆ ತುಂಬ ಆಶ್ಚರ್ಯಕರವಾಗಿದೆ.

॥ ವಿಷ್ಣುರುವಾಚ ॥

**ಸಿದ್ಧಾವಿಮೌ ಮದಂಶೌ ಚ ವಿಸ್ಮಯಃ ಕೋಽತ್ರ ಮಾರಿಷ ॥೫೪॥**
**ತಾಪಸೌ ನ ಜಿತಾತ್ಮಾನೌ ನರನಾರಾಯಣೌ ಜಿತೌ ।**

ವಿಷ್ಣುವು ಹೇಳಿದನು—ಎಲೈ ಗೌರವಾರ್ಹನಾದ ಪ್ರಹ್ಲಾದನೇ, ಈ ಇಬ್ಬರೂ ಕೂಡ ತಪಸ್ಸಿದ್ಧಿಯನ್ನು ಪಡೆದವರೂ, ನನ್ನ ಅಂಶದಿಂದ ಕೂಡಿದವರೂ ಇಂದ್ರಿಯಗಳನ್ನು ಜಯಿಸಿದವರೂ, ಮುನಿವೃತ್ತಿಯುಳ್ಳವರೂ ಆದ ನರನಾರಾಯಣರು. ಇಂಥವರು ನಿನ್ನಿಂದ ಗೆಲ್ಲಲ್ಪಡಲಿಲ್ಲವೆಂದರೆ ಆಶ್ಚರ್ಯವೇನು?

**ಗಚ್ಛ ತ್ವಂ ವಿತಲಂ ರಾಜನ್ಕುರು ಭಕ್ತಿಂ ಮಮಾಚಲಾಂ ॥೩೪॥**
**ನಾಽಭ್ಯಾಂ ಕುರು ವಿರೋಧಂ ತ್ವಂ ತಾಪಸಾಭ್ಯಾಂ ಮಹಾಮತೇ ।**

ಆದುದರಿಂದ ನೀನು ಪಾತಾಲಕ್ಕೆ ಹೋಗಿ ನನ್ನಲ್ಲಿ ಅಚಲವಾದ ಭಕ್ತಿಯಿಂದ ಕೂಡಿದವನಾಗಿ ವಾಸಮಾಡುತ್ತಿರು. ತಪಸ್ವಿಗಳಾದ ಈ ಇಬ್ಬರೊಡನೆಯೂ ನೀನು ವಿರೋಧವನ್ನು ಮಾಡಬೇಡ.

॥ ವ್ಯಾಸ ಉವಾಚ ॥

**ಇತ್ಯಾಜ್ಞಪ್ತೋ ದೈತ್ಯರಾಜೋ ನಿರ್ಯಯಾವಸುರೈಃ ಸಹ ॥೩೫॥**
**ನರನಾರಾಯಣೌ ಭೂಯಸ್ತಪೋಯುಕ್ತೌ ಬಭೂವತುಃ ।**

ವ್ಯಾಸಮಹರ್ಷಿಯು ಹೇಳಿದನು—ಈ ರೀತಿಯಾಗಿ ರಾಕ್ಷಸರಾಜನಾದ ಪ್ರಹ್ಲಾದನು ಸರ್ವಶಾಸಕನಾದ ಶ್ರೀಮಹಾವಿಷ್ಣುವಿನಿಂದ ಆಜ್ಞಪ್ತನಾಗಿ, ತನ್ನ ಸಹಚರರಾದ ಇತರರಾಕ್ಷಸರೊಡನೆ ಅಲ್ಲಿಂದ ಹೊರಟುಹೋದನು. ನರನಾರಾಯಣರೂ ಅಲ್ಲಿ ಪುನಃ ಶಾಂತರಾಗಿ ತಪಸ್ಸನ್ನು ಆಚರಿಸುವವರಾದರು.

## ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ನವಮೋಽಧ್ಯಾಯಃ

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### ॥ ದಶಮೋಽಧ್ಯಾಯಃ ॥

### ಹತ್ತನೆಯ ಅಧ್ಯಾಯವು

॥ ಜನಮೇಜಯ ಉವಾಚ ॥

**ಸಂದೇಹೋಽಯಂ ಮಹಾನತ್ರ ಪಾರಾಶರ್ಯ ಕಥಾನಕೇ ।**
**ನರನಾರಾಯಣೌ ಶಾಂತೌ ವೈಷ್ಣವಾಂಶೌ ತಪೋಧನೌ ॥೧॥**

**ತೀರ್ಥಾಶ್ರಯೌ ಸತ್ತ್ವಯುಕ್ತೌ ವನ್ಯಾಶನಪರೌ ಸದಾ ।**
**ಧರ್ಮಪುತ್ರೌ ಮಹಾತ್ಮಾನೌ ತಾಪಸೌ ಸತ್ಯಸಂಸ್ಥಿತೌ ॥೨॥**

**ಕಥಂ ರಾಗಸಮಾಯುಕ್ತೌ ಜಾತೌ ಯುದ್ಧೇ ಪರಸ್ಪರಂ ।**
**ಸಂಗ್ರಾಮಂ ಚಕ್ರತುಃ ಕಸ್ಮಾತ್ತ್ಯಕ್ತ್ವಾ ತಪಮನುತ್ತಮಾಂ ॥೩॥**

ಜನಮೇಜಯರಾಜನು ವ್ಯಾಸಮುನಿಯನ್ನು ಕೇಳಿದನು—ಓ ಪರಾಶರಪುತ್ರನಾದ ವ್ಯಾಸನೇ, ಈ ನರನಾರಾಯಣರು ಯಾವಾಗಲೂ ಶಾಂತಸ್ವಭಾವದವರು, ವಿಷ್ಣುವಿನ ಅಂಶದಿಂದ ಸಂಭೂತರಾದವರು, ಮಹಾತಪಸ್ವಿಗಳು, ಪುಣ್ಯತೀರ್ಥವಾಸಿಗಳು, ಸತ್ವಗುಣದಿಂದ ಕೂಡಿದವರು, ಕಾಡಿನಲ್ಲಿ ಬೆಳೆಯುವ ಗೆಡ್ಡೆಗೆಣಸುಗಳನ್ನೇ ಆಹಾರಕ್ಕಾಗಿ ಉಪಯೋಗಿಸುವವರು, ಯಾವಾಗಲೂ ತಪಸ್ಸಿನಲ್ಲಿಯೇ ನಿರತರಾಗಿ ಸತ್ಯಸಂಧರಾಗಿರತಕ್ಕವರು ; ಧರ್ಮದೇವನ ಮಕ್ಕಳಾದ ಇಂತಹ ಮಹಾತ್ಮರು ತಾವು ಮಾಡುತ್ತಿದ್ದ ಶ್ರೇಷ್ಠವಾದ ತಪಸ್ಸನ್ನು ಬಿಟ್ಟು ಕಾಮ ಕ್ರೋಧಪರವಶರಾಗಿ ಪ್ರಹ್ಲಾದನೊಡನೆ ಪರಸ್ಪರವಾಗಿ ಯುದ್ಧವನ್ನು ಮಾಡುವುದರಲ್ಲಿ ಹೇಗೆ ಆಸಕ್ತಿಯುಳ್ಳವರಾದರು ? ಎಂದು ನೀನು ಹೇಳಿದ ಕಥೆಯಲ್ಲಿ ನನಗೆ ಬಹಳ ಸಂಶಯವುಂಟಾಗಿದೆ.

**ಪ್ರಹ್ಲಾದೇನ ಸಮಂ ಪೂರ್ಣಂ ದಿವ್ಯವರ್ಷಶತಂ ಕಿಲ ।**
**ಹಿತ್ವಾ ಶಾಂತಿಸುಖಂ ಯುದ್ಧಂ ಕೃತವಂತೌ ಕಥಂ ಮುನೀ ॥೪॥**

ದೇವಮಾನದಿಂದ ಒಂದು ನೂರು ವರ್ಷಗಳು ಪೂರ್ಣವಾಗಿ, ಆ ನರನಾರಾಯಣ ಋಷಿಗಳು ಶಾಂತಿಸುಖಗಳನ್ನು ನೀಡುವ ತಪಸ್ಸನ್ನು ಬಿಟ್ಟು ಪ್ರಹ್ಲಾದನೊಡನೆ ಹೇಗೆ ಯುದ್ಧವನ್ನು ಮಾಡಿದರು?

**ಕಥಂ ತೌ ಚಕ್ರತುರ್ಯುದ್ಧಂ ಪ್ರಹ್ಲಾದೇನ ಸಮಂ ಮುನೀ ।**
**ಕಥಯಸ್ವ ಮಹಾಭಾಗ ಕಾರಣಂ ವಿಗ್ರಹಸ್ಯ ವೈ ॥೫॥**

ಎಲೈ ಪುಣ್ಯಶಾಲಿಯೇ, ಆ ಪ್ರಹ್ಲಾದನೊಡನೆ ಈ ಋಷಿಗಳು ಹೇಗೆ ಯುದ್ಧವನ್ನು ಮಾಡಿದರು? ಈ ಯುದ್ಧಕ್ಕೆ ಕಾರಣವೇನೆಂಬುದನ್ನು ನನಗೆ ತಿಳಿಸುವವನಾಗು.

**ಕಾಮಿನೀ ಕನಕಂ ಕಾರ್ಯಂ ಕಾರಣಂ ವಿಗ್ರಹಸ್ಯ ವೈ ।**
**ಯುದ್ಧಬುದ್ಧಿಃ ಕಥಂ ಜಾತಾ ತಯೋಶ್ಚ ತದ್ವಿರಕ್ತಯೋಃ ॥೬॥**

ಸ್ತ್ರೀವ್ಯಾಮೋಹವೂ, ಚಿನ್ನಮುಂತಾದ ಧನಾರ್ಜನೆಯಲ್ಲಿ ಲಾಲಸೆಯೂ, ಶತ್ರುಜಯದಿಂದ ರಾಜ್ಯವಿಸ್ತರಣ ಮುಂತಾದ ಕಾರ್ಯಾಸಕ್ತಿಯೂ ಸಾಮಾನ್ಯವಾಗಿ ಪರಸ್ಪರ ಜಗಳಕ್ಕೆ ಕಾರಣವಲ್ಲವೆ? ಆದರೆ ಆ ಮುನಿಗಳಿಬ್ಬರೂ ಅಂತಹ ವಿಷಯಗಳಲ್ಲಿ ವೈರಾಗ್ಯವುಳ್ಳವರಾಗಿದ್ದರೂ ಅಂಥವರಿಗೂ ಯಾವ ಕಾರಣದಿಂದ ಯುದ್ಧ ಮಾಡಬೇಕೆಂಬ ಬುದ್ಧಿಯುಂಟಾಯಿತು?

**ತಥಾವಿಧಂ ತಪಸ್ತಪ್ತಂ ತಾಭ್ಯಾಂ ಚ ಕೇನ ಹೇತುನಾ ।**
**ಮೋಹಾರ್ಥಂ ಸುಖಭೋಗಾರ್ಥಂ ಸ್ವರ್ಗಾರ್ಥಂ ವಾ ಪರಂತಪ ।**
**ಕೃತಮತ್ಯುತ್ಕಟಂ ತಾಭ್ಯಾಂ ತಪಃ ಸರ್ವಫಲಪ್ರದಂ ॥೭॥**

ಅಲ್ಲದೆ ಅವರು ಅಂತಹ ಕಠಿನವಾದ ಮತ್ತು ಮೇಲಾದ ತಪಸ್ಸನ್ನು ಯಾವ ಕಾರಣದಿಂದ ಮಾಡುತ್ತಿದ್ದರು? ಸ್ವರ್ಗದ ಸುಖಾನುಭವದ ಆಶೆಯಿಂದಲೇ, ಐಹಿಕ ಸುಖಗಳಲ್ಲಿ ಭೋಗೇಚ್ಛೆಯಿಂದಲೇ, ಅಥವಾ ಇನ್ನೇನಾದರೂ ಆಕರ್ಷಣೆಗಳ ವಾಂಛೆಯಿಂದ ಅವರು ಅಂತಹ ಉಗ್ರತಪಸ್ಸನ್ನು ಆಚರಿಸುತ್ತಿದ್ದರೇ?

**ಮುನಿಭ್ಯಾಂ ಶಾಂತಚಿತ್ತಾಭ್ಯಾಂ ಪ್ರಾಪ್ತಂ ಕಿಂ ಫಲಮದ್ಭುತಂ ।**
**ತಪಸಾ ಪೀಡಿತೋ ದೇಹಃ ಸಂಗ್ರಾಮೇಣ ಪುನಃ ಪುನಃ ॥೮॥**

ಶಾಂತಸ್ವಭಾವದವರಾದ ಅವರಿಗೆ ತಪಸ್ಸಿನಿಂದ ಯಾವ ಅದ್ಭುತಫಲವುಂಟಾಯಿತು ? ತಪಸ್ಸಿನಿಂದಲೂ, ಈಗ ನೂರು ವರ್ಷಗಳ ಕಾಲ ಪುನಃಪುನಃ ಯುದ್ಧವನ್ನು ನಡೆಯಿಸಿದುದರಿಂದಲೂ ಅವರ ಶರೀರಗಳು ಮಾತ್ರ ಕ್ಲೇಶಕಷ್ಟಗಳಿಗೆ ಈಡಾದುವು.

**ದಿವ್ಯವರ್ಷಶತಂ ಪೂರ್ಣಂ ಶ್ರಮೇಣ ಪರಿಪೀಡಿತೌ ।**
**ನ ರಾಜ್ಯಾರ್ಥೇ ಧನೇ ವಾಪಿ ನ ದಾರೇಷು ಗೃಹೇಷು ಚ ॥೯॥**

ಅಲ್ಲದೆ ಅವರಿಗೆ ರಾಜ್ಯದಲ್ಲಿಯಾಗಲಿ, ಹಣದಲ್ಲಿಯಾಗಲಿ, ಕಾಮಿನಿಯರಲ್ಲಿಯಾಗಲಿ, ಗೃಹಾದಿ ಸುಖಸಾಧನ ವಸ್ತುಗಳಲ್ಲಾಗಲಿ ಇಚ್ಛೆಯಿದ್ದಂತೆ ಕಾಣುವುದಿಲ್ಲವು. ಹೀಗಿದ್ದರೂ ನೂರು ವರ್ಷಗಳವರೆಗೂ ಬಹಳ ಶ್ರಮಪಟ್ಟು,

**ಕಿಮರ್ಥಂ ತು ಕೃತಂ ಯುದ್ಧಂ ತಾಭ್ಯಾಂ ತೇನ ಮಹಾತ್ಮನಾ ।**
**ನಿರೀಹಃ ಪುರುಷಃ ಕಸ್ಮಾತ್ಪ್ರಕುರ್ಯಾದ್ಯುದ್ಧಮೀದೃಶಂ ॥೧೦॥**

ಅವರು ಮಹಾತ್ಮನಾದ ಪ್ರಹ್ಲಾದನೊಡನೆ ಇಂತಹ ಘೋರಯುದ್ಧವನ್ನು ಏತಕ್ಕೋಸ್ಕರ ಮಾಡಿದರು ? ಯಾವ ಬಗೆಯ ಇಚ್ಛೆಯೂ ಇಲ್ಲದ ಯಾವ ಮನುಷ್ಯನುತಾನೇ ಈ ರೀತಿಯಾದ ಯುದ್ಧವನ್ನು ಮಾಡುವನು ?

**ದುಃಖದಂ ಸರ್ವಥಾ ದೇಹೇ ಜಾನನ್ ಧರ್ಮಂ ಸನಾತನಂ ।**
**ಸುಬುದ್ಧಿಃ ಸುಖದಾನೀಹ ಕರ್ಮಾಣಿ ಕುರುತೇ ಸದಾ ॥೧೧॥**
**ನ ದುಃಖದಾನಿ ಧರ್ಮಜ್ಞ ಸ್ಥಿತಿರೇಷಾ ಸನಾತನೀ ।**

ಇಂತಹ ಯುದ್ಧವನ್ನು, ಪರಂಪರಾಗತವಾಗಿ ಅನಾದಿಕಾಲದಿಂದಲೂ ಆಚರಣೆಯಲ್ಲಿ ಬಂದಿರುವ ಧರ್ಮವನ್ನು ತಿಳಿದೂ ಏತಕ್ಕೆ ಮಾಡಿದರು ? ಒಳ್ಳೆಯ ಬುದ್ಧಿಯುಳ್ಳವನು ಸುಖವನ್ನುಂಟುಮಾಡುವ ಕಾರ್ಯಗಳನ್ನು ಮಾಡುವನೇ ಹೊರತು ದುಃಖವನ್ನುಂಟುಮಾಡುವ ಕೆಲಸಗಳನ್ನು ಮಾಡುವುದಿಲ್ಲವು. ಇದೇ ಧರ್ಮಶಾಸ್ತ್ರಗಳಲ್ಲಿ ಪ್ರತಿಯೊಬ್ಬರಿಗೂ ತಕ್ಕಂತೆ ವಿಹಿತವಾಗಿರುವ ವರ್ಣಾಶ್ರಮಧರ್ಮಗಳನ್ನು ತಿಳಿದಿರುವ

ಪ್ರಾಜ್ಞರು ಅನಾದಿಯಾಗಿ ಸಂತತವಾಗಿ ಪೂರ್ವದಿಂದಲೂ ಆಚರಿಸುತ್ತಾ ಬರುತ್ತಿರುವುದು ಪದ್ಧತಿಯಾಗಿದೆ.

**ಧರ್ಮಪುತ್ರೌ ಹರೇರಂಶೌ ಸರ್ವಜ್ಞೌ ಸರ್ವಭೂಷಿತೌ ॥೧೨॥**

**ಕೃತವಂತೌ ಕಥಂ ಯುದ್ಧಂ ದುಃಖಂ ಧರ್ಮವಿನಾಶಕಂ ।**
**ತ್ಯಕ್ತ್ವಾ ತತಃ ಸಮಾಧೀತಂ ಸುಖಾರಾಮಂ ಮಹತ್ಫಲಂ ॥೧೩॥**

**ಸಂಯುಗಂ ದಾರುಣಂ ಕೃಷ್ಣ ನೈವ ಮೂರ್ಖೋಽಪಿ ವಾಂಛತಿ ।**

ಹೀಗಿರುವಲ್ಲಿ, ಸರ್ವಜ್ಞರೂ ಧರ್ಮದೇವನ ಪುತ್ರರೂ ವಿಷ್ಣುವಿನ ಅಂಶ ಸಂಭೂತರೂ, ಎಲ್ಲ ಒಳ್ಳೆಯ ಲಕ್ಷಣಗಳುಳ್ಳವರೂ ಆದ ಇವರು ಶಾಂತಿಸುಖವನ್ನು ಕೊಡುವ, ಎಲ್ಲ ಒಳ್ಳೆಯ ಫಲಗಳನ್ನೂ ಉಂಟುಮಾಡುವ ತಮ್ಮ ಸಮಾಧಿಸ್ಥಿತಿಯನ್ನು ಬಿಟ್ಟು ದುಃಖವನ್ನುಂಟುಮಾಡುವ ಮತ್ತು ಧರ್ಮವನ್ನು ನಾಶಮಾಡುವ ಇಂತಹ ಯುದ್ಧವನ್ನು ಏಕೆ ಮಾಡಿದರು ? ಓ ಕೃಷ್ಣದ್ವೈಪಾಯನನೆಂದು ಪ್ರಸಿದ್ಧನಾಗಿರುವ ವ್ಯಾಸಮಹರ್ಷಿಯೇ, (ಕೃಷ್ಣನೆಂಬುದು ವ್ಯಾಸನ ಅಂಕಿತನಾಮವು. ನದಿಯ ಮಧ್ಯದಲ್ಲಿ ದ್ವೀಪದಂತೆ ಇದ್ದ ಗುತ್ತಿಯಲ್ಲಿ ಪರಾಶರಮಹರ್ಷಿಯಿಂದ ಯೋಜನಗಂಧಿಯಲ್ಲಿ ಹುಟ್ಟಿದುದರಿಂದ ಇವನಿಗೆ ದ್ವೈಪಾಯನನೆಂದೂ ಹೆಸರಾಯಿತು. ಈ ವಿಷಯವು ಈ ಪುರಾಣದಲ್ಲಿ ಹಿಂದೆಯೇ ಹೇಳಿದೆ.) ಈ ಘೋರವಾದ ಕಷ್ಟಕರವಾದ ಯುದ್ಧವನ್ನು ಹೇಗೆ ಆಶಿಸಿದರು? ಅದನ್ನು ನನಗೆ ವಿವರಿಸಿ ತಿಳಿಯಹೇಳು.

**ಶ್ರುತೋ ಮಯಾ ಯಯಾತಿಸ್ತು ಚ್ಯುತಃ ಸ್ವರ್ಗಾನ್ಮಹೀಪತಿಃ ॥೧೪॥**

**ಅಹಂಕಾರಭವಾತ್ಪಾಪಾತ್ಪಾತಿತಃ ಪೃಥಿವೀತಲೇ ।**
**ಯಜ್ಞಕೃದ್ದಾನಕರ್ತಾ ಚ ಧಾರ್ಮಿಕಃ ಪೃಥಿವೀಪತಿಃ ॥೧೫॥**

**ಶಬ್ದೋಚ್ಚಾರಣಮಾತ್ರೇಣ ಪಾತಿತೋ ವಜ್ರಪಾಣಿನಾ ।**

ಆದುದರಿಂದ ಈ ಯುದ್ಧಕ್ಕೆ ಬೇರೆ ಯಾವ ಕಾರಣವೂ ಇಲ್ಲದುದರಿಂದ ಅಹಂಕಾರದಿಂದ ಪಾಪವುಂಟಾಗಿ ಪುಣ್ಯವು ನಾಶವಾಗುತ್ತದೆ. ಆದುದರಿಂದಲೇ ಯಜ್ಞಗಳನ್ನೂ ದಾನಗಳನ್ನೂ ಮಾಡಿದ ಧಾರ್ಮಿಕನಾದ ಯಯಾತಿ ಮಹಾರಾಜನು ತಾನು ಗಳಿಸಿದ್ದ ಪುಣ್ಯದ ಪ್ರಭಾವದಿಂದ ಸ್ವರ್ಗದಲ್ಲಿದ್ದರೂ ಅವನು

ಅಹಂಕಾರದಿಂದ ತಾನು ಮಾಡಿದುದನ್ನು ತಾನೇ ಹೇಳಿಕೊಂಡು ಜಂಭಪಟ್ಟಕಾರಣ ದಿಂದ ಆ ರೀತಿಯಲ್ಲಿ ಅವನು ಜಂಭದ ಮಾತುಗಳನ್ನು ಹೇಳಿದ ಕೂಡಲೇ ಇಂದ್ರನು ಅವನನ್ನು ಸ್ವರ್ಗದಿಂದ ತಳ್ಳಿದನು. ಪುನಃ ಅವನು ಭೂಮಿಗೇ ಬಂದು ಬಿದ್ದನು ಎಂದು ನಾನು ಕೇಳಿರುತ್ತೇನೆ.

**ಅಹಂಕಾರಮೃತೇ ಯುದ್ಧಂ ನ ಭವತ್ಯೇವ ನಿಶ್ಚಯಃ ॥೧೬॥**
**ಕಿಂ ಫಲಂ ತಸ್ಯ ಯುದ್ಧಸ್ಯ ಮುನೇಃ ಪುಣ್ಯವಿನಾಶನಂ ।**

ಆದರೆ ನರನಾರಾಯಣರು ಹಾಗೆ ಅಹಂಕಾರಪಡಲಿಲ್ಲವೆಂದರೆ, ಹಾಗೆ ಅಹಂ ಕಾರವಿಲ್ಲದಿದ್ದಲ್ಲಿ ಯುದ್ಧವು ನಿಶ್ಚಯವಾಗಿಯೂ ಸಂಭವಿಸುತ್ತಿರಲಿಲ್ಲವು. ಅಲ್ಲದೆ, ಅಹಂಕಾರದಿಂದುಂಟಾಗುವ ಯುದ್ಧದಿಂದ ತಾನು ಮಾಡಿದ ಪುಣ್ಯವು ನಾಶವಾಗು ವಾಗ ಅಂತಹ ಯುದ್ಧದಿಂದ ಋಷಿಯಾದವನಿಗೆ ಆಗುವ ಪ್ರಯೋಜನವು ತಾನೇ ಏನು?

॥ ವ್ಯಾಸ ಉವಾಚ ॥

**ರಾಜನ್ ಸಂಸಾರಮೂಲಂ ಹಿ ತ್ರಿವಿಧಃ ಪರಿಕೀರ್ತಿತಃ ॥೧೭॥**
**ಅಹಂಕಾರಸ್ತು ಸರ್ವಜ್ಞೈರ್ಮುನಿಭಿರ್ಧರ್ಮನಿಶ್ಚಯೇ ।**

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ ಕೇಳು, ಎಲ್ಲ ಕಾರಣಗಳ ಧರ್ಮಗಳನ್ನು ಗೊತ್ತುಮಾಡುವ ಸಂದರ್ಭದಲ್ಲಿ ಸರ್ವಜ್ಞರಾದ ಮುನಿ ಗಳು, ಈ ಸಂಸಾರಕ್ಕೇ ಮೂಲಭೂತವಾದ ಕಾರಣವು ಅಹಂಕಾರವೆಂದೂ, ಆ ಅಹಂಕಾರವು ಮೂರು ಬಗೆಯಾಗಿದೆ ಎಂದೂ ಹೇಳಿರುತ್ತಾರೆ.

**ಸ ಕಥಂ ಮುನಿನಾ ತ್ಯಕ್ತುಂ ಯೋಗ್ಯೋ ದೇಹಭೃತಾ ಕಿಲ ॥೧೮॥**
**ಕಾರಣೇನ ವಿನಾ ಕಾರ್ಯಂ ನ ಭವತ್ಯೇವ ನಿಶ್ಚಯಃ ।**

ಆದುದರಿಂದ ದೇಹವನ್ನು ಧರಿಸಿರುವ ಯಾರೇ ಆಗಲಿ, ಅಂಥವನು ಮುನಿಯೇ ಆಗಿದ್ದರೂ ಈ ಅಹಂಕಾರವನ್ನು ಬಿಟ್ಟಿರುವುದು ಅಸಾಧ್ಯವೂ ಅಸ್ವಾಭಾವಿಕವೂ ಆಗಿದೆಯಲ್ಲವೇ? ಅಲ್ಲದೆ, ಕಾರಣವಿಲ್ಲದೆ ಯಾವ ಕಾರ್ಯವೂ ನಿಶ್ಚಯವಾಗಿಯೂ ಉಂಟಾಗುವುದಿಲ್ಲವೆಂಬುದು ನಿಶ್ಚಿತವಾದ ಸಿದ್ಧಾಂತವಾಗಿದೆ.

**ತಪೋ ದಾನಂ ತಥಾ ಯಜ್ಞಾಃ ಸಾತ್ತ್ವಿಕಾತ್ಪ್ರಭವಂತಿ ತೇ ॥೧೯॥**
**ರಾಜಸಾದ್ವಾ ಮಹಾಭಾಗ ತಾಮಸಾತ್ಕಲಹಸ್ತಥಾ ।**

ಈ ಅಹಂಕಾರವು ಸಾತ್ತ್ವಿಕ ರಾಜಸ ತಾಮಸ ಎಂದು ಮೂರು ಬಗೆಯಾಗಿದೆ. ಸಾತ್ತ್ವಿಕಾಹಂಕಾರದಿಂದ ಎಂದರೆ ಸತ್ತ್ವಗುಣವು ಮುಂದಾಗಿ ಮಿಕ್ಕೆರಡು ಗುಣಗಳೂ ದುರ್ಬಲವಾಗಿರುವ ಅಹಂಕಾರದಿಂದ ಯಾಗ, ದಾನ ಮುಂತಾದ ಧರ್ಮಾಚರಣೆಗಳು ಸಂಭವಿಸುತ್ತವೆ. ರಾಜಸ ಮತ್ತು ತಾಮಸಗಳಾದ ಅಹಂಕಾರಗಳಿಂದ ಕಲಹವು ಉಂಟಾಗುತ್ತದೆ.

**ಕ್ರಿಯಾ ಸ್ವಲ್ಪಾಪಿ ರಾಜೇಂದ್ರ ನಾಹಂಕಾರಂ ವಿನಾ ಕ್ವಚಿತ್ ॥೨೦॥**
**ಶುಭಾ ವಾಪ್ಯಶುಭಾ ವಾಪಿ ಪ್ರಭವತ್ಯಪಿ ನಿಶ್ಚಯಃ ।**

ಒಳ್ಳೆಯ ಕೆಲಸವೂ, ಕೆಟ್ಟ ಕೆಲಸವೂ, ಅದು ಅತ್ಯಲ್ಪವಾಗಿದ್ದರೂ ಸಹ, ಅಹಂಕಾರದಿಂದಲೇ ಉಂಟಾಗುವುದೇ ಹೊರತು ಬೇರೆ ಯಾವುದರಿಂದಲೂ ಅಲ್ಲವು. ಇದು ನಿಶ್ಚಯವು.

**ಅಹಂಕಾರಾದ್ಬಂಧಕಾರೀ ನಾನ್ಯೋಽಸ್ತಿ ಜಗತೀತಲೇ ॥೨೧॥**
**ತೇನೇದಂ ರಚಿತಂ ವಿಶ್ವಂ ಕಥಂ ತದ್ರಹಿತಂ ಭವೇತ್ ।**

ಈ ಭೂಮಿಯಲ್ಲಿ ಜೀವನಿಗೆ ಕರ್ಮಬಂಧವನ್ನುಂಟುಮಾಡುವುದು ಅಹಂಕಾರವಲ್ಲದೆ ಬೇರೆಯಾವುದೂ ಅಲ್ಲವು. ಅಲ್ಲದೆ ಈ ಅಹಂಕಾರದಿಂದಲೇ ಸಮಸ್ತ ಪ್ರಪಂಚವೂ ಸೃಷ್ಟಿಸಲ್ಪಟ್ಟಿರುವುದರಿಂದ ಅದಿಲ್ಲದಿರುವ ವಸ್ತುವು ಹೇಗೆ ತಾನೇ ಇದ್ದೀತು ?

**ಬ್ರಹ್ಮಾ ರುದ್ರಸ್ತಥಾ ವಿಷ್ಣುರಹಂಕಾರಯುತಾಸ್ತ್ರಯೀ ॥೨೨॥**
**ಅನ್ಯೇಷಾಂ ಚೈವ ಕಾ ವಾರ್ತಾ ಮುನೀನಾಂ ವಸುಧಾಧಿಪ ॥**

ಓ ದೊರೆಯೇ, ಬ್ರಹ್ಮ, ರುದ್ರ, ವಿಷ್ಣು ಮುಂತಾದ ದೊಡ್ಡವರು ಸಹ ಅಹಂಕಾರದಿಂದ ಕೂಡಿದವರೇ ಆಗಿರುತ್ತಾರೆ. ಎಂದಮೇಲೆ, ಮುನಿಗಳೇ ಮೊದಲಾದ ಇತರ ಜನಗಳ ವಿಷಯದಲ್ಲಿ ಹೇಳುವುದೇನಿದೆ ?

**ಅಹಂಕಾರಾವೃತಂ ವಿಶ್ವಂ ಭ್ರಮತೀದಂ ಚರಾಚರಂ ॥೨೩॥**
**ಪುನರ್ಜನ್ಮ ಪುನರ್ಮೃತ್ಯುಃ ಸರ್ವಂ ಕರ್ಮವಶಾನುಗಂ ।**

ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಅಹಂಕಾರದಿಂದ ಆವರಿಸಲ್ಪಟ್ಟಿರುತ್ತಾ ಸುತ್ತುತ್ತಿರುತ್ತದೆ. ಪ್ರಾಣಿಗಳಿಗೆ ಹುಟ್ಟುವುದೂ ಸಾಯುವುದೂ ಪುನಃ ಪುನಃ ಅಹಂಕಾರಮೂಲಕವಾದ ಕರ್ಮಕ್ಕೆ ಅಧೀನವಾಗಿ ಸಂಭವಿಸುತ್ತಲೇ ಇರುತ್ತದೆ.

**ದೇವತಿರ್ಯಙ್ಮನುಷ್ಯಾಣಾಂ ಸಂಸಾರೇಽಸ್ಮಿನ್ಮಹೀಪತೇ ॥೨೪॥**
**ರಥಾಂಗವದಸರ್ವಾರ್ಥಂ ಭ್ರಮಣಂ ಸರ್ವದಾ ಸ್ಮೃತಂ ।**

ಓ ದೊರೆಯೇ, ದೇವತೆಗಳು, ಮನುಷ್ಯರು, ಮೃಗಪಕ್ಷಿಗಳು ಮುಂತಾದ ಎಲ್ಲ ಪ್ರಾಣಿಗಳೂ ಈ ಸಂಸಾರದಲ್ಲಿ ಕರ್ಮವಶರಾಗಿಯೇ ಇರುತ್ತಾ, ರಥದ ಚಕ್ರದಂತೆ ಎಲ್ಲವೂ ಯಾವಾಗಲೂ ಸುತ್ತುತ್ತಲೇ ಇರುತ್ತದೆಂದು ವೇದಶಾಸ್ತ್ರಗಳಲ್ಲಿ ಹೇಳಿದೆ.

**ವಿಷ್ಣೋರಪ್ಯವತಾರಾಣಾಂ ಸಂಖ್ಯಾಂ ಜಾನಾತಿ ಕಃ ಪುಮಾನ್ ॥೨೫॥**
**ವಿತತೇಽಸ್ಮಿಂಸ್ತು ಸಂಸಾರ ಉತ್ತಮಾಧಮಯೋನಿಷು ।**

ವಿಷ್ಣುವಿಗೂ ಕೂಡ ಉಂಟಾಗುವ ಅವತಾರಗಳ ಸಂಖ್ಯೆಯನ್ನು ಯಾವನು ತಾನೇ ಇಷ್ಟೇ ಎಂದು ತಿಳಿದಿರುತ್ತಾನೆ? ಏಕೆಂದರೆ, ವಿಸ್ತಾರವಾಗಿರುವ ಈ ಪ್ರಾಪಂಚಿಕವಾದ ವ್ಯವಹಾರದಲ್ಲಿ ಆ ವಿಷ್ಣುವೂ ಕೂಡ ಮೇಲು ಮತ್ತು ಕೀಳಾದ ಅನೇಕ ಕ್ಷೇತ್ರಗಳಲ್ಲಿ ಆಗಾಗ್ಗೆ ಯುಗಯುಗಗಳಲ್ಲೂ ಜನ್ಮಗಳನ್ನು ಪಡೆಯುತ್ತಲೇ ಇರುತ್ತಾನೆ.

**ನಾರಾಯಣೋ ಹರಿಃ ಸಾಕ್ಷಾನ್ಮಾತ್ಸ್ಯಂ ವಪುರುಪಾಶ್ರಿತಃ ॥೨೬॥**
**ಕಾಮಠಂ ಸೌಕರಂ ಚೈವ ನಾರಸಿಂಹಂ ಚ ವಾಮನಂ ।**
**ಯುಗೇ ಯುಗೇ ಜಗನ್ನಾಥೋ ವಾಸುದೇವೋ ಜನಾರ್ದನಃ ॥೨೭॥**
**ಅವತಾರಾನಸಂಖ್ಯಾತಾನ್ಕರೋತಿ ವಿಧಿಯಂತ್ರಿತಃ ।**

ಈ ಪ್ರಪಂಚದ ಸಂಸಾರದಲ್ಲಿ ಸಾಕ್ಷಾತ್ತಾಗಿ ನಾರಾಯಣನೂ, ವಾಸುದೇವನೂ, ಲೋಕಗಳಿಗೆ ಒಡೆಯನೂ, ದುಷ್ಟಜನರನ್ನು ಸಂಹರಿಸುವವನೂ ಆದ ವಿಷ್ಣುವೇ ವಿಧಿವಶನಾಗಿ ಮೀನು, ಆಮೆ, ಹಂದಿ, ನೃಸಿಂಹ, ವಾಮನ ಮುಂತಾದ

ಶರೀರಗಳನ್ನು ಧರಿಸಿರುವವನಾಗಿ ಪ್ರತಿಯುಗದಲ್ಲಿಯೂ ಎಣಿಕೆಯಿಲ್ಲದಷ್ಟು ಅವತಾರಗಳನ್ನು ಹೊಂದುತ್ತಿರುವನು.

**ವೈವಸ್ವತೇ ಮಹಾರಾಜ ಸಪ್ತಮೋ ಭಗವಾನ್ ಹರಿಃ ॥೨೮॥**
**ಮನ್ವಂತರೇಽವತಾರಾನ್ವೈ ಚಕ್ರೇ ತಾಞ್ಛೃಣು ತತ್ತ್ವತಃ ।**

ಓ ಮಹಾರಾಜನೇ ಕೇಳು, ಅದರಂತೆಯೇ ಏಳನೆಯದಾದ ಈ ವೈವಸ್ವತ ಮನ್ವಂತರದಲ್ಲಿಯೂ ಭಗವಾನ್ವಿಷ್ಣುವು ವಾಸ್ತವವಾಗಿ ಎಷ್ಟು ಅವತಾರಗಳನ್ನು ಮಾಡಿದನೆಂಬುದನ್ನು ಕೇಳುವವನಾಗು.

**ಭೃಗುಶಾಪಾನ್ಮಹಾರಾಜ ವಿಷ್ಣುರ್ದೇವವರಃ ಪ್ರಭುಃ ॥೨೯॥**
**ಅವತಾರಾನನೇಕಾಂಸ್ತು ಕೃತವಾನಖಿಲೇಶ್ವರಃ ।**

ಓ ಮಹಾರಾಜನೇ, ಭೃಗುಋಷಿಯ ಶಾಪದಿಂದ ಎಲ್ಲಕ್ಕೂ ಒಡೆಯನೂ, ದೇವತೆಗಳಲ್ಲೆಲ್ಲ ಶ್ರೇಷ್ಠನೂ ಭಗವಂತನೂ ಆದ ಆ ವಿಷ್ಣುವೂ ಅನೇಕವಾದ ಅವತಾರಗಳನ್ನು ಹೊಂದಿದನು.

॥ ರಾಜೋವಾಚ ॥

**ಸಂದೇಹೋಽಯಂ ಮಹಾಭಾಗ ಹೃದಯೇ ಮಮ ಜಾಯತೇ ॥೩೦॥**
**ಭೃಗುಣಾ ಭಗವಾನ್ವಿಷ್ಣುಃ ಕಥಂ ಶಪ್ತಃ ಪಿತಾಮಹ ।**

ಜನಮೇಜಯರಾಜನು ಹೇಳಿದನು—ಓ ಪುಣ್ಯಶಾಲಿಯಾದ ತಾತನೇ, ನನ್ನ ಮನಸ್ಸಿನಲ್ಲಿ ಒಂದು ಸಂಶಯವುಂಟಾಗುತ್ತಿದೆ. ಏನೆಂದರೆ, ಯಾವ ಕಾರಣದಿಂದ ಭೃಗುಮಹರ್ಷಿಯು ಭಗವಂತನಾದ ವಿಷ್ಣುವನ್ನು ಶಪಿಸಿದನು ?

**ಹರಿಣಾ ಚ ಮುನೇಸ್ತಸ್ಯ ವಿಪ್ರಿಯಂ ಕಿಂ ಕೃತಂ ಮುನೇ ॥೩೧॥**
**ಯದ್ರೋಷಾದ್ಭೃಗುಣಾ ಶಪ್ತೋ ವಿಷ್ಣುರ್ದೇವನಮಸ್ಕೃತಃ ॥**

ಅಲ್ಲದೆ, ವಿಷ್ಣುವು ತಾನೇ ಭೃಗುಮಹರ್ಷಿಗೆ ಏನು ತೊಂದರೆಯನ್ನುಂಟು ಮಾಡಿದನು ? ದೇವತೆಗಳಿಂದಲೂ ನಮಸ್ಕರಿಸಲ್ಪಡುವ ವಿಷ್ಣುವಿಗೆ ಭೃಗುಮಹ

ಷಿಯು ಕೋಪದಿಂದ ಶಾಪವನ್ನು ಕೊಡಲು ಕಾರಣವೇನು? ಓ ವ್ಯಾಸಮುನಿಯೇ ಈ ಸಂಶಯವು ನನಗುಂಟಾಗಿರುತ್ತದೆ.

|| ವ್ಯಾಸ ಉವಾಚ ||

ಶೃಣು ರಾಜನ್ಪ್ರವಕ್ಷ್ಯಾಮಿ ಭೃಗೋಃ ಶಾಪಸ್ಯ ಕಾರಣಂ ||೩೨||

ಪುರಾ ಕಶ್ಯಪದಾಯಾದೋ ಹಿರಣ್ಯಕಶಿಪುರ್ನೃಪಃ |
ಯದಾ ತದಾ ಸುರೈಃ ಸಾರ್ಧಂ ಕೃತಂ ಸಂಖ್ಯಂ ಪರಸ್ಪರಂ ||೩೩||

ವ್ಯಾಸನು ಹೇಳಿದನು—ಎಲೈ ರಾಜನೇ, ಭೃಗುವು ಏತಕ್ಕೆ ಶಾಪಕೊಟ್ಟ ನೆಂಬುದನ್ನು ಹೇಳುತ್ತೇನೆ, ಕೇಳು. ಹಿಂದೆ ಕಶ್ಯಪನ ದಾಯಾದನಾದ ಹಿರಣ್ಯ ಕಶಿಪುರಾಜನು ರಾಜ್ಯವಾಳುತ್ತಿದ್ದಾಗ ದೇವತೆಗಳೊಡನೆ ರಾಕ್ಷಸರೂ ಆಗಾಗ್ಗೆ ಪರಸ್ಪರ ವಾಗಿ ಯುದ್ಧವನ್ನು ಮಾಡುತ್ತಿದ್ದರು.

ಕೃತೇ ಸಂಖ್ಯೇ ಜಗತ್ಸರ್ವಂ ವ್ಯಾಕುಲಂ ಸಮಜಾಯತ |
ಹತೇ ತಸ್ಮಿನ್ನೃಪೇ ರಾಜಾ ಪ್ರಹ್ಲಾದಃ ಸಮಜಾಯತ ||೩೪||

ಆ ರೀತಿಯಲ್ಲಿ ದೇವಾಸುರರು ಯುದ್ಧಮಾಡುತ್ತಿರಲು ಪ್ರಪಂಚವೆಲ್ಲವೂ ಕಳವಳಗೊಂಡಿತು. ಆ ಯುದ್ಧದಲ್ಲಿ ಹಿರಣ್ಯಕಶಿಪುವು ಹತನಾಗಲು ಪ್ರಹ್ಲಾದನು ಮುಂದೆ ಅವನ ಸ್ಥಾನವನ್ನು ಪಡೆದನು.

ದೇವಾನ್ಸ ಪೀಡಯಾಮಾಸ ಪ್ರಹ್ಲಾದಃ ಶತ್ರುಕರ್ಷಣಃ |
ಸಂಗ್ರಾಮೋ ಹ್ಯಭವದ್ಘೋರಃ ಶಕ್ರಪ್ರಹ್ಲಾದಯೋಸ್ತದಾ ||೩೫||

ಶತ್ರುಗಳನ್ನು ನಿಗ್ರಹಿಸಬಲ್ಲ ಆ ಪ್ರಹ್ಲಾದನೂ ದೇವತೆಗಳನ್ನು ಪೀಡಿಸಲು ಪ್ರಾರಂಭಿಸಿದನು. ಆಗ ಇಂದ್ರನಿಗೂ ಪ್ರಹ್ಲಾದನಿಗೂ ಭಯಂಕರವಾದ ಯುದ್ಧವು ಉಂಟಾಯಿತು.

ಪೂರ್ಣಂ ವರ್ಷಶತಂ ರಾಜಂಲ್ಲೋಕವಿಸ್ಮಯಕಾರಕಂ |
ದೇವೈರ್ಯುದ್ಧಂ ಕೃತಂ ಚೋಗ್ರಂ ಪ್ರಹ್ಲಾದಸ್ತು ಪರಾಜಿತಃ ||೩೬||

ಸಂಪೂರ್ಣವಾಗಿ ನೂರು ವರ್ಷಗಳವರೆಗೆ ನಡೆದ ಆಶ್ಚರ್ಯಕರವಾದ ಯುದ್ಧ ದಲ್ಲಿ ಓ ದೊರೆಯೇ, ದೇವತೆಗಳು ಪ್ರಹ್ಲಾದನನ್ನು ಸೋಲಿಸಿದರು.

**ನಿರ್ವೇದಂ ಪರಮಂ ಪ್ರಾಪ್ತೋ ಜ್ಞಾತ್ವಾ ಧರ್ಮಂ ಸನಾತನಂ ।**
**ವಿರೋಚನಸುತಂ ರಾಜ್ಯೇ ಪ್ರತಿಷ್ಠಾಪ್ಯ ಬಲಿಂ ನೃಪ ॥೩೭॥**
**ಜಗಾಮ ಸ ತಪಸ್ತಪ್ತುಂ ಪರ್ವತೇ ಗಂಧಮಾದನೇ ॥**

ಓ ದೊರೆಯೇ, ಆ ಸೋಲಿನಿಂದ ಪ್ರಹ್ಲಾದನು ಬಹಳವಾಗಿ ಬೇಸರಗೊಂಡವನಾಗಿ ಪರಂಪರೆಯಿಂದ ಬಂದ ಧರ್ಮವನ್ನು ನೆನೆಸಿಕೊಂಡು ವಿರೋಚನನ ಮಗನಾದ ಬಲಿಯನ್ನು ರಾಜ್ಯದಲ್ಲಿ ಪಟ್ಟಗಟ್ಟಿ ತಾನು ತಪಸ್ಸನ್ನಾಚರಿಸಲು ಗಂಧಮಾದನ ಪರ್ವತಕ್ಕೆ ಹೊರಟುಹೋದನು.

**ಪ್ರಾಪ್ಯ ರಾಜ್ಯಂ ಬಲಿಃ ಶ್ರೀಮಾನ್ ಸುರೈರ್ವೈರಂ ಚಕಾರ ಹ ॥೩೮॥**
**ತತಃ ಪರಸ್ಪರಂ ಯುದ್ಧಂ ಜಾತಂ ಪರಮದಾರುಣಂ ॥**

ಬಲಿಯು ರಾಜ್ಯವನ್ನು ಹೊಂದಿದಮೇಲೆ ದೇವತೆಗಳೊಡನೆ ವೈರವನ್ನು ಬೆಳೆಯಿಸಿದನು. ಅನಂತರದಲ್ಲಿ ಆ ದೇವಾಸುರರಿಬ್ಬರಿಗೂ ಭೀಷಣವಾದ ಸಂಗ್ರಾಮವು ನಡೆಯಿತು.

**ತತಃ ಸುರೈರ್ಜಿತಾ ದೈತ್ಯಾ ಇಂದ್ರೇಣಾಮಿತತೇಜಸಾ ॥೩೯॥**
**ವಿಷ್ಣುನಾ ಚ ಸಹಾಯೇನ ರಾಜ್ಯಭ್ರಷ್ಟಾಃ ಕೃತಾ ನೃಪ ॥**

ಪರಾಕ್ರಮಶಾಲಿಯಾದ ಇಂದ್ರನು ವಿಷ್ಣುವಿನ ಸಹಾಯದಿಂದ ದೇವತೆಗಳೊಡಗೂಡಿ ರಾಕ್ಷಸರನ್ನು ಸೋಲಿಸಿ ಅವರನ್ನು ರಾಜ್ಯದಿಂದ ಓಡಿಸಿದನು.

**ತತಃ ಪರಾಜಿತಾ ದೈತ್ಯಾಃ ಕಾವ್ಯಸ್ಯ ಶರಣಂ ಗತಾಃ ॥೪೦॥**
**ಕಿಂ ತ್ವಂ ನ ಕುರುಷೇ ಬ್ರಹ್ಮನ್ ಸಾಹಾಯ್ಯಂ ನಃ ಪ್ರತಾಪವಾನ್ ॥**

ಅನಂತರದಲ್ಲಿ ಸೋತುಹೋದ ಆ ರಾಕ್ಷಸರು ತಮ್ಮ ಗುರುವಾದ ಶುಕ್ರಾಚಾರ್ಯನನ್ನು ಮರೆಹೊಕ್ಕು ಅವನನ್ನು ಈ ರೀತಿಯಾಗಿ ಪ್ರಾರ್ಥಿಸಿದರು. ಓ ಬ್ರಹ್ಮತೇಜಸ್ಸುಳ್ಳ ಪ್ರತಾಪಶಾಲಿಯಾದ ಶುಕ್ರಾಚಾರ್ಯನೇ, ನೀನು ನಮಗೆ ಸಹಾಯವನ್ನು ಮಾಡುವುದಿಲ್ಲವೇ ?

**ಸ್ಥಾತುಂ ನ ಶಕ್ನುಮೋ ಹ್ಯತ್ರ ಪ್ರವಿಶಾಮೋ ರಸಾತಲಂ ॥೪೧॥**
**ಯದಿ ತ್ವಂ ನ ಸಹಾಯೋಽಸಿ ತ್ರಾತುಂ ಮಂತ್ರವಿದುತ್ತಮಃ ।**

ಒಳ್ಳೆಯ ಮಂತ್ರಾಲೋಚನೆಯಲ್ಲಿ ಗಟ್ಟಿಗನಾದ ನೀನು ನಮಗೆ ಸಹಾಯಕನಾಗಿ ನಮ್ಮನ್ನು ಕಾಪಾಡದಿದ್ದರೆ, ನಾವಿಲ್ಲಿರಲು ಸಾಧ್ಯವಿಲ್ಲವು. ಆದುದರಿಂದ ನಾವು ಪಾತಾಳಕ್ಕೆ ಹೊರಟುಹೋಗುವೆವು.

|| ವ್ಯಾಸ ಉವಾಚ ||

**ಇತ್ಯುಕ್ತಃ ಸೋಽಬ್ರವೀದ್ದೈತ್ಯಾನ್ಕಾವ್ಯಃ ಕಾರುಣಿಕೋ ಮುನಿಃ ॥೪೨॥**
**ಮಾ ಭೈಷ್ಟ ಧಾರಯಿಷ್ಯಾಮಿ ತೇಜಸಾ ಸ್ವೇನ ಭೋಃ ಸುರಾಃ ।**

ವ್ಯಾಸಮಹರ್ಷಿಯು ಹೇಳಿದನು—ಈ ರೀತಿಯಾಗಿ ರಾಕ್ಷಸರೆಲ್ಲರೂ ಭಕ್ತಿಯಿಂದ ಪ್ರಾರ್ಥಿಸಲು ಆಗ ಋಷಿಗಳ ಮತ್ತು ಕವಿಗಳ ಗುಣದಿಂದ ಕೂಡಿರುವವನಾದ ಶುಕ್ರಾಚಾರ್ಯನು ಕರುಣೆಯಿಂದ ಕೂಡಿ ಈ ರೀತಿಯಲ್ಲಿ ಹೇಳಿದನು. ಓ ರಾಕ್ಷಸರೇ, ಹೆದರಬೇಡಿರಿ. ನಾನು ನನ್ನ ಮಂತ್ರಶಕ್ತಿಯಿಂದ ನಿಮ್ಮನ್ನು ಕಾಪಾಡುವೆನು.

**ಮಂತ್ರೈಸ್ತಥೌಷಧೀಭಿಶ್ಚ ಸಾಹಾಯ್ಯಂ ವಃ ಸದೈವ ಹಿ ॥೪೩॥**
**ಕರಿಷ್ಯಾಮಿ ಕೃತೋತ್ಸಾಹಾ ಭವಂತು ವಿಗತಜ್ವರಾಃ ।**

ಮಂತ್ರಗಳ ಶಕ್ತಿಯಿಂದಲೂ, ಓಷಧಿಗಳ ಬಲದಿಂದಲೂ ನಿಮಗೆ ಸಹಾಯವನ್ನು ಮಾಡುತ್ತಾ ನಿಮ್ಮನ್ನು ಯಾವಾಗಲೂ ನಾನು ರಕ್ಷಿಸುತ್ತೇನೆ. ಆದುದರಿಂದ ಈಗ ನೀವೆಲ್ಲರೂ ಭಯವನ್ನು ಬಿಟ್ಟು ಧೈರ್ಯವನ್ನೂ ಉತ್ಸಾಹವನ್ನೂ ಪಡೆಯಿರಿ.

|| ವ್ಯಾಸ ಉವಾಚ ||

**ತತಸ್ತೇ ನಿರ್ಭಯಾ ಜಾತಾ ದೈತ್ಯಾಃ ಕಾವ್ಯಸ್ಯ ಸಂಶ್ರಯಾತ್ ॥೪೪॥**
**ದೇವೈಃ ಶ್ರುತಸ್ತು ವೃತ್ತಾಂತಃ ಸರ್ವಶ್ಚಾರಮುಖಾತ್ಕಿಲ ।**

ವ್ಯಾಸಮಹರ್ಷಿಯು ಮುಂದುವರಿದು ಈರೀತಿ ಹೇಳಿದನು—ಆಮೇಲೆ ಆ ಶುಕ್ರಾಚಾರ್ಯನ ಆಶ್ರಯದ ಬೆಂಬಲದಿಂದ ಆ ರಾಕ್ಷಸರೆಲ್ಲರೂ ನಿರ್ಭಯರಾಗಿದ್ದರು. ಅಲ್ಲದೆ ಚಾರರ ಮುಖದಿಂದ ಈ ಸಮಾಚಾರವೆಲ್ಲವೂ ದೇವತೆಗಳೆಲ್ಲರಿಗೂ ಗೊತ್ತಾಯಿತು.

**ತತ್ರ ಸಂಮಂತ್ರ್ಯ ತೇ ದೇವಾಃ ಶಕ್ರೇಣ ಚ ಪರಸ್ಪರಂ ॥೪೫॥**

**ಮಂತ್ರಂ ಚಕ್ರುಃ ಸುಸಂವಿಗ್ನಾಃ ಕಾವ್ಯಮಂತ್ರಪ್ರಭಾವತಃ ।**
**ಯೋದ್ಧುಂ ಗಚ್ಛಾಮಹೇ ತೂರ್ಣಂ ಯಾವನ್ನ ಚ್ಯಾವಯಂತಿ ನೈ ॥೪೬॥**
**ಪ್ರಸಹ್ಯ ಹತ್ವಾ ಶಿಷ್ಟಾಂಸ್ತು ಪಾತಾಲಂ ಪ್ರಾಪಯಾಮಹೇ ।**

ಚಾರರ ಮುಖದಿಂದ ಈ ಸಮಾಚಾರವನ್ನೂ ಶುಕ್ರಾಚಾರ್ಯನ ಮಂತ್ರಾಲೋಚನೆಯ ಸಾಮರ್ಥ್ಯವನ್ನೂ ತಿಳಿದುಕೊಂಡು ಗಾಬರಿಗೊಂಡಿದ್ದ ಆ ದೇವತೆಗಳು, ಇಂದ್ರನೊಡಗೂಡಿ ತಮ್ಮತಮ್ಮಲ್ಲೇ ಮಂತ್ರಾಲೋಚನೆಯನ್ನು ನಡೆಯಿಸಿದರು. ಅಲ್ಲದೆ ರಾಕ್ಷಸರು ಯುದ್ಧದಲ್ಲಿ ಗೆದ್ದಲ್ಲಿ ಅವರು ನಮ್ಮನ್ನು ರಾಜ್ಯದಿಂದ ಹೊರಡಿಸುವುದಕ್ಕಿಂತಲೂ ಮೊದಲೇ ಜಾಗ್ರತೆಯಾಗಿ ನಾವೇ ಅವರನ್ನು ಎದುರಿಸಿ ಯುದ್ಧ ಮಾಡಲು ಹೊರಡೋಣ ಮತ್ತು ನಮ್ಮ ಬಲದಿಂದ ಅವರ ಮುಖಂಡರನ್ನು ಸಂಹರಿಸಿ ಉಳಿದವರನ್ನು ಪಾತಾಳಲೋಕಕ್ಕೆ ಓಡಿಸಿಬಿಡೋಣ ಎಂದು ತೀರ್ಮಾನಿಸಿದರು.

**ದೈತ್ಯಾಞ್ಜಗ್ಮುಸ್ತತೋ ದೇವಾಃ ಸಂರುಷ್ಟಾಃ ಶಸ್ತ್ರಪಾಣಯಃ ॥೪೭॥**
**ಜಗ್ಮುಸ್ತಾನ್ವಿಷ್ಣುಸಹಿತಾ ದಾನವಾನ್ ಹರಿಣೋದಿತಾಃ ।**

ಹೀಗೆಂದು ಸಂತೋಷದಿಂದ ನಿಶ್ಚಯಮಾಡಿಕೊಂಡು ಆ ದೇವತೆಗಳು ಅತ್ಯಂತ ಕೋಪೋದ್ದೀಪಿತರಾಗಿ, ಆಯುಧಗಳನ್ನು ಧರಿಸಿ, ವಿಷ್ಣುವಿನಿಂದ ಕೂಡಿ ಇಂದ್ರನ ಅಪ್ಪಣೆಯಂತೆ ಆ ರಾಕ್ಷಸರೊಡನೆ ಯುದ್ಧಮಾಡಲು ಹೊರಟರು.

**ವಧ್ಯಮಾನಾಸ್ತು ತೇ ದೈತ್ಯಾಃ ಸಂತ್ರಸ್ತಾ ಭಯಪೀಡಿತಾಃ ॥೪೮॥**
**ಕಾವ್ಯಸ್ಯ ಶರಣಂ ಜಗ್ಮೂ ರಕ್ಷ ರಕ್ಷೇತಿ ಚಾ ಬ್ರುವನ್ ।**

ಈ ರೀತಿಯಲ್ಲಿ ಯುದ್ಧಸನ್ನದ್ಧರಾಗಿ ಹೊರಟ ದೇವತೆಗಳಿಂದ ಆ ದೈತ್ಯರೆಲ್ಲರೂ ಸಂಹರಿಸಲ್ಪಡುತ್ತಿಗಲು, ಇದರಿಂದ ಭಯಪಟ್ಟ ರಾಕ್ಷಸರು ನಡುಗುತ್ತಾ ತಮ್ಮ ಗುರುವಾದ ಶುಕ್ರಾಚಾರ್ಯನ ಸಮೀಪವನ್ನೈದಿ ಅವನ ಮರೆಹೊಕ್ಕು "ನಮ್ಮನ್ನು ಕಾಪಾಡು ಕಾಪಾಡೆಂದು" ಪ್ರಾರ್ಥಿಸಿದರು.

**ತಾಞ್ಶುಕ್ರಃ ಪೀಡಿತಾನ್ ದೃಷ್ಟ್ವಾ ದೇವೈರ್ದೈತ್ಯಾನ್ಮಹಾಬಲಾನ್ ॥೪೯॥**
**ಮಾ ಭೈಷ್ಟೇತಿ ವಚಃ ಪ್ರಾಹ ಮಂತ್ರೌಷಧಬಲಾದ್ವಿಭುಃ ।**
**ದೃಷ್ಟ್ವಾ ಕಾವ್ಯಂ ಸುರಾಃ ಸರ್ವೇ ತ್ಯಕ್ತ್ವಾ ತಾನ್ಪ್ರಯಯುಃ ಕಿಲ ॥೫೦॥**

ಮಹಾಬಲಶಾಲಿಗಳಾದರೂ ದೇವತೆಗಳಿಂದ ಹಿಂಸಿಸಲ್ಪಡುತ್ತಿರುವ ಆ ರಾಕ್ಷಸರನ್ನು ಶುಕ್ರಾಚಾರ್ಯನು ನೋಡಿ, ತಾನು ಮಂತ್ರೌಷಧಿಗಳ ಪ್ರಯೋಗದಲ್ಲಿ ಗಟ್ಟಿಗನಾದುದರಿಂದ, ಹೆದರಬೇಡಿರೆಂದು ಆ ದೈತ್ಯರನ್ನು ಸಮಾಧಾನ ಪಡಿಸಿದನು. ದೇವತೆಗಳು ರಾಕ್ಷಸರಿಗೆ ಅಭಯಪ್ರದಾನ ಮಾಡುತ್ತಿರುವ ಆ ಶುಕ್ರಾಚಾರ್ಯನನ್ನು ನೋಡಿ, ಆ ರಾಕ್ಷಸರ ಬೆನ್ನಟ್ಟುವುದನ್ನು ಬಿಟ್ಟು ತಮ್ಮ ಸ್ಥಾನಗಳಿಗೆ ಹಿಂತಿರುಗಿದರು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ದಶಮೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### ॥ ಏಕಾದಶೋಽಧ್ಯಾಯಃ ॥

### ಹನ್ನೊಂದನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ತಥಾಗತೇಷು ದೇವೇಷು ಕಾವ್ಯಸ್ತಾನ್ಪ್ರತ್ಯುವಾಚ ಹ ।**
**ಬ್ರಹ್ಮಣಾ ಪೂರ್ವಮುಕ್ತಂ ಯಚ್ಛೃಣುಧ್ವಂ ದಾನವೋತ್ತಮಾಃ ॥೧॥**

ವ್ಯಾಸಮಹರ್ಷಿಯು ಹೇಳಿದನು—ದೇವತೆಗಳು ವಿಷ್ಣುವಿನ ಸಹಾಯದಿಂದ ಯುದ್ಧಮಾಡಿ ರಾಕ್ಷಸರನ್ನೆಲ್ಲ ನಾಶಮಾಡಲುಪಕ್ರಮಿಸಿದುದನ್ನು ಕಂಡು ರಾಕ್ಷಸರು ಆಗ ಶುಕ್ರಾಚಾರ್ಯನ ಸಮೀಪಕ್ಕೆ ಹೋಗಿ ತಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಲು ಹಾಗೆಯೇ ಆಗಲೆಂದು ಅವನು ಅಭಯಪ್ರದಾನ ಮಾಡಿದನು.

ಆ ಶುಕ್ರಾಚಾರ್ಯನನ್ನು ನೋಡಿ ದೇವತೆಗಳು ಉಳಿದ ರಾಕ್ಷಸರನ್ನೆಲ್ಲಾ ಬಿಟ್ಟುಬಿಟ್ಟು ಹೊರಟುಹೋದರು. ಆಗ ಶುಕ್ರಾಚಾರ್ಯನು ರಾಕ್ಷಸಶ್ರೇಷ್ಠರನ್ನೆಲ್ಲಾ ಕುರಿತು ಹೀಗೆ ಹೇಳಿದನು—ಓ ರಾಕ್ಷಸರೇ, ಹಿಂದೆ ಬ್ರಹ್ಮನಿಂದ ಹೇಳಲ್ಪಟ್ಟ ವಿಚಾರವನ್ನು ಹೇಳುತ್ತೇನೆ, ನೀವೆಲ್ಲರೂ ಕೇಳಿರಿ.

**ವಿಷ್ಣುರ್ದೈತ್ಯವಧೇ ಯುಕ್ತೋ ಹನಿಷ್ಯತಿ ಜನಾರ್ದನಃ ।**
**ವಾರಾಹರೂಪಂ ಸಂಸ್ಥಾಯ ಹಿರಣ್ಯಾಕ್ಷೋ ಯಥಾ ಹತಃ ॥೨॥**

**ಯಥಾ ನೃಸಿಂಹರೂಪೇಣ ಹಿರಣ್ಯಕಶಿಪುರ್ಹತಃ ।**
**ತಥಾ ಸರ್ವಾನ್ಕ್ರತೋತ್ಸಾಹೋ ಹನಿಷ್ಯತಿ ನ ಚಾನ್ಯಥಾ ॥೩॥**

ರಾಕ್ಷಸರನ್ನು ಕೊಲ್ಲಲು, ದುಷ್ಟನಿಗ್ರಹಶಿಷ್ಟರಕ್ಷಣೆಗಳ ಮೂಲಕವಾಗಿ ಧರ್ಮ ವನ್ನು ಕಾಪಾಡಲು ನಿಯುಕ್ತನಾಗಿ ಟೊಂಕಕಟ್ಟಿ ನಿಂತಿರುವ ವಿಷ್ಣುವು ವರಾಹರೂಪ ದಿಂದ ಹಿರಣ್ಯಾಕ್ಷನನ್ನೂ, ನೃಸಿಂಹರೂಪದಿಂದ ಹಿರಣ್ಯಕಶಿಪುವನ್ನೂ ಹೇಗೆ ಸಂಹರಿ ಸಿದನೋ ಅದೇ ರೀತಿಯಾಗಿ ಎಲ್ಲ ರಾಕ್ಷಸರನ್ನೂ ಉತ್ಸಾಹಭರಿತನಾಗಿ ಕೊಂದು ಹಾಕುವನೇ ಹೊರತು ಬೇರೆ ಮಾರ್ಗವಿಲ್ಲವು.

**ನ ಮೇ ಮಂತ್ರಬಲಂ ಸಮ್ಯಕ್ಪ್ರತಿಭಾತಿ ಯಥಾ ಹರಿಂ ।**
**ಜೇತುಂ ಯೂಯಂ ಸಮರ್ಥಾಃ ಸ್ಮ ಮಯಾ ತ್ರಾತಾಃ ಸುರಾನಥ ॥**

ವಿಷ್ಣುವನ್ನು ಜಯಿಸುವಷ್ಟರಮಟ್ಟಿನ ಮಂತ್ರಬಲವು ಈಗ ನನ್ನಲ್ಲಿಲ್ಲವೆಂದು ಕಾಣುತ್ತದೆ. ನನ್ನಿಂದ ಕಾಪಾಡಲ್ಪಟ್ಟ ನೀವು ದೇವತೆಗಳನ್ನು ಜಯಿಸುವುದಕ್ಕೆ ಸಮರ್ಥರಾಗುತ್ತಿದ್ದಿರಿ.

**ತಸ್ಮಾತ್ಕಾಲಂ ಪ್ರತೀಕ್ಷಧ್ವಂ ಕಿಯಂತಂ ದಾನವೋತ್ತಮಾಃ ।**
**ಅಹಮದ್ಯ ಮಹಾದೇವಂ ಮಂತ್ರಾರ್ಥಂ ಪ್ರವ್ರಜಾಮಿ ವೈ ॥೫॥**

ಆದುದರಿಂದ, ಓ ರಾಕ್ಷಸಶ್ರೇಷ್ಠರೇ ನೀವೆಲ್ಲರೂ ಸ್ವಲ್ಪಕಾಲ ಸಮಯವನ್ನು ನಿರೀಕ್ಷಿಸುತ್ತಾ ಇರಿ. ಈಗ ನಾನು ಮಂತ್ರವಿಶೇಷವನ್ನು ಸಂಪಾದಿಸಲು ಮಹೇಶ್ವರ ನಲ್ಲಿಗೆ ಹೋಗತಕ್ಕವನಾಗಿದೇನೆ.

**ಪ್ರಾಪ್ಯ ಮಂತ್ರಾನ್ಮಹಾದೇವಾದಾಗಮಿಷ್ಯಾಮಿ ಸಾಂಪ್ರತಂ ।**
**ಯುಷ್ಮಭ್ಯಂ ತಾನ್ಪ್ರದಾಸ್ಯಾಮಿ ಯಥಾರ್ಥಂ ದಾನವೋತ್ತಮಾಃ॥೬॥**

ಬೇಗನೆ ನಾನು ಮಹಾದೇವನಿಂದ ಮಂತ್ರವಿಶೇಷಗಳನ್ನು ಸಂಪಾದಿಸಿಕೊಂಡು ಬರುವೆನು. ಅವನ್ನು ನಿಮಗೆ ಹಾಗೆಯೇ ಓ ರಾಕ್ಷಸಶ್ರೇಷ್ಠರೇ, ವಾಸ್ತವವಾಗಿ ಕೊಡುವೆನು.

॥ ದೈತ್ಯಾ ಊಚುಃ ॥

**ಪರಾಜಿತಾಃ ಕಥಂ ಸ್ಥಾತುಂ ಪೃಥಿವ್ಯಾಂ ಮುನಿಸತ್ತಮ ।**
**ಶಕ್ತಾ ಭವಾಮೋಽಪ್ಯಬಲಾಸ್ತಾವತ್ಕಾಲಂ ಪ್ರತೀಕ್ಷಿತುಂ ॥೭॥**

ರಾಕ್ಷಸರು ಹೇಳಿದರು—ಓ ತಾಪಸಶ್ರೇಷ್ಠನೇ, ಸೋತುಹೋಗಿರುವ ನಾವು ಈ ಭೂಮಿಯಲ್ಲಿ ಅಷ್ಟುಕಾಲದವರೆಗೆ ಹೇಗೆ ತಾನೇ ಇರಲು ಸಾಧ್ಯವು ? ನಿರ್ಬಲ

ರಾದ ನಾವು ಅಲ್ಲಿಯ ವರೆಗೆ ನಿರೀಕ್ಷಣೆಮಾಡುವುದಕ್ಕೆ ತಾನೇ ಹೇಗೆ ಸಮರ್ಥರಾಗುವೆವು ?

**ನಿಹತಾ ಬಲಿನಃ ಸರ್ವೇ ಕೇಚಿಚ್ಛಿಷ್ಟಾಶ್ಚ ದಾನವಾಃ ।**
**ನಾದ್ಯ ಯುಕ್ತಾಶ್ಚ ಸಂಗ್ರಾಮೇ ಸ್ಥಾತುಮೇವಂ ಸುಖಾವಹಾಃ ॥೮॥**

ನಮ್ಮಲ್ಲಿ ಬಲಶಾಲಿಗಳಾಗಿದ್ದವರೆಲ್ಲರೂ ಸಂಹರಿಸಲ್ಪಟ್ಟರು. ಇತರರು ಕೆಲವರು ಮಾತ್ರ ಉಳಿದಿರುವರು. ಆದುದರಿಂದ ಯುದ್ಧದಲ್ಲಿ ಅವರನ್ನು ಹೀಗೆಯೇ ನಿಂತು ಎದುರಿಸಿ ಈಗಲೂ ನಾವು ಸುಖವನ್ನುಂಟುಮಾಡಲು ಶಕ್ತರಾಗಿಲ್ಲವು.

॥ ಶುಕ್ರ ಉವಾಚ ॥

**ಯಾವದಹಂ ಮಂತ್ರವಿದ್ಯಾಮಾನಯಿಷ್ಯಾಮಿ ಶಂಕರಾತ್ ।**
**ತಾವದ್ಭವದ್ಭಿಃ ಸ್ಥಾತವ್ಯಂ ತಪೋಯುಕ್ತೈಃ ಶಮಾನ್ವಿತೈಃ ॥೯॥**

ಶುಕ್ರಾಚಾರ್ಯನು ಹೇಳಿದನು—ನಾನು ಶಂಕರನಿಂದ ಮಂತ್ರವಿದ್ಯೆಯನ್ನು ಪಡೆದು ಬರುವವರೆಗೂ ನೀವೆಲ್ಲರೂ ಶಾಂತಿಗುಣದಿಂದ ಕೂಡಿ ತಪಸ್ಸನ್ನು ಆಚರಿಸುತ್ತಿರಬೇಕು.

**ಸಾಮದಾನಾದಯಃ ಪ್ರೋಕ್ತಾ ವಿದ್ವದ್ಭಿಃ ಸಮಯೋಚಿತಾಃ ।**
**ದೇಶಂ ಕಾಲಂ ಬಲಂ ವೀರ್ಯೈರ್ಜ್ಞಾತ್ವಾ ಶಕ್ತಿಬಲಂ ಬುಧೈಃ ॥೧೦॥**

ಗಟ್ಟಿಗರೂ ತಿಳಿವಳಿಕೆಯುಳ್ಳವರೂ ಆಗಿರುವವರು ದುರ್ದೈವದಿಂದ ಸೋತಿರುವಾಗ ಆ ಸಮಯಕ್ಕೆ ತಕ್ಕಂತೆ ಹೊಂದಿಸಿಕೊಳ್ಳಲು ಪಂಡಿತರಿಂದ ಸಾಮದಾನಭೇದೋಪಾಯಗಳು ಹೇಳಲ್ಪಟ್ಟಿವೆ. ಶತ್ರುಗಳ ದೇಶ ಕಾಲ ಶಕ್ತಿ ಮಂತ್ರಬಲ ಇವುಗಳನ್ನು ತಿಳಿದು ಮೇಲೆ ಹೇಳಿದ ಉಪಾಯಗಳಿಂದ ಸಮರ್ಥರಾದ ಪ್ರಾಜ್ಞರು ತಮ್ಮನ್ನು ತಾವು ರಕ್ಷಿಸಿಕೊಳ್ಳಬೇಕು.

**ಸೇವಾಥ ಸಮಯೇ ಕಾರ್ಯಾ ಶತ್ರೂಣಾಂ ಶುಭಕಾಮ್ಯಯಾ ।**
**ಸ್ವಶಕ್ತ್ಯುಪಚಯೇ ಕಾಲೇ ಹಂತವ್ಯಾಸ್ತೇ ಮನೀಷಿಭಿಃ ॥೧೧॥**

ಒಳ್ಳೆಯದನ್ನು ಅಪೇಕ್ಷಿಸುವವರು ಸಮಯದಲ್ಲಿ ಶತ್ರುಗಳ ಸೇವೆಯನ್ನೂ ಕೂಡ ಮಾಡಬೇಕು. ಬುದ್ಧಿವಂತರು ತಮ್ಮ ಶಕ್ತಿಯು ಬೆಳೆದಮೇಲೆ ತಕ್ಕ ಸಮಯದಲ್ಲಿ ತಮ್ಮ ಶತ್ರುಗಳನ್ನು ನಾಶಗೊಳಿಸಬೇಕು.

**ತದದ್ಯ ವಿನಯಂ ಕೃತ್ವಾ ಸಾಮಪೂರ್ವಂ ಛಲೇನ ವೈ ।**
**ತಿಷ್ಠಧ್ವಂ ಸ್ವನಿಕೇತೇಷು ಮದಾಗಮನಕಾಂಕ್ಷಯಾ ॥೧೨॥**

ಆದುದರಿಂದ ಈಗ ನೀವು ಸಾಮೋಪಾಯದಿಂದ ಕೂಡಿದ ಮೋಸದಿಂದ ವಿನಯವನ್ನು ಪ್ರಕಟಿಸುತ್ತಾ ನನ್ನ ಆಗಮನವನ್ನು ನಿರೀಕ್ಷಿಸುತ್ತಾ ನಿಮ್ಮನಿಮ್ಮ ಮನೆಗಳಲ್ಲಿ ವಾಸಮಾಡುತ್ತಿರಿ.

**ಪ್ರಾಪ್ಯ ಮಂತ್ರಾನ್ಮಹಾದೇವಾದಾಗಮಿಷ್ಯಾಮಿ ದಾನವಾಃ ।**
**ಯುಧ್ಯಾಮಹೇ ಪುನರ್ದೇವಾನ್ಮಂತ್ರಮಾಸ್ಥಾಯ ವೈ ಬಲಂ ॥೧೩॥**

ಓ ರಾಕ್ಷಸರೇ, ನಾನು ಮಹೇಶ್ವರನಿಂದ ಮಂತ್ರಗಳ ಅನುಗ್ರಹವನ್ನು ಹೊಂದಿ ಹಿಂತಿರುಗಿ ಬರುವೆನು. ಆಗ ಮಂತ್ರಬಲವನ್ನು ಆಶ್ರಯಿಸಿ ದೇವತೆಗಳೊಡನೆ ಯುದ್ಧಮಾಡೋಣ.

**ಇತ್ಯುಕ್ತ್ವಾಥ ಭೃಗುಸ್ತೇಭ್ಯೋ ಜಗಾಮ ಕೃತನಿಶ್ಚಯಃ ।**
**ಮಹಾದೇವಂ ಮಹಾರಾಜ ಮಂತ್ರಾರ್ಥಂ ಮುನಿಸತ್ತಮಃ ॥೧೪॥**

ಓ ಜನಮೇಜಯನೇ, ಈ ರೀತಿಯಾಗಿ ರಾಕ್ಷಸರಿಗೆ ಹೇಳಿ, ಅನಂತರದಲ್ಲಿ ಮುನಿಪುಂಗವನಾದ ಶುಕ್ರಾಚಾರ್ಯನು ದೃಢಮನಸ್ಕನಾಗಿ ಮಹಾದೇವನನ್ನು ಕುರಿತು ಮಂತ್ರವನ್ನು ಸಂಪಾದಿಸಲು ಹೊರಟುಹೋದನು.

**ದಾನವಾಃ ಪ್ರೇಷಯಾಮಾಸುಃ ಪ್ರಹ್ಲಾದಂ ಸುರಸನ್ನಿಧೌ ।**
**ಸತ್ಯವಾದಿನಮವ್ಯಗ್ರಂ ಸುರಾಣಾಂ ಪ್ರತ್ಯಯಪ್ರದಂ ॥೧೫॥**

ಪ್ರಹ್ಲಾದನು, ಯಾವಾಗಲೂ ಸತ್ಯವನ್ನೇ ಹೇಳುವವನೂ, ದೇವತೆಗಳಿಗೆ ನಂಬಿಗೆಯನ್ನುಂಟುಮಾಡಲು ಸಮರ್ಥನೂ, ಗಾಬರಿಗೊಳ್ಳದೆ ಶಾಂತನಾಗಿರುವವನೂ ಆದುದರಿಂದ, ಅವನನ್ನು ಆ ರಾಕ್ಷಸರು ದೇವತೆಗಳ ಬಳಿಗೆ ಸಮಾಧಾನ ಮಾಡಿಕೊಳ್ಳುವುದಕ್ಕಾಗಿ ಕಳುಹಿಸಿದರು.

**ಪ್ರಹ್ಲಾದಸ್ತು ಸುರಾನ್ಪ್ರಾಹ ಪ್ರಶ್ರಯಾವನತೋ ನೃಪಃ ।**
**ಅಸುರೈಃ ಸಹಿತಸ್ತತ್ರ ವಚನಂ ನಮ್ರತಾಯುತಂ ॥೧೬॥**

ಬಳಿಕ ಪ್ರಹ್ಲಾದನು ಕೆಲವು ರಾಕ್ಷಸರ ಪರಿವಾರದಿಂದ ಕೂಡಿ ಹೊರಟು ದೇವತೆಗಳ ಸಮೀಪದಲ್ಲಿ ವಿನಯದಿಂದ ಮರ್ಯಾದೆಯನ್ನು ಪ್ರದರ್ಶಿಸಿ ದೇವತೆಗಳನ್ನು ಕುರಿತು ವಿಧೇಯತೆಯಿಂದ ಈ ಮಾತನ್ನು ಹೇಳಿದನು.

**ನ್ಯಸ್ತಶಸ್ತ್ರಾ ವಯಂ ಸರ್ವೇ ನಿಃಸನ್ನಾಹಾಸ್ತಥೈವ ಚ ।**
**ದೇವಾಸ್ತಪಶ್ಚರಿಷ್ಯಾಮಃ ಸಂವೃತಾ ವಲ್ಕಲೈರ್ಯುತಾಃ ॥೧೭॥**

ಓ ದೇವತೆಗಳಿರಾ, ನಾವೆಲ್ಲರೂ ನಮ್ಮ ಆಯುಧಗಳನ್ನೆಲ್ಲವನ್ನೂ ಬಿಟ್ಟುಬಿಟ್ಟಿರುತ್ತೇವೆ. ಯುದ್ಧಮಾಡಲು ಯಾವ ಸಿದ್ಧತೆಯನ್ನೂ ಮಾಡುವುದಿಲ್ಲವು. ನಾವು ಈಗ ನಾರುಮಡಿಯನ್ನುಟ್ಟು ತಪಸ್ಸನ್ನು ಆಚರಿಸುವವರಾಗಿರುವೆವು.

**ಪ್ರಹ್ಲಾದಸ್ಯ ವಚಃ ಶ್ರುತ್ವಾ ಸತ್ಯಾಭಿವ್ಯಾಹೃತಂ ತು ತತ್ ।**
**ತತೋ ದೇವಾ ನ್ಯವರ್ತಂತ ವಿಜ್ವರಾ ಮುದಿತಾಶ್ಚ ತೇ ॥೧೮॥**

ಪ್ರಹ್ಲಾದನ ಮಾತನ್ನು ಕೇಳಿ ದೇವತೆಗಳು ಅದನ್ನು ನಿಜವಾದುದೆಂದು ತಿಳಿದು ಕೋಪವನ್ನು ಬಿಟ್ಟು ಆತಂಕವಿಲ್ಲದೆ ಸಂತೋಷಗೊಂಡವರಾಗಿ ತಮ್ಮ ಸ್ಥಾನಗಳಿಗೆ ಹಿಂತಿರುಗಿದರು.

**ನ್ಯಸ್ತಶಸ್ತ್ರೇಷು ದೈತ್ಯೇಷು ವಿನಿವೃತ್ತಾಸ್ತದಾ ಸುರಾಃ ।**
**ವಿಸ್ರಬ್ಧಾಃ ಸ್ವಗೃಹಾನ್ಗತ್ವಾ ಕ್ರೀಡಾಸಕ್ತಾಃ ಸುಸಂಸ್ಥಿತಾಃ ॥೧೯॥**

ರಾಕ್ಷಸರೆಲ್ಲರೂ ತಮ್ಮ ತಮ್ಮ ಶಸ್ತ್ರಗಳನ್ನು ಕೆಳಗಿರಿಸಲು ಆಗ ದೇವತೆಗಳು ತಮ್ಮ ಮನೆಗಳಿಗೆ ಹಿಂತಿರುಗಿ, ವಿರಾಮವಾಗಿ, ಆಟಪಾಟಗಳಲ್ಲಿಯೂ ವಿನೋದದಲ್ಲಿಯೂ ನಟ್ಟ ಮನಸ್ಸುಳ್ಳವರಾಗಿ ಕಾಲವನ್ನು ಕಳೆಯತೊಡಗಿದರು.

**ದೈತ್ಯಾ ದಂಭಂ ಸಮಾಲಂಬ್ಯ ತಾಪಸಾಸ್ತಪಿಸಂಯುತಾಃ ।**
**ಕಶ್ಯಪಸ್ಯಾಶ್ರಮೇ ವಾಸಂ ಚಕ್ರುಃ ಕಾವ್ಯಾಗಮೇಚ್ಛಯಾ ॥೨೦॥**

ರಾಕ್ಷಸರೆಲ್ಲರೂ ತಪಸ್ಸೆಂಬ ಧರ್ಮದ ನೆಪದಲ್ಲಿ ಮೋಸವನ್ನವಲಂಬಿಸಿ ಮುನಿಗಳು ಮಾಡುವ ಕೆಲಸಗಳನ್ನು ಮಾಡುವವರಾಗಿ ಕಶ್ಯಪನ ಆಶ್ರಮದಲ್ಲಿ ವಾಸ ಮಾಡುತ್ತಾ ಶುಕ್ರಾಚಾರ್ಯನ ಆಗಮನವನ್ನು ನಿರೀಕ್ಷಿಸುತ್ತಿದ್ದರು.

**ಕಾವ್ಯೋ ಗತ್ವಾಽಥ ಕೈಲಾಸಂ ಮಹಾದೇವಂ ಪ್ರಣಮ್ಯ ಚ ।**
**ಉವಾಚ ವಿಭುನಾ ಪೃಷ್ಟಃ ಕಿಂ ತೇ ಕಾರ್ಯಮಿತಿ ಪ್ರಭುಃ ॥೨೧॥**

ಇತ್ತಲಾಗಿ ಶುಕ್ರಾಚಾರ್ಯನು ಕೈಲಾಸಕ್ಕೆ ಹೋಗಿ ಮಹೇಶ್ವರನನ್ನು ಕಂಡು ನಮಸ್ಕರಿಸಲು, ಈಶ್ವರನು—ನೀನು ಬಂದ ಕೆಲಸವೇನು ಎಂದು ಕೇಳಲು, ಈರೀತಿಯಲ್ಲಿ ಹೇಳಿದನು

**ಮಂತ್ರಾನಿಚ್ಛಾಮ್ಯಹಂ ದೇವ ಯೇ ನ ಸಂತಿ ಬೃಹಸ್ಪತೌ ।**
**ಪರಾಜಯಾಯ ದೇವಾನಾಮಸುರಾಣಾಂ ಜಯಾಯ ಚ ॥೨೨॥**

ಓ ಭಕ್ತಪ್ರಿಯನಾದ ಈಶ್ವರನೇ ನಾನು, ಬೃಹಸ್ಪತಿಯಲ್ಲಿ ಯಾವ ಮಂತ್ರ ಶಕ್ತಿಯಿಲ್ಲವೋ ಅಂತಹ ಮಂತ್ರಗಳನ್ನು ಬೇಡುತ್ತೇನೆ. ಮತ್ತು ಆ ಮಂತ್ರಶಕ್ತಿ ಯಿಂದ ದೇವತೆಗಳು ಸೋಲುವಂತೆಯೂ ರಾಕ್ಷಸರು ಜಯಶಾಲಿಗಳಾಗುವಂತೆಯೂ ಇರಬೇಕು.

॥ ವ್ಯಾಸ ಉವಾಚ ॥

**ತಚ್ಛ್ರುತ್ವಾ ವಚನಂ ತಸ್ಯ ಸರ್ವಜ್ಞಃ ಶಂಕರಃ ಶಿವಃ ।**
**ಚಿಂತಯಾಮಾಸ ಮನಸಾ ಕಿಂ ಕರ್ತವ್ಯಮತಃ ಪರಂ ॥೨೩॥**

ವ್ಯಾಸನು ಹೇಳಿದನು—ಶುಕ್ರಾಚಾರ್ಯನ ಆ ಮಾತನ್ನು ಕೇಳಿ, ಮಂಗಳ ಕರನಾದ, ಎಲ್ಲವನ್ನೂ ತಿಳಿದ ಮಹಾದೇವನು ಈಗ ಮುಂದೆ ಏನನ್ನು ಮಾಡುವು ದೆಂದು ಮನಸ್ಸಿನಲ್ಲಿಯೇ ಯೋಚನೆ ಮಾಡಲಾರಂಭಿಸಿದನು.

**ಸುರೇಷು ದ್ರೋಹಬುದ್ಧ್ಯಾಸೌ ಮಂತ್ರಾರ್ಥಮಿಹ ಸಾಂಪ್ರತಂ ।**
**ಪ್ರಾಪ್ತಃ ಕಾವ್ಯೋ ಗುರುಸ್ತೇಷಾಂ ದೈತ್ಯಾನಾಂ ವಿಜಯಾಯ ಚ ॥**

ದೈತ್ಯರ ಗುರುವಾದ ಈ ಶುಕ್ರಾಚಾರ್ಯನು ದೇವತೆಗಳಿಗೆ ದ್ರೋಹವನ್ನೆ ಣಿಸಿ, ರಾಕ್ಷಸರ ಜಯವನ್ನಿಚ್ಛಿಸಿ, ಮಂತ್ರಬಲವನ್ನು ಯಾಚಿಸಲು ಇಲ್ಲಿಗೆ ಬಂದಿರುವನು.

**ರಕ್ಷಣೀಯಾ ಮಯಾ ದೇವಾ ಇತಿ ಸಂಚಿಂತ್ಯ ಶಂಕರಃ ।**
**ದುಷ್ಕರಂ ವ್ರತಮತ್ಯುಗ್ರಂ ತಮುವಾಚ ಮಹೇಶ್ವರಃ ॥೨೫॥**

ಆದುದರಿಂದ, ಯಾವ ರೀತಿಯಿಂದಲಾದರೂ ದೇವತೆಗಳನ್ನು ಕಾಪಾಡ ಬೇಕೆಂದು ಮನಸ್ಸಿನಲ್ಲಿ ಆಲೋಚಿಸಿ, ಮಂಗಳಕರನಾದ ಈಶ್ವರನು ಅವನನ್ನು ಕುರಿತು ಬಹು ಕಷ್ಟಸಾಧ್ಯವಾಗಿ ಇರುವ ಒಂದು ವ್ರತವನ್ನು ಮಾಡಲು ಹೇಳಿದನು.

**ಪೂರ್ಣಂ ವರ್ಷಸಹಸ್ರಂ ತು ಕಣಧೂಮಮವಾಕ್ಛಿರಾಃ ।**
**ಯದಿ ಪಾಸ್ಯಸಿ ಭದ್ರಂ ತೇ ತತೋ ಮಂತ್ರಾನವಾಪ್ಸ್ಯಸಿ ॥೨೬॥**

ಓ ಶುಕ್ರಾಚಾರ್ಯನೇ, ಒಂದು ಸಾವಿರವರ್ಷ ಸಂಪೂರ್ಣವಾಗಿ ತಲೆಕೆಳಗಾಗಿ ಧೂಮವನ್ನು ಕುಡಿಯುತ್ತಾ ವ್ರತವನ್ನು ನೀನು ಪಾಲಿಸುವುದಾದರೆ ಆಮೇಲೆ ನೀನು ಮಂತ್ರಗಳನ್ನು ಹೊಂದುವೆ. ನಿನಗೆ ಮಂಗಳವಾಗಲಿ ಎಂದು ಹೇಳಿದನು.

**ಇತ್ಯುಕ್ತೋಽಸೌ ಪ್ರಣಮ್ಯೇಶಂ ಬಾಢಮಿತ್ಯಬ್ರವೀದ್ವಚಃ ।**
**ವ್ರತಂ ಚರಾಮ್ಯಹಂ ದೇವ ತ್ವಯಾಽಽಜ್ಞಪ್ತಃ ಸುರೇಶ್ವರ ॥೨೭॥**

ಈಶ್ವರನು ಹೀಗೆ ಹೇಳಲು, ಶುಕ್ರಾಚಾರ್ಯನು ಅವನನ್ನು ನಮಸ್ಕರಿಸಿ, ಎಲೈ ಸುರೇಶ್ವರನೇ, ಒಳ್ಳೆಯದು, ಹಾಗೆಯೇ ಆಗಲಿ, ನೀನು ಆಜ್ಞೆ ಮಾಡಿದಂತೆ ವ್ರತವನ್ನಾಚರಿಸುವೆನೆಂದು ಹೇಳಿದನು.

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾ ಶಂಕರಂ ಕಾವ್ಯಶ್ಚಕಾರ ವ್ರತಮುತ್ತಮಂ ।**
**ಧೂಮಪಾನರತಃ ಶಾಂತೋ ಮಂತ್ರಾರ್ಥಕೃತನಿಶ್ಚಯಃ ॥೨೮॥**

ವ್ಯಾಸಮುನಿಯು ಹೇಳಿದನು—ಶುಕ್ರಾಚಾರ್ಯನು ಶಂಕರನಿಗೆ ಈ ರೀತಿಯಾಗಿ ಹೇಳಿ ಮಂತ್ರವನ್ನು ಪಡೆಯಲು ದೃಢಬುದ್ಧಿಯುಳ್ಳವನಾಗಿ, ಹೊಗೆಯನ್ನು ಪಾನಮಾಡುತ್ತಾ ಸಮಾಧಾನದಿಂದಲೂ, ಶ್ರದ್ಧಾಭಕ್ತಿಗಳಿಂದಲೂ ಆ ವ್ರತವನ್ನು ಮಾಡಿದನು.

**ತತೋ ದೇವಾಃ ಪರಿಜ್ಞಾ(ಯ)ತ್ವಾ ಕಾವ್ಯಂ ವ್ರತರತಂ ತದಾ ।**
**ದೈತ್ಯಾನ್ ದಂಭರತಾಂಶ್ಚೈವ ಬಭೂವುರ್ಮಂತ್ರತತ್ಪರಾಃ ॥೨೯॥**

ಆಮೇಲೆ ದೇವತೆಗಳು, ಶುಕ್ರಾಚಾರ್ಯನು ವ್ರತಾಚರಣೆಯಲ್ಲಿ ನಿರತನಾಗಿರುವುದನ್ನೂ ಮತ್ತು ರಾಕ್ಷಸರು ಮೋಸವನ್ನು ಆಶ್ರಯಿಸಿ ಇರುವುದನ್ನೂ ತಿಳಿದವರಾದರು.

**ವಿಚಾರ್ಯ ಮನಸಾ ಸರ್ವೇ ಸಂಗ್ರಾಮಾಯೋದ್ಯತಾ ನೃಪ ।**
**ಯಯುರ್ಧೃತಾಯುಧಾಸ್ತತ್ರ ಯತ್ರ ತೇ ದಾನವೋತ್ತಮಾಃ ॥೩೦॥**

ಆಗ ದೇವತೆಗಳು ಮಂತ್ರಲಾಭದ ವಿಚಾರವಾಗಿ ಬಹಳವಾಗಿ ಆಲೋಚಿಸಿ, ಯುದ್ಧಸನ್ನದ್ಧರಾಗಿ ಆಯುಧಗಳನ್ನು ಧರಿಸಿ, ರಾಕ್ಷಸರು ವಾಸವಾಗಿರುವ ಸ್ಥಳಕ್ಕೆ ಹೊರಟುಬಂದರು.

**ತಾನಾಗತಾನ್ ಸಮೀಕ್ಷ್ಯಾಥ ಸಾಯುಧಾನ್ದಂಶಿತಾಂಸ್ತಥಾ ।**
**ಆಸಂಸ್ತೇ ಭಯಸಂವಿಗ್ನಾ ದೈತ್ಯಾ ದೇವಾನ್ಸಮಂತತಃ ॥೩೧॥**

ಆಮೇಲೆ ಆ ರಾಕ್ಷಸರು, ಬಲದಿಂದ ಕೊಬ್ಬಿ ಆಯುಧಗಳನ್ನು ಧರಿಸಿ ಯುದ್ಧಸನ್ನದ್ಧರಾಗಿ ಬಂದು ಸುತ್ತಲೂ ಆವರಿಸಿರುವ ದೇವತೆಗಳನ್ನು ನೋಡಿ ಭಯದಿಂದ ಕಂಗೆಟ್ಟರು.

**ಉತ್ಪೇತುಃ ಸಹಸಾ ತೇ ವೈ ಸನ್ನದ್ಧಾನ್ಭಯಕರ್ಶಿತಾಃ ।**
**ಅಬ್ರುವನ್ವಚನಂ ತಥ್ಯಂ ತೇ ದೇವಾನ್ಬಲದರ್ಪಿತಾನ್ ॥೩೨॥**

ಮತ್ತು ಗರ್ವದಿಂದ ಮದಿಸಿ ಯುದ್ಧಸನ್ನದ್ಧರಾಗಿ ನಿಂತಿರುವ ದೇವತೆಗಳನ್ನು ಆ ದೈತ್ಯರು ನೋಡಿ ಭಯಪಟ್ಟು, ಅವರ ಎದುರಿಗೆ ಬಂದು ನಿಂತು ನಿಜವಾದ ಮಾತನ್ನು ಈರೀತಿಯಲ್ಲಿ ನುಡಿದರು.

**ನ್ಯಸ್ತಶಸ್ತ್ರೇ ಭಯವತಿ ಆಚಾರ್ಯೇ ವ್ರತಮಾಸ್ಥಿತೇ ।**
**ದತ್ವಾಽಭಯಂ ಪುರಾ ದೇವಾಃ ಸಂಪ್ರಾಪ್ತಾ ನೋ ಜಿಘಾಂಸಯಾ ॥೩೩॥**

ಓ ದೇವತೆಗಳಿರಾ, ವ್ರತವನ್ನು ಮಾಡುತ್ತಾ ನಮ್ಮ ಗುರುವು ಕುಳಿತಿರುವಾಗ, ನೀವು ಮೊದಲು ನಮಗೆ ಅಭಯಪ್ರದಾನ ಮಾಡಿದ್ದರೂ ಈಗ ನಮ್ಮನ್ನು ಕೊಲ್ಲಬೇಕೆಂದು ಬಂದಿರುವಿರಿ.

**ಸತ್ಯಂ ವಃ ಕ್ವ ಗತಂ ದೇವಾ ಧರ್ಮಶ್ಚ ಶ್ರುತಿನೋದಿತಃ ।**
**ನ್ಯಸ್ತಶಸ್ತ್ರಾ ನ ಹಂತವ್ಯಾ ಭೀತಾಶ್ಚ ಶರಣಂ ಗತಾಃ ॥೩೪॥**

ನಿಮ್ಮ ಸತ್ಯಪರತೆಯ ಧರ್ಮವು ಎಲ್ಲಿಗೆ ಹೋಯಿತು? ವೇದವಿಹಿತವಾದ ಧರ್ಮವನ್ನೂ ನೀವು ಬಿಡುತ್ತಿರುವಿರಿ. ಯುದ್ಧಮಾಡುವುದನ್ನು ನಿಲ್ಲಿಸಿ ಆಯುಧ

ಗಳನ್ನು ಕೆಳಗಿಟ್ಟಿರುವವರನ್ನೂ, ಭಯಗೊಂಡವರನ್ನೂ, ಶರಣಾಗತರಾದವರನ್ನೂ ಕೊಲ್ಲಕೂಡದೆಂಬ ನಿಮ್ಮ ಧರ್ಮವು ಎಲ್ಲಿಗೆ ಹೋಯಿತು ?

॥ ದೇವಾ ಊಚುಃ ॥

**ಭವದ್ಭಿಃ ಪ್ರೇಷಿತಃ ಕಾವ್ಯೋ ಮಂತ್ರಾರ್ಥಂ ಕುಹಕೇನ ಚ ।**
**ತಪೋಜ್ಞಾತಂ ಹಿ ಯುಷ್ಮಾಕಂ ತೇನ ಯುಧ್ಯಾಮ ಏವ ಹಿ ॥೩೫॥**

ನೀವು ಶುಕ್ರಾಚಾರ್ಯನನ್ನು ಮಂತ್ರಬಲವನ್ನು ಸಂಪಾದಿಸಿಕೊಂಡು ಬರಲು ಕಳುಹಿಸಿ ನೀವೂ ಕೂಡ ತಾಪಸರಂತೆ ನಮಗೆ ಮೋಸಪಡಿಸುವುದಕ್ಕಾಗಿ ನಟಿಸುತ್ತಿದ್ದೀರಿ. ಈ ರೀತಿ ದುಷ್ಟ ಅಭಿಪ್ರಾಯವುಳ್ಳ ನಿಮ್ಮನ್ನು ನಾವು ಈ ದುಷ್ಟವಾದ ಕಾರ್ಯದಿಂದಲೇ ಪ್ರತಿಭಟಿಸಬೇಕಾಗಿದೆಯಾದುದರಿಂದ ಈಗ ಯುದ್ಧವನ್ನೇ ಮಾಡುವುದಕ್ಕಾಗಿ ಬಂದಿರುತ್ತೇವೆ. ನಿಮ್ಮ ತಪಸ್ಸಿನ ಉದ್ದೇಶವು ನಮಗೆ ಗೊತ್ತಾಯಿತು.

**ಸಜ್ಜಾ ಭವಂತು ಯುದ್ಧಾಯ ಸಂರಬ್ಧಾಃ ಶಸ್ತ್ರಪಾಣಯಃ ।**
**ಶತ್ರುಶ್ಛಿದ್ರೇಣ ಹಂತವ್ಯ ಏಷ ಧರ್ಮಃ ಸನಾತನಃ ॥೩೬॥**

ಆದುದರಿಂದ ನೀವುಗಳು ಆಯುಧಗಳನ್ನು ಧರಿಸಿ ಯುದ್ಧಕ್ಕೆ ಸಿದ್ಧರಾಗಿರಿ. ಶತ್ರುಗಳನ್ನು, ಇಕ್ಕಟ್ಟಿನ ಸಂದರ್ಭದಲ್ಲಿರುವಾಗಲೇ ನಾಶಮಾಡುವುದು ಪುರಾತನ ಕಾಲದಿಂದಲೂ ಬಂದ ಧರ್ಮವಾಗಿಯೂ ಇದೆ.

॥ ವ್ಯಾಸ ಉವಾಚ ॥

**ತಚ್ಛ್ರುತ್ವಾ ವಚನಂ ದೈತ್ಯಾ ವಿಚಾರ್ಯ ಚ ಪರಸ್ಪರಂ ।**
**ಪಲಾಯನಪರಾಃ ಸರ್ವೇ ನಿರ್ಗತಾ ಭಯವಿಹ್ವಲಾಃ ॥೩೭॥**

ವ್ಯಾಸನು ಹೇಳಿದನು—ಆ ಮಾತನ್ನು ಕೇಳಿ ರಾಕ್ಷಸರು ತಮ್ಮತಮ್ಮಲ್ಲಿ ಆಲೋಚಿಸಿ, ಭಯದಿಂದ ವ್ಯಾಕುಲರಾಗಿ ಓಡಿಹೋಗಬೇಕೆಂಬ ಉದ್ದೇಶದಿಂದ ಈಚೆಗೆ ಹೊರಟುಬಂದರು.

**ಶರಣಂ ದಾನವಾ ಜಗ್ಮುರ್ಭೀತಾಸ್ತೇ ಕಾವ್ಯಮಾತರಂ ।**
**ದೃಷ್ಟ್ವಾ ತಾನತಿಸಂತಪ್ತಾನಭಯಂ ಚ ದದಾವಥ ॥೩೮॥**

ರಾಕ್ಷಸರು ಈರೀತಿಯಲ್ಲಿ ಭಯಗೊಂಡು, ಶುಕ್ರಾಚಾರ್ಯನ ತಾಯಿಯ ಬಳಿಗೆ ಹೋಗಿ ಅವಳ ಮರೆಹೊಕ್ಕರು. ಆಗ ಅವಳು ಅತಿಯಾಗಿ ಸಂಕಟಪಡುತ್ತಿರುವ ದೈತ್ಯರನ್ನು ನೋಡಿ ಕನಿಕರದಿಂದ ಅವರಿಗೆ ಅಭಯವನ್ನು ನೀಡಿದಳು.

|| ಕಾವ್ಯಮಾತೋವಾಚ ||

**ನ ಭೇತವ್ಯಂ ನ ಭೇತವ್ಯಂ ಭಯಂ ತ್ಯಜತ ದಾನವಾಃ ।**
**ಮತ್ಸನ್ನಿಧೌ ವರ್ತಮಾನಾನ್ನ ಭೀರ್ಭವಿತುಮರ್ಹತಿ ॥೩೯॥**

ಶುಕ್ರಾಚಾರ್ಯನ ತಾಯಿಯ ಹೇಳಿದಳು—ರಾಕ್ಷಸರೇ, ಹೆದರಬೇಡಿ, ಹೆದರಬೇಡಿ, ಭಯವನ್ನು ಬಿಟ್ಟುಬಿಡಿ. ನನ್ನ ಬಳಿಯಲ್ಲಿರುವಾಗ ನಿಮಗೆ ಏನೂ ಭಯವಿಲ್ಲವು.

**ತಚ್ಛ್ರುತ್ವಾ ವಚನಂ ದೈತ್ಯಾಃ ಸ್ಥಿತಾಸ್ತತ್ರ ಗತವ್ಯಥಾಃ ।**
**ನಿರಾಯುಧಾ ಹ್ಯಸಂಭ್ರಾಂತಾಸ್ತತ್ರಾಶ್ರಮವರೇಽಸುರಾಃ ॥೪೦॥**

ಆಗ ದಾನವರು ಅವಳ ಮಾತನ್ನು ಕೇಳಿ ದುಃಖವನ್ನು ಬಿಟ್ಟು ತಮ್ಮ ಆಯುಧಗಳನ್ನೂ ತ್ಯಜಿಸಿ ನಿರ್ಭಯರಾಗಿ ಆ ಶ್ರೇಷ್ಠವಾದ ಆಶ್ರಮದಲ್ಲಿ ಇದ್ದರು.

**ದೇವಾಸ್ತಾನ್ವಿದ್ರುತಾನ್ವೀಕ್ಷ್ಯ ದಾನವಾಂಸ್ತೇ ಪದಾನುಗಾಃ ।**
**ಅಭಿಜಗ್ಮುಃ ಪ್ರಸಹ್ಯೈತಾನವಿಚಾರ್ಯ ಬಲಾಬಲಂ ॥೪೧॥**

ಆ ಬಳಿಕ ದೇವತೆಗಳು, ರಾಕ್ಷಸರು ಹೆದರಿ ಓಡಿಹೋದುದನ್ನು ಕಂಡು ಅವರ ಹೆಜ್ಜೆಗಳ ಗುರುತನ್ನೇ ಅನುಸರಿಸಿ ಹೋಗಿ ತಮ್ಮ ಮತ್ತು ಅವರ ಶಕ್ತಿ ಬೆಂಬಲಗಳ ತಾರತಮ್ಯಗಳನ್ನು ಸ್ವಲ್ಪವೂ ಯೋಚಿಸದೆ ಮುಂದೆನುಗ್ಗಿ ಅವರ ಮೇಲೆ ಬಿದ್ದರು.

**ತತ್ರಾಽಽಗತಾಃ ಸುರಾಃ ಸರ್ವೇ ಹಂತುಂ ದೈತ್ಯಾನ್ಸಮುದ್ಯತಾಃ ।**
**ವಾರಿತಾಃ ಕಾವ್ಯಮಾತ್ರಾಪಿ ಜಘ್ನುಸ್ತಾನಾಶ್ರಮಸ್ಥಿತಾನ್ ॥೪೨॥**

ದೇವತೆಗಳೆಲ್ಲರೂ ಅಲ್ಲಿಗೆ ಬಂದು ಶುಕ್ರನ ತಾಯಿಯು ಬೇಡವೆಂದು ತಡೆದರೂ ಲೆಕ್ಕಿಸದೆ ಆಶ್ರಮವಾಸಿಗಳಾದ ರಾಕ್ಷಸರನ್ನು ಹೊಡೆದು ಕೊಲ್ಲಲು ಪ್ರಾರಂಭಿಸಿದರು.

**ಹನ್ಯಮಾನಾನ್ಸುರೈರ್ದೃಷ್ಟ್ವಾ ಕಾವ್ಯಮಾತಾsತಿವೇಪಿತಾ ।**
**ಉವಾಚ ಸರ್ವಾನ್ ಸನಿದ್ರಾಂಸ್ತಪಸಾ ವೈ ಕರೋಮ್ಯಹಂ ॥೪೩॥**

ಈ ರೀತಿಯಲ್ಲಿ ರಾಕ್ಷಸರು ದೇವತೆಗಳಿಂದ ಕೊಲ್ಲಲ್ಪಡುತ್ತಿರುವುದನ್ನು ಕಂಡು ಶುಕ್ರನ ತಾಯಿಯು, ಕೋಪಾವೇಶದಿಂದ ಶರೀರವು ಕಂಪಿಸುತ್ತಿರಲು, ಎಲ್ಲರನ್ನೂ ನಿದ್ರೆಯಿಂದ ಆವರಿಸಿದವರನ್ನಾಗಿ ಮಾಡುತ್ತೇನೆಂದು ಸಂಕಲ್ಪಿಸಿ ಹೇಳಿದಳು.

**ಇತ್ಯುಕ್ತ್ವಾ ಪ್ರೇರಿತಾ ನಿದ್ರಾ ತಾನಾಗತ್ಯ ಪಪಾತ ಚ ।**
**ಸೇಂದ್ರಾ ನಿದ್ರಾವಶಂ ಯಾತಾ ದೇವಾ ಮೂಕವದಾಸ್ಥಿತಾಃ ॥೪೪॥**

ಈ ರೀತಿಯಾಗಿ ಹೇಳಿ ಅವಳು ನಿದ್ರೆಯನ್ನು ಪ್ರೇರಿಸಲು ಆ ನಿದ್ರೆಯು ಬಂದು ಎಲ್ಲರನ್ನೂ ಆವರಿಸಿತು. ಇಂದ್ರಸಹಿತರಾದ ಆ ದೇವತೆಗಳು ನಿದ್ರೆಗೆ ವಶರಾಗಿ ಮೂಕರಂತೆ ಆದರು.

**ಇಂದ್ರಂ ನಿದ್ರಾಜಿತಂ ದೃಷ್ಟ್ವಾ ದೀನಂ ವಿಷ್ಣುರಭಾಷತ ।**
**ಮಾಂ ತ್ವಂ ಪ್ರವಿಶ ಭದ್ರಂ ತೇ ನಯೇ ತ್ವಾಂ ಚ ಸುರೋತ್ತಮ ॥**

ನಿದ್ರಾಪರವಶನಾಗಿದೀನನಾಗಿರುವ ಇಂದ್ರನನ್ನು ನೋಡಿ ವಿಷ್ಣುವು ಅವನನ್ನು ಕುರಿತು ಎಲೈ ಇಂದ್ರನೇ ನೀನು ನನ್ನಲ್ಲಿ ಪ್ರವೇಶಮಾಡು. ನಾನು ನಿನ್ನನ್ನು ಬೇರೆ ಕಡೆಗೆ ಕರೆದೊಯ್ಯುತ್ತೇನೆ. ನಿನಗೆ ಮಂಗಳವಾಗುತ್ತದೆ ಎಂದು ಹೇಳಿದನು.

**ಏವಮುಕ್ತಸ್ತತೋ ವಿಷ್ಣುಂ ಪ್ರವಿವೇಶ ಪುರಂದರಃ ।**
**ನಿರ್ಭಯೋ ಗತನಿದ್ರಶ್ಚ ಬಭೂವ ಹರಿರಕ್ಷಿತಃ ॥೪೬॥**

ವಿಷ್ಣುವು ಹೀಗೆ ಹೇಳಲು, ಆಗ ಇಂದ್ರನು ಅವನನ್ನು ಪ್ರವೇಶಿಸಿದನು. ವಿಷ್ಣುವಿನಿಂದ ರಕ್ಷಿತನಾದ ಆ ಇಂದ್ರನು ಭಯರಹಿತನೂ, ನಿದ್ರೆಯಿಲ್ಲದವನೂ ಆದನು.

**ರಕ್ಷಿತಂ ಹರಿಣಾ ದೃಷ್ಟ್ವಾ ಶಕ್ರಂ ತತ್ರ ಗತವ್ಯಥಂ ।**
**ಕಾವ್ಯಮಾತಾ ತತಃ ಕ್ರುದ್ಧಾ ವಚನಂ ಚೇದಮಬ್ರವೀತ್ ॥೪೭॥**

ಆಗಲಾ ಶುಕ್ರನ ತಾಯಿಯು, ಇಂದ್ರನು ವಿಷ್ಣುವಿನಿಂದ ರಕ್ಷಿತನಾಗಿ ದುಃಖ ರಹಿತನಾಗಿರುವುದನ್ನು ನೋಡಿ ಬಹಳ ಕೋಪಗೊಂಡು ಈ ಮಾತನ್ನು ಹೇಳಿದಳು.

**ಮಘವಂಸ್ತ್ವಾಂ ಭಕ್ಷಯಾಮಿ ಸವಿಷ್ಣುಂ ವೈ ತಪೋಬಲಾತ್ ।**
**ಪಶ್ಯತಾಂ ಸರ್ವದೇವಾನಾಮೀದೃಶಂ ಮೇ ತಪೋಬಲಂ ॥೪೮॥**

ಓ ಇಂದ್ರನೇ ನಾನು ನನ್ನ ತಪಸ್ಸಿನ ಬಲದಿಂದ ಎಲ್ಲ ದೇವತೆಗಳೂ ನೋಡು ತ್ತಿರುವಂತೆಯೇ ವಿಷ್ಣುಸಹಿತವಾಗಿ ನಿನ್ನನ್ನು ತಿಂದುಬಿಡುವೆನು. ಇಂತಹ ತಪಸ್ಸಿನ ಶಕ್ತಿಯು ನನ್ನಲ್ಲಿದೆ ಎಂದಳು.

॥ ವ್ಯಾಸ ಉವಾಚ ॥

**ಇತ್ಯುಕ್ತೌ ತು ತಯಾ ದೇವೌ ವಿಷ್ಣ್ವಿಂದ್ರೌ ಯೋಗವಿದ್ಯಯಾ ।**
**ಅಭಿಭೂತೌ ಮಹಾತ್ಮಾನೌ ಸ್ತಬ್ಧೌ ತೌ ಸಂಬಭೂವತುಃ ॥೪೯॥**

ಆ ಶುಕ್ರಾಚಾರ್ಯನ ತಾಯಿಯು ಸಂಕಲ್ಪಿಸಿ ಹೀಗೆ ಹೇಳಲು, ವಿಷ್ಣು ಇಂದ್ರರು ಅವಳ ಯೋಗವಿದ್ಯೆಯ ಮಹಿಮೆಯಿಂದ ಆವರಿಸಲ್ಪಟ್ಟವರಾಗಿ, ಮಹಾತ್ಮ ರಾದರೂ, ಚಲಿಸದಂತೆ ಸ್ತಬ್ಧರಾದರು.

**ವಿಸ್ಮಿತಾಸ್ತು ತದಾ ದೇವಾ ದೃಷ್ಟ್ವಾ ತಾವತಿಬಾಧಿತೌ ।**
**ಚಕ್ರುಃ ಕಿಲಕಿಲಾಶಬ್ದಂ ತತಸ್ತೇ ದೀನಮಾನಸಾಃ ॥೫೦॥**

ಆಗಲಾ ದೇವತೆಗಳು ಬಹಳವಾಗಿ ತೊಂದರೆಪಡುತ್ತಿರುವ ವಿಷ್ಣು ಇಂದ್ರ ರನ್ನು ನೋಡಿ ಆಶ್ಚರ್ಯವ್ಯಸನಗಳಿಂದ ಕೂಡಿ ಮಾತನಾಡಲಾರದೆ ಕಿಲಕಿಲ ಎಂದು ಶಬ್ದವನ್ನು ಮಾಡಿದರು.

**ಕ್ರೋಶಮಾನಾನ್ಸುರಾನ್ ದೃಷ್ಟ್ವಾ ವಿಷ್ಣುಂ ಪ್ರಾಹ ಶಚೀಪತಿಃ ।**
**ವಿಶೇಷೇಣಾಭಿಭೂತೋಽಸ್ಮಿ ತ್ವತ್ತೋಽಹಂ ಮಧುಸೂದನ ॥೫೧॥**

ಆ ರೀತಿಯಲ್ಲಿ ಕೂಗುತ್ತಿರುವ ದೇವತೆಗಳನ್ನು ಕಂಡು ಇಂದ್ರನು ವಿಷ್ಣುವನ್ನು ಕುರಿತು ಹೀಗೆ ಹೇಳಿದನು—ಮಧುವೆಂಬ ರಾಕ್ಷಸನನ್ನು ಸಂಹರಿಸಿದ ವಿಷ್ಣುವೇ, ನಿನಗಿಂತಲೂ ನಾನು ಹೆಚ್ಚು ಅಶಕ್ತನಾಗಿ ಬಿಟ್ಟಿರುತ್ತೇನೆ.

**ಜಹ್ಯೇನಾಂ ತರಸಾ ವಿಷ್ಣೋ ಯಾವನ್ನೌ ನ ದಹೇತ್ಪ್ರಭೋ ।**
**ತಪಸಾ ದರ್ಪಿತಾಂ ದುಷ್ಟಾಂ ಮಾ ವಿಚಾರಯ ಮಾಧವ ॥೫೨॥**

ಓ ಸರ್ವಶಕ್ತನಾದ ಮಾಧವನೇ, ಬೇಗನೆ ಇವಳು ನಮ್ಮನ್ನು ಸುಡುವುದಕ್ಕೆ ಮೊದಲೇ ನೀನೇ ಇವಳನ್ನು ಕೊಂದುಹಾಕಿಬಿಡು. ತಪಸ್ಸಿನ ಶಕ್ತಿಯಿಂದ ಕೊಬ್ಬಿದ ಈ ದುಷ್ಟಳನ್ನು, ಹೆಂಗಸೆಂಬ ಧರ್ಮವಿಚಾರವನ್ನು ನೋಡಿ, ಕೊಲ್ಲದೆ ಬಿಡಬೇಡ.

**ಇತ್ಯುಕ್ತೋ ಭಗವಾನ್ವಿಷ್ಣುಃ ಶಕ್ರೇಣ ಪ್ರಥಿತೇನ ಚ ।**
**ಚಕ್ರಂ ಸಸ್ಮಾರ ತರಸಾ ಘೃಣಾಂ ತ್ಯಕ್ತ್ವಾಥ ಮಾಧವಃ ॥೫೩॥**

ಆ ಬಳಿಕ ವಿಷ್ಣುವು, ಪ್ರಖ್ಯಾತನಾದ ಇಂದ್ರನ ಈ ಮಾತನ್ನು ಕೇಳಿ ತತ್‌ಕ್ಷಣವೇ ಅವಳ ವಿಷಯದಲ್ಲಿ ಕರುಣೆಯನ್ನು ತ್ಯಜಿಸಿ, ತನ್ನ ಚಕ್ರಾಯುಧವನ್ನು ನೆನಸಿದನು.

**ಸ್ಮೃತಮಾತ್ರಂ ತು ಸಂಪ್ರಾಪ್ತಂ ಚಕ್ರಂ ವಿಷ್ಣುವಶಾನುಗಂ ।**
**ದಧಾರ ಚ ಕರೇ ಕ್ರುದ್ಧೋ ವಧಾರ್ಥಂ ಶಕ್ರನೋದಿತಃ ॥೫೪॥**

ವಿಷ್ಣುವಿನ ವಶವರ್ತಿಯಾದ ಆ ಸುದರ್ಶನಚಕ್ರವು ಸ್ಮರಣಮಾತ್ರದಿಂದಲೇ ಪ್ರಾಪ್ತವಾಯಿತು. ಇಂದ್ರನಿಂದ ಪ್ರೇರಿತನಾಗಿ ವಿಷ್ಣುವು, ಕೋಪಗೊಂಡು ಅವಳ ಸಂಹಾರಕ್ಕಾಗಿ ಆ ಚಕ್ರವನ್ನು ಕೈಯಲ್ಲಿ ಧರಿಸಿದನು.

**ಗೃಹೀತ್ವಾ ತತ್ಕರೇ ಚಕ್ರಂ ಶಿರಶ್ಚಿಚ್ಛೇದ ರಂಹಸಾ ।**
**ಹತಾಂ ದೃಷ್ಟ್ವಾ ತು ತಾಂ ಶಕ್ರೋ ಮುದಿತಶ್ಚಾಭವತ್ತದಾ ॥೫೫॥**

ವಿಷ್ಣುವು ತನ್ನ ಹಸ್ತದಲ್ಲಿ ಆ ಚಕ್ರವನ್ನು ತೆಗೆದುಕೊಂಡು ಬೇಗನೆ ಆ ಶುಕ್ರಾಚಾರ್ಯನ ತಾಯಿಯ ತಲೆಯನ್ನು ತುಂಡರಿಸಿದನು. ಅದರಿಂದ ಅವಳು ಮೃತಳಾದುದನ್ನು ಕಂಡು ಇಂದ್ರನು ಬಹಳಸಂತೋಷಪಟ್ಟನು.

**ದೇವಾಶ್ಚಾತೀವ ಸಂತುಷ್ಟಾ ಹರಿಂ ಜಯ ಜಯೇತಿ ಚ ।**
**ತುಷ್ಟುವುರ್ಮುದಿತಾಸ್ಸರ್ವೇ ಸಂಜಾತಾ ವಿಗತಜ್ವರಾಃ ॥೫೬॥**

ಆ ದೇವತೆಗಳೂ ಶುಕ್ರಮಾತೆಯ ಸಂಹಾರದಿಂದ ತುಂಬ ಸಂತೃಪ್ತಿಯನ್ನು ಪಡೆದರು. ಮತ್ತು ಈ ರೀತಿಯಲ್ಲಿ ಸಂತೋಷಗೊಂಡ ದೇವತೆಗಳು ನಿರಾಬಾಧಿತರಾಗಿ ಜಯಶಬ್ದಗಳಿಂದ ವಿಷ್ಣುವನ್ನು ಸ್ತೋತ್ರಮಾಡಿದರು.

ಇಂದ್ರಾವಿಷ್ಣೂ ತು ಸಂಜಾತೌ ತತ್ಕ್ಷಣಾದ್ಧೃದಯವ್ಯಥೌ ।
ಸ್ತ್ರೀವಧಾಚ್ಛಂಕಮಾನೌ ತು ಭೃಗೋಃ ಶಾಪಂ ದುರತ್ಯಯಂ ॥೫೭॥

ಆದರೆ ಆ ವಿಷ್ಣು ಇಂದ್ರರು ಆಕ್ಷಣದಿಂದಲೇ, ಸ್ತ್ರೀವಧೆಯನ್ನು ಮಾಡಿದುದಕ್ಕಾಗಿ ಯೋಚಿಸುತ್ತಾ ಅದರಿಂದುಂಟಾದ ಪಾಪದಿಂದ ಪಶ್ಚಾತ್ತಾಪವುಳ್ಳವರಾದರು. ಮತ್ತು ಪತ್ನಿಯ ಕೊಲೆಯಿಂದ ಕೋಪಗೊಳ್ಳುವ ಭೃಗುಮಹರ್ಷಿಯು ಕೊಡಬಹುದಾದ ಶಾಪವು ಮೀರಲಸಾಧ್ಯವಾದುದೆಂಬುದನ್ನು ಭಾವಿಸುತ್ತಾ ಆ ಆತಂಕದಿಂದುಂಟಾದ ಹೃದಯವೇದನೆಯುಳ್ಳವರಾದರು.

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ
ಏಕಾದಶೋಽಧ್ಯಾಯಃ.

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### ॥ ದ್ವಾದಶೋಽಧ್ಯಾಯಃ ॥

### ಹನ್ನೆರಡನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ತಂ ದೃಷ್ಟ್ವಾ ತು ವಧಂ ಘೋರಂ ಚುಕ್ರೋಧ ಭಗವಾನ್ಭೃಗುಃ ।**
**ವೇಪಮಾನೋಽತಿದುಃಖಾರ್ತಃ ಪ್ರೋವಾಚ ಮಧುಸೂದನಂ ॥೧॥**

ವ್ಯಾಸಮಹರ್ಷಿಯು ಹೇಳಿದನು—ಮಹಾಮಹಿಮಶಾಲಿಯಾದ ಭೃಗುವು ಭಯಂಕರವಾದ ಆ ವಧೆಯನ್ನು ಕಂಡು ಮಿತಿಮೀರಿದ ಶೋಕದಿಂದ ಶರೀರವೆಲ್ಲವೂ ಕಂಪಿಸುತ್ತಿರಲು, ಕೋಪೋದ್ದೀಪಿತನಾಗಿ ವಿಷ್ಣುವನ್ನು ಕುರಿತು ಹೀಗೆ ಹೇಳಿದನು.

॥ ಭೃಗುರುವಾಚ ॥

**ಅಕೃತಂ ತೇ ಕೃತಂ ವಿಷ್ಣೋ ಜಾನನ್ಪಾಪಂ ಮಹಾಮತೇ ।**
**ವಧೋಽಯಂ ವಿಪ್ರಜಾತಾಯಾ ಮನಸಾ ಕರ್ತುಮಕ್ಷಮಃ ॥೨॥**

ಎಲೈ ವಿಷ್ಣುವೇ, ನೀನು ಮಹಾಬುದ್ಧಿಶಾಲಿಯೂ, ತಿಳಿವಳಿಕೆಯುಳ್ಳವನೂ ಆಗಿದ್ದರೂ ಮಾಡಬಾರದ ಈ ಪಾಪಕೃತ್ಯವನ್ನು ಮಾಡಿರುತ್ತೀಯೆ. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ ಇವಳ ವಧೆಯನ್ನು ಮನಸ್ಸಿನಲ್ಲಿಯೂ ಕೂಡ ಯೋಚಿಸುವುದು ಯುಕ್ತವಲ್ಲ. ಹೀಗಿರುವಲ್ಲಿ ಈ ವಧೆಯು ಪಾಪಕಾರ್ಯವೆಂದು ತಿಳಿದಿದ್ದರೂ ನೀನು ಇಂತಹ ಅಕಾರ್ಯವನ್ನು ಮಾಡಿರುತ್ತೀಯೆ.

**ಆಖ್ಯಾತಸ್ತ್ವಂ ಸತ್ತ್ವಗುಣಃ ಸ್ಮೃತೋ ಬ್ರಹ್ಮಾ ಚ ರಾಜಸಃ ।**
**ತಥಾಽಸೌ ತಾಮಸಃ ಶಂಭುರ್ವಿಪರೀತಂ ಕಥಂ ಸ್ಮೃತಂ ॥೩॥**

ನೀನು ಸತ್ತ್ವಗುಣವೇ ಪ್ರಧಾನವಾಗಿ ಉಳ್ಳವನಾಗಿರುವೆಯೆಂದು ಪ್ರಸಿದ್ಧಿಯು. ಹಾಗೆಯೇ ರಜೋಗುಣವು ಬ್ರಹ್ಮನಲ್ಲಿ ಪ್ರಧಾನವಾಗಿರುತ್ತದೆ ಎಂದೂ ನಾಶಕಾರಣವಾದ ತಮೋಗುಣವು ಈಶ್ವರನಲ್ಲಿ ಮುಂದಾಗಿರುತ್ತದೆ ಎಂದೂ ಹೇಳಲ್ಪಟ್ಟಿದೆ. ಈ ಪ್ರಸಿದ್ಧಿಗೆ ವಿರೋಧವಾಗಿ ಅಂತಹ ತಾಮಸಗುಣವು ಸತ್ತ್ವಗುಣದಿಂದ ಕೂಡಿರುವ ನಿನ್ನಲ್ಲಿ ಹೇಗೆ ಪ್ರಬಲವಾಗಿ ಉಂಟಾಯಿತು ? ಇಂತಹ ಪಾಪಕೆಲಸವನ್ನು ನೀನು ಮಾಡಬಹುದೇ ?

**ತಾಮಸಸ್ತ್ವಂ ಕಥಂ ಜಾತಃ ಕೃತಂ ಕರ್ಮಾತಿನಿಂದಿತಂ ।**
**ಅವಧ್ಯಾ ಸ್ತ್ರೀ ತ್ವಯಾ ವಿಷ್ಣೋ ಹತಾ ಕಸ್ಮಾನ್ನಿರಾಗಸಾ ॥೪॥**

ಓ ವಿಷ್ಣುವೇ ನೀನು ತಾಮಸಪ್ರವೃತ್ತಿಯುಳ್ಳವನಾಗಿ ಹೇಗೆ ಪರಿಣಾಮವನ್ನು ಹೊಂದಿದೆ ? ಸ್ತ್ರೀಯು ವಧಾರ್ಹಳಲ್ಲವು. ಆದರಲ್ಲೂ ಏನೂ ತಪ್ಪಿಲ್ಲದೆ ಇರತಕ್ಕ ಹೆಂಗಸಿನ ವಧೆಯೆಂಬ ಮಹಾನಿಂದಿತವಾದ ಪಾಪಕಾರ್ಯವನ್ನು ನೀನು ಏತಕ್ಕೆ ಮಾಡಿರುತ್ತೀಯೆ ?

**ಶಪಾಮಿ ತ್ವಾಂ ದುರಾಚಾರಂ ಕಿಮನ್ಯತ್ಪ್ರಕರೋಮಿ ತೇ ।**
**ವಿಧುರೋಽಹಂ ಕೃತಃ ಪಾಪ ತ್ವಯಾಽಹಂ ಶಕ್ರಕಾರಣಾತ್ ॥೫॥**

ಈ ದುರಾಚಾರಮಾಡಿದ ನಿನ್ನನ್ನು ಶಪಿಸುವುದನ್ನು ಬಿಟ್ಟು ನಾನು ಇನ್ನೇನನ್ನು ತಾನೇ ಮಾಡಲಿ ? ಈಗ ನಾನು ಪಾಪಿಯಾದ ನಿನ್ನಿಂದ ಇಂದ್ರನಿಗೋಸ್ಕರವಾಗಿ ಪತ್ನಿಯಿಲ್ಲದವನಾಗಿ ಮಾಡಲ್ಪಟ್ಟಿರುತ್ತೇನೆ.

**ನ ಶಪೇಽಹಂ ತಥಾ ಶಕ್ರಂ ಶಪೇ ತ್ವಾಂ ಮಧುಸೂದನ ।**
**ಸದಾ ಛಲಪರೋಽಸಿ ತ್ವಂ ಕೀಟಯೋನಿರ್ದುರಾಶಯಃ ॥೬॥**

ನಾನು ಇದಕ್ಕಾಗಿ ನಿನ್ನನ್ನು ಶಪಿಸುವಷ್ಟುಮಟ್ಟಿಗೆ ಇಂದ್ರನನ್ನು ಶಪಿಸುವುದಿಲ್ಲವು. ಎಲೈ ಮಧುಸೂದನನೇ, ಯಾವಾಗಲೂ ನೀನು ಕೃಷ್ಣಸರ್ಪದಂತೆ ಹಟದಿಂದಲೂ ಮೋಸದಿಂದಲೂ ಹಗೆಯನ್ನು ತೀರಿಸಿಕೊಳ್ಳುವ ಅಭಿಪ್ರಾಯವುಳ್ಳವನಾಗಿರುವೆ.

**ಯೇ ಚ ತ್ವಾಂ ಸಾತ್ತ್ವಿಕಂ ಪ್ರಾಹುಸ್ತೇ ಮೂರ್ಖಾ ಮುನಯಃ ಕಿಲ ।**
**ತಾಮಸಸ್ತ್ವಂ ದುರಾಚಾರಃ ಪ್ರತ್ಯಕ್ಷಂ ಮೇ ಜನಾರ್ದನ ॥೭॥**

ಯಾರು ನಿನ್ನನ್ನು ಸಾತ್ವಿಕನೆಂದು ಹೇಳುವರೋ ಅಂತಹವರು ಋಷಿಗಳು ಎನಿಸಿಕೊಂಡಿರಬಹುದಾದರೂ ಮೂರ್ಖರಲ್ಲದೆ ಮತ್ತೇನು? ಏತಕ್ಕೆಂದರೆ, ನೀನು ತಾಮಸನೆಂದೂ ಕೆಡಕುಮಾಡುವ ನಡತೆಯುಳ್ಳವನೆಂದೂ ಈಗ ನನಗೆ ಪ್ರತ್ಯಕ್ಷವಾಗಿಯೇ ಕಾಣುತ್ತಿದೆ.

**ಅವತಾರಾ ಮೃತ್ಯುಲೋಕೇ ಸಂತು ಮಚ್ಛಾಪಸಂಭವಾಃ ।**
**ಪ್ರಾಯೋ ಗರ್ಭಭವಂ ದುಃಖಂ ಭುಂಕ್ಷ್ವ ಪಾಪಾಜ್ಜನಾರ್ದನ ॥೮॥**

ನನ್ನ ಶಾಪದಿಂದ ನಿನಗೆ ಮರಣವೇ ಧರ್ಮವಾಗಿ ಉಳ್ಳ ಮನುಷ್ಯಲೋಕದಲ್ಲಿ ಅನೇಕವಾದ ಅವತಾರಗಳು ಉಂಟಾಗಲಿ. ಅಲ್ಲದೆ ಈ ನಿನ್ನ ಪಾಪಕಾರ್ಯದ ಫಲವಾಗಿ ನನ್ನ ಶಾಪದಿಂದ ಎಲೈ ಜನಾರ್ದನನೇ ನೀನು ಗರ್ಭವಾಸದ ದುಃಖವನ್ನೂ ಬಹುವಾಗಿ ಅನುಭವಿಸುವವನಾಗು.

॥ ವ್ಯಾಸ ಉವಾಚ ॥

**ತತಸ್ತೇನಾಥ ಶಾಪೇನ ನಷ್ಟೇ ಧರ್ಮೇ ಪುನಃ ಪುನಃ ।**
**ಲೋಕಸ್ಯ ಚ ಹಿತಾರ್ಥಾಯ ಜಾಯತೇ ಮಾನುಷೇಷ್ವಿಹ ॥೯॥**

ವ್ಯಾಸನು ಹೇಳಿದನು—ಆದುದರಿಂದ ಲೋಕದಲ್ಲಿ ಧರ್ಮಾಚರಣೆಯು ಕ್ಷೀಣಿಸಿ, ಅಧರ್ಮವು ಮುಂದಾದಾಗಲೆಲ್ಲವೂ ವಿಷ್ಣುವು ಆ ರೀತಿಯ ಶಾಪದಿಂದ ಆಯಾಕಾಲದಲ್ಲಿ ಭೂಲೋಕದ ಜನರ ಹಿತಕ್ಕಾಗಿ ಮನುಷ್ಯರಲ್ಲಿ ಮತ್ತೆಮತ್ತೆ ಜನ್ಮವನ್ನು ಹೊಂದುತ್ತಿರುವನು.

॥ ರಾಜೋವಾಚ ॥

**ಭೃಗುಭಾರ್ಯಾ ಹತಾ ತತ್ರ ಚಕ್ರೇಣಾಮಿತತೇಜಸಾ ।**
**ಗಾರ್ಹಸ್ಥ್ಯಂ ಚ ಪುನಸ್ತಸ್ಯ ಕಥಂ ಜಾತಂ ಮಹಾತ್ಮನಃ ॥೧೦॥**

ಜನಮೇಜಯರಾಜನು ಕೇಳಿದನು—ಓ ವ್ಯಾಸಮುನಿಯೇ, ಹೆಚ್ಚಾದ ಶಕ್ತಿಯಿಂದ ಕೂಡಿದ ವಿಷ್ಣುಚಕ್ರದಿಂದ ಭೃಗುಋಷಿಯ ಪತ್ನಿಯು ಮೃತಳಾಗಲು ಮಹಾತ್ಮನಾದ ಭೃಗುವಿಗೆ ಪುನಃ ಗೃಹಸ್ಥಾಶ್ರಮವು ಹೇಗೆ ಪ್ರಾಪ್ತವಾಯಿತು?

|| ವ್ಯಾಸ ಉವಾಚ ||

**ಇತಿ ಶಪ್ತ್ವಾ ಹರಿಂ ರೋಷಾತ್ತದಾದಾಯ ಶಿರಸ್ತ್ವರನ್ ।**
**ಕಾಯೇ ಸಂಯೋಜ್ಯ ತರಸಾ ಭೃಗುಃ ಪ್ರೋವಾಚ ಕಾರ್ಯವಿತ್ ॥೧೧॥**

ವ್ಯಾಸಮುನಿಯು ಪ್ರತ್ಯುತ್ತರವನ್ನು ಹೇಳಿದನು—ಓ ದೊರೆಯೇ ಕೇಳು, ಈ ರೀತಿಯಲ್ಲಿ ವಿಷ್ಣುವನ್ನು ಕೋಪದಿಂದ ಶಪಿಸಿ ಆಮೇಲೆ ಕತ್ತರಿಸಿ ಅಲ್ಲಿ ಬಿದ್ದಿದ್ದ ತನ್ನ ಹೆಂಡತಿಯ ತಲೆಯನ್ನು ತೆಗೆದುಕೊಂಡು ಬೇಗನೆ ಅವಳ ದೇಹಕ್ಕೆ ಸೇರಿಸಿ, ಸಕಾಲದಲ್ಲಿ ಮಾಡಬೇಕಾದ ಕಾರ್ಯವೆಲ್ಲವನ್ನೂ ತಿಳಿದುಕೊಂಡಿರುವ ಆ ಭೃಗುವು ಈ ರೀತಿಯಾಗಿ ಹೇಳಿದನು. ಎಂದರೆ ಆ ಭೃಗುಋಷಿಯು ತನ್ನ ತಪೋಬಲದಿಂದ ಕೂಡಿದ ಮನಸ್ಸಿನಲ್ಲಿ ಸಂಕಲ್ಪಿಸಿದ ಕೂಡಲೇ ಬುದ್ಧಿಗೋಚರಳಾದ ಹೆಂಡತಿಯನ್ನು ಸಂಬೋಧಿಸಿ ಹೇಳಿದನೆಂದು ಭಾವವು.

**ಅದ್ಯ ತ್ವಾ ವಿಷ್ಣುನಾ ದೇವಿ ಹತಾ ಸಂಜೀವಯಾಮ್ಯಹಂ ।**
**ಯದಿ ಕೃತ್ಸ್ನೋ ಮಯಾ ಧರ್ಮೋ ಜ್ಞಾಯತೇ ಚರಿತೋಽಪಿ ವಾ ॥೧೨॥**

ಎಲೌ ಧರ್ಮಪತ್ನಿಯಾದ ದೇವಿಯೇ ನಾನು ಎಲ್ಲ ಧರ್ಮವನ್ನೂ ತಿಳಿದು, ನನ್ನ ಧರ್ಮವೆಲ್ಲವನ್ನೂ ಸರಿಯಾಗಿ ಆಚರಿಸಿರುವುದು ನಿಜವಾಗಿದ್ದಲ್ಲಿ, ವಿಷ್ಣುವಿನಿಂದ ಕೊಲ್ಲಲ್ಪಟ್ಟಿರುವ ನಿನ್ನನ್ನು ಈಗ ನಾನು ಪುನಃ ಬದುಕಿಸುತ್ತೇನೆ.

**ತೇನ ಸತ್ಯೇನ ಜೀವೇತ ಯದಿ ಸತ್ಯಂ ಬ್ರವೀಮ್ಯಹಂ ।**
**ಪಶ್ಯಂತು ದೇವತಾಃ ಸರ್ವಾ ಮಮ ತೇಜೋಬಲಂ ಮಹತ್ ॥೧೩॥**

ನಾನು ನಿಜವನ್ನೇ ಹೇಳುವವನಾಗಿದ್ದಲ್ಲಿ ಆ ಸತ್ಯಪರತೆಯ ಬಲದಿಂದ ಈಗ ಇವಳು ಬದುಕಲಿ. ನನ್ನ ಬ್ರಹ್ಮತೇಜಸ್ಸಿನ ಬಲವು ಹೆಚ್ಚಾದುದೆಂಬುದನ್ನು ಎಲ್ಲ ದೇವತೆಗಳೂ ನೋಡಲಿ.

**ಅದ್ಭಿಸ್ತ್ವಾಂ ಪ್ರೋಕ್ಷ್ಯ ಶೀತಾಭಿರ್ಜೀವಯಾಮಿ ತಪೋಬಲಾತ್ ।**
**ಸತ್ಯಂ ಶೌಚಂ ತಥಾ ವೇದಾ ಯದಿ ಮೇ ತಪಸೋಬಲಂ ॥೧೪॥**

ನನ್ನ ಆಚಾರದಲ್ಲಿ ಸತ್ಯಪರತೆಯೂ, ನಿರ್ಮಲವಾದ ನಡೆವಳಿಕೆಯೂ ವೇದಾಧ್ಯಯನ ಅರ್ಥಜ್ಞಾನಗಳೂ ನನ್ನ ತಪಸ್ಸಿಗೆ ಬೆಂಬಲವಾಗಿರುವುದು ನಿಜವಾಗಿದ್ದಲ್ಲಿ

ಅಭಿಮಂತ್ರಿಸಿದ ತಂಪಾಗಿರುವ ಈ ನೀರನ್ನು ಇವಳ ಮೇಲೆ ಚಿಮುಕಿಸಿ ನನ್ನ ತಪೋಮಹಿಮೆಯಿಂದ ಇವಳನ್ನು ಪುನಃ ಜೀವಂತಳನ್ನಾಗಿ ಮಾಡುತ್ತೇನೆ ಎಂದು ಸಂಕಲ್ಪಿಸಿ ಹಾಗೆ ಮಾಡಿದನು.

|| ವ್ಯಾಸ ಉವಾಚ ||

**ಅದ್ಭಿಃ ಸಂಪ್ರೋಕ್ಷಿತಾ ದೇವೀ ಸದ್ಯಃ ಸಂಜೀವಿತಾ ತದಾ ।**
**ಉತ್ಥಿತಾ ಪರಮಪ್ರೀತಾ ಭೃಗೋರ್ಭಾರ್ಯಾ ಶುಚಿಸ್ಮಿತಾ ॥೧೫॥**

ವ್ಯಾಸಮುನಿಯು ಹೇಳಿದನು—ಭೃಗುವು ಮಂತ್ರಿಸಿದ ಆ ನೀರನ್ನು ಚಿಮುಕಿಸಲು ಕೂಡಲೇ ನಿರ್ದೋಷವಾದ ಮಂದಹಾಸದಿಂದ ಸಂತೋಷವನ್ನು ಸೂಚಿಸುತ್ತಾ ಆ ಭೃಗುವಿನ ಪತ್ನಿಯು ಪುನರುಜ್ಜೀವಿತಳಾಗಿ ಎದ್ದುನಿಂತಳು.

**ತತಸ್ತಾಂ ಸರ್ವಭೂತಾನಿ ದೃಷ್ಟ್ವಾ ಸುಪ್ತೋತ್ಥಿತಾಮಿವ ।**
**ಸಾಧು ಸಾಧ್ವಿತಿ ತಂ ತಾಂ ತು ತುಷ್ಟುವುಃ ಸರ್ವತೋ ದಿಶಂ ॥೧೬॥**

ಆಗ ಅಲ್ಲಿ ಇದ್ದವರೆಲ್ಲರೂ ಮಲಗಿದ್ದವಳು ಎದ್ದಳೋ ಎನ್ನುವಂತೆ ಕಾಣುತ್ತಿರುವ ಅವಳನ್ನು ಕಂಡು ಭಲೆ ಭಲೆ ಎಂಬುದಾಗಿ ಅವಳನ್ನೂ ಭೃಗುಮಹರ್ಷಿಯನ್ನೂ ಎಲ್ಲಿನೋಡಿದರಲ್ಲಿ ಕೊಂಡಾಡಿದರು.

**ಏವಂ ಸಂಜೀವಿತಾ ತೇನ ಭೃಗುಣಾ ವರವರ್ಣಿನೀ ।**
**ವಿಸ್ಮಯಂ ಪರಮಂ ಜಗ್ಮುರ್ದೇವಾಃ ಸೇಂದ್ರಾ ವಿಲೋಕ್ಯ ತತ್ ॥೧೭॥**

ಉತ್ತಮಸ್ತ್ರೀರತ್ನಳಾದ ಅವಳು ಭೃಗುವಿನಿಂದ ಈರೀತಿ ಬದುಕಿಸಲ್ಪಟ್ಟಳು. ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಅದನ್ನು ನೋಡಿ ಅತ್ಯಂತ ಆಶ್ಚರ್ಯವನ್ನು ಹೊಂದಿದರು.

**ಇಂದ್ರಃ ಸುರಾನಥೋವಾಚ ಮುನಿನಾ ಜೀವಿತಾ ಸತೀ ।**
**ಕಾವ್ಯಸ್ತ್ವಪ್ರಾಪ್ತ ತಪೋ ಘೋರಂ ಕಿಂ ಕರಿಷ್ಯತಿ ಮಂತ್ರವಿತ್ ॥೧೮॥**

ಆ ಮೇಲೆ ಇಂದ್ರನು ದೇವತೆಗಳನ್ನು ಕುರಿತು--ಪತಿವ್ರತೆಯಾದ ಅವಳೇನೋ ಭೃಗುವಿನಿಂದ ಬದುಕಿಸಲ್ಪಟ್ಟಳು. ಆದರೂ ಘೋರವಾದ ತಪಸ್ಸನ್ನು ಆಚರಿಸಿ

ಮಂತ್ರವನ್ನು ಸಂಪಾದಿಸಿ ಹಿಂತಿರುಗಿ ಬಂದಮೇಲೆ ಶುಕ್ರಾಚಾರ್ಯನು ಇದನ್ನು ಕೇಳಿ ಏನನ್ನು ಮಾಡುವನೋ ಕಾಣೆನಲ್ಲಾ ಎಂದು ವ್ಯಾಕುಲಚಿತ್ತನಾಗಿ ಹೇಳಿದನು.

॥ ವ್ಯಾಸ ಉವಾಚ ॥

**ಗತಾ ನಿದ್ರಾ ಸುರೇಂದ್ರಸ್ಯ ದೇಹೇಽಕ್ಷೇಮ ಮುಭೂನ್ನೃಪ ।**
**ಸ್ಮೃತ್ವಾ ಕಾವ್ಯಸ್ಯ ವೃತ್ತಾಂತಂ ಮಂತ್ರಾರ್ಥಮತಿದಾರುಣಂ ॥೧೯॥**

ವ್ಯಾಸಮುನಿಯು ಹೇಳಿದನು— ಈ ಆತಂಕದಿಂದ ಇಂದ್ರನಿಗೆ ನಿದ್ರೆಯೇ ಬರಲಿಲ್ಲವು. ಅಲ್ಲದೆ ಭಯಂಕರ ಪರಿಣಾಮವನ್ನುಂಟುಮಾಡುವ ಸಾಮರ್ಥ್ಯವುಳ್ಳ ಮಂತ್ರವನ್ನು ಸಂಪಾದಿಸಿ ಹಿಂತಿರುಗಿ ಬರುವ ಶುಕ್ರಾಚಾರ್ಯನು ಅನುಸರಿಸಬಹುದಾದ ನಡೆವಳಿಯನ್ನು ಜ್ಞಾಪಿಸಿಕೊಳ್ಳುವುದರಿಂದ ಅವನ ದೇಹಕ್ಕೂ ಬಹಳ ಅನಾರೋಗ್ಯವು ಉಂಟಾಯಿತು.

**ವಿಮೃಶ್ಯ ಮನಸಾ ಶಕ್ರೋ ಜಯಂತೀಂ ಸ್ವಸುತಾಂ ತದಾ ।**
**ಉವಾಚ ಕನ್ಯಾಂ ಚಾರ್ವಂಗೀಂ ಸ್ಮಿತಪೂರ್ವಮಿದಂ ವಚಃ ॥೨೦॥**

ಇಂದ್ರನು ಮನಸ್ಸಿನಲ್ಲಿ ಬಹಳವಾಗಿ ವಿಚಾರಮಾಡಿ, ಇನ್ನೂ ಹುಡುಗಿಯೂ, ಚೆಲುವೆಯೂ ಆಗಿರುವ ತನ್ನ ಮಗಳಾದ ಜಯಂತಿಯನ್ನು ಕುರಿತು ಮುಗುಳು ನಗೆಯಿಂದ ಕೂಡಿ ಹೀಗೆ ಹೇಳಿದನು.

**ಗಚ್ಛ ಪುತ್ರಿ ಮಯಾ ದತ್ತಾ ಕಾವ್ಯಾಯ ತ್ವಂ ತಪಸ್ವಿನೇ ।**
**ಸಮಾರಾಧಯ ತನ್ವಂಗಿ ಮತ್ಕೃತೇ ತಂ ವಶಂ ಕುರು ॥೨೧॥**

ಎಲೌ ಮಗಳೇ, ಈಗ ನೀನು ತಪಸ್ಸನ್ನು ಮಾಡುತ್ತಿರುವ ಶುಕ್ರಾಚಾರ್ಯನ ಹತ್ತಿರಕ್ಕೆ ಹೋಗಿ ಅವನನ್ನು ನಿನ್ನ ಶುಶ್ರೂಷೆಯಿಂದ ತೃಪ್ತಿಪಡಿಸು. ಅಲ್ಲದೆ ನನ ಗೋಸ್ಕರವಾಗಿ ಅವನನ್ನು ನಿನ್ನ ವಶವರ್ತಿಯಾಗುವಂತೆ ಮಾಡಿಕೋ. ಅವನಿಗೆ ನಿನ್ನನ್ನು ಕೊಟ್ಟುಬಿಟ್ಟಿರುತ್ತೇನೆ.

**ಉಪಚಾರೈರ್ಮುನಿಂ ತೈಸ್ತೈಃ ಸಮಾರಾಧ್ಯ ಮನಃಪ್ರಿಯೈಃ ।**
**ಭಯಂ ಮೇ ತರಸಾ ಗತ್ವಾ ಹರ ತತ್ರ ವರಾಶ್ರಮೇ ॥೨೨॥**

ನೀನು ಆ ತಪೋವನಕ್ಕೆ ಬೇಗನೆ ಹೋಗಿ, ಅವನ ಮನಸ್ಸಿಗೆ ಹಿತಕರಗಳಾದ ಮತ್ತು ಆಯಾಯ ಕಾಲಕ್ಕೆ ತಕ್ಕಂತಹ ಉಪಚಾರಗಳಿಂದ ಆ ಮುನಿಯನ್ನು ಸಂತೋಷಪಡಿಸುತ್ತಾ, ಈಗ ನನಗೆ ಉಂಟಾಗಿರುವ ಭಯವನ್ನು ಪರಿಹರಿಸುವವಳಾಗು.

**ಸಾ ಪಿತುರ್ವಚನಂ ಶ್ರುತ್ವಾ ತತ್ರಾಗಚ್ಛನ್ಮನೋರಮಾ ।**
**ತಮಪಶ್ಯದ್ವಿಶಾಲಾಕ್ಷೀ ಪಿಬಂತಂ ಧೂಮಮಾಶ್ರಮೇ ॥೨೩॥**

ವಿಶಾಲನೇತ್ರಗಳುಳ್ಳ ಆ ಕನ್ಯೆಯು, ನೋಡಲು ಮುದ್ದಾದ ರೂಪವುಳ್ಳವಳಾಗಿ, ತನ್ನ ತಂದೆಯ ಮಾತಿನಂತೆ ಆಶ್ರಮಕ್ಕೆ ಹೋಗಿ ಅಲ್ಲಿ ಹೊಗೆಯನ್ನು ಕುಡಿಯುತ್ತಾ ಕಠಿನವಾದ ತಪಸ್ಸನ್ನಾಚರಿಸುತ್ತಿರುವ ಆ ಶುಕ್ರಾಚಾರ್ಯನನ್ನು ನೋಡಿದಳು.

**ತಸ್ಯ ದೇಹಂ ಸಮಾಲೋಕ್ಯ ಸ್ಮೃತ್ವಾ ವಾಕ್ಯಂ ಪಿತುಸ್ತದಾ ।**
**ಕದಲೀದಲಮಾದಾಯ ವೀಜಯಾಮಾಸ ತಂ ಮುನಿಂ ॥೨೪॥**

ಆ ಜಯಂತಿಯು ತಪೋವನಕ್ಕೆ ಹೋಗಿ ಅಲ್ಲಿ ಅವನ ಶರೀರವನ್ನು ನೋಡಿ ಕಾಲಕ್ಕೆ ತಕ್ಕಂತೆ ಉಪಚಾರಮಾಡಬೇಕೆಂದು ತಂದೆಯು ಹೇಳಿದ್ದ ಮಾತನ್ನು ಸ್ಮರಿಸಿ, ಬಾಳೆಯ ಎಲೆಯನ್ನು ತೆಗೆದುಕೊಂಡು ಅವನ ತಪ್ತದೇಹಕ್ಕೆ ತಂಪಾಗುವಂತೆ ಬೀಸಲು ತೊಡಗಿದಳು.

**ನಿರ್ಮಲಂ ಶೀತಲಂ ವಾರಿ ಸಮಾನೀಯ ಸುವಾಸಿತಂ ।**
**ಪಾನಾಯ ಕಲ್ಪಯಾಮಾಸ ಭಕ್ತ್ಯಾ ಪರಮಯಾ ಲಘು ॥೨೫॥**

ಅಲ್ಲದೆ, ಪಚ್ಚಕರ್ಪೂರಕೇಸರಿಗಳ ಸುವಾಸನೆಯಿಂದ ಕೂಡಿದ, ಸ್ವಚ್ಛವೂ ಶೀತಳವೂ ಆದ ನೀರನ್ನು ಬಹಳಭಕ್ತಿಯಿಂದ ಅವನು ಕುಡಿಯುವುದಕ್ಕಾಗಿ ಸಿದ್ಧಪಡಿಸಿದಳು.

**ಛಾಯಾಂ ವಸ್ತ್ರಾಽಽತಪತ್ರೇಣ ಭಾಸ್ಕರೇ ಮಧ್ಯಗೇ ಸತಿ ।**
**ರಚಯಾಮಾಸ ತನ್ವಂಗೀ ಸ್ವಯಂ ಧರ್ಮೇ ಸ್ಥಿತಾಸತೀ ॥೨೬॥**

ಹಾಗೆಯೇ ಮಧ್ಯಾಹ್ನಸಮಯದಲ್ಲಿ ಸೂರ್ಯನು ನೆತ್ತಿಯ ಮೇಲೆ ಬರಲು, ಅವನಿಗೆ ಬಿಸಲಿನ ತಾಪವನ್ನು ತಪ್ಪಿಸಲು, ಆ ಲತಾಂಗಿಯು ಬಟ್ಟೆಯಿಂದ ಛತ್ರಿಯ

ಹಾಗೆ ರಚಿಸಿ ಉಪಚರಿಸುತ್ತಿದ್ದರೂ, ತನ್ನ ಧರ್ಮವನ್ನು ಮಾತ್ರ ಬಿಡದೆ ಅನುಸರಿಸು ವವಳಾಗಿ ಅವನಿಗೆ ಸೇವೆಯನ್ನು ನೆರವೇರಿಸುತ್ತಿದ್ದಳು.

**ಫಲಾನ್ಯಾನೀಯ ದಿವ್ಯಾನಿ ಪಕ್ವಾನಿ ಮಧುರಾಣಿ ಚ ।**
**ಮುನೋಽಗ್ರೇ ಮುನೇಸ್ತಸ್ಯ ಭಕ್ಷ್ಯಾರ್ಥಂ ವಿಹಿತಾನಿ ಚ ॥೨೭॥**

ಅಷ್ಟೇ ಅಲ್ಲದೆ ಅವಳು ಶ್ರೇಷ್ಠವಾಗಿಯೂ, ಮಾಗಿ ಸಿಹಿಯಾಗಿಯೂ ಇರುವ ಹಣ್ಣುಗಳನ್ನು ತಂದು ಅವನ ಆಹಾರಕ್ಕಾಗಿ ಅವನ ಮುಂದೆ ಇಡುತ್ತಿದ್ದಳು.

**ಕುಶಾಃ ಪ್ರಾದೇಶಮಾತ್ರಾ ಹಿ ಹರಿತಾಃ ಶುಕಸನ್ನಿಭಾಃ ।**
**ದಧಾರಾಗ್ರೇಽಥ ಪುಷ್ಪಾಣಿ ನಿತ್ಯಕರ್ಮಸಮೃದ್ಧಯೇ ॥೨೮॥**

ಮತ್ತು ಆ ಜಯಂತಿಯು ಗೇಣು ಉದ್ದವಿರುವ ಗಿಳಿಯ ಬಣ್ಣದಂತೆ ಹಸು ರಾಗಿರುವ ದರ್ಭೆಗಳನ್ನೂ ಹೂವುಗಳನ್ನೂ ಅವನು ಮಾಡುವ ದೇವರ ಪೂಜೆಯೇ ಮುಂತಾದ ನಿತ್ಯಕರ್ಮದ ಅನುಷ್ಠಾನವನ್ನು ಬೆಳೆಸಲು ಅನುಕೂಲವಾಗುವಂತೆ ಅವನ ಮುಂದೆ ಹಿಡಿದುಕೊಂಡು ನಿಂತಿರುತ್ತಿದ್ದಳು.

**ನಿದ್ರಾರ್ಥಂ ಕಲ್ಪಯಾಮಾಸ ಸಂಸ್ತರಂ ಪಲ್ಲವಾನ್ವಿತಂ ।**
**ತಸ್ಮಿನ್ಮುನೌ ಚಾಽಽದರಸ್ಥಾ ಚಕಾರ ವ್ಯಜನಂ ಶನೈಃ ॥೨೯॥**

ಅದರಂತೆಯೇ ರಾತ್ರಿಕಾಲದಲ್ಲಿ ಅವನು ಮಲಗಲು ಅನುಕೂಲವಾಗುವಂತೆ ಚಿಗರುಗಳನ್ನು ಕೊಯ್ದುತಂದು ಹರಡಿ ಮೆತ್ತಗಿರುವ ಹಾಸಿಗೆಯನ್ನು ಸಿದ್ಧಪಡಿಸಿ ಅದರ ಮೇಲೆ ಅವನು ಮಲಗಲು ತಾನು ಕೆಳಗೆ ಕುಳಿತು ಬೀಸಣಿಗೆಯಿಂದ ಗಾಳಿ ಯನ್ನು ಬೀಸುತ್ತ ಉಪಚರಿಸುತ್ತಿದ್ದಳು.

**ಹಾವಭಾವಾದಿಕಂ ಕಿಂಚಿದ್ವಿಕಾರಜನನಂ ಚ ತತ್ ।**
**ನ ಚಕಾರ ಜಯಂತೀ ಸಾ ಶಾಪಭೀತಾ ಮುನೇಸ್ತದಾ ॥೩೦॥**

ಹೀಗೆ ಉಪಚರಿಸುತ್ತಿದ್ದರೂ ಆ ಜಯಂತಿಯು ತಾನು ಹಾವಭಾವವಿಲಾ ಸಾದಿಗಳನ್ನು ಪ್ರಕಟಮಾಡುವುದರಿಂದ ಅವನ ಮನಸ್ಸಿನಲ್ಲಿ ಶೃಂಗಾರವಿಕಾರಗಳ ನ್ನುಂಟುಮಾಡಿ ತಪೋಭಂಗವನ್ನು ಮಾಡುವ ಯಾವ ಕೆಲಸವನ್ನೂ, ಅವನು ಶಾಪ ಕೊಡಬಹುದೆಂಬ ಭಯದಿಂದ ಹೆದರಿ ಮಾಡುತ್ತಿರಲಿಲ್ಲವು.

**ಸ್ತುತಿಂ ಚಕಾರ ತನ್ವಂಗೀ ಗೀರ್ಭಿಸ್ತಸ್ಯ ಮಹಾತ್ಮನಃ ।**
**ಸುಭಾಷಿಣ್ಯನುಕೂಲಾಭಿಃ ಪ್ರೀತಿಕರ್ತ್ರೀಭಿರಪ್ಯುತ ॥೩೧॥**

ತೆಳುವಾದ ದೇಹದಿಂದ ಮನೋಹರವಾಗಿ ಕಾಣುವ, ಮಧುರವಾಗಿ ಮಾತನಾಡುವ ಅವಳು, ಹಾಗೆ ಮಾಡುವುದಕ್ಕೆ ಬದಲಾಗಿ ಮಹಾತ್ಮನಾದ ಅವನನ್ನು ಪ್ರೀತಿಯನ್ನುಂಟುಮಾಡುವ, ಮಿತವೂ ಹಿತವೂ ಆಗಿರುವ ಮಾತುಗಳಿಂದ ಶ್ಲಾಘಿಸುತ್ತಿದ್ದಳು.

**ಪ್ರಬುದ್ಧೇ ಜಲಮಾದಾಯ ದಧಾರಾಚಮನಾಯ ಚ ।**
**ಮನೋಽನುಕೂಲಂ ಸತತಂ ಕುರ್ವತೀ ವ್ಯಚರತ್ತದಾ ॥೩೨॥**

ಅವನು ನಿದ್ರೆಯಿಂದ ಏಳಲು ಸಮಾಧಿಯಿಂದ ಬಹಿರ್ಮುಖನಾದಾಗ ಅವನ ಆಚಮನಕ್ಕಾಗಿ ನೀರನ್ನು ಹಿಡಿದುಕೊಂಡು ನಿಂತಿರುತ್ತಿದ್ದಳು. ಈರೀತಿಯಾಗಿ ಅವಳು ಅವನ ಮನಸ್ಸಿಗೆ ಒಪ್ಪುವಂತೆ ಅಲ್ಲಿ ಅನುಕೂಲವಾದ ಶುಶ್ರೂಷೆಯನ್ನು ಮಾಡುತ್ತಿದ್ದಳು.

**ಇಂದ್ರೋಽಪಿ ಸೇವಕಾಂಸ್ತತ್ರ ಪ್ರೇಷಯಾಮಾಸ ಚಾತುರಃ ।**
**ಪ್ರವೃತ್ತಿಂ ಜ್ಞಾತುಕಾಮೋ ವೈ ಮುನೇಸ್ತಸ್ಯ ಜಿತಾತ್ಮನಃ ॥೩೩॥**

ಭಯದ ಆತಂಕದಿಂದ ಅಸ್ವಸ್ಥನಾಗಿದ್ದ ಇಂದ್ರನೂ ಅಲ್ಲಿಗೆ, ಇಂದ್ರಿಯಗಳನ್ನು ಗೆದ್ದ ಆ ಮುನಿಯ ಸಮಾಚಾರಗಳನ್ನು ತಿಳಿದುಕೊಳ್ಳುವ ಸಲುವಾಗಿ ಇನ್ನೂ ಇತರ ಸೇವಕರನ್ನು ಕಳುಹಿಸಿದ್ದನು.

**ಏವಂ ಬಹೂನಿ ವರ್ಷಾಣಿ ಪರಿಚರ್ಯಾಪರಾಽಭವತ್ ।**
**ನಿರ್ವಿಕಾರಾ ಜಿತಕ್ರೋಧಾ ಬ್ರಹ್ಮಚರ್ಯಪರಾ ಸತೀ ॥೩೪॥**

ಈ ರೀತಿಯಾಗಿ ಆ ಜಯಂತಿಯು ಧರ್ಮವಿರುದ್ಧವಾದ ಯಾವ ವಿಕಾರವನ್ನೂ ಹೊಂದದೆ ಬ್ರಹ್ಮಚರ್ಯದ ರಕ್ಷಣೆಯಿಂದ ಕೂಡಿ, ಕೋಪವಿಲ್ಲದೆಯೂ ಇರುವವಳಾಗಿ, ಆ ಮುನಿಗೆ ಉಪಚಾರವನ್ನು ಬಹಳ ವರ್ಷಗಳವರೆಗೆ ಬಿಡದೆ ಮಾಡುತ್ತಿದ್ದಳು.

**ಪೂರ್ಣೇ ವರ್ಷಸಹಸ್ರೇ ತು ಪರಿತುಷ್ಟೋ ಮಹೇಶ್ವರಃ ।**
**ವರೇಣ ಛಂದಯಾಮಾಸ ಕಾವ್ಯಂ ಪ್ರೀತಿಮನಾ ಹರಃ ॥೩೫॥**

ಹೀಗೆ ಆ ಶುಕ್ರಾಚಾರ್ಯನು ಸಾವಿರವರ್ಷಗಳು ಪೂರ್ಣವಾಗಿ ತಪಸ್ಸನ್ನು ಮಾಡಲು ಅದರಿಂದ ಸಂತೋಷಗೊಂಡ ಮನಸ್ಸುಳ್ಳವನಾಗಿ ಮಹೇಶ್ವರನು ಅವನಿಗೆ ಪ್ರತ್ಯಕ್ಷನಾಗಿ ಅವನು ಕೇಳಿದ ವರವನ್ನು ದಯಪಾಲಿಸಿದನು.

|| ಈಶ್ವರ ಉವಾಚ ||

**ಯಚ್ಚ ಕಿಂಚಿದಪಿ ಬ್ರಹ್ಮನ್ವಿದ್ಯತೇ ಭೃಗುನಂದನ ।**
**ಪ್ರತಿಪಶ್ಯಸಿ ಯತ್ಸರ್ವಂ ಯಚ್ಚ ವಾಚ್ಯಂ ನ ಕಸ್ಯಚಿತ್ ॥೩೬॥**

ಪರಮೇಶ್ವರನು ಹೇಳಿದನು—ಬ್ರಾಹ್ಮಣನಾದ ಭೃಗುಪುತ್ರನಾದ ಓ ಶುಕ್ರಾಚಾರ್ಯನೇ, ಯಾವ ಯಾವ ಪದಾರ್ಥವು ಈ ಪ್ರಪಂಚದಲ್ಲಿರುತ್ತದೆಯೋ ಮತ್ತು ಯಾರಿಗೂ ಕಾಣಿಸದೆ ವಿವರಿಸಲೂ ಆಗದೆ ಇರತಕ್ಕ ವಸ್ತುವಿರುತ್ತದೆಯೋ ಅಂತಹ ವಸ್ತುವೆಲ್ಲವೂ ಕೂಡ ನಿನ್ನ ದೃಷ್ಟಿಪಥಕ್ಕೆ ಬೀಳುತ್ತದೆ.

**ಸರ್ವಾಭಿಭಾವಕಶ್ಚೈನ ಭವಿಷ್ಯಸಿ ನ ಸಂಶಯಃ ।**
**ಅವಧ್ಯಃ ಸರ್ವಭೂತಾನಾಂ ಪ್ರಜೇಶಶ್ಚ ದ್ವಿಜೋತ್ತಮಃ ॥೩೭॥**

ಅಲ್ಲದೆ ಅವೆಲ್ಲವನ್ನೂ ಜಯಿಸಿ ನಿನ್ನ ಹತೋಟಿಯಲ್ಲಿಟ್ಟುಕೊಳ್ಳುವವನಾಗುವೆ. ಇದರಲ್ಲಿ ಸಂಶಯವಿಲ್ಲವು. ಅಲ್ಲದೆ ಯಾವ ಪ್ರಾಣಿಯಿಂದಲೂ ನಿನಗೆ ಮರಣವು ಸಂಭವಿಸುವುದಿಲ್ಲವು. ಮತ್ತು ಎಲ್ಲ ಶಿಷ್ಯಲೋಕಕ್ಕೂ ನೀನು ಒಡೆಯನಾಗಿರುವೆ. ಬ್ರಹ್ಮನಂತೆ ಅಘಟನಘಟನಾಸಾಮರ್ಥ್ಯಶಾಲಿಯಾದ ದ್ವಿಜಶ್ರೇಷ್ಠನಾಗಿರುವೆ ಎಂದು ವರವನ್ನು ಅನುಗ್ರಹಿಸಿದನು.

|| ವ್ಯಾಸ ಉವಾಚ ||

**ಏವಂ ದತ್ವಾ ವರಾಞ್ಛಂಭುಸ್ತತ್ರೈವಾಂತರಧೀಯತ ।**
**ಕಾವ್ಯಸ್ತಾಮಥ ಸಂವೀಕ್ಷ್ಯ ಜಯಂತೀಂ ವಾಕ್ಯಮಬ್ರವೀತ್ ॥೩೮॥**

ವ್ಯಾಸನು ಹೇಳಿದನು—ಈ ರೀತಿಯಾಗಿ ಈಶ್ವರನು ವರವನ್ನು ಅನುಗ್ರಹಿಸಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಆ ಮೇಲೆ ಉಪಚರಿಸಲು ನಿಂತಿರುವ ಜಯಂತಿಯನ್ನು ಕುರಿತು ಶುಕ್ರಾಚಾರ್ಯನು ಈರೀತಿಯಲ್ಲಿ ಹೇಳಿದನು.

**ಕಾಸಿ ಕಸ್ಯಾಸಿ ಸುಶ್ರೋಣಿ ಬ್ರೂಹಿ ಕಿಂ ತೇ ಚಿಕೀರ್ಷಿತಂ ।**
**ಕಿಮರ್ಥಮಿಹ ಸಂಪ್ರಾಪ್ತಾ ಕಾರ್ಯಂ ವದ ವರೋರು ಮೇ ॥೩೯॥**

ಎಲೈ ಸುಶ್ರೋಣಿಯೇ, ನೀನು ಯಾರು? ನೀನು ವಾಸಮಾಡುವುದೆಲ್ಲಿ? ಏತಕ್ಕಾಗಿ ನೀನು ಇಲ್ಲಿಗೆ ಬಂದಿರುವೆ ಎಂಬುದನ್ನು ನನಗೆ ಹೇಳು ಎಂದು ಕೇಳಿದನು.

**ಕಿಂ ವಾಂಛಸಿ ಕರೋಮ್ಯದ್ಯ ದುಷ್ಕರಂ ಚೇತ್ಸುಲೋಚನೇ ।**
**ಪ್ರೀತೋಽಸ್ಮಿ ತ್ವತ್ಕೃತೇನಾದ್ಯ ವರಂ ವರಯ ಸುವ್ರತೇ ॥೪೦॥**

ನೀನು ಮಾಡಿದ ಸೇವೆಯಿಂದ ನಾನು ತೃಪ್ತಿಹೊಂದಿದ್ದೇನೆ, ಸುಂದರವಾದ ನೋಟವನ್ನುಳ್ಳವಳೇ, ನೀನು ಬೇಡುವ ಕಾರ್ಯವನ್ನು ಅದು ಅಸಾಧ್ಯವಾದು ದಾದರೂ, ಅದನ್ನು ಮಾಡುವೆನು. ಒಳ್ಳೆಯ ನಿಯಮುಗಳನ್ನು ಪಾಲಿಸುವವಳೇ, ನಿನಗೆ ಇಷ್ಟವಾದ ವರವನ್ನು ಕೇಳು.

**ತತಃ ಸಾ ತು ಮುನಿಂ ಪ್ರಾಹ ಜಯಂತೀ ಮುದಿತಾನನಾ ।**
**ಚಿಕೀರ್ಷಿತಂ ಮೇ ಭಗವಂಸ್ತಪಸಾ ಜ್ಞಾತುಮರ್ಹಸಿ ॥೪೧॥**

ಆಗ ಸಂತೋಷಗೊಂಡ ಮುಖವುಳ್ಳ ಆ ಜಯಂತಿಯು ಅವನನ್ನು ಕುರಿತು ಹೇಳಿದಳು, ಓ ಭಗವಂತನಾದ ಶುಕ್ರಾಚಾರ್ಯನೇ, ನಾನು ಏನನ್ನು ಇಚ್ಛಿಸುತ್ತೇನೆಂ ಬುದನ್ನು ನೀನು ನಿನ್ನ ತಪಸ್ಸಿನಿಂದ ತಿಳಿಯಲು ಸಮರ್ಥನಾಗಿರುವೆ.

॥ ಕಾವ್ಯ ಉವಾಚ ॥

**ಜ್ಞಾತಂ ಮಯಾ ತಥಾಪಿ ತ್ವಂ ಬ್ರೂಹಿ ಯನ್ಮನಸೇಪ್ಸಿತಂ ।**
**ಕರೋಮಿ ಸರ್ವಥಾ ಭದ್ರಂ ಪ್ರೀತೋಽಸ್ಮಿ ಪರಿಚರ್ಯಯಾ ॥೪೨॥**

ಶುಕ್ರಾಚಾರ್ಯನು ಹೇಳಿದನು—ನಿನ್ನ ಮನೋಽಭೀಷ್ಟವನ್ನು ನಾನು ತಿಳಿದೆ ನಾದರೂ ನೀನು ಮನಸ್ಸಿನಲ್ಲಿ ಆಲೋಚಿಸಿದುದನ್ನು ಹೇಳು. ನಿನ್ನ ಸೇವೆಯಿಂದ ನಾನು ಸಂತೋಷಗೊಂಡಿದೇನೆ. ಖಂಡಿತವಾಗಿಯೂ ನಿನಗೆ ಎಲ್ಲ ವಿಧದಲ್ಲೂ ಮಂಗಳವನ್ನುಂಟುಮಾಡುತ್ತೇನೆ.

॥ ಜಯಂತ್ಯುವಾಚ ॥

**ಶಕ್ರಸ್ಯಾಹಂ ಸುತಾ ಬ್ರಹ್ಮನ್ಪಿತ್ರಾ ತುಭ್ಯಂ ಸಮರ್ಪಿತಾ ।**
**ಜಯಂತೀ ನಾಮತಶ್ಚಾಹಂ ಜಯಂತಾಽವರಜಾಮುನೇ ॥೪೩॥**

ಜಯಂತಿಯು ಹೇಳಿದಳು—ನಾನು ಇಂದ್ರನ ಮಗಳು. ನಮ್ಮ ತಂದೆಯು ನನ್ನನ್ನು ನಿನಗೆ ಅರ್ಪಿಸಿರುತ್ತಾನೆ. ನನ್ನ ಹೆಸರು ಜಯಂತೀ ಎಂದು. ನಾನು ಜಯಂತನ ಚಿಕ್ಕ ತಂಗಿಯು.

**ಸ ಕಾಮಾಸ್ಮಿ ತ್ವಯಿ ವಿಭೋ ವಾಂಛಿತಂ ಕುರು ಮೇಽಧುನಾ ।**
**ರಂಸ್ಯೇ ತ್ವಯಾ ಮಹಾಭಾಗ ಧರ್ಮತಃ ಪ್ರೀತಿಪೂರ್ವಕಂ ॥೪೪॥**

ನಾನು ನಿನ್ನಲ್ಲಿ ಅನುರಕ್ತಳಾಗಿರುತ್ತೇನೆ. ಧರ್ಮದಿಂದಲೂ ಪ್ರೀತಿಯಿಂದಲೂ ನಿನ್ನನ್ನು ಸೇರಲು ಇಚ್ಛೆಯಿಂದಿರುತ್ತೇನೆ. ಎಲೈ ಧರ್ಮಾತ್ಮನೇ, ಈಗ ನನ್ನ ಮನೋಽಭೀಷ್ಟವನ್ನು ನೆರವೇರಿಸುವವನಾಗು.

॥ ಶುಕ್ರ ಉವಾಚ ॥

**ಮಯಾ ಸಹ ತ್ವಂ ಸುಶ್ರೋಣಿ ದಶವರ್ಷಾಣಿ ಭಾಮಿನಿ ।**
**ಸರ್ವೈರ್ಭೂತೈರದೃಶ್ಯಾ ಚ ರಮಸ್ವೇಹ ಯದೃಚ್ಛಯಾ ॥೪೫॥**

ಶುಕ್ರಾಚಾರ್ಯನು ಹೇಳಿದನು—ಎಲೈ ಹೆಚ್ಚಾದ ಕಾಂತಿಯೂ, ಸುಂದರವಾದ ಕಟಿನಿತಂಬಭಾಗಗಳೂ ಉಳ್ಳವಳೇ, ನೀನು ನಿನ್ನ ಇಷ್ಟಬಂದ ಹಾಗೆ ಯಾರ ಕಣ್ಣಿಗೂ ಕಾಣದಂತಿರುವವಳಾಗಿ ಹತ್ತು ವರ್ಷಗಳು ನನ್ನೊಡನೆ ವಿಹರಿಸು.

॥ ವ್ಯಾಸ ಉವಾಚ ॥

**ಏವಮುಕ್ತ್ವಾ ಗೃಹಂ ಗತ್ವಾ ಜಯಂತ್ಯಾಃ ಪಾಣಿಮುದ್ವಹನ್ ।**
**ತಯಾ ಸಹಾವಸದ್ದೇವ್ಯಾ ದಶವರ್ಷಾಣಿ ಭಾರ್ಗವಃ ॥೪೬॥**
**ಅದೃಶ್ಯಃ ಸರ್ವಭೂತಾನಾಂ ಮಾಯಯಾ ಸಂವೃತಃಪ್ರಭುಃ ।**

ವ್ಯಾಸಮಹರ್ಷಿಯು ಹೇಳಿದನು— ಹೀಗೆ ಹೇಳಿ ಮನೆಗೆ ಬಂದು ಅವಳನ್ನು ಮದುವೆಮಾಡಿಕೊಂಡು ಅವಳೊಡನೆ ಹತ್ತು ವರ್ಷಗಳ ವರೆಗೆ ಗಟ್ಟಿಗನಾದ ಶುಕ್ರಾಚಾರ್ಯನು ಮಾಯೆಯಿಂದ ಯಾರಿಗೂ ಕಾಣಿಸದಂತಾಗಿ ಸುಖದಿಂದ ವಾಸಮಾಡಿದನು.

**ದೈತ್ಯಾಸ್ತಮಾಗತಂ ಶ್ರುತ್ವಾ ಕೃತಾರ್ಥಂ ಮಂತ್ರಸಂಯುತಂ ॥೪೭॥**
**ಅಭಿಜಗ್ಮುರ್ಗೃಹೇ ತಸ್ಯ ಮುದಿತಾಸ್ತೇ ದಿದೃಕ್ಷವಃ ।**
**ನಾಪಶ್ಯನ್ ರಮಮಾಣಂ ತೇ ಜಯಂತ್ಯಾ ಸಹ ಸಂಯುತಂ ॥೪೮॥**

ಶುಕ್ರಾಚಾರ್ಯನು ಮಂತ್ರವನ್ನು ಸಾಧಿಸಿಕೊಂಡು ಹಿಂತಿರುಗಿ ಬಂದುದನ್ನು ಕೇಳಿ ಅವನನ್ನು ನೋಡುವುದಕ್ಕಾಗಿ ಸಂತೋಷದಿಂದ ಅವನ ಮನೆಗೆ ರಾಕ್ಷಸರು ಹೋದರು. ಆದರೆ, ಆ ಶುಕ್ರಾಚಾರ್ಯನು ಮಾಯೆಯಿಂದ ಯಾರಿಗೂ ಕಾಣಿಸದಂತೆ ಜಯಂತಿಯೊಡನೆ ಕ್ರೀಡಿಸುತ್ತಿದ್ದುದರಿಂದ ಅವನು ಆ ರಾಕ್ಷಸರಿಗೆ ಕಾಣಿಸಲಿಲ್ಲ.

ತದಾ ವಿಮನಸಃ ಸರ್ವೇ ಜಾತಾ ಭಗ್ನೋದ್ಯಮಾಶ್ಚ ತೇ ।
ಚಿಂತಾಪರಾತಿದೀನಾಶ್ಚ ವೀಕ್ಷಮಾಣಾಃ ಪುನಃ ಪುನಃ ॥೪೯॥

ಅದೃಷ್ಟ್ವಾ ತಂ ತು ಸಂವೃತ್ತಂ ಪ್ರತಿಜಗ್ಮುರ್ಯಥಾಗತಂ ।
ಸ್ವಗೃಹಾನ್ ದೈತ್ಯವರ್ಯಾಸ್ತೇ ಚಿಂತಾವಿಷ್ಟಾ ಭಯಾತುರಾಃ ॥೫೦॥

ಆಗ ಅವರೆಲ್ಲರೂ ಬಹಳ ಖಿನ್ನಮನಸ್ಕರಾಗಿ ನಿರಾಶೆಯಿಂದ ಕೂಡಿ ತುಂಬ ಚಿಂತೆಯಿಂದ ಮತ್ತೆ ಮತ್ತೆ ಮನೆಯಲ್ಲಿ ಹುಡುಕಿ ನೋಡಿದರು. ಆದರೂ ಅವರ ಪ್ರಯತ್ನವು ವ್ಯರ್ಥವಾಗಲು, ಆ ಶುಕ್ರಾಚಾರ್ಯನನ್ನು ಕಾಣದೆ, ಬಹಳ ಭಯದಿಂದಲೂ ಚಿಂತೆಯಿಂದಲೂ ದೀನರಾಗಿ ಬಂದಹಾಗೆಯೇ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು.

ರಮಮಾಣಂ ತಥಾ ಜ್ಞಾತ್ವಾ ಶಕ್ರಃ ಪ್ರೋವಾಚ ತಂ ಗುರುಂ ।
ಬೃಹಸ್ಪತಿಂ ಮಹಾಭಾಗಂ ಕಿಂ ಕರ್ತವ್ಯಮಿತಃ ಪರಂ ॥೫೧॥

ಶುಕ್ರನು ಆರೀತಿಯಲ್ಲಿ ಭೋಗಿಸುತ್ತಿರುವುದನ್ನು ಇಂದ್ರನು ತಿಳಿದು ತನ್ನ ಗುರುವಾದ ಪೂಜ್ಯನಾದ ಬೃಹಸ್ಪತಿಯನ್ನು ಕುರಿತು ಇನ್ನು ಮುಂದೆ ಮಾಡಬೇಕಾದ ಕಾರ್ಯವೇನೆಂದು ಬೆಸಗೊಂಡನು.

ಗಚ್ಛಾದ್ಯ ದಾನವಾನ್ಬ್ರಹ್ಮನ್ ಮಾಯಯಾ ತ್ವಂ ಪ್ರಲೋಭಯ ।
ಅಸ್ಮಾಕಂ ಕುರು ಕಾರ್ಯಂ ತ್ವಂ ಬುದ್ಧ್ಯಾ ಸಂಚಿಂತ್ಯ ಮಾನದ ॥೫೨॥

ಬ್ರಾಹ್ಮಣನಾದ ಓ ಬೃಹಸ್ಪತಿಯೇ, ಈಗ ನೀನು ಹೋಗಿ ರಾಕ್ಷಸರೆಲ್ಲರನ್ನೂ ನಿನ್ನ ಮಾಯೆಯಿಂದ ಮೋಸಗೊಳಿಸಿ, ಆಸೆಯನ್ನು ತೋರಿಸಿ ನಿನ್ನ ಬುದ್ಧಿಶಕ್ತಿಯಿಂದ ಚೆನ್ನಾಗಿ ಆಲೋಚಿಸಿ ನಮ್ಮ ಕಾರ್ಯವನ್ನು ನೆರವೇರಿಸಿಕೊಡಬೇಕೆಂದು ಪ್ರಾರ್ಥಿಸಿದನು.

ತಚ್ಛ್ರುತ್ವಾ ವಚನಂ ಕಾವ್ಯಂ ರಮಮಾಣಂ ಸುಸಂವೃತಂ ।
ಜ್ಞಾತ್ವಾ ತದ್ರೂಪಮಾಸ್ಥಾಯ ದೈತ್ಯಾನ್ಪ್ರತಿಯಯೌ ಗುರುಃ ॥೫೩॥

ಇಂದ್ರನ ಆ ಮಾತನ್ನು ಕೇಳಿ ಬೃಹಸ್ಪತಿಯು, ಶುಕ್ರನು ಮಾಯೆಯಿಂದ ಕ್ರೀಡಿಸುತ್ತಿರುವುದನ್ನು ತಿಳಿದು, ಆ ಶುಕ್ರಾಚಾರ್ಯನ ರೂಪವನ್ನು ಧರಿಸಿ ರಾಕ್ಷಸರ ಸಮೀಪಕ್ಕೆ ಹೋದನು.

**ಗತ್ವಾ ತತ್ರಾಽತಿಭಕ್ತ್ಯಾ ಸೌ ದಾನವಾನ್ ಸಮುಪಾಹ್ವಯತ್ ।**
**ಆಗತಾಸ್ತೇಽಸುರಾಃ ಸರ್ವೇ ದದೃಶುಃ ಕಾವ್ಯಮಗ್ರತಃ ॥೫೪॥**

ಅಲ್ಲಿಗೆ ಹೋಗಿ ಆ ರಾಕ್ಷಸರನ್ನೆಲ್ಲರನ್ನೂ ಹೆಚ್ಚಾದ ಪ್ರೀತಿಯಿಂದಲೂ ಕರೆದನು. ಆಗ ಎಲ್ಲರೂ ಬಂದು ತಮ್ಮ ಇದುರಿಗೆ ಶುಕ್ರಾಚಾರ್ಯನು ನಿಂತಿರುವುದನ್ನು ನೋಡಿದರು.

**ಪ್ರಣಮ್ಯ ಸುಸ್ಥಿತಾಃ ಸರ್ವೇ ಕಾವ್ಯಂ ಮತ್ವಾಽತಿಮೋಹಿತಾಃ ।**
**ನ ವಿದುಸ್ತೇ ಗುರೋರ್ಮಾಯಾಂ ಕಾವ್ಯರೂಪವಿಭಾವಿನೀಂ ॥೫೫॥**

ಆ ರಾಕ್ಷಸರೆಲ್ಲರೂ, ಅವನನ್ನು ಶುಕ್ರನೆಂದೇ ತಿಳಿದು, ನಮಸ್ಕರಿಸಿ, ಅವನಲ್ಲಿ ವಿಶ್ವಾಸವನ್ನು ಹೊಂದಿದವರಾಗಿ ಸಮೀಪದಲ್ಲಿ ಕುಳಿತುಕೊಂಡರು. ಶುಕ್ರನ ರೂಪವನ್ನು ಧರಿಸಿರುವ ಗುರುವಿನ ಮಾಯೆಯನ್ನು ಅವರು ತಿಳಿಯಲಿಲ್ಲ.

**ತಾನುವಾಚ ಗುರುಃ ಕಾವ್ಯರೂಪಃ ಪ್ರಚ್ಛನ್ನಮಾಯಯಾ ।**
**ಸ್ವಾಗತಂ ಮಮ ಯಾಜ್ಯಾನಾಂ ಪ್ರಾಪ್ತೋಽಹಂ ವೋ ಹಿತಾಯ ವೈ॥**

ಮಾಯೆಯಿಂದ ತನ್ನ ರೂಪವನ್ನು ಮರೆಸಿಕೊಂಡು ಶುಕ್ರಾಚಾರ್ಯನ ವೇಷವನ್ನು ಧರಿಸಿರುವ ಗುರುವು ಅವರನ್ನು ಸಂಬೋಧಿಸಿ, ಎಲೈ ರಾಕ್ಷಸರೇ, ನನ್ನ ಪೌರೋಹಿತ್ಯಕ್ಕೆ ಸೇರಿ ಶಿಷ್ಯರಾಗಿರುವ ನಿಮಗೆಲ್ಲರಿಗೂ ಸ್ವಾಗತವನ್ನು ಬಯಸುತ್ತೇನೆ. ಮತ್ತು ನಿಮ್ಮ ಹಿತವನ್ನು ಸಾಧಿಸುವುದಕ್ಕಾಗಿ ಈಗ ನಾನು ಬಂದಿರುವೆನು.

**ಅಹಂ ವೋ ಬೋಧಯಿಷ್ಯಾಮಿ ವಿದ್ಯಾಂ ಪ್ರಾಪ್ತಾಂ ಮಮಾಯಯಾ ।**
**ತಪಸಾ ತೋಷಿತಃ ಶಂಭುರ್ಯುಷ್ಮತ್ಕಲ್ಯಾಣಹೇತವೇ ॥೫೭॥**

ನಾನು ಮಾಡಿದ ತಪಸ್ಸಿನಿಂದ ಸಂತುಷ್ಟನಾದ ಶಂಭುವು ನಿಮ್ಮ ಕಲ್ಯಾಣಕ್ಕಾಗಿ ಉಪದೇಶಮಾಡಿ ಕೊಟ್ಟ ವಿದ್ಯೆಯನ್ನು ಈಗ ನಿಮಗೆ ನಾನು ಯಥಾರ್ಥವಾಗಿ ಹೇಳಿಕೊಡುವೆನು.

**ತಚ್ಛ್ರುತ್ವಾ ಪ್ರೀತಮನಸೋ ಜಾತಾಸ್ತೇ ದಾನವೋತ್ತಮಾಃ ।**
**ಕೃತಕಾರ್ಯಂ ಗುರುಂ ಮತ್ವಾ ಜಹೃಷುಸ್ತೇ ವಿಮೋಹಿತಾಃ ॥೫೮॥**

ಅದನ್ನು ಕೇಳಿ, ಆ ರಾಕ್ಷಸಶ್ರೇಷ್ಠರೆಲ್ಲರೂ ಸಂತೋಷಗೊಂಡ ಮನಸುಳ್ಳವರಾದರು. ಮತ್ತು ತಮ್ಮ ಗುರುವಾದ ಶುಕ್ರಾಚಾರ್ಯನು ತಮ್ಮ ಕೆಲಸವನ್ನು ನೆರವೇರಿಸಿಕೊಂಡು ಬಂದಿರುವನೆಂದು ತಿಳಿದು ಅವರು ಮೋಹದಿಂದ ಸಂತೋಷಪಟ್ಟರು.

**ಪ್ರಣೇಮುಸ್ತೇ ಮುದಾ ಯುಕ್ತಾ ನಿರಾತಂಕಾ ಗತವ್ಯಥಾಃ ।**
**ದೇವೇಭ್ಯಶ್ಚ ಭಯಂ ತ್ಯಕ್ತ್ವಾ ತಸ್ಥುಃ ಸರ್ವೇ ನಿರಾಮಯಾಃ ॥೫೯॥**

ಆ ರಾಕ್ಷಸರೆಲ್ಲರೂ ಯಾವ ಆತಂಕವೂ ವ್ಯಥೆಯೂ ಇಲ್ಲದೆ ಸಂತೋಷದಿಂದ ಕೂಡಿ ಅವನನ್ನು ನಮಸ್ಕರಿಸಿದರು. ಇದರಿಂದ ಅವರು ದೇವತೆಗಳಿಗೆ ಇನ್ನು ಭಯಪಡಬೇಕಾಗಿಲ್ಲವೆಂದು ನಂಬಿ ಧೈರ್ಯವನ್ನು ಹೊಂದಿ ಯಾವ ಚಿಂತೆಯೂ ಇಲ್ಲದೆ ಇದ್ದರು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ದ್ವಾದಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ತ್ರಯೋದಶೋಽಧ್ಯಾಯಃ ||

### ಹದಿಮೂರನೆಯ ಅಧ್ಯಾಯವು

|| ರಾಜೋವಾಚ ||

**ಕಿಂ ಕೃತಂ ಗುರುಣಾ ಪಶ್ಚಾದ್ಭೃಗುರೂಪೇಣ ವರ್ತತಾ ।**
**ಛಲೇನೈವ ಹಿ ದೈತ್ಯಾನಾಂ ಪೌರೋಹಿತ್ಯೇನ ಧೀಮತಾ ॥೧॥**

ಜನಮೇಜಯರಾಜನು ವ್ಯಾಸಮಹರ್ಷಿಯನ್ನು ಪ್ರಶ್ನೆ ಮಾಡಿದನು–ಆಮೇಲೆ ಭೃಗುಪುತ್ರನಾದ ಶುಕ್ರಾಚಾರ್ಯನ ವೇಷವನ್ನು ಧರಿಸಿದ, ಬುದ್ಧಿವಂತನಾದ ಆ ಗುರುವು ರಾಕ್ಷಸರ ಪೌರೋಹಿತ್ಯವನ್ನು ಮೋಸದಿಂದ ವಹಿಸಿ ಏನನ್ನು ಮಾಡಿದನು ?

**ಗುರುಃ ಸುರಾಣಾಮನಿಶಂ ಸರ್ವವಿದ್ಯಾನಿಧಿಸ್ತಥಾ ।**
**ಸುತೋಽಙ್ಗಿರಸ ಏವಾಸೌ ಸ ಕಥಂ ಛಲಕೃನ್ಮುನಿಃ ॥೨॥**

ಈ ಬೃಹಸ್ಪತಿಯು ಎಲ್ಲ ದೇವತೆಗಳಿಗೂ ಗುರುವಾಗಿ, ಸಮಸ್ತವಿದ್ಯೆಗಳಿಗೂ ನಿಧಿಯಂತೆ ಇರುವನಲ್ಲದೆ ಅಂಗಿರಸಮಹರ್ಷಿಯ ಮಗನಾಗಿಯೂ ಇರುವನು. ಇಂತಹ ಬೃಹಸ್ಪತಿಯು ಮಾಡಬಾರದ ಮೋಸಕೃತ್ಯವನ್ನು ಹೇಗೆ ಮಾಡಿದನು ? ಮುನಿಯಾದವನು ಕಪಟವಂಚನೆಗಳನ್ನು ಮಾಡಬಾರದಲ್ಲವೇ ?

**ಧರ್ಮಶಾಸ್ತ್ರೇಷು ಸರ್ವೇಷು ಸತ್ಯಂ ಧರ್ಮಸ್ಯ ಕಾರಣಂ ।**
**ಕಥಿತಂ ಮುನಿಭಿರ್ಯೇನ ಪರಮಾತ್ಮಾಪಿ ಲಭ್ಯತೇ ॥೩॥**

ಎಲ್ಲ ಧರ್ಮಶಾಸ್ತ್ರಗಳಲ್ಲಿಯೂ ಕೂಡ. ಧರ್ಮಕ್ಕೆ ಮೂಲಕಾರಣವು ಸತ್ಯವೆಂದೇ ಹೇಳಲ್ಪಟ್ಟಿದೆ. ಅಲ್ಲದೆ, ' ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ' ಎಂಬಂತೆ

ಪರಬ್ರಹ್ಮಸಾಕ್ಷಾತ್ಕಾರರೂಪವಾದ ಮೋಕ್ಷವನ್ನೂ ಕೂಡ ಈ ಸತ್ಯಶೋಧನದಿಂದಲೇ ಹೊಂದಬಹುದೆಂದು ಋಷಿಗಳು ಹೇಳಿರುವರು.

**ವಾಚಸ್ಪತಿಸ್ತಥಾ ಮಿಥ್ಯಾವಕ್ತಾ ಚೇದ್ದಾನವಾನ್ಪ್ರತಿ ।**
**ಕಃ ಸತ್ಯವಕ್ತಾ ಸಂಸಾರೇ ಭವಿಷ್ಯತಿ ಗೃಹಾಶ್ರಮೀ ॥೪॥**

ಅಂತಹ ಬೃಹಸ್ಪತಿಯೇ ಆರೀತಿಯಲ್ಲಿ ರಾಕ್ಷಸರನ್ನು ಕುರಿತು, ವೇಷ ಮರೆಸಿ ಕೊಂಡು ಸುಳ್ಳನ್ನು ಹೇಳಿದ್ದಾದರೆ, ಈ ಪ್ರಪಂಚದಲ್ಲಿ ಗೃಹಸ್ಥಾಶ್ರಮದಲ್ಲಿರತಕ್ಕ ಯಾವ ಮನುಷ್ಯನು ತಾನೇ ಸತ್ಯವನ್ನು ನುಡಿಯಲು ಸಮರ್ಥನಾಗುತ್ತಾನೆ ?

**ಆಹಾರಾದಧಿಕಂ ಭೋಜ್ಯಂ ಬ್ರಹ್ಮಾಂಡವಿಭವೇಽಪಿ ನ ।**
**ತದರ್ಥಂ ಮುನಯೋ ಮಿಥ್ಯಾ ಪ್ರವರ್ತಂತೇ ಕಥಂ ಮುನೇ ॥೫॥**

ಎಲೈ ವ್ಯಾಸಮುನಿಯೇ, ಲೋಭದ ಕಾರಣದಿಂದಲೂ ಅಸತ್ಯಪರರಾಗ ಬಾರದು. ಏಕೆಂದರೆ, ಅತ್ಯಾಶೆಯಿಂದ ಈ ಸಮಸ್ತಪ್ರಪಂಚದಷ್ಟು ಐಶ್ವರ್ಯವನ್ನು ಸಂಪಾದಿಸಿದರೂ ಅವರವರಿಗೆ ಗೊತ್ತಾಗಿರುವಷ್ಟು ಆಹಾರವನ್ನೇ ತಿನ್ನಬಹುದೇ ಹೊರತು ಹೆಚ್ಚಾಗಿ ಅನುಭವಿಸಲಾಗುವುದಿಲ್ಲವು. ಆದುದರಿಂದ, ಕೇವಲ ತಮ್ಮ ಆಹಾರಸಂಗ್ರಹಕ್ಕಾಗಿಯೇ ಅಸತ್ಯಪರರಾಗುವುದರಿಂದ ಆಯುಸ್ಸು ಕ್ಷೀಣವಾಗುತ್ತದೆ. ಅಲ್ಲದೆ, ಕ್ಲಿಪ್ತವಾಗಿರುವಷ್ಟು ಅನ್ನವನ್ನು ಅದೃಷ್ಟದಿಂದಲೇ ಪಡೆಯಲಾಗುತ್ತದೆ. ಆದುದರಿಂದ ಇಂತಹ ತುಚ್ಛವಾದ ಕೆಲಸಕ್ಕಾಗಿ ಮುನಿಗಳು ಸುಳ್ಳಾದ ನಡೆವಳಿಕೆ ಯುಳ್ಳವರಾಗಬಹುದೇ ?

**ಶಬ್ದಪ್ರಮಾಣಮುಚ್ಛೇದಂ ಶಿಷ್ಟಾಭಾವೇ ಗತಂ ನ ಕಿಂ ।**
**ಛಲಕರ್ಮಪ್ರವೃತ್ತೇ ವಾಽವಿಗೀತತ್ವಂ ಗುರೌ ಕಥಂ ॥೬॥**

ಆಪ್ತರಾದವರು ಹೇಳುವ ಮಾತುಗಳಿಗೆ ಶಬ್ದಪ್ರಮಾಣವೆಂದು ಹೆಸರಿದೆ. ನಂಬಲು ಅರ್ಹವಾದ ಮಾತನ್ನು ಹೇಳುವವರು ಆಪ್ತರೆನಿಸುತ್ತಾರೆ. ದೊಡ್ಡವರೂ ಹೀಗೆ ಮೋಸದ ಮಾತುಗಳನ್ನು ಹೇಳಿದರೆ, ಲೋಕದಲ್ಲಿ ಆಪ್ತರೇ ಇಲ್ಲದೆ ಹೋಗಿ ಶಬ್ದಪ್ರಮಾಣವೆಂಬುದೇ ಇಲ್ಲದೇಹೋಗಬೇಕಾಗುತ್ತದೆ. ನಿಂದನೀಯವಾದ ಕೆಲಸ ವನ್ನು ಮಾಡಿದ ಗುರುವಿನಲ್ಲಿ ಅವಿಗೀತಶಿಷ್ಟನೆಂಬ ಎಂದರೆ ನಿಂದ್ಯವಲ್ಲದ ಒಳ್ಳೆಯ ನಡತೆಯುಳ್ಳ ಸತ್ಪುರುಷನೆಂಬ ವಿಶ್ವಾಸಾರ್ಹತೆಯು ಹೇಗೆ ತಾನೇ ಉಂಟಾದೀತು ?

ಆದುದರಿಂದ ಇಂತಹ ಗುರುವಿನಲ್ಲಿ ಹೇಗೆ ನಂಬಿಕೆಯನ್ನು ಇಡುವುದು ? ಹಾಗೆ ಮೋಸದಲ್ಲಿ ಪ್ರವರ್ತಿಸುವುದು ಅವರಿಗೆ ಸರಿಯಾದುದೇ ?

**ದೇವಾಃ ಸತ್ತ್ವಸಮುದ್ಭೂತಾ ರಾಜಸಾ ಮಾನವಾಃ ಸ್ಮೃತಾಃ ।**
**ತಿರ್ಯಂಚಸ್ತಾಮಸಾಃ ಪ್ರೋಕ್ತಾ ಉತ್ಪತ್ತೌ ಮುನಿಭಿಃ ಕಿಲ ॥೭॥**

ಅಲ್ಲದೆ, ದೇವತೆಗಳು ಸತ್ತ್ವಗುಣದ ಪ್ರಾಧಾನ್ಯದಿಂದಲೂ, ಮನುಷ್ಯರು ರಜೋಗುಣದ ಪ್ರಾಧಾನ್ಯದಿಂದಲೂ ಪಶುಪಕ್ಷಿ ಮೊದಲಾದ ತಿರ್ಯಗ್ಜಂತುಗಳು ತಮೋಗುಣದ ಪ್ರಾಧಾನ್ಯದಿಂದಲೂ ಕೂಡಿಯೇ ಹುಟ್ಟಿರುತ್ತವೆ ಎಂದು ಮಹರ್ಷಿಗಳಿಂದಲೇ ಹೇಳಲ್ಪಟ್ಟಿರುತ್ತದೆಯಲ್ಲವೇ ?

**ಅಮರಾಣಾಂ ಗುರುಃ ಸಾಕ್ಷಾನ್ಮಿಥ್ಯಾವಾದೀ ಸ್ವಯಂ ಯದಿ ।**
**ತದಾ ಕಃ ಸತ್ಯವಕ್ತಾ ಸ್ಯಾದ್ರಾಜಸಸ್ತಾಮಸಃ ಪುನಃ ॥೮॥**

ದೇವತೆಗಳ ಗುರುವಾದ ಸಾಕ್ಷಾದ್ಬೃಹಸ್ಪತಿಯು ತಾನೇ ಸುಳ್ಳನ್ನು ಹೇಳುವವನಾದರೆ, ರಾಜಸತಾಮಸಗುಣಗಳಿಂದ ಹುಟ್ಟಿದವರಾದ ಇತರರಲ್ಲಿ ಯಾರುತಾನೇ ನಿಜವನ್ನು ಹೇಳುವವರಾದಾರು ?

**ಕ್ವ ಸ್ಥಿತಿಸ್ತಸ್ಯ ಧರ್ಮಸ್ಯ ಸಂದೇಹೋಽಯಂ ಮಮಾತ್ಮನಃ ।**
**ಕಾ ಗತಿಸ್ಸರ್ವಜಂತೂನಾಂ ಮಿಥ್ಯಾಭೂತೇ ಜಗತ್ತ್ರಯೇ ॥೯॥**

ಈ ರೀತಿಯಲ್ಲಿ, ಧರ್ಮವು ಎಲ್ಲಿ ಇರಬೇಕಾಗುವುದು ? ಮೂರುಲೋಕಗಳಲ್ಲಿಯೂ ಸುಳ್ಳನ್ನು ಹೇಳುವುದೇ ಬಳಕೆಗೆ ಬಂದುಬಿಟ್ಟರೆ ಪ್ರಾಣಿಗಳಿಗೆ ಎಂತಹ ಗತಿಯುಂಟಾಗುವುದು ? ಇದರಲ್ಲಿ ನನಗೆ ಬಹಳ ಸಂದೇಹವೂ ಆತಂಕವೂ ಉಂಟಾಗಿರುತ್ತದೆ.

**ಹರಿರ್ಬ್ರಹ್ಮಾ ಶಚೀಕಾಂತಸ್ತಥಾಽನ್ಯೇ ಸುರಸತ್ತಮಾಃ ।**
**ಸರ್ವೇ ಛಲವಿಧೌ ದಕ್ಷಾ ಮನುಷ್ಯಾಣಾಂ ಚ ಕಾ ಕಥಾ ॥೧೦॥**

ವಿಷ್ಣು, ಬ್ರಹ್ಮ, ಇಂದ್ರ ಮತ್ತು ಇತರ ದೇವೋತ್ತಮರು ಎಲ್ಲರೂ ಮೋಸದಲ್ಲಿ ನಿರತರಾಗಿಬಿಟ್ಟರೆ, ಮನುಷ್ಯರೂ ಆ ರೀತಿಯಾಗುವುದರಲ್ಲಿ ಹೇಳಬೇಕಾದುದೇನು ?

**ಕಾಮಕ್ರೋಧಾಭಿಸಂತಪ್ತಾ ಲೋಭೋಪಹತಚೇತಸಃ ।**
**ಛಲೇ ದಕ್ಷಾಃ ಸುರಾಃ ಸರ್ವೇ ಮುನಯಶ್ಚ ತಪೋಧನಾಃ ॥೧೧॥**

**ವಸಿಷ್ಠೋ ವಾಮದೇವಶ್ಚ ವಿಶ್ವಾಮಿತ್ರೋ ಗುರುಸ್ತಥಾ ।**
**ಏತೇ ಪಾಪರತಾಃ ಕ್ವಾಽತ್ರ ಗತಿರ್ಧರ್ಮಸ್ಯ ಮಾನದ ॥೧೨॥**

ಎಲೈ ಮಾನಾರ್ಹನಾದ ವ್ಯಾಸನೇ, ವಸಿಷ್ಠ, ವಾಮದೇವ, ವಿಶ್ವಾಮಿತ್ರ, ಬೃಹಸ್ಪತಿ ಈ ಎಲ್ಲ ಮುನಿಗಳೂ ದೇವತೆಗಳೂ ಕೂಡ ಕಾಮಕ್ರೋಧಲೋಭಮೋಹಗಳಿಂದ ಕೂಡಿ ಪಾಪವನ್ನು ಮಾಡುವವರಾಗಿಯೂ, ಮೋಸದಲ್ಲಿ ನಿಪುಣರಾಗಿಯೂ ಪರಿಣಮಿಸಿದರೆ ಧರ್ಮವು ಎಲ್ಲಿದೆಯೆಂದು ಹೇಳಬೇಕು? ಅದರ ಗತಿಯೇನು?

**ಇಂದ್ರೋಽಗ್ನಿಶ್ಚಂದ್ರಮಾ ದೇವಾಃ ಪರದಾರಾಭಿಲಂಪಟಾಃ ।**
**ಆರ್ಯತ್ವಂ ಭುವನೇಷ್ವೇಷು ಸ್ಥಿತಂ ಕುತ್ರ ಮುನೇ ವದ ॥೧೩॥**

ಎಲೈ ವ್ಯಾಸಮುನಿಯೇ, ಇಂದ್ರನು, ಅಗ್ನಿಯು, ಚಂದ್ರನು, ಬ್ರಹ್ಮನು ಇಂತಹ ಮುಖ್ಯ ದೇವತೆಗಳೇ ಪರದಾರಾಸಕ್ತರಾಗಿ ಎಂದರೆ ಮತ್ತೊಬ್ಬರ ಪತ್ನಿಯರಲ್ಲಿ ಅನುರಕ್ತರಾಗಿ ವ್ಯಭಿಚರಿಸಿದರೆ, ಈ ಪ್ರಪಂಚದಲ್ಲಿ ಸದಾಚಾರಪರತೆಯು ಎಲ್ಲಿದೆಯೆಂದು ಹೇಳಬೇಕು? ತಿಳಿಯಿಸು.

**ವಚನಂ ಕಸ್ಯ ಮಂತವ್ಯಮುಪದೇಶಧಿಯಾಽನಘ ।**
**ಸರ್ವೇ ಲೋಭಾಭಿಭೂತಾಸ್ತೇ ದೇವಾಶ್ಚ ಮುನಯಸ್ತದಾ ॥೧೪॥**

ಎಲೈ ನಿಷ್ಕಲ್ಮಷನಾದ ವ್ಯಾಸನೇ, ಹೀಗೆ ದೇವತೆಗಳೂ, ಋಷಿಗಳೂ ಮುಂತಾದ ಶ್ರೇಷ್ಠಜನರೇ ಲೋಭಾದಿಗಳಿಂದ ಪರವಶರಾಗಿ ಹೀನಕೃತ್ಯಗಳನ್ನು ಮಾಡುವವರಾದರೆ, ಲೋಕದಲ್ಲಿ ಯಾರ ಮಾತನ್ನು ಉಪದೇಶವೆಂದು ಸನ್ಮಾನಿಸಲು ಸಾಧ್ಯವಾದೀತು? ಇದನ್ನು ಹೇಳುವವನಾಗು.

॥ ವ್ಯಾಸ ಉವಾಚ ॥

**ಕಿಂ ವಿಷ್ಣುಃ ಕಿಂ ಶಿವೋ ಬ್ರಹ್ಮಾ ಮಘವಾ ಕಿಂ ಬೃಹಸ್ಪತಿಃ ।**
**ದೇಹವಾನ್ಪ್ರಭವತ್ಯೇವ ವಿಕಾರೈಸ್ಸಂಯುತಸ್ಸದಾ ॥೧೫॥**

ವ್ಯಾಸಮುನಿಯು ಹೇಳಿದನು—ವಿಷ್ಣು, ಶಿವ, ಬ್ರಹ್ಮ, ಇಂದ್ರ, ಗುರು, ಯಾರಾದರೇನು, ದೇಹವಿರತಕ್ಕ ಯಾರಾದರೂ ಸರಿಯೆ, ಅವರು ಮೋಹಾದಿವಿಕಾರ ಗಳಿಗೆ ಒಳಪಟ್ಟಿರುವವರಾಗಿಯೇ ಹುಟ್ಟಿರುತ್ತಾರೆ.

**ರಾಗೀ ವಿಷ್ಣುಃ ಶಿವೋ ರಾಗೀ ಬ್ರಹ್ಮಾಪಿ ರಾಗಸಂಯುತಃ ।**
**ರಾಗವಾನ್ ಕಿಮಕೃತ್ಯಂ ವೈ ನ ಕರೋತಿ ನರಾಧಿಪ ।**
**ರಾಗವಾನಪಿ ಚಾತುರ್ಯಾದ್ವಿದೇಹ ಇವ ಲಕ್ಷ್ಯತೇ** ॥೧೬॥

ಓ ದೊರೆಯೇ, ವಿಷ್ಣು, ಶಿವ, ಬ್ರಹ್ಮ ಇವರೂ ಕೂಡ ರಾಗವುಳ್ಳವರೇ ಎಂದರೆ ರಾಗಾದಿವಿಕಾರಗಳಿಗೆ ಒಳಪಡುವವರೇ. ಈ ರೀತಿಯಲ್ಲಿ ಅತಿಯಾದ ರಾಗ ದಿಂದ ಕೂಡಿರುವವರು ಏನನ್ನು ತಾನೇ ಮಾಡುವುದಿಲ್ಲ? ಏತಕ್ಕೆಂದರೆ ಆಶೆಯಿಂದ ಕೂಡಿದವರು ಎಂತೆಂತಹ ಅಕೃತ್ಯವನ್ನು ತಾನೇ ಮಾಡುವುದಿಲ್ಲ? ಅಲ್ಲದೆ ಅತ್ಯಾಶೆ ಯುಳ್ಳವನು ಧೂರ್ತತನದಿಂದ ತನಗೆ ದೇಹವೇ ಇಲ್ಲದವನಂತೆಯೂ, ಜನಕರಾಜನ ಹಾಗೆ ಜ್ಞಾನಿಯಂತೆಯೂ ತೋರ್ಪಡಿಸಿಕೊಳ್ಳುತ್ತಾನೆ.

**ಸಂಪ್ರಾಪ್ತೇ ಸಂಕಟೇ ಸೋಽಪಿ ಗುಣೈಃ ಸಂಬಾಧ್ಯತೇ ಕಿಲ ।**
**ಕಾರಣಾದ್ರಹಿತಂ ಕಾರ್ಯಂ ಕಥಂ ಭವಿತುಮರ್ಹತಿ** ॥೧೭॥

ಏಕೆಂದರೆ ಅಂಥವನ ಧೂರ್ತತನವು ಸಂಕಟಕಾಲವು ಬಂದಾಗ ವ್ಯಕ್ತವಾಗು ತ್ತದೆ. ಆಗ ಆ ವಂಚಕನೂ ಸತ್ತ್ವರಜಸ್ತಮೋಗುಣಗಳ ವಿಕಾರಗಳನ್ನು ಮುಚ್ಚಲಾಗದೆ ತೋರ್ಪಡಿಸಬೇಕಾಗುತ್ತದೆ. ಅವರ ಆ ಗುಣಗಳು ಪ್ರಾರಬ್ಧಕರ್ಮವಶದಿಂದ ಹೆಚ್ಚಿ ಅಥವಾ ಕುಗ್ಗಿ ಹತೋಟಿಯನ್ನು ತಪ್ಪುತ್ತವೆ. ಹೀಗೆ ಮಿತಿಮೀರಿದ ಆ ಗುಣಗಳಿಂದ ಅವರೂ ವಿಷಯಲಂಪಟರಾಗುತ್ತಾರೆನ್ನುವುದು ಸ್ವಾಭಾವಿಕವಾಗಿರುತ್ತದೆ. ಏಕೆಂದರೆ ಕಾರಣವಿಲ್ಲದೆ ಯಾವ ಕಾರ್ಯವೂ ಎಲ್ಲಿಯೂ ಉಂಟಾಗಿರುವುದೇ ಇಲ್ಲವಷ್ಟೆ? ಹಾಗೆಯೇ ಈ ರಾಜಸತಾಮಸಗುಣಗಳು ಇರುವುದರಿಂದ ಅವರೂ ಈ ರೀತಿಯಾದ ಕಾರ್ಯಪರಿ ಣಾಮವನ್ನು ಪ್ರಕಟಮಾಡಿಯೇ ಮಾಡುವರು. ಏಕೆಂದರೆ ಅಂಥವರಿಗೆ ಸಫಲವಾಗಿ ರುವ ಇಂದ್ರಿಯನಿಗ್ರಹವಿಲ್ಲದಿರುವುದೇ ಕಾರಣವು ಎಂದು ತಾತ್ಪರ್ಯವು. ಅಂಥವರು ಪರೋಪದೇಶಕಾಲದಲ್ಲಿ ಪಂಡಿತರಂತಿರುತ್ತಾ ವಾಸ್ತವವಾಗಿ ತಾವು ಕಾಮಿನೀಕಾಂಚನ ಗಳ ಬಲೆಗೆ ಸಿಕ್ಕಿ ಸಂಕಟಪಡುತ್ತಲೇ ಇರುವರು ಎಂದು ಭಾವವು.

**ಬ್ರಹ್ಮಾದೀನಾಂ ಚ ಸರ್ವೇಷಾಂ ಗುಣಾ ಏವ ಹಿ ಕಾರಣಂ ।**
**ಪಂಚವಿಂಶತ್ಸಮುದ್ಭೂತಾ ದೇಹಾಸ್ತೇಷಾಂ ನ ಚಾನ್ಯಥಾ ॥೧೮॥**

ಏಕೆಂದರೆ ಬ್ರಹ್ಮನೇ ಮೊದಲಾದ ಎಲ್ಲರೂ ಈ ಮೂರು ಗುಣಗಳಿಂದ ಕೂಡಿರುವುದೇ ಈ ರೀತಿಯ ಅಕೃತ್ಯಕ್ಕೆ ಕಾರಣವು. ಅವರ ಉತ್ಪತ್ತಿಯೂ ಇಪ್ಪತ್ತೈದು ತತ್ತ್ವಗಳಿಂದ ಕೂಡಿ ಉಂಟಾಗಿರುವುದೇ ಹೊರತು ಬೇರೆ ಯಾವುದ ರಿಂದಲೂ ಅಲ್ಲವು. ಆದಕಾರಣ ಈರೀತಿ ನಡೆಯುವುದು ಸ್ವಾಭಾವಿಕವಾಗಿ ಸಾಮಾನ್ಯ ವಾಗಿ ಅನಿವಾರ್ಯವಾದುದೆಂದು ತಾತ್ಪರ್ಯವು.

**ಕಾಲೇ ಮರಣಧರ್ಮಾಸ್ತೇ ಸಂದೇಹಃ ಕೋಽತ್ರ ತೇ ನೃಪ ।**
**ಪರೋಪದೇಶೇ ವಿಸ್ಪಷ್ಟಂ ಶಿಷ್ಟಾಃ ಸರ್ವೇ ಭವಂತಿ ಚ ॥೧೯॥**

ಓ ಜನಮೇಜಯರಾಜನೇ, ಸಮಯವು ಒದಗಲು ಈ ಗುಣತ್ರಯಧರ್ಮ ಗಳಿಂದ ಕೂಡಿರುವ ಇವರು ನಾಶವನ್ನು ಹೊಂದಿಯೇ ಹೊಂದುವರು. ಇದರಲ್ಲಿ ನೀನು ಸಂದೇಹಪಡತಕ್ಕದ್ದಿಲ್ಲ. ಇವರೆಲ್ಲರೂ ಕೂಡ ಇನ್ನೊಬ್ಬರಿಗೆ ಹೇಳುವುದರಲ್ಲಿ ಮಾತ್ರ ಶಿಷ್ಟರೇ ಹೊರತು ಸ್ವಾನುಷ್ಠಾನ ಸಮಯದಲ್ಲಿ ಅಲ್ಲವು. ಹೀಗೆ ಅವಿಗೀತ ಶಿಷ್ಟರೂ ಅಂಥವರ ಆಚಾರವೂ ಸಾಮಾನ್ಯವಾಗಿ ಲೋಕದಲ್ಲಿ ಕಂಡುಬರುವುದಿಲ್ಲ ವೆಂಬುದು ನಿಜವೇನೋ ಹೌದು ಎಂದು ತಾತ್ಪರ್ಯವು.

**ವಿಪ್ಲುತಿರ್ಹ್ಯವಿಶೇಷೇಣ ಸ್ವಕಾರ್ಯೇ ಸಮುಪಸ್ಥಿತೇ ।**
**ಕಾಮಃಕ್ರೋಧಸ್ತಥಾ ಲೋಭದ್ರೋಹಾಹಂಕಾರಮತ್ಸರಾಃ ॥೨೦॥**

ಇಂಥವರಿಗೆ ತಾವೇ ಅನುಷ್ಠಾನಮಾಡಬೇಕಾದ ಕಾರ್ಯವು ಒದಗಿಬಂದರೆ ಆಗ ಕಾಮ, ಕ್ರೋಧ, ಲೋಭ, ಮೋಹ, ಅಹಂಕಾರ, ಹೊಟ್ಟೆಕಿಚ್ಚು ಇವುಗಳಿಗೆ ಆಧಿಕ್ಯವುಂಟಾಗಿ ಒಳ್ಳೆಯ ಗುಣಗಳು ತನ್ನಷ್ಟಕ್ಕೆ ತಾನೇ ಲುಪ್ತವಾಗಿ ಹೋಗುತ್ತವೆ. ಹೀಗೆ, ಸ್ವಕಾರ್ಯಸಾಧನೆಯನ್ನು ಮಾಡಿಕೊಳ್ಳಬೇಕಾಗಿ ಬಂದಾಗ ದೊಡ್ಡವರೆನ್ನಿಸಿ ಕೊಂಡಿರುವವರಿಗೂ ಸ್ವಭಾವವು ಬದಲಾಯಿಸಿಹೋಗುತ್ತದೆಂಬುದು ನಿಜವು.

**ದೇಹವಾನ್ಕಃ ಪರಿತ್ಯಕ್ತುಮಿಾಶೋ ಭವತಿ ತಾನ್ಪುನಃ ।**
**ಸಂಸಾರೋಽಯಂ ಮಹಾರಾಜ ಸದೈವೈವಂ ವಿಧಃ ಸ್ಮೃತಃ ॥೨೧॥**

ಓ ದೊರೆಯೇ, ಪೃಥಿವೀ, ನೀರು, ತೇಜಸ್ಸು, ವಾಯು, ಆಕಾಶ ಈ ಐದು ಪಂಚಭೂತಗಳಿಂದ ಉಂಟಾಗಿರುವ ದೇಹವನ್ನು ಉಳ್ಳ ಯಾವನು ತಾನೇ ಈ ಗುಣಗಳನ್ನು ಬಿಟ್ಟುಬಿಡಲೂ, ಜಯಿಸಿ ಹತೋಟಿಯಲ್ಲಿಡಲೂ ಸಮರ್ಥನಾಗುತ್ತಾನೆ? ಈ ಪ್ರಾಪಂಚಿಕವಾದ ಸಂಸಾರದಲ್ಲಿನ ವ್ಯವಹಾರವೇ ಈ ರೀತಿಯಾಗಿರುವಂತೆ ಸೃಷ್ಟಿಸಲ್ಪಟ್ಟಿರುತ್ತದೆ ಎಂದು ಹೇಳಿದೆ. ಹೀಗೆ ಕಾಲವಶದಿಂದ ದೇವತೆಗಳಲ್ಲೂ ಗುಣಗಳ ಬದಲಾವಣೆಯು ಕಂಡುಬರುತ್ತದೆ.

**ನಾನ್ಯಥಾ ಪ್ರಭವತ್ಯೇವ ಶುಭಾಶುಭಮಯಃ ಕಿಲ ।**
**ಕದಾಚಿದ್ಭಗವಾನ್ವಿಷ್ಣುಸ್ತಪಶ್ಚರತಿ ದಾರುಣಂ ॥೨೨॥**

ಈ ಸಂಸಾರಪ್ರಪಂಚವು ಒಳ್ಳೆಯದು, ಕೆಟ್ಟದ್ದು ಎಂಬ ಎರಡು ವಿಧಗಳಿಂದಲೂ ಕೂಡಿಯೇ ಇರುವುದರಿಂದ ಅದು ಬೇರೆ ಸ್ವಭಾವಪರಿಣಾಮುಗಳುಳ್ಳದ್ದಾಗಿ ಆಗಲು ಸಾಧ್ಯವಿರುವುದೇ ಇಲ್ಲವು. ಆದುದರಿಂದಲೇ ವಿಷ್ಣುವೂ ತಾನು ಮಾಡಿದ ಪಾಪಗಳ ನಾಶಕ್ಕಾಗಿಯೇ ಒಂದೊಂದು ಸಮಯದಲ್ಲಿ ಕಠಿಣವಾದ ತಪಸ್ಸನ್ನು ಮಾಡುತ್ತಾನೆಂಬುದೂ ಕೇಳಿಬರುತ್ತದೆ.

**ಕದಾಚಿದ್ವಿವಿಧಾನ್ಯಜ್ಞಾನ್ವಿತನೋತಿ ಸುರಾಧಿಪಃ ।**
**ಕದಾಚಿತ್ತು ರಮಾರಂಗರಂಜಿತಃ ಪರಮೇಶ್ವರಃ ॥೨೩॥**

**ರಮತೇ ಕಿಲ ವೈಕುಂಠೇ ತದ್ವಶಸ್ತರುಣೋ ವಿಭುಃ ।**

ಓ ರಾಜನೇ, ಆದುದರಿಂದ ಒಂದೊಂದು ಕಾಲದಲ್ಲಿ ದೇವೇಂದ್ರನೂ ತನ್ನ ಪಾಪನಾಶಕ್ಕಾಗಿ ಅನೇಕಬಗೆಯ ಯಾಗಗಳನ್ನು ಮಾಡುತ್ತಾನೆಂದೂ ಹೇಳಿದೆ. ಈ ಕಾರಣಗಳಿಂದಲೇ ಗುಣತ್ರಯದ ಪ್ರಾಬಲ್ಯಕ್ಕೆ ಪರವಶನಾಗಿ ವಿಷ್ಣುವೂ ಲಕ್ಷ್ಮಿಯೊಡನೆ ವೈಕುಂಠದಲ್ಲಿ ಒಂದೊಂದು ಸಲ ರಾಗಪರವಶನಾಗಿ ವಿಹರಿಸುತ್ತಿರುತ್ತಾನೆ.

**ಕದಾಚಿದ್ದಾನವೈಃ ಸಾರ್ಧಂ ಯುದ್ಧಂ ಪರಮದಾರುಣಂ ॥೨೪॥**

**ಕರೋತಿ ಕರುಣಾಸಿಂಧುಸ್ತದ್ಬಾಣಾಃ ಪೀಡಿತೋ ಭೃಶಂ ।**
**ಕದಾಚಿಜ್ಜಯಮಾಪ್ನೋತಿ ದೈವಾತ್ಸೋಽಪಿ ಪರಾಜಯಂ ॥೨೫॥**

ಅವನು ದಯಾಳುವಾದರೂ ಕೆಲವುವೇಳೆ ರಾಕ್ಷಸರೊಡನೆ ಘೋರಯುದ್ಧ ವನ್ನು ಮಾಡುತ್ತಾನೆ. ಕೆಲವುವೇಳೆ ಜಯವನ್ನು ಹೊಂದುತ್ತಾನೆ. ಕೆಲವುವೇಳೆ ಅವರ ಬಾಣಗಳಿಂದ ಪೀಡಿತನಾಗಿ ದುರದೃಷ್ಟದಿಂದ ಸೋಲನ್ನು ಕೂಡ ಹೊಂದುವನು.

**ಸುಖದುಃಖಾಭಿಭೂತೋಽಸೌ ಭವತ್ಯೇವ ನ ಸಂಶಯಃ ।**
**ಶೇಷೇ ಶೇತೇ ಕದಾಚಿದ್ವೈ ಯೋಗನಿದ್ರಾಸಮಾವೃತಃ ॥೨೬॥**

ಆ ವಿಷ್ಣುವು ಹಾಗೆಯೇ ಕೆಲವುವೇಳೆ ಸುಖದುಃಖಗಳಲ್ಲಿ ಮುಳುಗಿದವ ನಾಗಿಯೇ ಇರುತ್ತಾನೆ. ಇದರಲ್ಲಿ ಸಂಶಯವಿಲ್ಲ. ಕೆಲವುವೇಳೆ ಬಳಲಿ ಬೆಂಡಾಗಿ ಯೋಗನಿದ್ರೆಯಲ್ಲಿ ಆದಿಶೇಷನ ಮೇಲೆ ಮಲಗಿ ನಿದ್ರಿಸುವನು.

**ಕಾಲೇ ಜಾಗರ್ತಿ ವಿಶ್ವಾತ್ಮಾ ಸ್ವಭಾವಪ್ರತಿಬೋಧಿತಃ ।**
**ಶರ್ವೋಽ ಬ್ರಹ್ಮಾ ಹರಿಶ್ಚೈತ ಇಂದ್ರಾದ್ಯಾ ಯೇ ಸುರಾಸ್ತಥಾ ॥೨೭॥**

ಪ್ರತಿಸೃಷ್ಟಿಯ ಪ್ರಾರಂಭಕಾಲದಲ್ಲಿ ವಿರಾಡ್ರೂಪನೂ, ಪರಮಾತ್ಮನೂ ಆದ ಪರಮೇಶ್ವರನು ಎಚ್ಚರಗೊಂಡಿರುತ್ತಾನೆ. ಈ ರೀತಿಯಲ್ಲಿಯೇ, ಈಶ್ವರ, ಬ್ರಹ್ಮ, ಇಂದ್ರ ಮೊದಲಾದ ದೇವತೆಗಳೆಲ್ಲರೂ ಅವಶ್ಯಕವಾದ ಅಥವಾ ವಿಶೇಷವಾದ ಆ ಸಮಯವು ಬರಲು ಸ್ವಭಾವದಿಂದಲೇ ಎಚ್ಚರಗೊಂಡವರಾಗಿ ಜಾಗರೂಕರಾಗಿರುತ್ತಾ ಚಟುವಟಿಕೆಯುಳ್ಳವರಾಗುತ್ತಾರೆ.

**ಮುನಯಶ್ಚ ವಿನಿರ್ಮಾಣೈಃ ಸ್ವಾಯುಷೋ ವಿಚರಂತಿ ಹಿ ।**
**ನಿಶಾವಸಾನೇ ಸಂಜಾತೇ ಜಗತ್ಸ್ಥಾವರಜಂಗಮಂ ॥೨೮॥**
**ಮ್ರಿಯತೇ ನಾತ್ರ ಸಂದೇಹೋ ನೃಪ ಕಿಂಚಿತ್ಕದಾಪಿ ಚ ।**

ಪ್ರಳಯಕಾಲರೂಪವಾದ ರಾತ್ರಿಯು ಕಳೆಯಲು ಆಗ ಬೆಳಿಗ್ಗೆ ಎಂದರೆ ಸೃಷ್ಟಿಕಾಲದಲ್ಲಿ ಋಷಿಗಳೂ ಕೂಡ ತಮ್ಮ ಆಯುಃಕಾಲದ ಪರಿಮಾಣವೂ ಅನುಸೃಷ್ಟಿ ಮುಂತಾದ ಕರ್ತವ್ಯಕಾರ್ಯಗಳೂ ಕ್ಲೃಪ್ತವಾಗಿರಲು ಆ ಕಾರ್ಯನಿರ್ವಾಹದಲ್ಲಿ ತೊಡಗಿ ದವರಾಗಿರುತ್ತಾರೆ. ಓ ಜನಮೇಜಯರಾಜನೇ, ರಾತ್ರಿಯಂತೆ ಚಟುವಟಿಕೆ ಇಲ್ಲ ದಿರುವ ಪ್ರಳಯಕಾಲವು ಬರಲು ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ನಾಶ ವನ್ನು ಹೊಂದುತ್ತದೆ. ಈ ವಿಷಯದಲ್ಲಿ ಯಾವಾಗಲೂ ಏನೂ ಸಂದೇಹವಿಲ್ಲವು.

**ಸ್ವಾಯುಷೋಽನ್ತೇ ಪದ್ಮಜಾದ್ಯಾಃ ಕ್ಷಯಮೃಚ್ಛಂತಿ ಪಾರ್ಥಿವ ॥**
**ಪ್ರಭವಂತಿ ಪುನರ್ವಿಷ್ಣುಹರಶಕ್ರಾದಯಃ ಸುರಾಃ ।**
**ತಸ್ಮಾತ್ಕಾಮಾದಿಕಾನ್ಭಾವಾನ್ದೇಹವಾನ್ ಪ್ರತಿಪದ್ಯತೇ ॥೩೦॥**

ಓ ದೊರೆಯೇ ಇದರಂತೆಯೇ ಬ್ರಹ್ಮನೇ ಮೊದಲಾದವರು ತಮ್ಮ ಕ್ಲೃಪ್ತವಾದ ಆಯುಸ್ಸಿನ ಅಂತ್ಯದಲ್ಲಿ ನಾಶವನ್ನೈದುವರು. ಮತ್ತು ವಿಷ್ಣು, ಶಿವ, ಇಂದ್ರ ಮೊದಲಾದ ಮುಖ್ಯ ದೇವತೆಗಳೂ ಪುನಃ ಪುನಃ ಹುಟ್ಟುತ್ತಾರೆ. ಎಂದರೆ ಆಧಿಕಾರಿಕ ಶರೀರವನ್ನು ಗ್ರಹಿಸಿ ಬರುತ್ತಾರೆ. ಈ ರೀತಿಯಲ್ಲಿ ಹುಟ್ಟಿ ಇತರರಂತೆ ದೇಹವನ್ನು ಹೊಂದುವವರಾದುದರಿಂದ ಆ ಬ್ರಹ್ಮ ಮುಂತಾದವರೂ ಕಾಮಕ್ರೋಧಪರವಶರೂ, ಭೋಗಾದಿಗಳನ್ನು ಹೊಂದಲು ಅಪೇಕ್ಷೆಯುಳ್ಳವರೂ ಆಗುತ್ತಾರೆ. ಆದುದರಿಂದ ದೇಹವನ್ನು ಪಡೆಯುವವರೆಲ್ಲರೂ ಸಾಮಾನ್ಯವಾಗಿ ಕಾಮ, ಕ್ರೋಧ, ಲೋಭ ಮೊದಲಾದ ಭಾವಗಳನ್ನು ಹೊಂದಿರುತ್ತಾರೆ.

**ನಾತ್ರ ತೇ ವಿಸ್ಮಯಃ ಕಾರ್ಯಃ ಕದಾಚಿದಪಿ ಪಾರ್ಥಿವ ।**
**ಸಂಸಾರೋಽಯಂ ತು ಸಂದಿಗ್ಧಃ ಕಾಮಕ್ರೋಧಾದಿಭಿರ್ನೃಪ ॥೩೧॥**

ಓ ಜನಮೇಜಯನೇ, ಈ ಸಂಸಾರವು ಈರೀತಿಯಾಗಿ ಕಾಮಕ್ರೋಧಾದಿಗಳ ಸಂಪರ್ಕದಿಂದ ಕೂಡಿಯೇ ಇರುವುದು. ಅದಕ್ಕಾಗಿ ನೀನು ಯಾವಾಗಲೂ ಆಶ್ಚರ್ಯ ಪಡಬೇಕಾದುದಿಲ್ಲವು.

**ದುರ್ಲಭಸ್ತದ್ವಿನಿರ್ಮುಕ್ತಃ ಪುರುಷಃ ಪರಮಾರ್ಥವಿತ್ ।**
**ಯೋ ಬಿಭೇತೀಹ ಸಂಸಾರೇ ಸ ದಾರಾನ್ನ ಕರೋತ್ಯಪಿ ॥೩೨॥**

ಪರಮಾರ್ಥವನ್ನು ಎಂದರೆ ಪರಬ್ರಹ್ಮತತ್ತ್ವದ ವಾಸ್ತವಸ್ವರೂಪವನ್ನೂ ಸಂಸಾರದ ನಿಜಸ್ವರೂಪವನ್ನೂ ತಿಳಿದವನು ದುರ್ಲಭನು. ಅಲ್ಲದೆ, ಎಲ್ಲರೂ ಈ ಗುಣಗಳಿಂದ ಕೂಡಿದವರಾಗಿಯೇ ಇರುತ್ತಾರೆ. ಆದುದರಿಂದ ಇದರಿಂದ ಬಿಡಲ್ಪಟ್ಟವನು ಸಿಕ್ಕುವುದು ಇನ್ನೂ ಅಸಾಧ್ಯವು. ಹೀಗಿರಲು ಅಂತಹ ಪರಾತ್ಪರವಸ್ತುವನ್ನು ಹೊಂದಬೇಕಾದರೆ ಈ ಸಂಸಾರವನ್ನು ಬಿಡಬೇಕು. ಈ ರೀತಿಯಿಂದ ಕೂಡಿದ ಸಂಸಾರವನ್ನು ನೋಡಿ ಯಾವನು ಹೆದರಿಕೊಳ್ಳುವನೋ ಅಂತಹ ಮನುಷ್ಯನು ಮದುವೆಯನ್ನೇ ಮಾಡಿಕೊಳ್ಳುವುದಿಲ್ಲವು.

**ವಿಮುಕ್ತಃ ಸರ್ವಸಂಗೇಭ್ಯೋ ವಿಚರತ್ಯವಿಶಂಕಿತಃ ।**
**ತಸ್ಮಾದ್ಬೃಹಸ್ಪತೇರ್ಭಾರ್ಯಾ ಶಶಿನಾ ಲಂಭಿತಾ ಪುನಃ ॥೩೩॥**

ಈ ಸಂಸಾರದಲ್ಲಿರುವ ಎಲ್ಲ ಬಗೆಯ ರಾಗ ಮೋಹ ಮುಂತಾದವುಗಳಿಗೆ ಕಾರಣವಾದ ಗುಣತ್ರಯದಿಂದುಂಟಾಗುವ ಬಂಧನದಿಂದ ಬಿಡಲ್ಪಟ್ಟವನು ಯಾವ ಆತಂಕವೂ ಇಲ್ಲದೆ ಸಂಚರಿಸುತ್ತಿರುತ್ತಾನೆ. ಆದಕಾರಣದಿಂದ ಹೀಗೆ ಗುಣಲೇಪ ಗಳಿಂದ ಬಿಡಲ್ಪಡದೇ ಇರುವುದರಿಂದಲೇ ಚಂದ್ರನು ಮತ್ತೆ ಬೃಹಸ್ಪತಿಯ ಹೆಂಡತಿ ಯಾದ ತಾರಾದೇವಿಯ ಉಪಭೋಗವನ್ನು ಆಶಿಸಿದನು.

**ಗುರುಣಾ ಲಂಭಿತಾ ಭಾರ್ಯಾ ತಥಾ ಭ್ರಾತುರ್ಯವೀಯಸಃ ।**
**ಏವಂ ಸಂಸಾರಚಕ್ರೇಽಸ್ಮಿನ್ ರಾಗಲೋಭಾದಿಭಿರ್ವೃತಃ ॥೩೪॥**
**ಗಾರ್ಹಸ್ಥ್ಯಂ ಚ ಸಮಾಸ್ಥಾಯ ಕಥಂ ಮುಕ್ತೋ ಭವೇನ್ನರಃ ।**

ಹಾಗೆಯೇ ಗುರುವೂ ಸಹ ತನ್ನ ತಮ್ಮನಾದ ಆನರ್ತನ ಹೆಂಡತಿಯನ್ನು ಭೋಗಿಸಿದನು. ಈರೀತಿಯಾಗಿರುವ ರಾಗಾದಿಗಳಿಂದ ತುಂಬಿ ತುಳುಕುತ್ತಿರುವ ಸಂಸಾರಚಕ್ರದಲ್ಲಿ ಗಾರ್ಹಸ್ಥ್ಯಾಶ್ರಮವನ್ನು ಎಂದರೆ ಮದುವೆಮಾಡಿಕೊಂಡು ವಿಷಯಭೋಗಗಳಲ್ಲಿ ಆಶೆಯನ್ನು ಉಳ್ಳ ಮನುಷ್ಯನು ಮೋಕ್ಷವನ್ನು ಸಂಪಾದಿ ಸುತ್ತೇನೆಂದರೆ ಅಂಥವನಿಗೆ ಅದು ಹೇಗೆ ತಾನೇ ಸಾಧ್ಯವಾದೀತು ?

**ತಸ್ಮಾತ್ಸರ್ವಪ್ರಯತ್ನೇನ ಹಿತ್ವಾ ಸಂಸಾರಸಾರತಾಂ ॥೩೫॥**
**ಆರಾಧಯೇನ್ಮಹೇಶಾನೀಂ ಸಚ್ಚಿದಾನಂದರೂಪಿಣೀಂ ।**

ಸಂಸಾರದಲ್ಲಿ ಆಸಕ್ತಿಯುಳ್ಳವನು ಅದರಿಂದ ಬಿಡುಗಡೆಯನ್ನು ಹೊಂದ ಲಾರನು. ಆದರೂ ವಿವೇಕದಿಂದ ಎಲ್ಲ ಪ್ರಯತ್ನವನ್ನೂ ಮಾಡಿ ಸಂಸಾರದಲ್ಲಿ ಆದರದ ಸಮಾಚಾರವನ್ನೇ ಬಿಟ್ಟು, ಸತ್ಯಜ್ಞಾನಾನಂದರೂಪಿಣಿಯಾದ ಆ ಮಹೇಶ್ವರಿಯನ್ನು ಧ್ಯಾನಿಸಬೇಕು. ಹೀಗೆ ಸಂಸಾರದಲ್ಲಿ ಆಸಕ್ತಿಯನ್ನು ಬಿಟ್ಟವರೇ ಆಪ್ತರು. ಅಂಥವರ ವಾಕ್ಯವು ಪ್ರಾಮಾಣಿಕವಾದುದರಿಂದ ಆಪ್ತವಾಕ್ಯವೆಂಬ ಪ್ರಮಾಣವೇ ಇಲ್ಲದೇ ಹೋಗುತ್ತದೆ ಎಂಬ ಆಕ್ಷೇಪಣೆಯು ನಿಲ್ಲುವುದಿಲ್ಲವೆಂದು ಭಾವವು. ಆದರೆ ಹೀಗೆ ಸಂಸಾರದಲ್ಲಿ ಆದರವಿಲ್ಲದಿರುವಿಕೆಯೂ, ಪ್ರಯತ್ನಪೂರ್ವಕವಾಗಿ ಅದರಿಂದ ಬಿಡುಗಡೆ ಯನ್ನು ಪಡೆಯುವುದೂ ಅಸಾಧ್ಯವು ಎಲ್ಲಿಯೂ ಕಂಡುಬರುತ್ತಿಲ್ಲವು. ಏಕೆಂದರೆ, ಈ ಪ್ರಪಂಚದಲ್ಲಿರುವುದೆಲ್ಲವೂ ಗುಣತ್ರಯದ ಪರಿಣಾಮವಾಗಿರಲು ಜನರೆಲ್ಲರೂ

ಸ್ವಾಭಾವಿಕವಾಗಿ ಅನಿವಾರ್ಯವಾಗಿ ಗುಣತ್ರಯಬದ್ಧರಾಗಿರುತ್ತಾರೆ ಎಂದು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನವೇನೆಂದರೆ—ಆ ಗುಣತ್ರಯವೂ ಆದಿಶಕ್ತಿಯ ಸ್ವರೂಪವಾಗಿ ಆ ಮಹಾತಾಯಿಯ ಅಧೀನವಾಗಿರುವುದರಿಂದ ಆ ಮಾಯೆಯ ಆರಾಧನೆಯಿಂದ ಅವಳ ಅನುಗ್ರಹವನ್ನು ಪಡೆದು ಮುಕ್ತಿಯನ್ನೂ ಪಡೆಯಬಹುದೆಂದು ಸಮಾಧಾನವು.

**ತನ್ಮಾಯಾಗುಣತಶ್ಛನ್ನಂ ಜಗದೇತಚ್ಚರಾಚರಂ ॥೩೬॥**
**ಭ್ರಮತ್ಯುನ್ಮತ್ತವತ್ಸರ್ವಂ ಮದಿರಾಮತ್ತವನ್ನೃಪ ।**

ಈ ಚರಾಚರಪ್ರಪಂಚವೆಲ್ಲವೂ ಅವಳ ಮಾಯಾಗುಣದಿಂದ ಮುಚ್ಚಲ್ಪಟ್ಟಿರುತ್ತದೆ ಎಂದರೆ ಮಾಯೆಯು ಎಲ್ಲವನ್ನೂ ಆವರಿಸಿರುವುದು. ಆದರೂ ಆ ಮಹಾಮಾಯೆಯ ನಿಜಸ್ವರೂಪವನ್ನು ತಿಳಿದು ಆರಾಧಿಸುವುದರಿಂದ ಭಕ್ತರಿಗೆ ಮೋಕ್ಷವನ್ನು ಆ ತಾಯಿಯೇ ಅನುಗ್ರಹಿಸುತ್ತಾಳೆ ಎಂದು ತಾತ್ಪರ್ಯವು. ಆದುದರಿಂದ ಓ ದೊರೆಯೇ ಗುಣತ್ರಯರೂಪಳಾದ ಆ ಮಾಯೆಯಿಂದ ಕೂಡಿದ ಈ ಚರಾಚರ ಪ್ರಪಂಚವೆಲ್ಲವೂ ಮದ್ಯಪಾನಮಾಡಿ ಮತ್ತರಾಗಿರುವವರಂತೆ ವರ್ತಿಸುತ್ತಿದೆ.

**ತಸ್ಯಾ ಆರಾಧನೇನೈವ ಗುಣಾನ್ಸರ್ವಾನ್ವಿಮೃದ್ಯ ಚ ॥೩೭॥**
**ಮುಕ್ತಿಂ ಭಜೇತ ಮತಿಮಾನ್ನಾನ್ಯಃ ಪಂಥಾಸ್ತ್ವಿತಃ ಪರಂ ।**

ಆದರೂ ಆ ಸತ್ತ್ವರಜಸ್ತಮೋಗುಣಗಳನ್ನು ನಾಶಮಾಡಿ ಎಂದರೆ, ಗುಣತ್ರಯದ ಅಭಿಮಾನವನ್ನೂ ಸಂಪರ್ಕವನ್ನೂ ನಾಶಮಾಡಿಕೊಂಡು ಆ ದೇವಿಯನ್ನು ಆರಾಧನೆ ಮಾಡುವುದರಿಂದಲೇ ಬುದ್ಧಿವಂತನಾದವನು ಮುಕ್ತಿಯನ್ನೂ ಹೊಂದುವನು. ಆದುದರಿಂದ ಮೋಕ್ಷವನ್ನು ಸಂಪಾದಿಸಲು ಈ ದಾರಿಯನ್ನು ಬಿಟ್ಟು ಬೇರೆ ಯಾವ ಮಾರ್ಗವೂ ಇಲ್ಲವೇ ಇಲ್ಲವು.

**ಆರಾಧಿತಾ ಮಹೇಶಾನೀ ನ ಯಾವತ್ಕುರುತೇ ಕೃಪಾಂ ॥೩೮॥**
**ತಾವತ್ಕುತೋ ಭವೇತ್ಸುಖಂ ಕಸ್ಮಾತ್ಕೋಽನ್ಯೋಽಸ್ತಿ ದಯಯಾ ಯುತಃ ।**
**ಕರುಣಾಸಾಗರಾಮೇತಾಂ ಭಜೇತ್ತಸ್ಮಾದಮಾಯಯಾ ॥೩೯॥**

ಆ ಮಹೇಶ್ವರಿಯನ್ನು ಪೂಜೆ, ಧ್ಯಾನ ಮುಂತಾದವುಗಳಿಂದ ಸಂತೋಷಪಡಿಸಬೇಕು. ಅಲ್ಲದೆ ಅವಳು ಕೃಪೆಯನ್ನು ಎಲ್ಲಿಯವರೆಗೆ ತೋರಿಸುವುದಿಲ್ಲವೋ ಅಲ್ಲಿಯ ವರೆಗೆ ಇನ್ನು ಯಾವುದರಿಂದ ತಾನೇ ಸುಖವನ್ನು ಹೊಂದಲು ಸಾಧ್ಯವಿರು

ವುದು ? ಮತ್ತು ಇನ್ನು ಯಾರು ತಾನೇ ತನ್ನ ಭಕ್ತರನ್ನು ಕಾಪಾಡಲೇಬೇಕೆನ್ನು ವಷ್ಟು ಸರಳವೂ ದೃಢವೂ ಆದ ದಯೆಯಿಂದ ಕೂಡಿದವರಾಗಿ ಇರುವರು ? ಎಲ್ಲರೂ ಅವಳ ಅಧೀನವಾಗಿರುವುದರಿಂದ ಅವಳೇ ದಯೆಯನ್ನು ತೋರಿಸದಿದ್ದರೆ ಮತ್ತೆ ಯಾರು ತಾನೇ ದಯೆಯನ್ನು ತೋರಿಸುವರು ? ಆದುದರಿಂದ ದಯಾಸಾಗರಳಾದ ಆ ಮಹಾಮಾಯೆಯನ್ನು ಆತ್ಮಪರವಂಚನೆಗಳಿಲ್ಲದೆ ಸರಳವೂ, ದೃಢವೂ, ಅನನ್ಯವೂ ಆಗಿರುವ ಭಕ್ತಿಯಿಂದ ಆರಾಧಿಸಬೇಕು.

**ಯಸ್ಯಾಸ್ತು ಭಜನೇನೈವ ಜೀವನ್ಮುಕ್ತತ್ವಮುಶ್ನುತೇ ।**
**ಮಾನುಷ್ಯಂ ದುರ್ಲಭಂ ಪ್ರಾಪ್ಯ ಸೇವಿತಾ ನ ಮಹೇಶ್ವರೀ ॥೪೦॥**
**ನಿಃಶ್ರೇಣಿಕಾಗ್ರಾತ್ಪತಿತಾ ಅಥ ಇತ್ಯೇವ ವಿದ್ಮಹೇ ।**

ಯಾವ ಆ ಮಹಾತಾಯಿಯ ಭಜನೆಮಾತ್ರದಿಂದಲೇ ಈ ಸಂಸಾರದಲ್ಲಿ ನಾನು ನನ್ನದೆಂಬ ಅಭಿಮಾನದುಃಖದಿಂದ ಮುಕ್ತಿಯನ್ನು ಎಂದರೆ ಬಿಡುಗಡೆ ಯನ್ನು ಭಕ್ತನು ಜೀವಿಸಿರುವಾಗಲೂ ಹೊಂದುವನೋ ಎಂದರೆ ದ್ವಂದ್ವಾತೀತನಾಗಿ, ವೈರಾಗ್ಯವನ್ನು ಹೊಂದಿ ನಿಶ್ಚಲವಾದ ಮನಶ್ಶಾಂತಿಯಿಂದ ಕೂಡಿದ ಜೀವನ್ಮುಕ್ತ ಸ್ಥಿತಿಯನ್ನು ಪಡೆಯುವನೋ, ಅಂಥ ಮಹೇಶ್ವರಿಯನ್ನು ದುರ್ಲಭವಾದ ಮನುಷ್ಯ ಜನ್ಮವನ್ನು ಪಡೆದು ವಿವೇಚನಾಶಕ್ತಿಯುಳ್ಳವರಾಗಿದ್ದರೂ ಯಾರು ಭಜಿಸದೆ ಹೋಗುವರೋ, ಅಂತಹವರು ಏಣಿಯ ಮೇಲಿನ ಮೆಟ್ಟಲಿನವರೆಗೂ ಹತ್ತಿ ಅಲ್ಲಿಂದ ಕೆಳಗೆ ಬಿದ್ದವರಂತೆ ಆಗುವರೆಂದು ತಿಳಿಯುತ್ತೇವೆ.

**ಅಹಂಕಾರಾವೃತಂ ವಿಶ್ವಂ ಗುಣತ್ರಯಸಮನ್ವಿತಂ ॥೪೧॥**
**ಅಸತ್ಯೇನಾಪಿ ಸಂಬದ್ಧಂ ಮುಚ್ಯತೇ ಕಥಮನ್ಯಥಾ ।**
**ಹಿತ್ವಾ ಸರ್ವಂ ತತಃ ಸರ್ವೈಃ ಸಂಸೇವ್ಯಾ ಭುವನೇಶ್ವರೀ ॥೪೨॥**

ಸತ್ತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳಿಂದ ಕೂಡಿದ ಅಹಂಕಾರಕ್ಕೆ ಪರವಶವಾಗಿರುವ ಈ ಪ್ರಪಂಚವು ವಾಸ್ತವವಲ್ಲದ್ದೂ, ಬರಿಯ ತೋರಿಕೆಯ ಸ್ವಭಾವ ವುಳ್ಳುದೂ ಆದ ಮಾಯೆಯಿಂದ ಕೂಡಿರುವಂತೆ ಕಾಣಬರುತ್ತಿದೆ. ಆದುದರಿಂದ ಈ ಅಜ್ಞಾನವನ್ನು ತತ್ತ್ವಜ್ಞಾನದಿಂದ ನಿಶ್ಶೇಷವಾಗಿ ಹೋಗಲಾಡಿಸಬೇಕು. ಇದ ಕ್ಕೋಸ್ಕರವಾಗಿ ಭಕ್ತನಾದವನು ಇತರ ಸೇವಾದಿಗಳೆಲ್ಲವನ್ನೂ ಬಿಟ್ಟು ಆ ಭುವನೇ ಶ್ವರಿಯನ್ನು ಆರಾಧಿಸಿ ಇಷ್ಟಾರ್ಥಸಿದ್ಧಿಯನ್ನು ಪಡೆಯಬೇಕು. ಬೇರೆ ಮಾರ್ಗವಿಲ್ಲವು.

|| ರಾಜೋವಾಚ ||

**ಕಿಂ ಕೃತಂ ಗುರುಣಾ ತತ್ರ ಕಾವ್ಯರೂಪಧರೇಣ ಚ ।**
**ಕದಾ ಶುಕ್ರಃ ಸಮಾಯಾತಸ್ತನ್ಮೇ ಬ್ರೂಹಿ ಪಿತಾಮಹ ॥೪೩॥**

ಜನಮೇಜಯರಾಜನು ಹೇಳಿದನು—ಓ ಪಿತಾಮಹನಾದ ವ್ಯಾಸನೇ, ಗುರುವು ಆಗ ಶುಕ್ರನ ರೂಪವನ್ನು ಧರಿಸಿ ಅಲ್ಲಿ ಏನನ್ನು ಮಾಡಿದನು ? ಶುಕ್ರನು ಯಾವಾಗ ಅಲ್ಲಿಗೆ ಬಂದನು ? ಎಂಬುದನ್ನು ನನಗೆ ಹೇಳುವವನಾಗು.

|| ವ್ಯಾಸ ಉವಾಚ ||

**ಶೃಣು ರಾಜನ್ಪ್ರವಕ್ಷ್ಯಾಮಿ ಯತ್ಕೃತಂ ಗುರುಣಾ ತದಾ ।**
**ಕೃತ್ವಾ ಕಾವ್ಯಸ್ವರೂಪಂ ಚ ಪ್ರಚ್ಛನ್ನೇನ ಮಹಾತ್ಮನಾ ॥೪೪॥**

ವ್ಯಾಸಋಷಿಯು ಹೇಳಿದನು—ಮೋಸದಿಂದ ಕಾಣದಂತೆ ಶುಕ್ರನ ರೂಪವನ್ನು ಧರಿಸಿದ್ದ ಗಟ್ಟಿಗನಾದ ಆ ಗುರುವು ಅಲ್ಲಿ ಏನನ್ನು ಮಾಡಿದನೆಂಬುದನ್ನು ಹೇಳುತ್ತೇನೆ. ಎಲೈ ಜನಮೇಜಯರಾಜನೇ ಲಾಲಿಸುವವನಾಗು.

**ಗುರುಣಾ ಬೋಧಿತಾ ದೈತ್ಯಾ ಮತ್ವಾ ಕಾವ್ಯಂ ಸ್ವಕಂ ಗುರುಂ ।**
**ವಿಶ್ವಾಸಂ ಪರಮಂ ಕೃತ್ವಾ ಬಭೂವುಸ್ತನ್ಮಯಾಸ್ತದಾ ॥೪೫॥**

ಆ ರಾಕ್ಷಸರು ಗುರುವಿನಿಂದ ಆ ರೀತಿಯಲ್ಲಿ ಬೋಧಿಸಲ್ಪಡಲು, ಅವರೆಲ್ಲರೂ ಅವನನ್ನು ನಿಜವಾದ ತಮ್ಮ ಗುರು ಶುಕ್ರಾಚಾರ್ಯನೆಂದೇ ತಿಳಿದು ಅವನಲ್ಲಿ ವಿಶ್ವಾಸವನ್ನಿಟ್ಟು ಅತಿ ನಮ್ರತೆಯಿಂದ ಅವನಲ್ಲಿ ಲೀನವಾದ ಮನಸ್ಸುಳ್ಳವರಾದರು.

**ವಿದ್ಯಾರ್ಥಂ ಶರಣಂ ಪ್ರಾಪ್ತಾ ಭೃಗುಂ ಮತ್ವಾಽತಿಮೋಹಿತಾಃ ।**
**ಗುರುಣಾ ವಿಪ್ರಲಬ್ಧಾಸ್ತೇ ಲೋಭಾತ್ಕೋ ವಾ ನ ಮುಹ್ಯತಿ ॥೪೬॥**

ಅವನನ್ನು ಶುಕ್ರನೆಂದು ತಿಳಿದು ತಮಗೆ ಸ್ವಾರ್ಥವನ್ನು ಸಾಧಿಸಿಕೊಡುವ ವಿದ್ಯೆಯನ್ನು ಬೋಧಿಸೆಂದು ಅವನ ಮರೆಹೊಕ್ಕರು. ಆ ಗುರುವು ಈರೀತಿಯಲ್ಲಿ ಮೋಸಮಾಡಿದನು. ಅತ್ಯಾಶೆಯಿಂದ ಯಾರು ತಾನೇ ಮೋಹಗೊಳ್ಳುವುದಿಲ್ಲ ?

**ದಶವರ್ಷಾತ್ಮಕೇ ಕಾಲೇ ಸಂಪೂರ್ಣಸಮಯೇ ತದಾ ।**
**ಜಯಂತ್ಯಾ ಸಹ ಕ್ರೀಡಿತ್ವಾ ಕಾವ್ಯೋ ಯಾಜ್ಯಾನಚಿಂತಯತ್ ॥೪೭॥**

ಶುಕ್ರನು ತನ್ನ ವಾಗ್ದಾನದಂತೆ ಹತ್ತು ವರ್ಷಗಳ ಕಾಲ ಪೂರ್ಣವಾಗಿ ಆ ಜಯಂತಿಯೊಡನೆ ವಿಹರಿಸಿ ಆಮೇಲೆ ತನ್ನನ್ನು ನಂಬಿಕೊಂಡಿದ್ದ ರಾಕ್ಷಸರನ್ನು ಸ್ಮರಿಸಿಕೊಂಡು ಹೀಗೆ ಆಲೋಚಿಸಿದನು.

**ಆಶಯಾ ಮಮ ಮಾರ್ಗಂ ತೇ ಪಶ್ಯಂತಃ ಸಂಸ್ಥಿತಾಃ ಕಿಲ ।**
**ಗತ್ವಾ ತಾನ್ವೈ ಪ್ರಪಶ್ಯೇಽಹಂ ಯಾಜ್ಯಾನತಿಭಯಾತುರಾನ್ ॥೪೮॥**

ಆ ರಾಕ್ಷಸರು ತಮ್ಮ ಇಷ್ಟಾರ್ಥಕ್ಕೆ ಸಾಧನವಾದ ಮಂತ್ರವಿದ್ಯೆಯು ದೊರೆಯುವುದೆಂಬ ಆಶೆಯಿಂದ ನನ್ನ ಪುನರಾಗಮನವನ್ನು ನಿರೀಕ್ಷಿಸುತ್ತಿರುವರಲ್ಲವೇ? ಆದುದರಿಂದ ನಾನು ಈಗಲೇ ಹೋಗಿ ದೇವತೆಗಳ ಭಯದಿಂದ ಕಂಗೆಟ್ಟಿರುವ ನನ್ನ ಆ ಶಿಷ್ಯರನ್ನು ನೋಡಿ ಸಮಾಧಾನ ಪಡಿಸುವೆನು.

**ಮಾ ದೇವೇಭ್ಯೋ ಭಯಂ ತೇಷಾಂ ಮದ್ಭಕ್ತಾನಾಂ ಭವೇದಿತಿ ।**
**ಸಂಚಿಂತ್ಯ ಬುದ್ಧಿಮಾಸ್ಥಾಯ ಜಯಂತೀಂ ಪ್ರತ್ಯುವಾಚ ಹ ॥೪೯॥**

ನನ್ನಲ್ಲಿ ಭಕ್ತಿಯನ್ನಿಟ್ಟಿರುವ ಆ ರಾಕ್ಷಸರಿಗೆ ದೇವತೆಗಳಿಂದ ಯಾವ ಭಯವೂ ಉಂಟಾಗದಿರಲೆಂದು ಮನಸ್ಸಿನಲ್ಲಿ ಯೋಚಿಸಿ, ಮುಂದೆ ಏನನ್ನು ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಜಯಂತಿಯನ್ನು ಕುರಿತು ಹೀಗೆ ಹೇಳಿದನು.

**ದೇವಾನೇವೋಪಸಂಯಾಂತಿ ಪುತ್ರಾ ಮೇ ಚಾರುಲೋಚನೇ ।**
**ಸಮಯಸ್ತೇಽದ್ಯ ಸಂಪೂರ್ಣೋ ಜಾತೋಽಯಂ ದಶವಾರ್ಷಿಕಃ ॥**

ಅಂದವಾದ ಕಣ್ಣುಳ್ಳ ಓ ಜಯಂತಿಯೇ, ನಿನ್ನಲ್ಲಿ ನಾನು ಪಡೆದಿರುವ ಮಕ್ಕಳೆಲ್ಲರೂ ದೇವತೆಗಳನ್ನೇ ಅನುಸರಿಸುತ್ತಾರೆ. ನಾನು ನಿನಗೆ ಹಿಂದೆ ಹೇಳಿದ ಹತ್ತು ವರ್ಷಗಳ ಅವಧಿಯು ಈಗ ಮುಗಿಯಿತು.

**ತಸ್ಮಾದ್ಗಚ್ಛಾಮ್ಯಹಂ ದೇವಿ ದ್ರಷ್ಟುಂ ಯಾಜ್ಯಾನ್ಸುಮಧ್ಯಮೇ ।**
**ಪುನರೇವಾಗಮಿಷ್ಯಾಮಿ ತವಾಂತಿಕಮನುದ್ರುತಃ ॥೫೧॥**

ಓ ಅಂದವಾದ ನಡುವಿನಿಂದ ಶೋಭಿಸುವ ಜಯಂತಿಯೇ, ನಾನು ಈಗ ಆ ನನ್ನ ಶಿಷ್ಯರನ್ನು ನೋಡಲು ಹೊರಡುತ್ತೇನೆ. ಅವರನ್ನು ನೋಡಿ ಅನುಗ್ರಹಿಸಿದ ಮೇಲೆ ಪುನಃ ಬೇಗನೆ ನಿನ್ನ ಸಮೀಪವನ್ನೈದುವೆನು.

**ತಥೇತಿ ತಮುವಾಚಾಥ ಜಯಂತೀ ಧರ್ಮವಿತ್ತಮಾ ।**
**ಯಥೇಷ್ಟಂ ಗಚ್ಛ ಧರ್ಮಜ್ಞ ನ ತೇ ಧರ್ಮಂ ವಿಲೋಪಯೇ ॥೫೨॥**

ಅನಂತರದಲ್ಲಿ ಜಯಂತಿಯು ಧರ್ಮವನ್ನು ತಿಳಿದವಳಾದುದರಿಂದ ಅವನನ್ನು ಕುರಿತು—ಎಲೈ ಧರ್ಮಜ್ಞನೇ, ಹಾಗೆಯೇ ಆಗಲಿ. ನಿನ್ನ ಧರ್ಮಕ್ಕೆ ನಾನು ಲೋಪಬರುವಂತೆ ಮಾಡುವುದಿಲ್ಲ. ನೀನು ನಿನ್ನ ಇಷ್ಟಬಂದಂತೆ ಹೋಗಬಹುದು ಎಂದು ಹೇಳಿದಳು.

**ತಚ್ಛ್ರುತ್ವಾ ವಚನಂ ಕಾವ್ಯೋ ಜಗಾಮ ತ್ವರಿತಸ್ತತಃ ।**
**ಅಪಶ್ಯದ್ದಾನವಾನಾಂ ಸ ಪಾರ್ಶ್ವೇ ವಾಚಸ್ಪತಿಂ ತದಾ ॥೫೩॥**

ಈರೀತಿಯಲ್ಲಿ ಅವಳ ಅನುಮತಿಯನ್ನು ಪಡೆದು ಶುಕ್ರನು ಶೀಘ್ರವಾಗಿ ಅಲ್ಲಿಂದ ಹೊರಟು, ದಾನವರ ಸಮೀಪಕ್ಕೆ ಬಂದನು. ಆಗ ಆ ದಾನವರ ಪಕ್ಕದಲ್ಲಿ ಕುಳಿತಿರುವ ಗುರುವನ್ನು ನೋಡಿದನು.

**ಛದ್ಮರೂಪಧರಂ ಸೌಮ್ಯಂ ಬೋಧಯಂತಂ ಛಲೇನ ತಾನ್**
**ಜೈನಂ ಧರ್ಮಂ ಕೃತಂ ಸ್ವೇನ ಯಜ್ಞನಿಂದಾಪರಂ ತಥಾ ॥೫೪॥**

ಮೋಸದ ವೇಷವನ್ನು ಧರಿಸಿ, ಶಾಂತನಾಗಿರುವಂತೆ ತೋರ್ಪಡಿಸಿಕೊಂಡು ಕಪಟದಿಂದ ಆ ರಾಕ್ಷಸರಿಗೆ ತಾನು ರಚಿಸಿದ್ದ, ವೇದೋಕ್ತವಾದ ಯಜ್ಞಯಾಗಗಳನ್ನು ದೂಷಿಸುವ, ಜೈನಶಾಸ್ತ್ರದ ತತ್ತ್ವವನ್ನು ತಿಳಿಯಹೇಳುತ್ತಾ ಕುಳಿತಿರುವ ಗುರುವನ್ನು ಶುಕ್ರಾಚಾರ್ಯನು ನೋಡಿದನು.

**ಭೋ ದೇವರಿಪವಃ ಸತ್ಯಂ ಬ್ರವೀಮಿ ಭವತಾಂ ಹಿತಂ ।**
**ಅಹಿಂಸಾ ಪರಮೋ ಧರ್ಮೋಽಹಂತವ್ಯಾ ಹ್ಯಾತತಾಯಿನಃ ॥೫೫॥**

ಓ ದೇವಶತ್ರುಗಳಾದ ರಾಕ್ಷಸರೇ, ಕೇಳಿರಿ. ನಿಮ್ಮಗಳ ಹಿತಕ್ಕಾಗಿಯೇ ನಾನು ಈಗ ಸತ್ಯವಾದ ಧರ್ಮವನ್ನೇ ಹೇಳುತ್ತಿರುವೆನು. ಹಿಂಸೆಯನ್ನು ಮಾಡದಿರುವುದೇ ಶ್ರೇಷ್ಠತಮವಾದ ಧರ್ಮವು. ಆದುದರಿಂದ ಮಹಾಪಾತಕ ಮಾಡಿದವರನ್ನೂ ಕೂಡ ಸಂಹರಿಸಕೂಡದು.

**ದ್ವಿಜೈರ್ಭೋಗರತೈರ್ವೇದೇ ದರ್ಶಿತಂ ಹಿಂಸನಂ ಪಶೋಃ ।**
**ಜಿಹ್ವಾಸ್ವಾದಪರೈಃ ಕಾಮಮಹಿಂಸೈವ ಪರಾ ಮತಾ ॥೫೬॥**

ಮಾಂಸದ ರುಚಿಯ ಭೋಗಗಳನ್ನು ಅನುಭವಿಸಬೇಕೆಂಬ ಸ್ವಾರ್ಥಬುದ್ಧಿಯುಳ್ಳ ದ್ವಿಜರಿಂದ ವೇದದಲ್ಲಿ ಪಶುಗಳ ಹಿಂಸೆಯು ಬಹಳವಾಗಿ ಹೇಳಲ್ಪಟ್ಟಿದೆ. ಆದರೆ, ಅಹಿಂಸೆಯೇ ಅತ್ಯಂತ ಶ್ರೇಷ್ಠವಾದ ಧರ್ಮವು.

**ಏವಂವಿಧಾನಿ ವಾಕ್ಯಾನಿ ವೇದಶಾಸ್ತ್ರಪರಾಣಿ ಚ ।**
**ಬ್ರುವಾಣಂ ಗುರುಮಾಕರ್ಣ್ಯ ವಿಸ್ಮಿತೋಽಸೌ ಭೃಗೋಃ ಸುತಃ ॥**

ಈರೀತಿಯಾದ ಮಾತುಗಳನ್ನು ವೇದದ ಮತ್ತು ಶಾಸ್ತ್ರದ ವಿಧಿವಾಕ್ಯಗಳಿಗೂ ಅನ್ವಯಿಸುವಂತೆ ಹೇಳುತ್ತಿರುವ ಗುರುವನ್ನು ನೋಡಿ ಭೃಗುಪುತ್ರನಾದ ಶುಕ್ರಾಚಾರ್ಯನು ಆಶ್ಚರ್ಯಗೊಂಡನು.

**ಚಿಂತಯಾಮಾಸ ಮನಸಾ ಮಮ ದ್ವೇಷ್ಯೋ ಗುರುಃ ಕಿಲ ।**
**ವಂಚಿತಾಃ ಕಿಲ ಧೂರ್ತೇನ ಯಾಜ್ಯಾ ಮೇ ನಾತ್ರ ಸಂಶಯಃ ॥೫೮॥**

ಆಗ ಶುಕ್ರಾಚಾರ್ಯನು ಮನಸ್ಸಿನಲ್ಲೇ ಹೀಗೆ ಯೋಚಿಸಿದನು. ಈ ಗುರುವು ನನ್ನ ಶತ್ರುವಲ್ಲವೇ ? ಆದುದರಿಂದಲೇ ಈ ವಂಚಕನು ನನ್ನ ಶಿಷ್ಯರೂ, ಯಾಜ್ಯರೂ ಆಗಿರುವ ರಾಕ್ಷಸರನ್ನು ಮೋಸಗೊಳಿಸಿದ್ದಾನೆ. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲವು.

**ಧಿಗ್ಲೋಭಂ ಪಾಪಬೀಜಂ ವೈ ನರಕದ್ವಾರಮೂರ್ಜಿತಂ ।**
**ಗುರುರಪ್ಯನೃತಂ ಬ್ರೂತೇ ಪ್ರೇರಿತೋ ಯೇನ ಪಾಪ್ಮನಾ ॥೫೯॥**

ನರಕಕ್ಕೆ ಹೆಬ್ಬಾಗಿಲಿನಂತೆಯೂ, ಪಾಪಕ್ಕೆ ಬೀಜರೂಪವಾಗಿಯೂ ಇರುವ ಈ ಲೋಭಕ್ಕೆ ಎಂದರೆ ದುರಾಶೆಗೆ ಧಿಕ್ಕಾರವಿರಲಿ. ಯಾವ ಪಾಪದಿಂದ ಪ್ರೇರಿತನಾಗಿ ಈ ಗುರುವೂ ಕೂಡ ಸುಳ್ಳನ್ನು ಹೇಳುತ್ತಿರುವನಲ್ಲ !

**ಪ್ರಮಾಣವಚನಂ ಯಸ್ಯ ಸೋಽಪಿ ಪಾಖಂಡಧಾರಕಃ ।**
**ಗುರುಃ ಸುರಾಣಾಂ ಸರ್ವೇಷಾಂ ಧರ್ಮಶಾಸ್ತ್ರಪ್ರವರ್ತಕಃ ॥೬೦॥**

ಧರ್ಮಶಾಸ್ತ್ರವನ್ನು ತಿಳಿಸುವ ಮತ್ತು ಯಾರ ಮಾತನ್ನು ಪ್ರಮಾಣವನ್ನಾಗಿ ಅಂಗೀಕರಿಸಲಾಗುವುದೋ ಅಂತಹ ಈ ದೇವತೆಗಳ ಗುರುವೂ ಈರೀತಿಯಾದ ಪಾಷಂಡಿಯ ವರ್ತನವನ್ನು ಈಗ ತೋರಿಸುತ್ತಿರುತ್ತಾನೆ.

**ಕಿಂ ಕಿಂ ನ ಲಭತೇ ಲೋಭಾನ್ಮಲಿನೀಕೃತಮಾನಸಃ ।**
**ಅನ್ಯೋಽಪಿ ಗುರುರಪ್ಯೇವಂ ಜಾತಃ ಪಾಖಂಡಪಂಡಿತಃ ॥೬೧॥**

ದುರಾಶೆಯಿಂದ ದುಷ್ಟವಾಗಿರುವ ಮನಸ್ಸುಳ್ಳವನಿಂದ ಏನೇನುತಾನೇ ಮಾಡಲ್ಪಡುವುದಿಲ್ಲ? ಆದುದರಿಂದ ಗುರುವು ಕೂಡ ಈಗ ಬೇರೊಬ್ಬ ದೊಡ್ಡ ಪಾಷಂಡ ಮತದ ಪಂಡಿತನಾಗಿಬಿಟ್ಟಿರುತ್ತಾನೆ.

**ಶೈಲೂಷವೇಷ್ಟಿತಂ ಸರ್ವಂ ಪರಿಗೃಹ್ಯ ದ್ವಿಜೋತ್ತಮಃ ।**
**ವಂಚಯತ್ಯತಿಸಮ್ಮೂಢಾನ್ದೈತ್ಯಾ ನ್ಯಾಜ್ಯಾನ್ಮಮಾಪ್ಯಸೌ ॥೬೨॥**

ದ್ವಿಜರಲ್ಲಿ ಉತ್ತಮನಾದ ಈ ಗುರುವೂ ನಟನಂತೆ ಪಾಷಂಡಿಯ ವೇಷವನ್ನು ಧರಿಸಿ, ಎಲ್ಲವನ್ನೂ ಅಭಿನಯಿಸುತ್ತಾ ಬಹಳವಾಗಿ ಮೋಹಗೊಂಡ ಈ ನನ್ನ ಶಿಷ್ಯರೂ ಯಾಜ್ಯರೂ ಆದ ರಾಕ್ಷಸರನ್ನೂ ವಂಚಿಸುತ್ತಿದ್ದಾನೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ತ್ರಯೋದಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಚತುರ್ದಶೋಽಧ್ಯಾಯಃ ||

### ಹದಿನಾಲ್ಕನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಇತಿ ಸಂಚಿಂತ್ಯ ಮನಸಾ ತಾನುವಾಚ ಹಸನ್ನಿವ ।**
**ವಂಚಿತಾ ಮತ್ಸ್ವರೂಪೇಣ ದೈತ್ಯಾಃ ಕಿಂ ಗುರುಣಾ ಕಿಲ ॥೧॥**

ವ್ಯಾಸಮುನಿಯು ಹೇಳಿದನು—ಹಿಂದೆ ಹೇಳಿದಂತೆ ತನ್ನ ಮನಸ್ಸಿನಲ್ಲಿ ಆಲೋಚಿಸಿ ಶುಕ್ರನು, ಆ ರಾಕ್ಷಸರನ್ನು ಕುರಿತು ಹೀಗೆ ಹೇಳಿದನು. ಓ ರಾಕ್ಷಸ ರಿರಾ, ನನ್ನ ರೂಪವನ್ನು ಧರಿಸಿರುವುದರಿಂದ ನೀವು ಗುರುತಿಸಿ ತಿಳಿಯಲಾರದೆ ಇರುವ ಗುರುವಿನಿಂದ ನೀವೆಲ್ಲರೂ ಮೋಸಗೊಳಿಸಲ್ಪಟ್ಟಿರುತ್ತೀರೇನು ?

**ಅಹಂ ಕಾವ್ಯೋ ಗುರುಶ್ಚಾಯಂ ದೇವಕಾರ್ಯಪ್ರಸಾಧಕಃ ।**
**ಅನೇನ ವಂಚಿತಾ ಯೂಯಂ ಮದ್ಯಾಜ್ಯಾ ನಾತ್ರ ಸಂಶಯಃ ॥೨॥**

ನಾನು ಶುಕ್ರನು. ಇವನು ದೇವತೆಗಳ ಕಾರ್ಯವನ್ನು ಸಾಧಿಸಲು ಬಂದಿರುವ ಗುರುವು. ನನ್ನ ಭಕ್ತರಾದ ನೀವು ಇವನಿಂದ ಮೋಸಗೊಳಿಸಲ್ಪಟ್ಟಿರುತ್ತೀರಿ. ಇದರಲ್ಲಿ ಸಂಶಯವೇ ಇಲ್ಲ.

**ಮಾ ಶ್ರದ್ಧಧ್ವಂ ವಚೋಽಸ್ಯಾಽಽರ್ಯಾ ದಾಂಭಿಕೋಽಯಂ ಮದಾಕೃತಿಃ ।**
**ಅನುಗಚ್ಛತ ಮಾಂ ಯಾಜ್ಯಾಸ್ತ್ಯಜತೈನಂ ಬೃಹಸ್ಪತಿಂ ॥೩॥**

ಓ ರಾಕ್ಷಸರಿರಾ, ನನ್ನ ಆಕಾರವನ್ನು ಹೊಂದಿರುವ ದಾಂಭಿಕನಾದ ಇವನ ಮಾತನ್ನು ನಂಬಬೇಡಿ. ನೀವೆಲ್ಲರೂ ಈ ಗುರುವನ್ನು ಬಿಟ್ಟು ನನ್ನನ್ನು ಅನುಸರಿಸುವವರಾಗಿರಿ.

ಇತ್ಯಾಕರ್ಣ್ಯ ವಚಸ್ತಸ್ಯ ದೃಷ್ಟ್ವಾ ತೌ ಸದೃಶೌ ಪುನಃ ।
ವಿಸ್ಮಯಂ ಪರಮಂ ಜಗ್ಮುಃ ಕಾವ್ಯೋಽಯಮಿತಿ ನಿಶ್ಚಿತಾಃ ॥೪॥

ಅವನ ಮಾತನ್ನು ಕೇಳಿ ರಾಕ್ಷಸರು, ಸಮಾನವಾದ ಆಕಾರಗಳುಳ್ಳವರಾದ ಆ ಇಬ್ಬರು ಶುಕ್ರರನ್ನೂ ಕಂಡು ಬಹಳ ಆಶ್ಚರ್ಯಪಟ್ಟರು. ಮತ್ತು ಅವನನ್ನೇ ಶುಕ್ರನೆಂದು ನಿಶ್ಚಯಿಸಿಕೊಂಡರು.

ಸ ತಾನ್ವೀಕ್ಷ್ಯ ಸುಸಂಭ್ರಾಂತಾನ್ ಗುರುರ್ವಾಕ್ಯಮುವಾಚ ಹ ।
ಗುರುರ್ವೋ ವಂಚಯತ್ಯೇವ ಮದ್ರೂಪೋಽಯಂ ಬೃಹಸ್ಪತಿಃ ॥೫॥

ಆರೀತಿಯಲ್ಲಿ ಭ್ರಾಂತಿಗೊಂಡ ರಾಕ್ಷಸರನ್ನು ಸಂಬೋಧಿಸಿ ಗುರುವು, ಇಲ್ಲಿ ಕೇಳಿರಿ, ನನ್ನ ರೂಪವನ್ನು (ಶುಕ್ರನ ರೂಪವನ್ನು) ಧರಿಸಿ ಈ ಗುರುವು ನಿಮ್ಮನ್ನು ಮೋಸಗೊಳಿಸಲು ಬಂದಿರುತ್ತಾನೆಂದು ಹೇಳಿದನು.

ಪ್ರಾಪ್ತೋ ವಂಚಯಿತುಂ ಯುಷ್ಮಾನ್ದೇವಕಾರ್ಯಾರ್ಥಸಿದ್ಧಯೇ ।
ಮಾ ವಿಶ್ವಾಸಂ ವಚಸ್ಯಸ್ಯ ಕುರುಧ್ವಂ ದೈತ್ಯಸತ್ತಮಾಃ ॥೬॥

ಓ ರಾಕ್ಷಸಶ್ರೇಷ್ಠರೇ, ದೇವತೆಗಳ ಕೆಲಸವನ್ನು ವಂಚನೆಯಿಂದ ಮಾಡಿ ಕೊಡಲು ಈರೀತಿಯಲ್ಲಿ ಮೋಸ ಮಾಡಬೇಕೆಂದು ಗುರುವು ಈಗ ಬಂದಿರುತ್ತಾನೆ. ನೀವು ಅವನ ಮಾತನ್ನು ನಂಬಬೇಡಿ.

ಪ್ರಾಪ್ತಾ ವಿದ್ಯಾ ಮಯಾ ಶಂಭೋರ್ಯುಷ್ಮಾನಧ್ಯಾಪಯಾಮಿತಾಂ।
ದೇವೇಭ್ಯೋ ವಿಜಯಂ ನೂನಂ ಕರಿಷ್ಯಾಮಿ ನ ಸಂಶಯಃ ॥೭॥

ಈಶ್ವರನಿಂದ ನಾನು ಮಂತ್ರವಿದ್ಯೆಯನ್ನು ಹೊಂದಿ ಬಂದಿರುವೆನು. ಅದನ್ನು ನಿಮಗೆ ಕಲಿಸುತ್ತೇನೆ. ದೇವತೆಗಳೊಡನೆ ಮಾಡುವ ಯುದ್ಧದಲ್ಲಿ ನಿಮಗೆ ಖಂಡಿತ ವಾಗಿಯೂ ಜಯವನ್ನು ಉಂಟುಮಾಡಿಕೊಡುತ್ತೇನೆ ಇದರಲ್ಲಿ ಸಂಶಯವಿಲ್ಲವು. ಎಂದು ಗುರುವು ಹೇಳಿದನು.

ಇತಿ ಶ್ರುತ್ವಾ ಗುರೋರ್ವಾಕ್ಯಂ ಕಾವ್ಯರೂಪಧರಸ್ಯ ತೇ ।
ವಿಶ್ವಾಸಂ ಪರಮಂ ಜಗ್ಮುಃ ಕಾವ್ಯೋಽಯಮಿತಿ ನಿಶ್ಚಯಾತ್ ॥೮॥

ಆ ರಾಕ್ಷಸರು ಶುಕ್ರರೂಪಧಾರಿಯಾದ ಗುರುವಿನ ಈ ಮಾತನ್ನು ಕೇಳಿ ಇವನೇ ನಿಜವಾದ ಶುಕ್ರನಾಗಿರಬೇಕೆಂದು ತಿಳಿದುದರಿಂದ ಅವನ ಮಾತಿನಲ್ಲೇ ಹೆಚ್ಚಾದ ನಂಬಿಕೆಯನ್ನು ಪಡೆದರು.

**ಕಾವ್ಯೇನ ಬಹುಧಾ ತತ್ರ ಬೋಧಿತಾಃ ಕಿಲ ದಾನವಾಃ ।**
**ಬುಬುಧುರ್ನ ಗುರೋರ್ಮಾಯಾಮೋಹಿತಾಃ ಕಾಲಪರ್ಯಯಾತ್ ॥**

ಕಾಲದ ವೈಪರೀತ್ಯದಿಂದ ನಿಜವಾದ ಶುಕ್ರನು ಎಷ್ಟು ಹೇಳಿದರೂ ಕೂಡ ಶುಕ್ರವೇಷಧಾರಿಯಾದ ಗುರುವಿನ ಮಾಯೆಯಿಂದ ಮೋಹಿತರಾದ ಆ ರಾಕ್ಷಸರು ಅವನನ್ನು ಶುಕ್ರನೆಂದು ತಿಳಿಯಲಿಲ್ಲವು.

**ಏವಂ ತೇ ನಿಶ್ಚಯಂ ಕೃತ್ವಾ ತತೋ ಭಾರ್ಗವಮಬ್ರುವನ್ ।**
**ಅಯಂ ಗುರುರ್ನೋ ಧರ್ಮಾತ್ಮಾ ಬುದ್ಧಿದಶ್ಚ ಹಿತೇ ರತಃ ॥೧೦॥**

ಈರೀತಿಯಾಗಿ ಆ ರಾಕ್ಷಸರು ನಿರ್ಣಯಿಸಿ, ಆಮೇಲೆ ನಿಜವಾದ ಶುಕ್ರನನ್ನು ಕುರಿತು ಹೀಗೆ ಹೇಳಿದರು—ಧರ್ಮಾತ್ಮನೂ, ನಮಗೆ ಬುದ್ಧಿಯನ್ನು ಹೇಳಿಕೊಡುತ್ತಿರುವವನೂ ಆದುದರಿಂದ ಹಿತಕಾರಿಯೂ ಆಗಿರುವ ಇವನೇ ನಮ್ಮ ಗುರುವೂ ಆದ ಶುಕ್ರಾಚಾರ್ಯನು.

**ದಶವರ್ಷಾಣಿ ಸತತಮಯಂ ನಃ ಶಾಸ್ತಿ ಭಾರ್ಗವಃ ।**
**ಗಚ್ಛ ತ್ವಂ ಕುಹಕೋ ಭಾಸಿ ನಾಸ್ಮಾಕಂ ಗುರುರಪ್ಯುತ ॥೧೧॥**

ಈಗ್ಗೆ ಹತ್ತು ವರ್ಷಗಳಿಂದಲೂ ಅವಿಚ್ಛಿನ್ನವಾಗಿ ಭೃಗುಪುತ್ರನಾದ ಶುಕ್ರಾಚಾರ್ಯನು ನಮಗೆ ಬೋಧಿಸುತ್ತಿರುವನು. ಎಲೈ ಶುಕ್ರನಂತೆ ಕಪಟವೇಷವನ್ನು ಧರಿಸಿರುವವನೇ ನೀನು ಇಲ್ಲಿಂದ ಹೊರಟುಹೋಗು. ನೀನು ಕುಹಕದಿಂದ ಮೋಸ ಮಾಡಲು ಬಂದಿರುವಂತೆ ಕಾಣುತ್ತದೆ. ಅಲ್ಲದೆ, ನೀನು ನಮ್ಮ ಗುರುವೂ ಅಲ್ಲವು.

**ಇತ್ಯುಕ್ತ್ವಾ ಭಾರ್ಗವಂ ಮೂಢಾ ನಿರ್ಭರ್ತ್ಸ್ಯ ಚ ಪುನಃ ಪುನಃ ।**
**ಜಗೃಹುಸ್ತಂ ಗುರುಂ ಪ್ರೀತ್ಯಾ ಪ್ರಣಿಪತ್ಯಾಭಿವಾದ್ಯ ಚ ॥೧೨॥**

ಆ ರಾಕ್ಷಸರು ಈರೀತಿಯಾಗಿ ಹೇಳಿ ನಿಜವಾದ ಶುಕ್ರನನ್ನೇ ಮತ್ತೆ ಮತ್ತೆ ಹೆದರಿಸಿದರು. ಮತ್ತು ಆ ಗುರುವನ್ನೇ ತಮ್ಮ ಗುರುವಾದ ಶುಕ್ರನೆಂದು ಪ್ರೀತ್ಯಾದರಗಳಿಂದ ನಮಸ್ಕರಿಸಿ ಅವನ ಆಶೀರ್ವಾದಾನುಗ್ರಹವನ್ನೂ ಸ್ವೀಕರಿಸಿದರು.

**ಕಾವ್ಯಸ್ತು ತನ್ಮಯಾನ್ದೃಷ್ಟ್ವಾ ಚುಕೋಪಾಥ ಶಶಾಪ ಚ ।**
**ದೈತ್ಯಾನ್ವಿಬೋಧಿತಾನ್ಮತ್ವಾ ಗುರುಣಾ ಚಾತಿವಂಚಿತಾನ್ ॥೧೩॥**

ಗುರುವಿನಿಂದ ಬೋಧಿಸಲ್ಪಟ್ಟು ಸಂಪೂರ್ಣವಾಗಿ ವಂಚಿಸಲ್ಪಟ್ಟಿರುವುದರಿಂದ ಅವನ ಮಾತಿನಲ್ಲೇ ನಂಬಿಕೆಯಿಂದ ಲೀನವಾಗಿರುವ ಮನಸ್ಸುಳ್ಳ ಆ ರಾಕ್ಷಸರನ್ನು ನೋಡಿ ಅವರ ಮನಸ್ಸನ್ನು ತಿರುಗಿಸುವುದು ಅಸಾಧ್ಯವೆಂದು ತಿಳಿದವನಾಗಿ ಶುಕ್ರಾಚಾರ್ಯನು ಕೋಪಗೊಂಡು ಆ ರಾಕ್ಷಸರಿಗೆ ಶಾಪವನ್ನು ಕೊಟ್ಟನು.

**ಯಸ್ಮಾನ್ಮಯಾ ಬೋಧಿತಾ ವೈ ಗೃಹ್ಣೀಯುರ್ನ ಚ ಮೇ ವಚಃ ।**
**ತಸ್ಮಾತ್ಪ್ರನಷ್ಟಸಂಜ್ಞಾ ವೈ ಪರಾಭವಮವಾಪ್ಸ್ಯಥ ॥೧೪॥**

ಎಲೈ ರಾಕ್ಷಸರೇ ನಾನು ನಿಮಗೆ ಎಷ್ಟು ತಿಳಿವಳಿಕೆಯನ್ನು ಬೋಧಿಸಿದರೂ ನನ್ನ ಮಾತನ್ನು ನೀವು ಸ್ವೀಕರಿಸದೇ ಇರುವುದರಿಂದ ನೀವು ನಿಮ್ಮ ತಿಳಿವಳಿಕೆಯನ್ನು ಕಳೆದುಕೊಂಡವರಾಗಿ ಪರಾಜಯವನ್ನು ಹೊಂದುವಿರಿ.

**ಮದವಜ್ಞಾಫಲಂ ಕಾಮಂ ಸ್ವಲ್ಪೇ ಕಾಲೇ ಹ್ಯವಾಪ್ಸ್ಯಥ ।**
**ತದಾಸ್ಯ ಕಪಟಂ ಸರ್ವಂ ಪರಿಜ್ಞಾತಂ ಭವಿಷ್ಯತಿ ॥೧೫॥**

ನೀವು ನನ್ನನ್ನು ಈರೀತಿಯಲ್ಲಿ ತಿರಸ್ಕರಿಸಿದುದರ ಫಲವನ್ನು ಸ್ವಲ್ಪಕಾಲದಲ್ಲಿಯೇ ಹೆಚ್ಚಾಗಿ ಹೊಂದುವವರಾಗುವಿರಿ. ಆಗ ಇವನ ಈ ಮೋಸವೆಲ್ಲವೂ ನಿಮ್ಮ ತಿಳಿವಳಿಕೆಗೂ ಬರುವುದು.

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾಸೌ ಜಗಾಮಾಶು ಭಾರ್ಗವಃ ಕ್ರೋಧಸಂಯುತಃ ।**
**ಬೃಹಸ್ಪತಿರ್ಮುದಂ ಪ್ರಾಪ್ಯ ತಸ್ಥೌ ತತ್ರ ಸಮಾಹಿತಃ ॥೧೬॥**

ವ್ಯಾಸನು ಹೇಳಿದನು—ಹೀಗೆ ಹೇಳಿ ಶುಕ್ರಾಚಾರ್ಯನು ಕೋಪದಿಂದ ಕೂಡಿದವನಾಗಿ ಬೇಗನೆ ಅಲ್ಲಿಂದ ಹೊರಟುಹೋದನು. ಬೃಹಸ್ಪತಿಯು ಇದನ್ನು ನೋಡಿ ಸಂತೋಷಗೊಂಡು, ಅದನ್ನು ಪ್ರಕಟಿಸದಂತೆ ಮನಸ್ಸಮಾಧಾನವನ್ನು ಪಡೆದು ಅಲ್ಲಿಯೇ ಕುಳಿತುಕೊಂಡಿದ್ದನು.

**ತತಃ ಶಪ್ತಾನ್ಸುರುಜ್ಞಾತ್ವಾ ದೈತ್ಯಾಂಸ್ತಾನ್ಭಾರ್ಗವೇಣ ಹಿ ।**
**ಜಗಾಮ ತರಸಾ ತ್ಯಕ್ತ್ವಾ ಸ್ವರೂಪಂ ಸ್ವಂ ವಿಧಾಯ ಚ ॥೧೭॥**

ಆ ಮೇಲೆ ಬೃಹಸ್ಪತಿಯು ಶುಕ್ರನಿಂದ ರಾಕ್ಷಸರು ಆರೀತಿಯಲ್ಲಿ ಶಪಿಸಲ್ಪಟ್ಟಿರುವುದನ್ನು ತಿಳಿದು, ಬೇಗನೆ ಆ ರೂಪವನ್ನು ಬಿಟ್ಟು ತನ್ನ ನಿಜರೂಪವನ್ನು ಧರಿಸಿ ಅಲ್ಲಿಂದ ಹೊರಟನು.

**ಗತ್ವೋವಾಚ ತದಾ ಶಕ್ರಂ ಕೃತಂ ಕಾರ್ಯಂ ಮಯಾ ಧ್ರುವಂ ।**
**ಶಪ್ತಾಃ ಶುಕ್ರೇಣ ತೇ ದೈತ್ಯಾ ಮಯಾ ತ್ಯಕ್ತಾಃ ಪುನಃ ಕಿಲ ॥೧೮॥**

ಹೀಗೆ ಹೊರಟ ಆ ಬೃಹಸ್ಪತಿಯು ಇಂದ್ರನ ಸಮೀಪಕ್ಕೆ ಹೋಗಿ ಅವನನ್ನು ಕುರಿತು ಹೀಗೆ ಹೇಳಿದನು——ನಾನು ವಹಿಸಿಕೊಂಡಿದ್ದ ಕಾರ್ಯವನ್ನು ಚನ್ನಾಗಿ ನೆರವೇರಿಸಿರುವೆನು. ಶುಕ್ರನು ರಾಕ್ಷಸರನ್ನೆಲ್ಲಾ ಶಪಿಸಿರುವನು. ಮಂತ್ರೋಪದೇಶವನ್ನೂ ಮಾಡನು. ನಾನೂ ಕೂಡ ಅವರನ್ನು ಬಿಟ್ಟುಬಿಟ್ಟು ಹಿಂತಿರುಗಿ ಬಂದಿರುತ್ತೇನೆ.

**ನಿರಾಧಾರಾಃ ಕೃತಾ ನೂನಂ ಯತಧ್ವಂ ಸುರಸತ್ತಮಾಃ ।**
**ಸಂಗ್ರಾಮಾರ್ಥಂ ಮಹಾಭಾಗ ಶಾಪದಗ್ಧಾ ಮಯಾ ಕೃತಾಃ ॥೧೯॥**

ಓ ಶ್ರೇಷ್ಠರಾದ ದೇವತೆಗಳಿರಾ ನಿಜವಾಗಿಯೂ ಈಗ ಅವರನ್ನು ಯಾರಿಂದಲೂ ಯಾವ ವಿಧವಾದ ಸಹಾಯವೂ ಇಲ್ಲದೆ ನಿರಾಧಾರರನ್ನಾಗಿ ಮಾಡಿರುತ್ತೇನೆ. ಅಲ್ಲದೆ ಶುಕ್ರಾಚಾರ್ಯನ ಶಾಪದಿಂದ ಅವರು ನಿರ್ವೀರ್ಯರಾಗುವಂತೆ ಮಾಡಿರುತ್ತೇನೆ. ಆದುದರಿಂದ ಓ ಪುಣ್ಯಶಾಲಿಯಾದ ಇಂದ್ರನೇ, ಈಗ ನೀನು ಮತ್ತು ದೇವತೆಗಳು ಯುದ್ಧಮಾಡುವುದಕ್ಕಾಗಿ ತಕ್ಕ ಸಿದ್ಧತೆಯನ್ನು ಮಾಡಿರಿ.

**ಇತಿ ಶ್ರುತ್ವಾ ಗುರೋರ್ವಾಕ್ಯಂ ಮಘವಾ ಮುದಮಾಪ್ತವಾನ್ ।**
**ಜಹೃಷುಶ್ಚ ಸುರಾಸ್ಸರ್ವೇ ಪ್ರತಿಪೂಜ್ಯ ಬೃಹಸ್ಪತಿಂ ॥೨೦॥**

ಈ ರೀತಿಯಲ್ಲಿ ಹೇಳಿದ ಗುರುವಿನ ಮಾತನ್ನು ಕೇಳಿ ಇಂದ್ರನು ಆನಂದವನ್ನು ಹೊಂದಿದನು. ಎಲ್ಲ ದೇವತೆಗಳೂ ಆ ಬೃಹಸ್ಪತ್ಯಾಚಾರ್ಯನನ್ನು ಸತ್ಕರಿಸಿದರು, ಮತ್ತು ಸಂತೋಷಪಟ್ಟರು.

**ಸಂಗ್ರಾಮಾಯ ಮತಿಂ ಚಕ್ರುಃ ಸಂವಿಚಾರ್ಯ ಮಿಥಃ ಪುನಃ ।**
**ನಿರ್ಯಯುರ್ಮಿಲಿತಾಃ ಸರ್ವೇ ದಾನವಾಭಿಮುಖಾಃ ಸುರಾಃ ॥೨೦॥**

ಆ ದೇವತೆಗಳೆಲ್ಲರೂ ತಮ್ಮ ತಮ್ಮಲ್ಲಿ ಮತ್ತೆ ಚನ್ನಾಗಿ ಆಲೋಚಿಸಿ ಯುದ್ಧವನ್ನೇ ಮಾಡಲು ಮನಸ್ಸನ್ನು ಮಾಡಿದರು. ಆಮೇಲೆ ಎಲ್ಲರೂ ಸೇರಿಕೊಂಡು ರಾಕ್ಷಸರನ್ನು ಯುದ್ಧಕ್ಕಾಗಿ ಎದುರಿಸಲು ಹೊರಟರು.

**ಸುರಾನ್ಸಮುದ್ಯತಾಞ್ಜ್ಞಾತ್ವಾ ಕೃತೋದ್ಯೋಗಾನ್ಮಹಾಬಲಾನ್ ।**
**ಅಂತರ್ಹಿತಂ ಗುರುಂ ಚೈವ ಬಭೂವುಶ್ಚಿಂತಯಾನ್ವಿತಾಃ ॥೨೨॥**

ಆಗ ರಾಕ್ಷಸರು ಬಹಳ ಪ್ರಯತ್ನವನ್ನು ನಡೆಸಿ ಅತಿಶಯ ಬಲದಿಂದ ಕೂಡಿ ಯುದ್ಧಕ್ಕೆ ಸಿದ್ಧರಾಗಿ ಬಂದಿದ್ದ ದೇವತೆಗಳನ್ನೂ, ತಮ್ಮ ಆಚಾರ್ಯನು ಅಂತರ್ಧಾನವನ್ನು ಪಡೆದಿರುವುದನ್ನೂ ತಿಳಿದವರಾಗಿ ಬಹಳವಾಗಿ ಯೋಚನೆಯಲ್ಲಿ ಮುಳುಗಿದರು.

**ಪರಸ್ಪರಮಥೋಚುಸ್ತೇ ಮೋಹಿತಾಸ್ತಸ್ಯ ಮಾಯಯಾ ।**
**ಸಂಪ್ರಸಾದ್ಯೋ ಮಹಾತ್ಮಾ ಚ ಯಾತೋಽಸೌ ರುಷ್ಟಮಾನಸಃ ॥**

ಗುರುವಿನ ಮಾಯೆಯಿಂದ ಮೋಹಿತರಾಗಿದ್ದ ರಾಕ್ಷಸರೆಲ್ಲರೂ ಪರಸ್ಪರವಾಗಿ ಮಾತನ್ನಾಡಿಕೊಂಡರು. ಆಮೇಲೆ, ಕೋಪಗೊಂಡು ಹೊರಟು ಹೋಗಿದ್ದ ಮಹಾತ್ಮನಾದ ಶುಕ್ರಾಚಾರ್ಯನನ್ನು ಸಮಾಧಾನ ಪಡಿಸಬೇಕೆಂದು ತೀರ್ಮಾನಿಸಿದರು.

**ವಂಚಯಿತ್ವಾ ಗತಃ ಪಾಪೋ ಗುರುಃ ಕಪಟಪಂಡಿತಃ ।**
**ಭ್ರಾತೃಸ್ತ್ರೀಲಂಭನಃ ಪ್ರಾಯೋ ಮಲಿನೋಽನ್ತರ್ಬಹಿಃಶುಚಿಃ ॥೨೪॥**

ತಮ್ಮನಾದ ಆನರ್ತನ ಹೆಂಡತಿಯಲ್ಲಿ ಕ್ರೀಡಿಸಿದ ಆ ಗುರುವು ತನ್ನ ಮನಸ್ಸಿನ ಒಳಗೆ ಬಹಳವಾಗಿ ಕಪಟವನ್ನು ತುಂಬಿಕೊಂಡು ಇದ್ದರೂ ಹೊರಗೆ ಮಾತ್ರ ನಿಷ್ಕಪಟಿಯಂತೆಯೂ, ಶುದ್ಧನಾದ ಸಾಧುವಿನಂತೆಯೂ ಕಾಣುತ್ತಿದ್ದನು. ಕಪಟದಲ್ಲಿ ನಿಷ್ಣಾತನಾದ ಪಾಪಿಯಾದ ಆ ಗುರುವು ಪ್ರಾಯಶಃ ನಮ್ಮನ್ನು ಮೋಸಗೊಳಿಸಿ ಹೊರಟುಹೋದನು.

**ಕಿಂ ಕುರ್ಮಃ ಕ್ವ ಚ ಗಚ್ಛಾಮಃ ಕಥಂ ಕಾವ್ಯಂ ಪ್ರಕೋಪಿತಂ ।**
**ಕುರ್ವೀಮಹಿ ಸಹಾಯಾರ್ಥಂ ಪ್ರಸನ್ನಂ ಹೃಷ್ಟಮಾನಸಂ ॥೨೫॥**

ಈಗ ನಾವು ಏನನ್ನು ಮಾಡೋಣ, ಎಲ್ಲಿಗೆ ಹೋಗೋಣ? ಕೋಪಗೊಂಡಿರುವ ಶುಕ್ರಾಚಾರ್ಯನನ್ನು ನಮಗೆ ಸಹಾಯಕನಾಗುವಂತೆ ಮಾಡಲು ಯಾವರೀತಿಯಲ್ಲಿ ಸಂತೋಷಪಡಿಸೋಣ? ಏನನ್ನು ಮಾಡುವುದರಿಂದ ಅವನು ಸಂತುಷ್ಟನೂ ನಮ್ಮಗಳ ವಿಷಯದಲ್ಲಿ ಪ್ರಸನ್ನನೂ ಆಗುವನು?

**ಇತಿ ಸಂಚಿಂತ್ಯ ತೇ ಸರ್ವೇ ಮಿಲಿತಾ ಭಯಕಂಪಿತಾಃ ।**
**ಪ್ರಹ್ಲಾದಂ ಪುರತಃ ಕೃತ್ವಾ ಜಗ್ಮುಸ್ತೇ ಭಾರ್ಗವಂ ಪುನಃ ॥೨೬॥**

ಭಯದಿಂದ ನಡುಗುತ್ತಾ ಅವರೆಲ್ಲರೂ ಒಟ್ಟಿಗೆ ಸೇರಿ ಈ ರೀತಿಯಾಗಿ ಆಲೋಚಿಸಿ ಪ್ರಹ್ಲಾದನನ್ನು ಮುಂದೆ ಮಾಡಿಕೊಂಡು ಭೃಗುಪುತ್ರನಾದ ಶುಕ್ರಾಚಾರ್ಯನನ್ನು ಸಮಾಧಾನಪಡಿಸಲು ಮತ್ತೆ ಹೊರಟರು.

**ಪ್ರಣೇಮುಶ್ಚರಣೌ ತಸ್ಯ ಮುನೇರ್ಮೌನಭೃತಸ್ತದಾ ।**
**ಭಾರ್ಗವಸ್ತಾನುವಾಚಾಥ ರೋಷಸಂರಕ್ತಲೋಚನಃ ॥೨೭॥**

ಆಗ ಮೌನವನ್ನು ಧರಿಸಿ ಕುಳಿತುಕೊಂಡಿದ್ದ ಶುಕ್ರಾಚಾರ್ಯನ ಪಾದಗಳಿಗೆ ಅವರು ಅಡ್ಡಬಿದ್ದರು. ಆಮೇಲೆ ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ಆ ಶುಕ್ರಾಚಾರ್ಯನು ಅವರನ್ನು ಕುರಿತು ಹೀಗೆ ಹೇಳಿದನು.

**ಮಯಾ ಪ್ರಬೋಧಿತಾ ಯೂಯಂ ಮೋಹಿತಾ ಗುರುಮಾಯಯಾ ।**
**ನ ಗೃಹೀತಂ ವಚೋ ಯೋಗ್ಯಂ ತದಾ ಯುಷ್ಮಾಕಂ ಹಿತಂ ಶುಚಿ ॥೨೮॥**

ಓ ರಾಕ್ಷಸರೇ, ಗುರುವಿನ ಮಾಯೆಯಿಂದ ಮೋಹಿತರಾದ ನಿಮಗೆ ನಾನು ಎಷ್ಟು ಎಚ್ಚರಿಕೆಯನ್ನು ಕೊಟ್ಟರೂ ಮತ್ತು ಬುದ್ಧಿವಾದವನ್ನು ಹೇಳಿದರೂ ಆ ಪವಿತ್ರವಾದ ಮತ್ತು ಹಿತಕರವಾದ ಬುದ್ಧಿಯ ಮಾತನ್ನು ನೀವು ಸ್ವಲ್ಪವೂ ಆದರಿಸಲಿಲ್ಲವು.

**ತದಾಽವಗಣಿತಶ್ಚಾಹಂ ಭವದ್ಭಿಸ್ತದ್ವಶಂ ಗತೈಃ ।**
**ಪ್ರಾಪ್ತಂ ನೂನಂ ಮದೋನ್ಮತ್ತೈರ್ಮಾವಮಾನಜಂ ಫಲಂ॥೨೯॥**

ಅಲ್ಲದೆ, ಗುರುವಿನ ಉಪದೇಶಕ್ಕೆ ಮರುಳಾಗಿ ಅವನ ವಶವರ್ತಿಯಾಗಿದ್ದ ನೀವು ನನ್ನನ್ನು ಅವಮಾನಗೊಳಿಸಿದಿರಿ. ಆ ರೀತಿಯಲ್ಲಿ ಜಂಭದಿಂದ ಮತ್ತು ಮದದಿಂದ ಕೂಡಿದ್ದ ನೀವು ನನಗೆ ಮಾಡಿದ ಅವಮಾನದ ಫಲವು ಈಗ ನಿಮಗೆ ಉಂಟಾಗಿದೆ.

**ತತ್ರ ಗಚ್ಛತ ಸದ್ಭ್ರಷ್ಟಾ ಯತ್ರಾಸೌ ಕಪಟಾಕೃತಿಃ ।**
**ವಂಚಕಃ ಸುರಕಾರ್ಯಾರ್ಥೀ ನಾಹಂ ತದ್ವದ್ಧಿ ವಂಚಕಃ ॥೩೦॥**

ಎಲೈ ಅಯೋಗ್ಯರಿರಾ, ಮೋಸದಿಂದ ಕೂಡಿದ ಆಕಾರವನ್ನು ಹೊಂದಿ ದೇವತೆಗಳ ಕೆಲಸಕ್ಕಾಗಿ ನಿಮ್ಮನ್ನು ಮೋಸಗೊಳಿಸಲು ತೊಡಗಿದ್ದ ಆ ಗುರುವಿನ ಸಮೀಪಕ್ಕೇ ಹೋಗಿರಿ. ಎಂದರೆ ಅವನನ್ನೇ ಆಶ್ರಯಿಸಿರಿ. ನಾನು ಅವನಂತೆ ಮೋಸಗಾರನಲ್ಲವು.

॥ ವ್ಯಾಸ ಉವಾಚ ॥

**ಏವಂ ಬ್ರುವಂತಂ ಶುಕ್ರಂ ತು ವಾಕ್ಯಂ ಸಂದಿಗ್ಧಯಾ ಗಿರಾ ।**
**ಪ್ರಹ್ಲಾದಸ್ತಂ ತದೋವಾಚ ಗೃಹೀತ್ವಾ ಚರಣೌ ತತಃ ॥೩೧॥**

ವ್ಯಾಸನು ಹೇಳಿದನು—ಈ ರೀತಿಯಲ್ಲಿ ವ್ಯಂಗ್ಯವಾಗಿರುವ ಮಾತುಗಳನ್ನು ಹೇಳುತ್ತಿರುವ ಶುಕ್ರಾಚಾರ್ಯನ ಎರಡು ಕಾಲುಗಳನ್ನೂ ಹಿಡಿದುಕೊಂಡು ಪ್ರಹ್ಲಾದನು ಈರೀತಿಯಲ್ಲಿ ಪ್ರಾರ್ಥಿಸಿಕೊಂಡನು.

॥ ಪ್ರಹ್ಲಾದ ಉವಾಚ ॥

**ಭಾರ್ಗವಾದ್ಯ ಸಮಾಯಾತಾನ್ಯಾಜ್ಯಾನಸ್ಮಾಂಸ್ತಥಾಽಽತುರಾನ್ ।**
**ತ್ಯಕ್ತುಂ ನಾರ್ಹಸಿ ಸರ್ವಜ್ಞ ತ್ವದ್ಧಿತಾಂಸ್ತನಯಾನ್ ಹಿ ನಃ ॥೩೨॥**

ಎಲ್ಲವನ್ನೂ ತಿಳಿದ ಭೃಗುಪುತ್ರನಾದ ಓ ಶುಕ್ರಾಚಾರ್ಯನೇ, ಭಯದಿಂದ ಕಂಗೆಟ್ಟು ಬಂದಿರುವ ನಮ್ಮನ್ನು ನೀನು ಈರೀತಿಯಲ್ಲಿ ತಿರಸ್ಕಾರ ಮಾಡುವುದು ಸರಿಯಲ್ಲವು. ನಾವೆಲ್ಲರೂ ನಿನ್ನ ಪ್ರೀತಿಗೆ ಪಾತ್ರರಾಗಿದ್ದ ಮಕ್ಕಳಲ್ಲವೇ ? ಆದುದರಿಂದ ನೀನು ನಮ್ಮನ್ನು ಕಾಪಾಡಲೇಬೇಕು.

**ಗತೇ ತ್ವಯಿ ತು ಮಂತ್ರಾರ್ಥಂ ಶೈಲೂಷೇಣ ದುರಾತ್ಮನಾ ।**
**ತ್ವದ್ವೇಷಮಧುರಾಲಾಪೈರ್ವಯಂ ತೇನ ಪ್ರವಂಚಿತಾಃ ॥೩೩॥**

ಓ ಶುಕ್ರಾಚಾರ್ಯನೇ, ಮಂತ್ರವಿದ್ಯೆಯನ್ನು ಸಂಪಾದಿಸಿಕೊಂಡು ಬರಲು ನೀನು ಹೊರಟುಹೋದಮೇಲೆ, ವಂಚಕನಾದ ಗುರುವು ನಿನ್ನ ವೇಷವನ್ನು ಧರಿಸಿ ನಿನ್ನಂತೆಯೇ ಪ್ರೀತಿಯಿಂದ ಕೂಡಿದ ಮಾತುಗಳಿಂದ ನಮ್ಮನ್ನೆಲ್ಲಾ ಭ್ರಾಂತಿಗೊಳಿಸಿದನು.

**ಅಜ್ಞಾನಕೃತದೋಷೇಣ ನೈವ ಕುಪ್ಯತಿ ಶಾಂತಿಮಾನ್ ।**
**ಸರ್ವಜ್ಞಸ್ತ್ವಂ ವಿಜಾನಾಸಿ ಚಿತ್ತಂ ನಃ ಪ್ರವಣಂ ತ್ವಯಿ ॥೩೪॥**

ನೀನು|ಎಲ್ಲವನ್ನೂ ತಿಳಿದಿರುವವನು, ಶಾಂತವಾದ ಮನಸ್ಸುಳ್ಳ ಪುರುಷನು, ಅಜ್ಞಾನದಿಂದ ಮಾಡಿದ ಅಪರಾಧಗಳ ವಿಷಯದಲ್ಲಿ ಕೋಪಗೊಳ್ಳುವುದಿಲ್ಲ. ಅಲ್ಲದೆ, ನೀನು ಎಲ್ಲವನ್ನೂ ತಿಳಿದಿರುವುದರಿಂದ ನಮ್ಮ ಮನಸ್ಸು ಸ್ವಾಭಾವಿಕವಾಗಿ ನಿನ್ನಲ್ಲೇ ಪ್ರೀತಿವಿಶ್ವಾಸವುಳ್ಳದ್ದಾಗಿ ಇರುತ್ತದೆಂಬುದನ್ನು ನೀನು ತಿಳಿದೇ ಇರುವೆಯಲ್ಲವೇ ?

**ಜ್ಞಾತ್ವಾ ನಸ್ತಪಸಾ ಭಾವಂ ತ್ಯಜ ಕೋಪಂ ಮಹಾಮತೇ ।**
**ಬ್ರುವಂತಿ ಮುನಯಃ ಸರ್ವೇ ಕ್ಷಣಕೋಪಾ ಹಿ ಸಾಧವಃ ॥೩೫॥**

ಎಲೈ ಉತ್ತಮವಾದ ತಿಳಿವಳಿಕೆಯುಳ್ಳ ಶುಕ್ರಾಚಾರ್ಯನೇ, ನಿನ್ನ ಜ್ಞಾನದೃಷ್ಟಿಯಿಂದ, ನಮ್ಮ ಮನಸ್ಸಿನಲ್ಲಿ ಮೊದಲಿನಿಂದಲೂ ಸಹಜವಾಗಿರುವ ಭಾವವನ್ನು ತಿಳಿದಿರುವ ನೀನು ಕೋಪವನ್ನು ಬಿಟ್ಟು ನಮ್ಮನ್ನು ರಕ್ಷಿಸು. ಸಾಧುಗಳ ಕೋಪವು ಕೇವಲ ಕ್ಷಣಕಾಲ ಮಾತ್ರ ಇರುವುದೆಂದು ಋಷಿಗಳೆಲ್ಲರೂ ಹೇಳಿರುವರಲ್ಲವೇ ?

**ಜಲಂ ಸ್ವಭಾವತಃ ಶೀತಂ ವಹ್ನ್ಯಾತಪಸಮಾಗಮಾತ್ ।**
**ಭವತ್ಯುಷ್ಣಂ ವಿಯೋಗಾಚ್ಚ ಶೀತತ್ವಮನುಗಚ್ಛತಿ ॥೩೬॥**

ಹೇಗೆಂದರೆ ಸ್ವಭಾವವಾಗಿ ತಣ್ಣಗಿರುವ ನೀರು ಬೆಂಕಿಯ ಸಂಬಂಧದಿಂದ ಬಿಸಿಯಾಗುತ್ತದೆ. ಆದರೆ ಆ ಬೆಂಕಿಯ ಸಂಬಂಧವು ತಪ್ಪಿಹೋದರೆ ಪುನಃ ಅದು ತನ್ನ ಸ್ವಭಾವವಾದ ಶೈತ್ಯವನ್ನೇ ಹೊಂದುತ್ತದೆ.

**ಕ್ರೋಧಶ್ಚಾಂಡಾಲರೂಪೋ ವೈ ತ್ಯಕ್ತವ್ಯಃ ಸರ್ವಥಾ ಬುಧೈಃ ।**
**ತಸ್ಮಾದ್ರೋಷಂ ಪರಿತ್ಯಜ್ಯ ಪ್ರಸಾದಂ ಕುರು ಸುವ್ರತ ॥೩೭॥**

ಧರ್ಮನಿಯಮಗಳನ್ನು ಚನ್ನಾಗಿ ಪಾಲಿಸುವ ಓ ಶುಕ್ರಾಚಾರ್ಯನೇ, ಕೋಪವೆಂಬುದು ಚಂಡಾಲಸ್ವರೂಪವಲ್ಲವೇ ? ಅಂತಹ ನೀಚವಾದ ಕೋಪವನ್ನು ವಿವೇಕಿಗಳು ಖಂಡಿತವಾಗಿಯೂ ಬಿಡಬೇಕು. ಆದುದರಿಂದ ಕೋಪವನ್ನು ಬಿಟ್ಟು ನಮ್ಮಗಳ ವಿಷಯದಲ್ಲಿ ಅನುಗ್ರಹವನ್ನು ಮಾಡು.

**ಯದಿ ನ ತ್ಯಜಸಿ ಕ್ರೋಧಂ ತ್ಯಜಸ್ಯಸ್ಮಾನ್ಸುದುಃಖಿತಾನ್ ।**
**ತ್ವಯಾ ತ್ಯಕ್ತಾ ಮಹಾಭಾಗ ಗಮಿಷ್ಯಾಮೋ ರಸಾತಲಂ ॥೩೮॥**

ಎಲೈ ಪೂಜ್ಯನೇ, ಒಂದುವೇಳೆ ನೀನು ಕೋಪವನ್ನೂ ಬಿಡದೆ, ಅತ್ಯಂತ ದುಃಖಗೊಂಡಿರುವ ನಮ್ಮನ್ನು ರಕ್ಷಿಸದೆ ಬಿಟ್ಟುಬಿಡುವುದಾದರೆ, ಆಗ ನಾವು ನಿನ್ನಿಂದ ತಿರಸ್ಕೃತರಾಗಿ ಪಾತಾಳಲೋಕಕ್ಕೆ ಹೊರಟುಹೋಗುವೆವು.

॥ ವ್ಯಾಸ ಉವಾಚ ॥

**ಪ್ರಹ್ಲಾದಸ್ಯ ವಚಃ ಶ್ರುತ್ವಾ ಭಾರ್ಗವೋ ಜ್ಞಾನಚಕ್ಷುಷಾ ।**
**ವಿಲೋಕ್ಯ ಸುಮನಾ ಭೂತ್ವಾ ತಾನುವಾಚ ಹಸನ್ನಿವ ॥೩೯॥**

ವ್ಯಾಸನು ಹೇಳಿದನು—ಈರೀತಿಯಲ್ಲಿ ಹೇಳಿದ ಪ್ರಹ್ಲಾದನ ಮಾತನ್ನು ಕೇಳಿ ಶುಕ್ರಾಚಾರ್ಯನು ತನ್ನ ಜ್ಞಾನಚಕ್ಷುಸ್ಸಿನಿಂದ ಎಲ್ಲವನ್ನೂ ತಿಳಿದುಕೊಂಡು ಸಂತೋಷಗೊಂಡ ಮನಸ್ಸುಳ್ಳವನಾಗಿ ಮಂದಹಾಸದಿಂದ ಅವರನ್ನು ಕುರಿತು ಹೀಗೆ ಹೇಳಿದನು.

**ನ ಭೇತವ್ಯಂ ನ ಗಂತವ್ಯಂ ದಾನವಾ ವಾ ರಸಾತಲಂ ।**
**ರಕ್ಷಯಿಷ್ಯಾಮಿ ವೋ ಯಾಜ್ಯಾನ್ಮಂತ್ರೈರವಿತಥೈಃ ಕಿಲ ॥೪೦॥**

ಓ ರಾಕ್ಷಸರೇ ಹೆದರಬೇಡಿರಿ. ಪಾತಾಳಕ್ಕೆ ಹೋಗಲೂ ಬೇಡಿರಿ. ಸತ್ಯವಾದ ಎಂದಿಗೂ ನಿಷ್ಫಲವಾಗದ ಮಂತ್ರಗಳಿಂದ ಶಿಷ್ಯರೂ ಯಾಜ್ಯರೂ ಆಗಿರುವ ನಿಮ್ಮನ್ನು ನಾನು ಕಾಪಾಡುವೆನು.

**ಹಿತಂ ಸತ್ಯಂ ಬ್ರವೀಮ್ಯದ್ಯ ಶ್ರುಣುಧ್ವಂ ತತ್ತ್ವನಿಶ್ಚಯಂ ।**
**ವಚನಂ ಮಮ ಧರ್ಮಜ್ಞಾಃ ಶ್ರುತಂ ಯದ್ಬ್ರಹ್ಮಣಃ ಪುರಾ ॥೪೧॥**

ಓ ಧರ್ಮವನ್ನು ತಿಳಿದಿರುವ ರಾಕ್ಷಸರೇ, ಹಿಂದೆ ನಾನು ಬ್ರಹ್ಮನಿಂದ ಕೇಳಿದ ಹಿತಕರವಾದ ಮತ್ತು ಸತ್ಯವಾದ ನನ್ನ ಈ ಮಾತುಗಳನ್ನು ಕೇಳುವವರಾಗಿರಿ. ಈ ಮಾತುಗಳು ನಿಶ್ಚಯವಾದವುಗಳು.

**ಅವಶ್ಯಂ ಭಾವಿನೋ ಭಾವಾಃ ಪ್ರಭವಂತಿ ಶುಭಾಶುಭಾಃ |**
**ದೈವಂ ನ ಚಾನ್ಯಥಾಕರ್ತುಂ ಕ್ಷಮಃ ಕೋಽಪಿ ಧರಾತಲೇ ॥೪೨॥**

ಮುಂದೆ ಸಂಭವಿಸಬೇಕಾದ ಕಾರ್ಯವು—ಅದು ಒಳ್ಳೆಯದಾಗಲಿ, ಕೆಟ್ಟದ್ದಾಗಲಿ, ಖಂಡಿತವಾಗಿಯೂ ತಪ್ಪದೆ ಸಂಭವಿಸುತ್ತದೆ. ಹೀಗಿರುವ ಅದೃಷ್ಟವನ್ನು ಬೇರೆ ರೀತಿಯಲ್ಲಿ ಬದಲು ಮಾಡಲು ಈ ಭೂಲೋಕದಲ್ಲಿ ಯಾರೂ ಸಮರ್ಥರಲ್ಲ.

**ಅದ್ಯ ಮಂದಬಲಾ ಯೂಯಂ ಕಾಲಯೋಗಾದಸಂಶಯಂ ।**
**ದೇವೈರ್ಜಿತಾಃ ಸಕೃಚ್ಚಾಪಿ ಪಾತಾಲಂ ಪ್ರತಿಪತ್ಸ್ಯಥ ॥೪೩॥**
**ಪ್ರಾಪ್ತಃ ಪರ್ಯಾಯಕಾಲೋ ವ ಇತಿ ಬ್ರಹ್ಮಾಽಭ್ಯಭಾಷತ ।**

ದುರದೃಷ್ಟವು ಪ್ರಬಲವಾಗಿ ಮುಂದಾಗಿರುವ ಕಾಲದ ಪ್ರಭಾವದಿಂದ ನೀವು ಈಗ ಕಮ್ಮಿಯಾದ ಬಲವುಳ್ಳವರಾಗಿರುವಿರಿ. ಇದರಲ್ಲಿ ಸಂದೇಹವಿಲ್ಲವು. ಆದುದರಿಂದಲೇ ಈಗ ಒಂದಾವೃತ್ತಿ ದೇವತೆಗಳಿಂದ ಗೆಲ್ಲಲ್ಪಟ್ಟವರಾಗಿರುವಿರಿ. ಆದುದರಿಂದ ಈಗ ಸ್ವಲ್ಪಕಾಲದವುಟ್ಟಿಗೆ ನೀವು ಪಾತಾಳಲೋಕಕ್ಕೆ ಹೋಗಿ ಅಲ್ಲಿ ಇರುವವರಾಗಿರಿ. ಏಕೆಂದರೆ, ನಿಮ್ಮ ಅಭ್ಯುದಯಕಾಲವು ಮುಗಿದುಹೋಗಿ ದುರದೃಷ್ಟದ ಕಾಲವು ಪ್ರಾಪ್ತವಾಗಿದೆ ಎಂದು ಬ್ರಹ್ಮನೂ ಹೇಳಿದನು.

**ಭುಕ್ತಂ ರಾಜ್ಯಂ ಭವದ್ಭಿಶ್ಚ ಪೂರ್ಣಂ ಸರ್ವಂ ಸಮೃದ್ಧಿಮತ್ ॥೪೪॥**

**ಯುಗಾನಿ ದಶ ಪೂರ್ಣಾನಿ ದೇವಾನಾಕ್ರಮ್ಯ ಮೂರ್ಧನಿ ।**
**ದೈವಯೋಗಾಚ್ಚ ಯುಷ್ಮಾಭಿರ್ಭುಕ್ತಂ ತ್ರೈಲೋಕ್ಯಮೂರ್ಜಿತಂ॥**

ನಿಮ್ಮ ಸುದೈವಯೋಗದ ಸರದಿಯ ಕಾಲದಲ್ಲಿ ನೀವೂ, ದೇವತೆಗಳನ್ನು ನಿಮ್ಮ ಕಾಲಿನಿಂದ ತಲೆಯ ಮೇಲೆ ಮೆಟ್ಟಿ ತುಳಿದು ಸೋಲಿಸಿ, ಸರ್ವಸಂಪತ್ತಿನಿಂದ ಕೂಡಿದ ಮೂರು ಲೋಕಗಳ ಸಾಮ್ರಾಜ್ಯಸುಖವನ್ನು ಹತ್ತು ಯುಗಗಳ ಕಾಲ ಪೂರ್ಣವಾಗಿ ಅನುಭವಿಸಿರುವಿರಿ,

ಸಾವರ್ಣಿಕೇ ಮುನೌ ರಾಜ್ಯಂ ಪುನಸ್ತತ್ತು ಭವಿಷ್ಯತಿ ।
ಪೌತ್ರಸ್ತ್ರೈಲೋಕ್ಯವಿಜಯೀ ರಾಜ್ಯಂ ಪ್ರಾಪ್ಸ್ಯತಿ ತೇ ಬಲಿಃ ॥೪೬॥

ಸಾವರ್ಣಿ ಎಂಬ ಹೆಸರಿನ ಎಂಟನೆಯ ಮನ್ವಂತರದ ಕಾಲದಲ್ಲಿ ಈ ರಾಜ್ಯವು ಪುನಃ ನಿಮಗೆ ಬರುವುದು. ಎಲೈ ಪ್ರಹ್ಲಾದನೇ ನಿನ್ನ ಮಗನ ಮಗನಾದ ಬಲಿಯು ಮೂರು ಲೋಕಗಳನ್ನೂ ಗೆದ್ದು ಸ್ವರ್ಗಸಾಮ್ರಾಜ್ಯವನ್ನು ಆಳುವನು.

ಯದಾ ವಾಮನರೂಪೇಣ ಹೃತಂ ದೇವೇನ ವಿಷ್ಣುನಾ ।
ತದೈವ ಚ ಭವತ್ಪೌತ್ರಃ ಪ್ರೋಕ್ತೋ ದೇವೇನ ಜಿಷ್ಣುನಾ ॥೪೭॥

ಓ ಪ್ರಹ್ಲಾದನೇ, ಯಾವಾಗ ಜ್ಞಾನಪ್ರಕಾಶರೂಪನಾದ ವಿಷ್ಣುವು ವಾಮನಾವತಾರವನ್ನು ಮಾಡಿ ಬಂದು ಆ ಬಲಿಯ ಸಾಮ್ರಾಜ್ಯವನ್ನು ಅಪಹರಿಸಿದನೋ ಆಗ ವಿಷ್ಣುವು ನಿನ್ನ ಮೊಮ್ಮಗನಾದ ಬಲಿಚಕ್ರವರ್ತಿಗೆ ಈರೀತಿಯಾಗಿ ಹೇಳಿರುತ್ತಾನೆ.

ಹೃತಂ ಯೇನ ಬಲೇ ರಾಜ್ಯಂ ದೇವವಾಂಛಾರ್ಥಸಿದ್ಧಯೇ ।
ತ್ವಮಿಂದ್ರೋ ಭವಿತಾ ಚಾಗ್ರೇ ಸ್ಥಿತೇ ಸಾವರ್ಣಿಕೇ ಮನೌ ॥೪೮॥

ಏನೆಂದರೆ, ಈಗ ನಾನು, ಕಾಲದ ಬದಲಾವಣೆ, ಅದೃಷ್ಟದ ಪ್ರಭಾವ ಇವುಗಳನ್ನನುಸರಿಸಿ ದೇವತೆಗಳ ಇಷ್ಟಪೂರ್ತಿಗಾಗಿ ಈ ರಾಜ್ಯವನ್ನು ಅಪಹರಿಸಿರುತ್ತೇನೆ. ಮುಂದಕ್ಕೆ ಸಾವರ್ಣಿಕಮನುವು ಈ ಸಾಮ್ರಾಜ್ಯದ ಆಡಳಿತವನ್ನು ನೆರವೇರಿಸುತ್ತಿರುವಾಗ ನೀನು ಇಂದ್ರಪಟ್ಟವನ್ನು ಹೊಂದುವೆ, ಎಂಬುದಾಗಿ ವಾಮನಾವತಾರಿಯಾಗಿದ್ದ ವಿಷ್ಣುವು ಬಲಿಗೆ ಹೇಳಿರುತ್ತಾನೆ.

॥ ಭಾರ್ಗವ ಉವಾಚ ॥

ಇತ್ಯುಕ್ತೋ ಹರಿಣಾ ಪೌತ್ರಸ್ತವ ಪ್ರಹ್ಲಾದ ಸಾಂಪ್ರತಂ ।
ಅದೃಶ್ಯಃ ಸರ್ವಭೂತಾನಾಂ ಗುಪ್ತಶ್ಚರತಿ ಭೀತವತ್ ॥೪೯॥

ಶುಕ್ರಾಚಾರ್ಯನು ಹೇಳಿದನು—ಓ ಪ್ರಹ್ಲಾದನೇ ಈರೀತಿಯಲ್ಲಿ ನಿನ್ನ ಮೊಮ್ಮಗನಿಗೆ ಹರಿಯು ಹೇಳಲು ಈಗ ಅವನು ದುರದೃಷ್ಟಕಾಲದ ಪ್ರಭಾವದಿಂದ ಹೆದರಿದವನಂತೆ ಇರುತ್ತಾ ಯಾರಿಗೂ ಕಾಣಿಸದಂತೆ ಗೂಢವಾಗಿ ಸಂಚರಿಸುತ್ತಿರುತ್ತಾನೆ.

**ಏಕದಾ ವಾಸವೇನಾಸೌ ಬಲಿರ್ಗರ್ದಭರೂಪಭಾಕ್ ।**
**ಶೂನ್ಯೇ ಗೃಹೇ ಸ್ಥಿತಃ ಕಾಮಂ ಭಯಭೀತಃ ಶತಕ್ರತೋಃ ॥೫೦॥**

ಹೀಗಿರಲು, ಒಂದಾನೊಂದು ಸಮಯದಲ್ಲಿ ಇಂದ್ರನಿಂದ ಹೆದರಿಕೊಂಡವನಂತೆ ಇದ್ದ ಬಲಿಯು ತಾನಾಗಿಯೇ ಒಂದು ಕತ್ತೆಯ ರೂಪವನ್ನು ಧರಿಸಿ ಶೂನ್ಯವಾದ ಒಂದು ಮನೆಯಲ್ಲಿ ಇದ್ದನು. ಆಗ ಇಂದ್ರನು ಅವನನ್ನು ಗುರುತಿಸಿ ಹೀಗೆ ಕೇಳಿದನು.

**ಪೃಷ್ಟಶ್ಚ ಬಹುಧಾ ತೇನ ವಾಸವೇನ ಬಲಿಸ್ತದಾ ।**
**ಕಿಮರ್ಥಂ ಗಾರ್ದಭಂ ರೂಪಂ ಕೃತವಾನ್ದೈತ್ಯಪುಂಗವ ॥೫೧॥**

ಆಗ ಇಂದ್ರನು ಅವನನ್ನು ಬಹುಬಗೆಯಾಗಿ ಪ್ರಶ್ನಿಸಿದನು. ಓ ರಾಕ್ಷಸ ಶ್ರೇಷ್ಠನೇ, ಏತಕ್ಕಾಗಿ ನೀನು ಕತ್ತೆಯ ರೂಪವನ್ನು ಧರಿಸಿರುವೆ ?

**ಭೋಕ್ತಾ ತ್ವಂ ಸರ್ವಲೋಕಸ್ಯ ದೈತ್ಯಾನಾಂ ಚ ಪ್ರಶಾಸಿತಾ ।**
**ನ ಲಜ್ಜಾ ಖರರೂಪೇಣ ತವ ರಾಕ್ಷಸಸತ್ತಮ ॥೫೨॥**

ಎಲೈ ದಾನವೋತ್ತಮನೇ, ನೀನು ಎಲ್ಲ ಲೋಕಗಳ ಒಡೆಯತನವನ್ನೂ ಅನುಭವಿಸಲು ಅರ್ಹನಾದವನು, ಅಲ್ಲದೆ ರಾಕ್ಷಸರಿಗೆಲ್ಲಾ ಪ್ರಭುವು, ಅಂತಹ ನೀನು ಈ ಕತ್ತೆಯ ರೂಪವನ್ನು ಧರಿಸಿರುವುದು ನಾಚಿಕೆಯನ್ನುಂಟುಮಾಡುವುದಿಲ್ಲವೇ ?

**ತಸ್ಯ ತದ್ವಚನಂ ಶ್ರುತ್ವಾ ದೈತ್ಯರಾಜೋ ಬಲಿಸ್ತದಾ ।**
**ಪ್ರೋವಾಚ ವಚನಂ ಶಕ್ರಂ ಕೋಽತ್ರ ಶೋಕಃ ಶತಕ್ರತೋ ॥**

ಈ ರೀತಿಯ ಇಂದ್ರನ ಮಾತನ್ನು ಕೇಳಿ ಆಗ ದಾನವರಿಗೆಲ್ಲರಿಗೂ ದೊರೆಯಾದ ಬಲಿಯು, ಈ ಪ್ರಕಾರವಾಗಿ ಪ್ರತ್ಯುತ್ತರವನ್ನು ಹೇಳಿದನು. ನೂರು ಯಾಗಗಳನ್ನು ಮಾಡಿದ ಇಂದ್ರನೇ, ಸ್ವಾಭಾವಿಕವಾಗಿರುವ ಈ ವಿಷಯದಲ್ಲಿ ದುಃಖಿಸುವುದರಿಂದೇನು ಪ್ರಯೋಜನವು ? ಎಲ್ಲರಿಗೂ ಸುಖದುಃಖಗಳು ಒಂದಾದ ಮೇಲೆ ಮತ್ತೊಂದರಂತೆ ತಿರುಗಿ ಬರುತ್ತಲೇ ಇರುತ್ತವೆ. ಯಾವುದೂ ಯಾರಿಗೂ ಶಾಶ್ವತವಾಗಿರುವುದಿಲ್ಲವು. ಇದು ಯಾರಿಗೂ ತಪ್ಪಿದ್ದಲ್ಲವೆಂದು ತಾತ್ಪರ್ಯವು. ಆದುದರಿಂದ ಯಾರಿಗೂ ಅನಿವಾರ್ಯವಾಗಿರುವ ಈ ವಿಚಾರದಲ್ಲಿ ಶೋಕಿಸುವುದೇನಿದೆ ?

**ಯಥಾ ವಿಷ್ಣುರ್ಮಹಾತೇಜಾ ಮತ್ಸ್ಯಕಚ್ಛಪತಾಂ ಗತಃ ॥೫೩॥**
**ತಥಾಽಹಂ ಖರರೂಪೇಣ ಸಂಸ್ಥಿತಃ ಕಾಲಯೋಗತಃ ।**

ಓ ಇಂದ್ರನೇ, ಇದರಂತೆಯೇ ತುಂಬ ತೇಜಸ್ವಿಯಾದ ವಿಷ್ಣುವೂ ಕಾಲಕ್ಕೆ ಅಧೀನನಾಗಿ ಮತ್ಸ್ಯ ಮತ್ತು ಕೂರ್ಮ ಈ ಅವತಾರಗಳ ಕಾಲದಲ್ಲಿ ಮೀನು ಮತ್ತು ಆಮೆಯ ರೂಪವನ್ನು ಹೇಗೆ ಹೊಂದಿದ್ದನೋ ಹಾಗೆಯೇ ನಾನೂ ಈಗ ಕಾಲವಶ ದಿಂದ ಕತ್ತೆಯ ರೂಪದಲ್ಲಿರುವೆನು.

**ಯಥಾ ತ್ವಂ ಕಮಲೇ ಲೀನಃ ಸಂಸ್ಥಿತೋ ಬ್ರಹ್ಮಹತ್ಯಯಾ ॥೫೪॥**
**ಪೀಡಿತಶ್ಚ ತಥಾ ಹ್ಯದ್ಯ ಸ್ಥಿತೋಽಹಂ ಖರರೂಪಧೃಕ್ ।**

ಅಲ್ಲದೆ, ನೀನೂ ಸಹ ಬ್ರಹ್ಮಹತ್ಯಾದೋಷದಿಂದ ಪೀಡಿತನಾಗಿ ಕಮಲದಲ್ಲಿ ಹೇಗೆ ಅಡಗಿಕೊಂಡಿದ್ದೆಯೋ ಹಾಗೆಯೇ ಈಗ ನಾನೂ ಕತ್ತೆಯ ರೂಪವನ್ನು ಧರಿಸಿರುವೆನು.

**ದೈವಾಧೀನಸ್ಯ ಕಿಂ ದುಃಖಂ ಕಿಂ ಸುಖಂ ಪಾಕಶಾಸನ ॥೫೫॥**
**ಕಾಲಃ ಕರೋತಿ ವೈ ನೂನಂ ಯದಿಚ್ಛತಿ ಯಥಾ ತಥಾ ।**

ಅದೃಷ್ಟಕ್ಕೆ ಸಿಕ್ಕಿದವರಿಗೆ, ಕಾಮ್ಯಕರ್ಮಗಳನ್ನು ಮಾಡಿರುವವರಿಗೆ ಸ್ಥಿರ ವಾದ ಸುಖವೆಲ್ಲಿಯದು? ಹಾಗೆಯೇ ಶಾಶ್ವತವಾದ ದುಃಖವೆಲ್ಲಿಯದು? ಓ ಇಂದ್ರನೇ, ಕಾಲವು ಅದಕ್ಕೆ ಇಷ್ಟಬಂದಂತೆ ಎಲ್ಲವನ್ನೂ ಎಂದರೆ ಸುಖವನ್ನೋ ದುಃಖವನ್ನೋ ಉಂಟುಮಾಡುತ್ತಿರುತ್ತದೆ.

॥ ಭಾರ್ಗವ ಉವಾಚ ॥

**ಇತಿ ತೌ ಬಲಿದೇವೇಶೌ ಕೃತ್ವಾ ಸಂವಿದಮುತ್ತಮಾಂ ॥೫೬॥**
**ಪ್ರಬೋಧಂ ಪ್ರಾಪತುಃ ಕಾಮಂ ಯಥಾಸ್ಥಾನಂ ಚ ಜಗ್ಮತುಃ ।**

ಶುಕ್ರಾಚಾರ್ಯನು ಹೇಳಿದನು— ಓ ದಾನವೋತ್ತಮರೇ, ಈ ರೀತಿಯಾಗಿ ಬಲಿಯೂ ಇಂದ್ರನೂ ವಿಚಾರವಿಮರ್ಶೆಯಿಂದ ಕೂಡಿದ ಸಂಭಾಷಣೆಯನ್ನು ನಡೆಸಿದವ ರಾಗಿ ತಮ್ಮ ತಮ್ಮ ಅವಸ್ಥೆಯನ್ನು ಎಂದರೆ ಸ್ಥಾನಮಾನಗಳ ಸ್ಥಿತಿಯನ್ನು ತಿಳಿದವ ರಾಗಿ ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗಿದರು. ತಮ್ಮ ಹಿಂದಿನ ಕರ್ಮಗಳ ಫಲವನ್ನು ತಾವು ಅನುಭವಿಸಲೇಬೇಕೆಂಬ ನಿಯಮವನ್ನು ತಿಳಿದು ಸಮಾಧಾನಗೊಂಡರು.

**ಇತ್ಯೇತತ್ತೇ ಸಮಾಖ್ಯಾತಾ ಮಯಾ ದೈವಬಲಿಷ್ಠತಾ ॥೫೭॥**
**ದೈವಾಧೀನಂ ಜಗತ್ಸರ್ವಂ ಸದೇವಾಸುರಮಾನುಷಂ ॥**

ಓ ರಾಕ್ಷಸರೇ, ಈ ರೀತಿಯಾಗಿ ದೈವವೇ ಎಲ್ಲಕ್ಕಿಂತ ಹೆಚ್ಚಿನ ಬಲವನ್ನು ಪಡೆದಿರುತ್ತದೆ ಎಂಬ ಅಂಶವನ್ನು ನಾನು ನಿಮಗೆ ತಿಳಿಯಹೇಳಿರುತ್ತೇನೆ. ಆದುದ ರಿಂದ ದೇವಾಸುರ ಮನುಷ್ಯರಿಂದ ಕೂಡಿರುವ ಈ ಪ್ರಪಂಚವೆಲ್ಲವೂ ದೈವಕ್ಕೆ ವಶ ವರ್ತಿಯಾಗಿರುತ್ತದೆ. ಜನ್ಮಾಂತರಕೃತಂಕರ್ಮ ದೈವಮಿತ್ಯಭಿಧೀಯತೇ ॥

ಇದರಿಂದ ದೈವೇಚ್ಛೆಯೇ ಪ್ರಬಲವು, ಪುರುಷಪ್ರಯತ್ನವು ನಿಷ್ಫಲವು, ಈ ಪ್ರಾಪಂಚಿಕವಾದ ಸಂಸಾರವು ಅನಿವಾರ್ಯವಾಗಿ ದುಃಖರೂಪವಾದುದು, ಜೀವರಿಗೆ ನಿರಾಶೆಯ ದುಸ್ಥಿತಿಯು ತಪ್ಪದು. ಸ್ವಾತಂತ್ರ್ಯವೂ, ಬಿಡುಗಡೆಯೂ ದೊರೆಯವು. ಎಂಬ (Pessimistic view of life) ಜೀವನ ದೃಷ್ಟಿಯು ಏರ್ಪಡುತ್ತದೆ. ಅಲ್ಲದೆ ಸೋಲಿನ ಮನೋಭಾವವೂ (Defeatist mentality) ಬಲಗೊಳ್ಳು ತ್ತದೆ. ಇದು ಕರ್ಮವಾದ (The Law of Karma) ದಿಂದ ಹಿಂದುಗಳ ಮನ ಸ್ಸಿನಮೇಲೆ ಆಗಿರುವ ಪರಿಣಾಮವೆಂದು ಆಧುನಿಕವಿಮರ್ಶಕರು, ಪಾಶ್ಚಾತ್ಯರಲ್ಲಿ ಅನೇ ಕರೂ, ಪೌರ್ವಾತ್ಯರಲ್ಲಿ ಕೆಲವರೂ, ಅಭಿಪ್ರಾಯಪಡುವಹಾಗಾಗಿದೆ. ಆದರೆ ಸೂಕ್ಷ್ಮ ವಾಗಿಯೂ ಆಳವಾಗಿಯೂ ವಿಮರ್ಶಿಸಿದರೆ ಕರ್ಮವಾದದ ಸಿದ್ಧಾಂತವು ಹಾಗಿಲ್ಲ ವೆಂಬುದೂ, ಈ ದೋಷವು ಏಕಜನ್ಮವಾದಿಗಳಿಗೆ ತಪ್ಪದೆಂಬುದೂ ಗೊತ್ತಾಗುತ್ತದೆ. ಜೀವನು ಸಕಾಮಕರ್ಮಾಚರಣೆಯಿಂದ ಈ ಸಂಸಾರದಲ್ಲಿಯೇ ಸುತ್ತುತ್ತಿರುವುದ ಕ್ಕಾಗಲಿ, ನಿಷ್ಕಾಮಕರ್ಮಾಚರಣೆಯಿಂದ ಮೋಕ್ಷವನ್ನು ಪಡೆಯುವುದಕ್ಕಾಗಲಿ, ತನಗೆ ತಾನೇ ಹೊಣೆಗಾರನೂ, ಸ್ವತಂತ್ರನೂ ಆಗಿರುತ್ತಾನೆ. ಈ ಅಂಶವನ್ನು ಈ ಪದ್ಯಗಳಲ್ಲಿ ಸಂಗ್ರಹಿಸಲಾಗಿದೆ. ಹಿಂದೆ ಪುಟ ೨೬ ಅಸ್ಮಿನ್ ಜನ್ಮನಿ ಎಂಬ ಪದ್ಯ ವನ್ನೂ ನೋಡಿ.

**ಕರ್ಮೈವೇಹಜನಸ್ಯದುಃಖಸುಖದಂ ಸತ್ಕರ್ಮಕುರ್ವೇಸದಾ**
**ಸಂಸಿದ್ಧಿರ್ನಿಜಕರ್ಮಣಾಜನಕವತ್ ತಸ್ಮೈ ನಮಃ ಕರ್ಮಣೇ ।**
**ನಾಸ್ತ್ಯನ್ಯತ್ಪರಸಾಧನಂ ನಿಜಕೃತೇಃ ಶ್ರದ್ಧಾ ಬಲಂ ಕರ್ಮಣಃ**
**ಕರ್ಮಣ್ಯೇವ ಮಮಾಸ್ತುಧೀರ್ನ ತು ಫಲೇ ಹೇಕರ್ಮ ಮಾಂ ತಾರಯ ॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ಚತುರ್ದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಪಂಚದಶೋಽಧ್ಯಾಯಃ ||

### ಹದಿನೈದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಇತಿ ತಸ್ಯ ವಚಃ ಶ್ರುತ್ವಾ ಭಾರ್ಗವಸ್ಯ ಮಹಾತ್ಮನಃ ।**
**ಪ್ರಹ್ಲಾದಸ್ತು ಸುಸಂಹೃಷ್ಟೋ ಬಭೂವ ನೃಪನಂದನಃ ॥೧॥**

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ—ಹೀಗೆ ಮಹಾತ್ಮನಾದ ಶುಕ್ರಾಚಾರ್ಯನ ಮಾತನ್ನು ಕೇಳಿ, ರಾಜಶ್ರೇಷ್ಠನಾದ ಪ್ರಹ್ಲಾದನು ಸಂದೇಹವಿಲ್ಲದೆ ಮನಸ್ಸಮಾಧಾನವನ್ನು ಪಡೆದು ತುಂಬ ಸಂತೋಷವುಳ್ಳವನಾದನು.

**ಜ್ಞಾತ್ವಾ ದೈವಂ ಬಲಿಷ್ಠಂ ಚ ಪ್ರಹ್ಲಾದಸ್ತಾನುವಾಚ ಹ ।**
**ಕೃತೇಽಪಿ ಯುದ್ಧೇ ನ ಜಯೋ ಭವಿಷ್ಯತಿ ಕದಾಚನ ॥೨॥**

ಮತ್ತು ಆ ತನ್ನ ಗುರುವಿನ ಮಾತಿನಂತೆ ದೈವವೇ ಬಲಿಷ್ಠವಾದುದು. ಅದಿಲ್ಲದಮೇಲೆ ಏನೂ ಉಪಯೋಗವಿಲ್ಲವೆಂದು ತಿಳಿದು ಆ ಪ್ರಹ್ಲಾದನು ತನ್ನ ಕಡೆಯ ರಾಕ್ಷಸರನ್ನು ಕುರಿತು— ಓ ವೀರರೇ, ನಾವು ಈಗ ಯುದ್ಧ ಮಾಡಿದರೂ ಜಯವು ಸಿಕ್ಕುವುದಿಲ್ಲವು. ನಮಗೆ ದೈವಬಲವು ಇಲ್ಲವು.

**ತದಾ ತೇ ಜಯಿನಃ ಪ್ರೋಚುರ್ದಾನವಾ ಮದಗರ್ವಿತಾಃ ।**
**ಸಂಗ್ರಾಮಸ್ತು ಪ್ರಕರ್ತವ್ಯೋ ದೈವಂ ಕಿಂ ನ ವಿದಾಮಹೇ ॥೩॥**

ಆಗ ಜಯಶಾಲಿಗಳಾದ ಆ ರಾಕ್ಷಸರು ಅಹಂಕಾರದಿಂದ ಕೊಬ್ಬಿದವರಾಗಿ ಹೀಗೆ ಹೇಳಿದರು. ಯುದ್ಧವನ್ನು ಮಾಡಲೇಬೇಕು. ಆ ಅದೃಷ್ಟವು ಯಾವು

ದೆಂಬುದು ನಮಗೆ ಗೊತ್ತಿಲ್ಲವು. ಅದು ಇದೆಯೋ ಇಲ್ಲವೋ ಯಾರು ಬಲ್ಲರು? ಅನುಕೂಲವಾಗಿದ್ದರೂ ಇರಬಹುದು.

**ನಿರುದ್ಯಮಾನಾಂ ದೈವಂ ಹಿ ಪ್ರಧಾನಮಸುರಾಧಿಪ ।**
**ಕೇನ ದೃಷ್ಟಂ ಕ್ವ ವಾ ದೃಷ್ಟಂ ಕೀದೃಶಂ ಕೇನ ನಿರ್ಮಿತಂ ॥೪॥**

ರಾಕ್ಷಸರಿಗೆ ಒಡೆಯನಾದ ಓ ಪ್ರಹ್ಲಾದನೇ, ನಿರುದ್ಯೋಗಿಗಳು ದೈವವನ್ನೇ ಮುಖ್ಯವೆಂದು ತಿಳಿಯುವರು. ನಿಜವಾಗಿ ವಿಚಾರಮಾಡಿ ನೋಡಿದರೆ ಆ ಅದೃಷ್ಟ ವೆಂಬುದನ್ನು ಯಾರು ನೋಡಿರುವರು? ಅದು ಎಲ್ಲಿರುವುದು? ಎಂತಹುದು? ಮತ್ತು ಆ ಅದೃಷ್ಟವನ್ನು ಯಾರು ಸೃಷ್ಟಿಸಿದವರು? ಹೀಗೆ ಬಗೆಹರಿಯದೇ ಇರುವ ಸಂಶಯಗಳಿದುರಿನಲ್ಲಿ ಆ ಅದೃಷ್ಟವೆಂಬುದು ಇರುವುದೇ ನಂಬಿಕೆಗೆ ಅನರ್ಹವಾಗಿದೆ. ಬಾಹುಬಲವಿಲ್ಲದವರು ಅದೃಷ್ಟಮುಖನಿರೀಕ್ಷಣೆ ಮಾಡಿದರೂ, ಬಲಶಾಲಿಗಳಿಗೆ ಪೌರುಷದಿಂದ ಪ್ರಯತ್ನಿಸುವುದೇ ಗುಣವೂ ಫಲಕಾರಿಯೂ ಆಗಿರುತ್ತದೆಂದು ತಾತ್ಪರ್ಯವು.

**ತಸ್ಮಾದ್ಯುದ್ಧಂ ಕರಿಷ್ಯಾಮೋ ಬಲಮಾಸ್ಥಾಯ ಸಾಂಪ್ರತಂ ।**
**ಭವಾಗ್ರೇ ದೈತ್ಯವರ್ಯ ತ್ವಂ ಸರ್ವಜ್ಞೋಽಸಿ ಮಹಾಮತೇ ॥೫॥**

ಆದುದರಿಂದ ಈಗ ನಮ್ಮ ಬಾಹುಬಲವನ್ನು ಅವಲಂಬಿಸಿ ಪರಾಕ್ರಮದಿಂದ ನಾವು ಯುದ್ಧವನ್ನು ಮಾಡೋಣ. ಮಹಾಬುದ್ಧಿಶಾಲಿಯಾದ ಓ ರಾಕ್ಷಸ ಶ್ರೇಷ್ಠನೇ, ನೀನು ಎಲ್ಲವನ್ನೂ ತಿಳಿದವನಾಗಿರುವೆ. ನೀನು ನಮ್ಮೆಲ್ಲರಿಗೂ ಮುಂದಾಳಾಗಿರು.

**ಇತ್ಯುಕ್ತಸ್ತೈಸ್ತದಾ ರಾಜನ್ ಪ್ರಹ್ಲಾದಃ ಪ್ರಬಲಾರಿಹಾ ।**
**ಸೇನಾನೀಶ್ಚ ತದಾ ಭೂತ್ವಾ ದೇವಾನ್ಯುದ್ಧೇ ಸಮಾಹ್ವಯತ್ ॥೬॥**

ಓ ಜನಮೇಜಯರಾಜನೇ, ದೈತ್ಯರು ಈರೀತಿ ಹೇಳಲು ಪ್ರಬಲರಾದ ಶತ್ರುಗಳನ್ನೂ ಸಹ ಸಂಹಾರ ಮಾಡಬಲ್ಲ ಆ ಪ್ರಹ್ಲಾದನು ತನ್ನ ಮಾತನ್ನು ಕೇಳದ ಅವರ ಮಾತಿನಂತೆ ಸೇನಾನಾಯಕನಾಗಿ ದೇವತೆಗಳನ್ನು ಯುದ್ಧಕ್ಕೆ ಕರೆದನು.

**ತೇಽಪಿ ತತ್ರಾಸುರಾನ್ದೃಷ್ಟ್ವಾ ಸಂಗ್ರಾಮೇ ಸಮುಪಸ್ಥಿತಾನ್ ।**
**ಸರ್ವೇ ಸಂಭೃತಸಂಭಾರಾ ದೇವಾಸ್ತಾನ್ಸಮಯೋಧಯನ್ ॥೭॥**

ಆ ದೇವತೆಗಳೂ ಸಹ ಅಲ್ಲಿ ಯುದ್ಧಕ್ಕೆ ಸಿದ್ಧರಾಗಿ ಬಂದಿರುವ ಆ ರಾಕ್ಷಸರನ್ನೂ ನೋಡಿ ತಾವೆಲ್ಲರೂ ಯುದ್ಧಕ್ಕೆ ಸಿದ್ಧತೆಗಳನ್ನು ಮಾಡಿಕೊಂಡು ರಾಕ್ಷಸರೊಡನೆ ಯುದ್ಧವನ್ನು ಮಾಡಿದರು.

**ಸಂಗ್ರಾಮುಸ್ತು ತದಾ ಘೋರಃ ಶಕ್ರಪ್ರಹ್ಲಾದಯೋರ್ಭವತ್ ।**
**ಪೂರ್ಣಂ ವರ್ಷಶತಂ ತತ್ರ ಮುನೀನಾಂ ವಿಸ್ಮಯಾವಹಃ ॥೮॥**

ಆಗ ಅಲ್ಲಿ ಇಂದ್ರ ಮತ್ತು ಪ್ರಹ್ಲಾದರಿಗೆ ಭಯಂಕರವಾದ ಯುದ್ಧವು ಸಂಪೂರ್ಣವಾಗಿ ಒಂದು ನೂರು ವರ್ಷಗಳವರೆಗೂ ನಡೆಯಿತು. ಆ ಯುದ್ಧವು ಮುನಿಗಳಿಗೂ ತುಂಬ ಆಶ್ಚರ್ಯವನ್ನುಂಟುಮಾಡುವಂತಿತ್ತು.

**ವರ್ತಮಾನೇ ತದಾ ಯುದ್ಧೇ ಶುಕ್ರೇಣ ಪ್ರತಿಪಾಲಿತಾಃ ।**
**ಜಯಮಾಪುಸ್ತದಾ ದೈತ್ಯಾಃ ಪ್ರಹ್ಲಾದಪ್ರಮುಖಾ ನೃಪ ॥೯॥**

ಓ ಜನಮೇಜಯರಾಜನೇ ಹೀಗೆ ರಾಕ್ಷಸರಿಗೂ ದೇವತೆಗಳಿಗೂ ಯುದ್ಧವು ನಡೆಯುತ್ತಿರಲು ಗುರುವಾದ ಶುಕ್ರಾಚಾರ್ಯನಿಂದ ಯುದ್ಧನೀತಿಕೌಶಲದಿಂದ ರಕ್ಷಿಸಲ್ಪಟ್ಟವರಾಗಿದ್ದ ಪ್ರಹ್ಲಾದನೇ ಮೊದಲಾದ ರಾಕ್ಷಸರು ಜಯವನ್ನು ಪಡೆದರು.

ಕೇವಲ ಮನುಷ್ಯ ಪ್ರಯತ್ನಕ್ಕೂ ಸಾಫಲ್ಯವುಂಟೆಂಬುದನ್ನು ಇದರಿಂದ ತಿಳಿಯಬಹುದು. ಆದರೂ, ಪುರುಷಪ್ರಯತ್ನಕ್ಕೆ ಮೀರಿದ ದೈವಸಹಾಯವೂ ಬೇಕೆಂಬುದನ್ನು ತಿಳಿಸುತ್ತಾರೆ.

**ತದ್ವೈವೇಂದ್ರೋ ಗುರೋರ್ವಾಕ್ಯಾತ್ಸರ್ವದುಃಖವಿನಾಶಿನೀಂ ।**
**ಸಸ್ಮಾರ ಮನಸಾ ದೇವೀಂ ಮುಕ್ತಿದಾಂ ಪರಮಾಂ ಶಿವಾಂ ॥೧೦॥**

ಆಗ ಇಂದ್ರನು ತನ್ನ ಗುರುವಾದ ಬೃಹಸ್ಪತಿಯ ಬುದ್ಧಿವಾದದ ಉಪದೇಶವನ್ನನುಸರಿಸಿ, ಎಲ್ಲ ದುಃಖಗಳನ್ನೂ ಹೋಗಲಾಡಿಸಿ, ಕಡೆಗೆ ಮುಕ್ತಿಯನ್ನೂ ಕೊಡುವ, ಸರ್ವೋತ್ಕೃಷ್ಟಳಾದ, ಮಂಗಳಸ್ವರೂಪಳಾದ, ಮತ್ತು ಜ್ಞಾನಜ್ಯೋತಿಪ್ರಕಾಶಸ್ವರೂಪಳಾದ ಆ ಆದಿಶಕ್ತಿಯನ್ನು ಮನಸ್ಸಿನಲ್ಲಿಯೇ ಧ್ಯಾನಿಸಿದನು.

॥ ಇಂದ್ರ ಉವಾಚ ॥

**ಜಯ ದೇವಿ ಮಹಾಮಾಯೇ ಶೂಲಧಾರಿಣಿ ಚಾಂಬಿಕೇ ।**
**ಶಂಖಚಕ್ರಗದಾಪದ್ಮ ಖಡ್ಗಹಸ್ತೇಽಭಯಪ್ರದೇ ॥೧೧॥**

ಇಂದ್ರನು ಹೇಳಿದನು—ಆದಿಮಾಯಾಸ್ವರೂಪಳಾದ, ತ್ರಿಶೂಲವನ್ನು ಧರಿಸಿರುವ, ಶಂಖ, ಚಕ್ರ, ಗದೆ, ಕಮಲ, ಮತ್ತು ಖಡ್ಗ ಇವುಗಳನ್ನು ಕೈಗಳಲ್ಲಿ ಧರಿಸಿರುವ ಮತ್ತು ಎಲ್ಲ ಭಕ್ತರಿಗೂ ಅಭಯ ಎಂದರೆ ಅಪಾಯಗಳಿಂದಲೂ ಶತ್ರುಗಳಿಂದಲೂ ಭಯವಿಲ್ಲದಿರುವಿಕೆಯನ್ನು ಕರುಣಿಸುವ ಓ ತಾಯಿಯಾದ ದೇವಿಯೇ ನಿನಗೆ ಜಯವಾಗಲಿ ಮತ್ತು ನೀನು ಎಲ್ಲರಿಗಿಂತಲೂ ಉತ್ಕೃಷ್ಟಳಾಗಿರು.

**ನಮಸ್ತೇ ಭುವನೇಶಾನಿ ಶಕ್ತಿದರ್ಶನನಾಯಿಕೇ ।**
**ದಶತತ್ತ್ವಾತ್ಮಿಕೇ ಮಾತರ್ಮಹಾಬಿಂದುಸ್ವರೂಪಿಣಿ ॥೧೨॥**

ಜಗತ್ತಿಗೆಲ್ಲ ಒಡೆಯಳಾದ, ಶೈವ, ವೈಷ್ಣವ, ಶಾಕ್ತೇಯ, ಗಾಣೇಶ, ಸೌರ, ಕಾಪಾಲ ಅಥವಾ ನಾಸ್ತಿಕ ಎಂದು ಪ್ರಸಿದ್ಧವಾಗಿರುವ ಆರು ದರ್ಶನಗಳ ಪೈಕಿ ಆದಿಶಕ್ತಿಯಾದ ನಿನ್ನನ್ನು ಪ್ರತಿಪಾದಿಸುವ ಶಾಕ್ತೇಯಶಾಸ್ತ್ರಗಳಿಗೆ ನಾಯಕಳಾದ, ಎಂದರೆ, ಶಾಕ್ತಮತದ ಶಾಸ್ತ್ರಗಳಲ್ಲಿ ಪ್ರಧಾನವಾಗಿ ಪ್ರತಿಪಾದಿಸಲ್ಪಟ್ಟ, ತತ್ತ್ವವೇ ಎಂದರೆ, ಈ ಪ್ರಪಂಚವೆಲ್ಲವೂ ಪ್ರಳಯಕಾಲದಲ್ಲಿ ಯಾವ ವಸ್ತುವಿನಲ್ಲಿ ಅಡಗಿರುತ್ತದೆಯೋ ಆ ವಸ್ತುವಿಗೆ ತತ್ತ್ವವೆಂದು ಹೆಸರು. ಅಂಥ ತತ್ತ್ವವೇ ಸ್ವರೂಪವಾಗಿ ಉಳ್ಳ, ನಿವೃತ್ತಿಯೇ ಮೊದಲಾದ ಐದು ಕಲೆಗಳೂ, ಇತರ ಕಲೆಗಳೂ, ನಾದ, ಬಿಂದು, ಶಕ್ತಿ, ಸದಾಶಿವ, ಎಂಬ ದಶಕಲಾಸ್ವರೂಪಳಾದ, ಮತ್ತು ಶುಕ್ಲಶೋಣಿತಗಳ ಸಂಬಂಧದಿಂದ ಹುಟ್ಟುವ ಮಿಶ್ರಬಿಂದುಸ್ವರೂಪಳಾದ, ಅಥವಾ ಮಹಾಬಿಂದುಸ್ವರೂಪಳಾದ, ಎಂದರೆ ಸತ್ತ್ವರಜಸ್ತಮೋಗುಣಗಳ ಸಾಮ್ಯಾವಸ್ಥಾಸ್ವರೂಪವಾದ ಮಾಯೆ ಎಂಬ ಉಪಾಧಿಯಿಂದ ಕೂಡಿದ ಬ್ರಹ್ಮಸ್ವರೂಪಳಾದ, ಓ ಮಾತೆಯೇ ನಿನಗೆ ನಮಸ್ಕಾರವು.

**ಮಹಾಕುಂಡಲಿನೀರೂಪೇ ಸಚ್ಚಿದಾನಂದರೂಪಿಣಿ ।**
**ಪ್ರಾಣಾಗ್ನಿಹೋತ್ರವಿದ್ಯೇ ತೇ ನಮೋ ದೀಪಶಿಖಾತ್ಮಿಕೇ ॥೧೩॥**

ಶಕ್ತಿಶಾಸ್ತ್ರದಲ್ಲಿ ಪ್ರಸಿದ್ಧವಾದ ಮಹಾಕುಂಡಲಿನೀದೇವಿಯ ಸ್ವರೂಪಳಾದ ಸತ್ಯ, ಜ್ಞಾನ, ಆನಂದ ಇವುಗಳ ಸ್ವರೂಪಳೂ ಆದ, " ಅಪಾನೇಜುಹ್ವತಿ ಪ್ರಾಣಂ " ಎಂದು ಭಗವದ್ಗೀತೆಯಲ್ಲಿ ಹೇಳಿರುವ ಪ್ರಾಣಾಗ್ನಿಹೋತ್ರದ ದೇವತಾಸ್ವರೂಪಳಾದ ಮತ್ತು " ತಸ್ಯ ಮಧ್ಯೇ ವಹ್ನಿಶಿಖಾ " ಎಂಬ ಉಪನಿಷದ್ವಾಕ್ಯದಂತೆ ತನ್ನಲ್ಲಿಯೇ ಜ್ಞಾನವೆಂಬ ಜ್ಯೋತಿಃಪ್ರಭೆಯಂತೆ ತೋರುವ, ಓ ಭುವನೇಶ್ವರೀ ದೇವಿಯೇ ನಿನಗೆ ನಮಸ್ಕಾರವು.

**ಪಂಚಕೋಶಾಂತರಗತೇ ಪುಚ್ಛಬ್ರಹ್ಮಸ್ವರೂಪಿಣಿ ।**
**ಆನಂದಕಲಿಕೇ ಮಾತಃ ಸರ್ವೋಪನಿಷದರ್ಚಿತೇ ॥೧೪॥**

ಮತ್ತು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಐದು ಕೋಶ ಎಂದರೆ ಒಂದರೊಳಗೆ ಮತ್ತೊಂದರಂತೆ ಸೂಕ್ಷ್ಮತರವಾಗಿರುವ, ಈ ಶರೀರದಂತೆಯೇ ಇರುವ, ಕೋಶಗಳಲ್ಲಿ ಆತ್ಮಸ್ವರೂಪ ದಿಂದ ಪ್ರಕಾಶಮಾನಳಾದ, ಮತ್ತು ಎಲ್ಲ ಅಜ್ಞಾನದಿಂದ ಕಲ್ಪಿತವಾದ ಪದಾರ್ಥಗಳಿಗೆ ಆಧಾರಸ್ವರೂಪಳಾದ, ಬ್ರಹ್ಮಾನಂದಸ್ವರೂಪಳಾದ ಎಂದರೆ, ಪ್ರಾಣಿಗಳು ಅನುಭವಿ ಸುವ ಎಲ್ಲ ವಿಷಯಾನಂದಗಳಿಗಿಂತ ಮೇಲಾದ ಆನಂದಸ್ವರೂಪಳೂ ಆದ ಮತ್ತು ಬ್ರಹ್ಮಪುಚ್ಛಂ ಪ್ರತಿಷ್ಠಾ, ಸರ್ವೇವೇದಾಯತ್ಪದಮಾನಂತಿ, ಎಂದು ಎಲ್ಲ ಉಪನಿಷತ್ತು ಗಳಿಂದಲೂ ಉಪಲಕ್ಷಣರೀತಿಯಿಂದ ಪ್ರತಿಪಾದಿಸಿ, ವರ್ಣಿಸಿ ಅರ್ಚಿಸಲ್ಪಡುತ್ತಿರುವ, ಎಂದರೆ ಹೀಗೆ ಎಲ್ಲ ಉಪನಿಷತ್ತುಗಳಲ್ಲಿಯೂ ತಿಳಿಯಿಸಲ್ಪಡುವ ಸ್ವರೂಪವುಳ್ಳ, ಓ ದೇವಿಯೇ ನಿನಗೆ ನಮಸ್ಕಾರವು.

**ಮಾತಃ ಪ್ರಸಾದಸುಮುಖೀಭವ ಹೀನಸತ್ತ್ವಾಂ**
**ಸ್ತ್ರಾಯಸ್ವ ನೋ ಜನನಿ ದೈತ್ಯಪರಾಜಿತಾನ್ವೈ ।**
**ತ್ವಂ ದೇವಿ ನಃ ಶರಣದಾ ಭುವನೇ ಪ್ರಮಾಣಾ ।**
**ಶಕ್ತಾಸಿ ದುಃಖಶಮನೇಽಖಿಲವೀರ್ಯಯುಕ್ತೇ ॥೧೫॥**

ಓ ಜಗನ್ಮಾತೆಯೇ ನಮಗೆ ಅನುಗ್ರಹವನ್ನು ಮಾಡುವವಳಾಗು ; ಸುದೈವದ ಬೆಂಬಲವಿಲ್ಲದೆ ಬಲಹೀನರಾದ ಮತ್ತು ರಾಕ್ಷಸರಿಂದ ಪರಾಜಿತರಾದ ನಮ್ಮೆಲ್ಲರನ್ನೂ ಕಾಪಾಡು. ಮಾತೆಯಾದ ಓ ದೇವಿಯೇ ಈ ಜಗತ್ತಿನಲ್ಲಿ ನೀನೇ ನಮಗೆ ಪ್ರಮಾ ಣರೂಪಳೂ ನಮ್ಮನ್ನು ರಕ್ಷಿಸುವವಳೂ ಆಗಿರುವೆ. ಮತ್ತು ಸಮಸ್ತಶಕ್ತಿಗಳಿಂದಲೂ ಕೂಡಿರುವ ನೀನು ನಮ್ಮ ದುಃಖವನ್ನು ಹೋಗಲಾಡಿಸಲು ಸಮರ್ಥಳಾ ಗಿರುತ್ತೀಯೆ.

**ಧ್ಯಾಯಂತಿ ಯೇಽಪಿ ಸುಖಿನೋ ನಿತರಾಂ ಭವಂತಿ**
**ದುಃಖಾನ್ವಿತಾಃ ವಿಗತಶೋಕಭಯಾಸ್ತಥಾಽನ್ಯೇ ।**
**ಮೋಕ್ಷಾರ್ಥಿನೋ ವಿಗತಮಾನವಿಮುಕ್ತಸಂಗಾಃ**
**ಸಂಸಾರವಾರಿಧಿಜಲಂ ಪ್ರತರಂತಿ ಸಂತಃ ॥೧೬॥**

ಓ ದೇವಿಯೇ, ನಿನ್ನನ್ನು ಯಾರು ಧ್ಯಾನಮಾಡುವರೋ ಅವರು ತುಂಬ ಸುಖಿಗಳಾಗುವರು. ಯಾರು ಧ್ಯಾನಿಸುವುದಿಲ್ಲವೋ ಅವರು ವ್ಯಸನ ಭಯ ಇವುಗಳಿಂದ ಕೂಡಿದವರಾಗಿ ಯಾವಾಗಲೂ ದುಃಖವನ್ನೇ ಅನುಭವಿಸುತ್ತಾರೆ. ಮತ್ತು ಯಾರು ಈ ಸಂಸಾರದಿಂದ ಬಿಡುಗಡೆಯನ್ನು ಅಪೇಕ್ಷಿಸುವವರಾಗಿ ನಿನ್ನನ್ನು ಧ್ಯಾನಿಸುವರೋ ಅಂಥವರು ಈ ದೇಹಾದಿಗಳೊಡನೆ ತಮಗೆ ಅನಾದಿಯಾಗಿ ಉಂಟಾಗಿರುವ ಅಭಿಮಾನಿಕವಾದ ಅಜ್ಞಾನದಿಂದುಂಟಾಗಿರುವ ಅಹಂಕಾರಮಮಕಾರರೂಪವಾದ ಸಂಬಂಧವೆಲ್ಲವನ್ನೂ ತೊರೆದು, ಆ ಸಂಸಾರವೆಂಬ ಸಾಗರದಲ್ಲಿರುವ ವಿಷಯಸುಖದುಃಖಗಳೆಂಬ ಜಲದಲ್ಲಿ ಮುಳುಗಿ ಕಷ್ಟಪಡದೆ ಅದನ್ನು ದಾಟುತ್ತಾರೆ.

**ತ್ವಂ ದೇವಿ ವಿಶ್ವಜನನಿ ಪ್ರಥಿತಪ್ರಭಾವಾ**
**ಸಂರಕ್ಷಣಾರ್ಥಮುದಿತಾऽऽರ್ತಿಹರಪ್ರತಾಪಾ ।**
**ಸಂಹರ್ತುಮೇತದಖಿಲಂ ಕಿಲ ಕಾಲರೂಪಾ**
**ಕೋ ವೇತ್ತಿ ತೇಽಂಬ ಚರಿತಂ ನನು ಮಂದಬುದ್ಧಿಃ ॥೧೭॥**

ಪ್ರಸಿದ್ಧವಾದ ಮಹಿಮೆಯುಳ್ಳ ಓ ದೇವಿಯೇ ನೀನೇ ಈ ಜಗತ್ತನ್ನು ಸೃಷ್ಟಿಸತಕ್ಕವಳು. ದುಃಖವನ್ನು ಹೋಗಲಾಡಿಸುವ ಪರಾಕ್ರಮವುಳ್ಳ ನೀನೇ ಈ ಜಗತ್ತನ್ನು ಕಾಪಾಡುತ್ತೀಯೆ. ಮತ್ತು ನೀನು ಪ್ರಳಯಕಾಲಸ್ವರೂಪಳಾಗಿ ಈ ಜಗತ್ತೆಲ್ಲವನ್ನೂ ಸಂಹರಿಸುತ್ತೀಯೆ ; ತಾಯಿಗೆ ಸತ್ವಗುಣಮಾತ್ರವಿರುತ್ತದೆ. ಸೃಷ್ಟಿ, ರಕ್ಷಣೆ, ಲಯಗಳಿಗೆ ಬೇಕಾದ ಸತ್ವರಜಸ್ತಮೋಗುಣಗಳು ಮೂರೂ ನಿನ್ನಲ್ಲಿ ಸಹಕರಿಸುತ್ತಿವೆ. ಇಂತಹ ನಿನ್ನ ಚರಿತೆಯನ್ನೂ, ಓ ಮಾತೆಯೇ ತಿಳಿವಳಿಕೆಯಿಲ್ಲದ ನನ್ನಂತಹ ಮೂಢನು ಹೇಗೆತಾನೇ ಪೂರ್ಣವಾಗಿ ತಿಳಿಯಬಲ್ಲನು ?

**ಬ್ರಹ್ಮಾ ಹರಶ್ಚ ಹರಿದಶ್ವರಥೋ ಹರಿಶ್ಚ**
**ಇಂದ್ರೋ ಯಮೋಽಥ ವರುಣೋಽಗ್ನಿಸಮೀರಣೌ ಚ ।**
**ಜ್ಞಾತುಂ ಕ್ಷಮಾ ನ ಮುನಯೋಽಪಿ ಮಹಾನುಭಾವಾ**
**ಯಸ್ಯಾಃ ಪ್ರಭಾವಮತುಲಂ ನಿಗಮಾಗಮಾಶ್ಚ ॥೧೮॥**

ಬ್ರಹ್ಮನೂ, ರುದ್ರನೂ, ವಿಷ್ಣುವೂ, ಸೂರ್ಯನೂ, ಇಂದ್ರನೂ, ಯಮನೂ, ವರುಣನೂ, ಅಗ್ನಿವಾಯುಗಳೂ, ಮತ್ತು ಮಹಾಮಹಿಮರಾದ ಋಷಿಗಳೂ ಇಂತಹ ದೊಡ್ಡವರೂ ಸಹ ಆ ದೇವಿಯ ಮಹಾತ್ಮ್ಯವನ್ನು ಸಮಗ್ರವಾಗಿ ತಿಳಿಯಲಸಮ

ರ್ಥರು. ಮತ್ತು ವೇದಗಳೂ, ಎಲ್ಲ ಶಾಸ್ತ್ರಗಳೂ ಅವಳ ಮಹಿಮೆಯನ್ನು ವಾಚ್ಯವೃತ್ತಿಯಿಂದ, ಯತೋವಾಚೋ ನಿವರ್ತಂತೇ, ಎಂಬಂತೆ ಇಷ್ಟೇ ಎಂದು ತಿಳಿಯಿಸಲಾರವು.

ಧನ್ಯಾಸ್ತ ಏವ ತವ ಭಕ್ತಿಪರಾ ಮಹಾಂತಃ
ಸಂಸಾರದುಃಖರಹಿತಾಃ ಸುಖಸಿಂಧುಮಗ್ನಾಃ ।
ಯೇ ಭಕ್ತಿಭಾವರಹಿತಾ ನ ಕದಾಪಿ ದುಃಖಾಂ
ಭೋಧಿಂ ಜನಿಕ್ಷಯತರಂಗಮುಮೇ ತರಂತಿ ॥೧೯॥

ಮತ್ತು ಓ ದೇವಿಯೇ, ಯಾವ ಮಹಾತ್ಮರು ನಿನ್ನಲ್ಲಿ ಭಕ್ತಿಯುಳ್ಳವರಾಗಿ ಅದರಿಂದಲೇ ಈ ಸಂಸಾರದುಃಖದಿಂದ ಬಿಡಲ್ಪಟ್ಟವರಾಗಿ ಆತ್ಮಸುಖವೆಂಬ ಸಮುದ್ರದಲ್ಲಿ ಮುಳುಗುವರೋ ಅವರೇ ಧನ್ಯರು, ಕೃತಕೃತ್ಯರು. ಮತ್ತು ಓ ಉಮಾದೇವಿಯೇ, ಯಾರು ನಿನ್ನಲ್ಲಿ ಸ್ವಲ್ಪವೂ ಭಕ್ತಿಯಿಲ್ಲದವರಾಗಿರುವರೋ ಅವರು ಎಂದೆಂದಿಗೂ ಜನ್ಮಮರಣಗಳೆಂಬ ಅಲೆಗಳುಳ್ಳ ಈ ಸಂಸಾರದ ದುಃಖವೆಂಬ ಸಮುದ್ರವನ್ನು ದಾಟಲಾರರು.

ಯೇ ವೀಜ್ಯಮಾನಾಃ ಸಿತಚಾಮರೈಶ್ಚ
ಕ್ರೀಡಂತಿ ಧನ್ಯಾಃ ಶಿಬಿಕಾಧಿರೂಢಾಃ ।
ತೈಃ ಪೂಜಿತಾ ತ್ವಂ ಕಿಲ ಪೂರ್ವದೇಹೇ
ನಾನೋಪಹಾರೈರಿತಿ ಚಿಂತಯಾಮಿ ॥೨೦॥

ಮತ್ತು ಓ ದೇವಿಯೇ, ಈ ಜಗತ್ತಿನಲ್ಲಿ ಯಾರು ಶ್ವೇತಚಾಮರಗಳಿಂದ ಗಾಳಿಯನ್ನು ಬೀಸಿಸಿಕೊಳ್ಳುತ್ತಾ ಪಾಲಕಿಯೇ ಮೊದಲಾದ ಶ್ರೇಷ್ಠವಾದ ವಾಹನಗಳನ್ನು ಏರಿ ಸಂಚರಿಸುತ್ತಾ ವಿಹರಿಸುತ್ತಲಿರುವರೋ ಆ ಪುಣ್ಯಾತ್ಮರು ಹಿಂದಿನ ಜನ್ಮದಲ್ಲಿ ನಿನ್ನನ್ನು ಅನೇಕ ಬಗೆಯ ಕಾಣಿಕೆಗಳಿಂದ ಕೂಡಿದ ಉಪಚಾರಗಳಿಂದ ಖಂಡಿತವಾಗಿ ಪೂಜಿಸಿಯೇ ಇರುವರೆಂದು ನಾನು ಊಹಿಸುತ್ತೇನೆ. ಇಲ್ಲದಿದ್ದರೆ ಅವರಿಗೆ ಇಂತಹ ರಾಜವೈಭವವು ಸಿಕ್ಕಲಾರದು. ನಿನ್ನ ಅನುಗ್ರಹವಿದ್ದರೆ ಮಾತ್ರ ಇಂತಹ ಭೋಗವು ಲಭಿಸುವುದು.

ಯೇ ಪೂಜ್ಯಮಾನಾ ವರವಾರಣಸ್ಥಾ
ವಿಲಾಸಿನೀವೃಂದವಿಲಾಸಯುಕ್ತಾಃ ।

**ಸಾಮಂತಕೈಶ್ಚೋಪನತೈರ್ವ್ರಜಂತಿ**
**ಮನ್ಯೇ ಹಿ ತೈಸ್ತ್ವಂ ಕಿಲ ಪೂಜಿತಾಸಿ ॥೨೦॥**

ಮತ್ತು ಯಾವ ರಾಜರು ಶ್ರೇಷ್ಠವಾದ ಆನೆಯನ್ನು ಏರಿ ಕುಳಿತು, ಸುಂದರಿಯರಾದ ಅನೇಕ ಸ್ತ್ರೀಯರ ವಿಲಾಸವೈಭವಗಳಿಂದ ಕೂಡಿದವರಾಗಿ ಎಲ್ಲ ಜನಗಳಿಂದಲೂ ಪೂಜಿಸಲ್ಪಡುತ್ತಾ, ತಮಗೆ ವಿಧೇಯರಾಗಿ ಬಂದು ಸೇವಿಸುತ್ತಿರುವ ಸಾಮಂತರಾಜರುಗಳಿಂದ ಪರಿವೃತರಾಗಿ ಬಿಜಯಮಾಡಿಸುತ್ತಾರೆಯೋ ಅಂಥವರು ನಿನ್ನನ್ನು ಜನ್ಮಾಂತರದಲ್ಲಿ ಪೂಜಿಸಿಯೇ ಇರುವರು ಎಂದು ನಾನು ತಿಳಿಯುತ್ತೇನೆ.

॥ ವ್ಯಾಸ ಉವಾಚ ॥

**ಏವಂ ಸ್ತುತಾ ಮಘವತಾ ದೇವೀ ವಿಶ್ವೇಶ್ವರೀ ತದಾ ।**
**ಪ್ರಾದುರ್ಬಭೂವ ತರಸಾ ಸಿಂಹಾರೂಢಾ ಚತುರ್ಭುಜಾ ॥೨೨॥**

ವ್ಯಾಸಮುನಿಯು ಹೇಳಿದನು—ಇಂದ್ರನು ಈರೀತಿಯಲ್ಲಿ ಸ್ತೋತ್ರಮಾಡಲು, ಜಗತ್ತಿಗೆ ಒಡೆಯಳಾದ ಆ ದೇವಿಯು ತನ್ನ ವಾಹನವಾದ ಸಿಂಹವನ್ನೇರಿ ನಾಲ್ಕು ಬಾಹುಗಳಿಂದ ಕಂಗೊಳಿಸುತ್ತಾ ಇಂದ್ರನಿಗೆ ಪ್ರತ್ಯಕ್ಷವಾದಳು.

**ಶಂಖಚಕ್ರಗದಾಪದ್ಮಾನ್ಬಿಭ್ರತೀ ಚಾರುಲೋಚನಾ ।**
**ರಕ್ತಾಂಬರಧರಾ ದೇವೀ ದಿವ್ಯಮಾಲ್ಯವಿಭೂಷಣಾ ॥೨೩॥**

ಮತ್ತು ಆ ದೇವಿಯು ಶಂಖ ಚಕ್ರ ಗದೆ ಕಮಲ ಇವುಗಳನ್ನು ಧರಿಸಿ, ಕೆಂಪುಬಣ್ಣದ ವಸ್ತ್ರವನ್ನು ಧರಿಸಿಕೊಂಡು, ಸುಂದರವಾದ ಕಣ್ಣುಗಳಿಂದ ಶೋಭಿಸುತ್ತಲೂ, ಉತ್ತಮವಾದ ಹಾರ ಮುಂತಾದ ಆಭರಣಗಳನ್ನು ಧರಿಸಿದಳಾಗಿಯೂ ಕಂಗೊಳಿಸುತ್ತಿದ್ದಳು.

**ತಾನುವಾಚ ಸುರಾನ್ದೇವೀ ಪ್ರಸನ್ನವದನಾ ಗಿರಾ ।**
**ಭಯಂ ತ್ಯಜಂತು ಭೋ ದೇವಾಃ ಶಂ ವಿಧಾಸ್ಯೇ ಕಿಲಾಧುನಾ ॥೨೪॥**

ಈ ರೀತಿಯಲ್ಲಿ ಪ್ರತ್ಯಕ್ಷಳಾದ ದೇವಿಯು ಸಂತುಷ್ಟವಾದ ಮುಖವುಳ್ಳವಳಾಗಿ ಆ ದೇವತೆಗಳನ್ನು ಕುರಿತು ಹೀಗೆ ಹೇಳಿದಳು—ಓ ದೇವತೆಗಳಿರಾ, ಹೆದರಬೇಡಿರಿ, ಈಗ ನಾನು ನಿಮ್ಮೆಲ್ಲರಿಗೂ ಸುಖವನ್ನುಂಟುಮಾಡುವೆನು.

**ಇತ್ಯುಕ್ತ್ವಾ ಸಾ ತದಾ ದೇವೀ ಸಿಂಹಾರೂಢಾತಿಸುಂದರಾ ।**
**ಜಗಾಮ ತರಸಾ ತತ್ರ ಯತ್ರ ದೈತ್ಯಾ ಮದಾನ್ವಿತಾಃ ॥೨೫॥**

ಹೀಗೆ ಹೇಳಿ ಮನೋಹರವಾದ ರೂಪವುಳ್ಳ ಆ ದೇವಿಯು ಸಿಂಹವನ್ನು ಏರಿ, ವಿಜಯಮದದಿಂದ ಕೊಬ್ಬಿದ ಆ ರಾಕ್ಷಸರು ಇದ್ದ ಪ್ರದೇಶಕ್ಕೆ ಜಾಗ್ರತೆಯಾಗಿ ಬಂದಳು.

**ಪ್ರಹ್ಲಾದಪ್ರಮುಖಾಃ ಸರ್ವೇ ದೃಷ್ಟ್ವಾ ದೇವೀಂ ಪುರಃಸ್ಥಿತಾಂ ।**
**ಊಚುಃ ಪರಸ್ಪರಂ ಭೀತಾಃ ಕಿಂ ಕರ್ತವ್ಯಮಿತಸ್ತದಾ ॥೨೬॥**

ಆಮೇಲೆ ಪ್ರಹ್ಲಾದನೇ ಮೊದಲಾದ ರಾಕ್ಷಸರೆಲ್ಲರೂ ತಮ್ಮ ಎದುರಿನಲ್ಲಿ ಸಿಂಹಾರೂಢಳಾಗಿ ನಿಂತಿರುವ ಆ ದೇವಿಯನ್ನು ನೋಡಿ, ಹೆದರಿದವರಾಗಿ ತಮ್ಮ ತಮ್ಮಲ್ಲಿಯೇ ಈಗ ಏನನ್ನು ಮಾಡಬೇಕೆಂದು ಮಾತನಾಡಿಕೊಂಡರು.

**ದೇವಂ ನಾರಾಯಣಂ ಚಾತ್ರ ಸಂಪ್ರಾಪ್ತಾ ಚಂಡಿಕಾ ಕಿಲ ।**
**ಮಹಿಷಾಂತಕರೀ ನೂನಂ ಚಂಡಮುಂಡವಿನಾಶಿನೀ ॥೨೭॥**

ಹಿಂದೆ ದೇವನಾದ ನಾರಾಯಣನಿಗೂ ಪ್ರತ್ಯಕ್ಷಳಾಗಿ, ಮಹಿಷಾಸುರನನ್ನೂ ಚಂಡಮುಂಡರೆಂಬ ರಾಕ್ಷಸರನ್ನೂ ಸಂಹರಿಸಿದ ಆ ಚಂಡಿಕಾದೇವಿಯೇ ಯುದ್ಧ ಮಾಡಲು ಇಲ್ಲಿಗೆ ಈಗಲೂ ಬಂದಿರುವಳು. ಇದರಲ್ಲಿ ಸಂಶಯವಿಲ್ಲವು.

**ನಿಹನಿಷ್ಯತಿ ನಃ ಸರ್ವಾನಂಬಿಕಾ ನಾತ್ರ ಸಂಶಯಃ ।**
**ವಕ್ರದೃಷ್ಟ್ಯಾ ಯಯಾ ಪೂರ್ವಂ ನಿಹತೌ ಮಧುಕೈಟಭೌ ॥೨೮॥**

ಹಿಂದೆ ತನ್ನ ವಕ್ರವಾದ ತೀಕ್ಷ್ಣದೃಷ್ಟಿಯಿಂದ ಮಧುಕೈಟಭರೆಂಬ ದೈತ್ಯರನ್ನು ನಾಶಮಾಡಿರುವಂತೆ ಈ ಅಂಬಿಕಾದೇವಿಯೇ ಇಲ್ಲಿ ಈಗಲೂ ನಮ್ಮೆಲ್ಲರನ್ನು ಸಂಹರಿಸುವಳು. ಇದರಲ್ಲಿ ಸಂಶಯವಿಲ್ಲವು.

**ಏವಂ ಚಿಂತಾತುರಾನ್ವೀಕ್ಷ್ಯ ಪ್ರಹ್ಲಾದಸ್ತಾನುವಾಚ ಹ ।**
**ಯೋದ್ಧವ್ಯಂ ನಾಥ ಗಂತವ್ಯಂ ಪಲಾಯ್ಯ ದಾನವೋತ್ತಮಾಃ॥೨೯॥**

ಹೀಗೆ ಚಿಂತೆಯಿಂದ ಕೂಡಿರುವ ಆ ರಾಕ್ಷಸರನ್ನು ಕುರಿತು ಪ್ರಹ್ಲಾದನು ಹೀಗೆ ಹೇಳಿದನು—ಓ ದೈತ್ಯಪುಂಗವರೆ, ಈಗ ಇಲ್ಲಿ ಯುದ್ಧಮಾಡುವುದು ಯುಕ್ತವಲ್ಲವು. ಇಲ್ಲಿಂದ ತಪ್ಪಿಸಿಕೊಂಡು ಓಡಿಹೋಗುವುದೇ ಅನುಕೂಲವಾಗಿರುವುದು.

**ನಮುಚಿಸ್ತಾನುವಾಚಾಥ ಪಲಾಯನಪರಾನಿಹ ।**
**ಹನಿಷ್ಯತಿ ಜಗನ್ಮಾತಾ ರುಷಿತಾ ಕಿಲ ಹೇತಿಭಿಃ ॥೩೦॥**

ಆಗ ನಮುಚಿಯೆಂಬ ಇನ್ನೊಬ್ಬ ದೈತ್ಯನು, ಓಡಿಹೋಗಲು ತೊಡಗಿರುವ ಆ ರಾಕ್ಷಸರನ್ನು ಕುರಿತು ಹೀಗೆ ಹೇಳಿದನು—ಓ ಪ್ರಹ್ಲಾದನೇ, ಜಗತ್ತಿಗೆ ತಾಯಿಯಾದ ಈ ದೇವಿಯು ಸಿಟ್ಟುಗೊಂಡವಳಾಗಿ ಓಡಿಹೋಗುತ್ತಲಿರುವ ನಮ್ಮನ್ನು ತನ್ನ ಆಯುಧಗಳಿಂದ ಕೊಂದೇ ಕೊಲ್ಲುವಳು.

**ತಥಾ ಕುರು ಮಹಾಭಾಗ ಯಥಾ ದುಃಖಂ ನ ಜಾಯತೇ ।**
**ವ್ರಜಾಮೋಽದ್ಯೈವ ಪಾತಾಲಂ ತಾಂ ಸ್ತುತ್ವಾ ತದನುಜ್ಞಯಾ ॥೩೧॥**

ಆದುದರಿಂದ, ಎಲೈ ಪೂಜ್ಯನೇ, ಈಗ ನಮ್ಮೆಲ್ಲರಿಗೂ ದುಃಖವು ಉಂಟಾಗದಂತೆ ಏನಾದರೊಂದು ಉಪಾಯವನ್ನು ಮಾಡು. ನಾವೆಲ್ಲರೂ ಆ ದೇವಿಯನ್ನು ಸ್ತೋತ್ರಮಾಡಿ ಅವಳ ಅಪ್ಪಣೆಯನ್ನು ಪಡೆದು ಪಾತಾಳಕ್ಕೆ ಹೋಗೋಣ.

॥ ಪ್ರಹ್ಲಾದ ಉವಾಚ ॥

**ಸ್ತೌಮಿ ದೇವೀಂ ಮಹಾಮಾಯಾಂ ಸೃಷ್ಟಿಸ್ಥಿತ್ಯಂತಕಾರಿಣೀಂ ।**
**ಸರ್ವೇಷಾಂ ಜನನೀಂ ಶಕ್ತಿಂ ಭಕ್ತಾನಾಮಭಯಂಕರೀಂ ॥೩೨॥**

ಪ್ರಹ್ಲಾದನು ಹೇಳಿದನು—ಓ ರಾಕ್ಷಸರೇ, ಈ ದೇವಿಯು ಮಹಾಮಾಯಾಸ್ವರೂಪಳಾಗಿಯೂ, ಜಗತ್ತಿನ ಸೃಷ್ಟಿ ಪಾಲನೆ ನಾಶ ಇವುಗಳನ್ನು ಮಾಡುವವಳಾಗಿಯೂ, ಸಮಸ್ತ ಪ್ರಾಣಿಗಳಿಗೂ ತಾಯಿಯಾಗಿಯೂ ಇರುವಳು. ಆದುದರಿಂದ ಶಕ್ತಿಸ್ವರೂಪಳೂ ಭಕ್ತರಿಗೆ ಅಭಯವನ್ನಿತ್ತು ಕಾಪಾಡುವವಳೂ ಆಗಿರುವ ಈ ದೇವಿಯನ್ನು ನಾನು ಸ್ತೋತ್ರಮಾಡುವೆನು.

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾ ವಿಷ್ಣುಭಕ್ತಸ್ತು ಪ್ರಹ್ಲಾದಃ ಪರಮಾರ್ಥವಿತ್ ।**
**ತುಷ್ಟಾವ ಜಗತಾಂ ಧಾತ್ರೀಂ ಕೃತಾಂಜಲಿಪುಟಸ್ತದಾ ॥೩೩॥**

ವ್ಯಾಸಮುನಿಯು ಹೇಳಿದನು—ಹೀಗೆ ಹೇಳಿ ವಿಷ್ಣುವಿನ ಪರಮಭಕ್ತನಾದ ಪರಮಾರ್ಥತತ್ತ್ವವನ್ನು ತಿಳಿದಿರುವ ಆ ಪ್ರಹ್ಲಾದನು, ಜಗತ್ತೆಲ್ಲಕ್ಕೂ ಸೃಷ್ಟಿಕರ್ತೆಳಾದ ಆ ದೇವಿಯನ್ನು ಅಂಜಲಿಬದ್ಧನಾಗಿ ಈರೀತಿಯಲ್ಲಿ ಸ್ತೋತ್ರ ಮಾಡಿದನು.

**ಮಾಲಾ ಸರ್ಪವದಾಭಾತಿ ಯಸ್ಯಾಂ ಸರ್ವಂ ಚರಾಚರಂ ।**
**ಸರ್ವಾಧಿಷ್ಠಾನರೂಪಾಯೈ ತಸ್ಯೈ ಹ್ರೀಂ ಮೂರ್ತಯೇ ನಮಃ ॥**

ಯಾವ ದೇವಿಯಲ್ಲಿ ಈ ಎಲ್ಲ ಚರಾಚರಾತ್ಮಕವಾದ ಜಗತ್ತು, ಕತ್ತಲೆಯಲ್ಲಿ ಹೂವಿನ ಹಾರದಲ್ಲಿ ಸರ್ಪವು ಭ್ರಾಂತಿಯಿಂದ ತೋರುವಂತೆ, ನಮ್ಮ ಅಜ್ಞಾನದಿಂದ ತೋರುವುದೋ ಅಂತಹ, ಅಜ್ಞಾನದಿಂದ ಕಲ್ಪಿತವಾದ ಎಲ್ಲ ಪದಾರ್ಥಗಳಿಗೆ ಆಶ್ರಯವಾದ, ಬ್ರಹ್ಮಸ್ವರೂಪಳಾದ, ಹ್ರೀಂಕಾರಬೋಧ್ಯಸ್ವರೂಪಳಾದ ದೇವಿಯೇ ನಿನಗೆ ನಮಸ್ಕಾರವು.

**ತ್ವತ್ತಃ ಸರ್ವಮಿದಂ ವಿಶ್ವಂ ಸ್ಥಾವರಂ ಜಂಗಮಂ ತಥಾ ।**
**ಅನ್ಯೇ ನಿಮಿತ್ತಮಾತ್ರಾಸ್ತೇ ಕರ್ತಾರಸ್ತವ ನಿರ್ಮಿತಾಃ ॥೩೫॥**

ಓ ದೇವಿಯೇ, ನಿನ್ನಿಂದಲೇ ಈ ಸ್ಥಾವರ ಎಂದರೆ–ಚಲಿಸದಿರುವ ಮೃತ್ಪಾಷಾಣಗಳೂ, ವೃಕ್ಷಗಳೂ, ಜಂಗಮ ಎಂದರೆ–ಚಲಿಸುವ ಶಕ್ತಿಯುಳ್ಳ ಪ್ರಾಣಿಪಕ್ಷಿಮೃಗ ಮನುಷ್ಯರೇ ಮೊದಲಾದ ಎಲ್ಲ ಜಗತ್ತೂ ಉತ್ಪನ್ನವಾಗಿರುತ್ತದೆ. ಇನ್ನುಳಿದ ಬ್ರಹ್ಮ ವಿಷ್ಣು ಮೊದಲಾದವರು ನಿಮಿತ್ತಮಾತ್ರರಾದ ಕರ್ತೃಗಳು, ನೀನು ಸೃಷ್ಟಿಸುವುದಕ್ಕೆ ಸಹಾಯಕರು ಎಂದರೆ ಆ ಬ್ರಹ್ಮನೇ ಮೊದಲಾದವರ ದ್ವಾರಾ ನಿಜವಾಗಿ ನೀನೇ ಸೃಷ್ಟಿಸುತ್ತೀಯೆ ಎಂದು ತಾತ್ಪರ್ಯವು.

**ನಮೋ ದೇವಿ ಮಹಾಮಾಯೇ ಸರ್ವೇಷಾಂ ಜನನೀ ಸ್ಮೃತಾ ।**
**ಕೋ ಭೇದಸ್ತವ ದೇವೇಷು ದೈತ್ಯೇಷು ಸ್ವಕೃತೇಷು ಚ ॥೩೬॥**

ಎಲ್ಲರಲ್ಲೂ ಇರುವ ಆದಿಮಾಯಾಸ್ವರೂಪಳಾದ ಓ ದೇವಿಯೇ ನಿನಗೆ ನಮಸ್ಕಾರವು. ನೀನು ಎಲ್ಲ ಪ್ರಾಣಿಗಳಿಗೂ ತಾಯಿಯಾಗಿರುವೆ. ಹೀಗಿರುವಾಗ ನೀನೇ ಸೃಷ್ಟಿಸಿರುವ ದೇವತೆಗಳಲ್ಲಿಯೂ, ದೈತ್ಯರಲ್ಲಿಯೂ ನಿನಗೆ ಭೇದವೆಂತಹುದು? ಎಂದರೆ ಪಕ್ಷಪಾತವಿರತಕ್ಕುದಲ್ಲವೆಂದು ಭಾವವು.

**ಮಾತುಃ ಪುತ್ರೇಷು ಕೋ ಭೇದೋಽಪ್ಯಶುಭೇಷು ಶುಭೇಷು ಚ ।**
**ತಥೈವ ದೇವೇಷ್ವಸ್ಮಾಸು ನ ಕರ್ತವ್ಯಸ್ತ್ವಯಾಽಧುನಾ ॥೩೭॥**

ಒಳ್ಳೆಯವರೂ ಕೆಟ್ಟವರೂ ಆಗಿರಬಹುದಾದ ತನ್ನ ಮಕ್ಕಳಲ್ಲಿ ತಾಯಿಗೆ ಭೇದವು ಉಂಟಾಗಿರುವುದೇ? ಅದರಂತೆ ನಿನ್ನ ಪುತ್ರರೇ ಆದ ದೇವತೆಗಳಲ್ಲಿಯೂ ರಾಕ್ಷಸರಾದ ನಮ್ಮಲ್ಲಿಯೂ ಈಗ ನೀನು ಭೇದಭಾವವನ್ನು ಕಲ್ಪಿಸಬಾರದು.

**ಯಾದೃಶಾಸ್ತಾದೃಶಾ ಮಾತಃ ಸುತಾಸ್ತೇ ದಾನವಾಃ ಕಿಲ ।**
**ಯತಸ್ತ್ವಂ ವಿಶ್ವಜನನೀ ಪುರಾಣೇಷು ಪ್ರಕೀರ್ತಿತಾ ॥೩೮॥**

ಓ ಮಾತೆಯಾದ ದೇವಿಯೇ, ಈ ರಾಕ್ಷಸರು ಎಂತಹವರೇ ಆದರೂ ಅವರೆಲ್ಲರೂ ನಿನ್ನ ಮಕ್ಕಳಲ್ಲವೇ? ಏಕೆಂದರೆ, ನೀನು ಈ ಎಲ್ಲ ಜಗತ್ತಿಗೂ ತಾಯಿಯೆಂದು ಪುರಾಣಗಳಲ್ಲಿ ಹೇಳಿರುತ್ತದೆ.

**ತೇಽಪಿ ಸ್ವಾರ್ಥಪರಾ ನೂನಂ ತಥೈವ ವಯಮಪ್ಯುತ ।**
**ನಾಂತರಂ ದೈತ್ಯಸುರಯೋರ್ಭೇದೋಽಯಂ ಮೋಹಸಂಭವಃ ॥**

ಆ ದೇವತೆಗಳೂ ಸ್ವಾರ್ಥದಿಂದ ಕೂಡಿರುತ್ತಾರೆ. ಅದರಂತೆ ದೈತ್ಯರಾದ ನಾವೂ ಸ್ವಾರ್ಥಕ್ಕಾಗಿಯೇ ಹೊಡೆದಾಡುತ್ತಿದೇವೆ. ಆದುದರಿಂದ ರಾಕ್ಷಸರಿಗೂ ದೇವತೆಗಳಿಗೂ ನಿಜವಾಗಿ ವ್ಯತ್ಯಾಸವೇನೂ ಇಲ್ಲವು. ಈ ಭೇದಭಾವವು ಕೇವಲ ಭ್ರಾಂತಿಯಿಂದ ಕಲ್ಪಿತವಾದುದು.

**ಧನದಾರಾದಿಭೋಗೇಷು ವಯಂ ಸಕ್ತಾ ದಿವಾನಿಶಂ ।**
**ತಥೈವ ದೇವಾ ದೇವೇಶಿ ಕೋ ಭೇದೋಽಸುರದೇವಯೋಃ ॥೪೦॥**

ದೈತ್ಯರಾದ ನಾವು ಹಗಲಿರುಳೂ ಕಾಮಿನೀ ಕಾಂಚನ ಮುಂತಾದುದರ ಭೋಗಾನುಭವದಲ್ಲಿ ಆಸಕ್ತರಾಗಿರುತ್ತೇವೆ. ನಮ್ಮಂತೆ ದೇವತೆಗಳೂ ಸಹ ಭೋಗದಲ್ಲಿಯೇ ಆಸಕ್ತರಾಗಿರುತ್ತಾರೆ. ಹೀಗಿರುವಾಗ ದೇವತೆಗಳಿಗೆ ಒಡೆಯಳಾದ ಓ ದೇವಿಯೇ, ರಾಕ್ಷಸರಿಗೂ ದೇವತೆಗಳಿಗೂ ಭೇದವೆಲ್ಲಿಯದು?

**ತೇಽಪಿ ಕಶ್ಯಪದಾಯಾದಾ ವಯಂ ತತ್ಸಂಭವಾಃ ಕಿಲ ।**
**ಕುತೋ ವಿರೋಧಸಂಭೂತಿರ್ಜಾತಾ ಮಾತಸ್ತವಾಧುನಾ ॥೪೧॥**

ಆ ದೇವತೆಗಳೂ ಕಶ್ಯಪಬ್ರಹ್ಮನಿಂದ ಉತ್ಪನ್ನರಾದವರು. ಅದರಂತೆ ರಾಕ್ಷಸರಾದ ನಾವೂ ಆ ಕಶ್ಯಪಮುನಿಯಿಂದಲೇ ಹುಟ್ಟಿರುತ್ತೇವೆ. ಆದುದರಿಂದ ಓ ಮಾತೆಯೇ ನಿನಗೆ ಈಗ ನಮ್ಮಲ್ಲಿ ವಿರೋಧವು ಹೇಗೆ ಉಂಟಾಯಿತು ?

**ನ ತಥಾ ವಿಹಿತಂ ಮಾತಸ್ತ್ವಯಿ ಸರ್ವಸಮುದ್ಭವೇ ।**
**ಸಾಮ್ಯತ್ವೈವ ತ್ವಯಾ ಸ್ಥಾಪ್ಯಾ ದೇವೇಷ್ವಸ್ಮಾಸು ಚೈವ ಹಿ ॥೪೨॥**

ಓ ತಾಯಿಯೇ, ಎಲ್ಲ ಪ್ರಾಣಿಗಳಿಗೂ ಮಾತೆಯಾದ ನಿನಗೆ ನಮ್ಮಲ್ಲಿ ಈ ಬಗೆಯ ವೈಷಮ್ಯವು ಯೋಗ್ಯವಾದುದಲ್ಲವು. ಆದುದರಿಂದ ನೀನು ರಾಕ್ಷಸರಾದ ನಮ್ಮಲ್ಲಿಯೂ ದೇವತೆಗಳಲ್ಲಿಯೂ ಒಂದೇ ತೆರನಾದ ನ್ಯಾಯವನ್ನು ಅನುಸರಿಸುವುದು ಉಚಿತವಾದುದು.

**ಗುಣವ್ಯತಿಕರಾತ್ಸರ್ವೇ ಸಮುತ್ಪನ್ನಾಃ ಸುರಾಽಸುರಾಃ ।**
**ಗುಣಾನ್ವಿತಾ ಭವೇಯುಸ್ತೇ ಕಥಂ ದೇಹಭೃತೋಽಮರಾಃ ॥೪೩॥**

ಎಲ್ಲ ದೇವತೆಗಳೂ ಮತ್ತು ರಾಕ್ಷಸರೂ ಸಹ ಸತ್ತ್ವರಜಸ್ತಮಸ್ಸೆಂಬ ಮೂರು ಗುಣಗಳ ಹೆಚ್ಚುಕಡಿಮೆಯಿಂದಲೇ ಹುಟ್ಟಿರುತ್ತಾರೆ. ಹೀಗಿರುವಲ್ಲಿ ತ್ರಿಗುಣಾತ್ಮಕವಾದ ಶರೀರವನ್ನು ಧರಿಸಿರುವ ಈ ದೇವತೆಗಳು ಎಲ್ಲರೂ ಗುಣಾನ್ವಿತರು ಎಂದರೆ ಕೇವಲ ಒಳ್ಳೆಯ ಗುಣದಿಂದ ಕೂಡಿದವರು ಹೇಗೆ ಆಗಿರುತ್ತಾರೆ ?

**ಕಾಮಃ ಕ್ರೋಧಶ್ಚ ಲೋಭಶ್ಚ ಸರ್ವದೇಹೇಷು ಸಂಸ್ಥಿತಾಃ ।**
**ವರ್ತಂತೇ ಸರ್ವದಾ ತಸ್ಮಾತ್ಕೋಽವಿರೋಧೀ ಭವೇಜ್ಜನಃ ॥೪೪॥**

ಪ್ರತಿಯೊಬ್ಬ ಪ್ರಾಣಿಯ ಶರೀರದಲ್ಲಿಯೂ, ಕಾಮ, ಕ್ರೋಧ, ಲೋಭ ಮೊದಲಾದ ಮನೋಧರ್ಮಗಳು ಯಾವಾಗಲೂ ಇರುತ್ತವೆ. ಆದುದರಿಂದ ಇಂತಹ ಶರೀರವುಳ್ಳವನು ಯಾವನು ತಾನೇ ವಿರೋಧಿಯಲ್ಲದವನು ಎಂದರೆ ಸಾತ್ತ್ವಿಕನು ಆದಾನು ?

**ತ್ವಯಾ ಮಿಥೋ ವಿರೋಧೋಽಯಂ ಕಲ್ಪಿತಃ ಕಿಲ ಕೌತುಕಾತ್ ।**
**ಮನ್ಯಾಮಹೇ ವಿಭೇದೇನ ನೂನಂ ಯುದ್ಧದಿದೃಕ್ಷಯಾ ॥೪೫॥**

ಆದರೆ ರಾಕ್ಷಸರಾದ ನಮಗೂ, ದೇವತೆಗಳಿಗೂ ಹೀಗೆ ಭೇದವನ್ನಿಟ್ಟು ನಾವೀರ್ವರೂ ಜಗಳವಾಡುವುದನ್ನು ನೀನು ನೋಡಬೇಕೆಂಬ ಅಪೇಕ್ಷೆಯಿಂದ ವಿನೋದಕ್ಕಾಗಿಯೇ ಪರಸ್ಪರ ವಿರೋಧವನ್ನು ಕಲ್ಪಿಸಿರುತ್ತೀಯೆ ಎಂದು ನಾನು ತಿಳಿಯುತ್ತೇನೆ.

**ಅನ್ಯಥಾ ಖಲು ಭ್ರಾತೄಣಾಂ ವಿರೋಧಃ ಕೀದೃಶೋಽನಘೇ ।**
**ತ್ವಂ ಚೇನ್ನೇಚ್ಛಸಿ ಚಾಮುಂಡೇ ವೀಕ್ಷಿತುಂ ಕಲಹಂ ಕಿಲ ॥೪೬॥**

ಓ ಚಾಮುಂಡಾದೇವಿಯೇ, ನೀನು ನಮ್ಮೀರ್ವರ ಜಗಳವನ್ನು ನೋಡಲು ಅಪೇಕ್ಷೆಯಿಲ್ಲದೆ ನಮ್ಮಲ್ಲಿ ಈ ಭೇದವನ್ನು ಕಲ್ಪಿಸಿಲ್ಲವಾದರೆ, ಎಲೈ ಪೂಜ್ಯಳೇ, ಅಣ್ಣತಮ್ಮಂದಿರಾದ ನಮ್ಮಲ್ಲಿ ವಿರೋಧವು ಹೇಗೆ ಸಂಭವಿಸೀತು ?

**ಜಾನಾಮಿ ಧರ್ಮಂ ಧರ್ಮಜ್ಞೇ ವೇದ್ಮಿ ಚಾಹಂ ಶತಕ್ರತುಂ ।**
**ತಥಾಪಿ ಕಲಹೋಽಸ್ಮಾಕಂ ಭೋಗಾರ್ಥಂ ದೇವಿ ಸರ್ವದಾ ॥೪೭॥**

ಧರ್ಮವನ್ನು ನಾನು ತಿಳಿದವನಾಗಿರುತ್ತೇನೆ. ಎಂದರೆ ನನಗೆ ಇನ್ನೊಬ್ಬರ ಧನವನ್ನು ಅಪಹರಿಸಬಾರದೆಂದು ಮೊದಲಾದ ಎಲ್ಲ ಧರ್ಮಗಳೂ ಗೊತ್ತಿರುತ್ತವೆ. ಎಲೈ ಧರ್ಮವನ್ನು ತಿಳಿದವಳಾದ ದೇವಿಯೇ, ನೂರು ಯಾಗಗಳನ್ನು ಮಾಡಿರತಕ್ಕ ಇಂದ್ರನನ್ನೂ ಬಲ್ಲೆನು. ಆದರೂ ನಮಗೂ ದೇವತೆಗಳಿಗೂ ರಾಜ್ಯಸುಖಕ್ಕಾಗಿ ಯಾವಾಗಲೂ ಜಗಳವಾಗುತ್ತಲೇ ಇರುತ್ತದೆ.

**ಏಕಃ ಕೋಽಪಿ ನ ಶಾಸ್ತಾಸ್ತಿ ಸಂಸಾರೇ ತ್ವಾಂ ವಿನಾಽಂಬಿಕೇ ।**
**ಸ್ಪೃಹಾವತಸ್ತು ಕಃ ಕರ್ತುಂ ಕ್ಷಮತೇ ವಚನಂ ಬುಧಃ ॥೪೮॥**

ಜಗತ್ತಿಗೆ ಮಾತೆಯಾದ ಓ ದೇವಿಯೇ, ಯಾವನೇ ಆಗಲಿ ನಿನ್ನೊಬ್ಬಳನ್ನು ಬಿಟ್ಟು ಸ್ವತಂತ್ರವಾಗಿ ಒಬ್ಬನೇ ಈ ಪ್ರಪಂಚದಲ್ಲಿ ಎಲ್ಲವನ್ನೂ ಆಳಿದವನಿಲ್ಲವು. ಏಕೆಂದರೆ, ಆಶಾಯುಕ್ತನಾದವನ ಮಾತನ್ನು, ತಿಳಿದವರು ಎಲ್ಲರೂ ಕೇಳುವುದಿಲ್ಲವು. ಈ ಜಗತ್ತನ್ನು ಪಾಲಿಸುವವರೆಲ್ಲರೂ ಬರಿಯ ಆಸೆಯಿಂದ ಕೂಡಿರುವುದರಿಂದ ಎಲ್ಲರೂ ಅಂಥವರ ಮಾತನ್ನು ನಡೆಯಿಸಲಾರರು. ಆದುದರಿಂದ ಒಬ್ಬರೇ ಈ ಜಗತ್ತನ್ನು ಯಾವಾಗಲೂ ಪಾಲಿಸಲಾರರು.

**ದೇವಾಸುರೈರಯಂ ಸಿಂಧುರ್ಮಥಿತಃ ಸಮಯೇ ಕ್ವಚಿತ್ ।**
**ವಿಷ್ಣುನಾ ವಿಹಿತೋ ಭೇದಃ ಸುಧಾರತ್ನಚ್ಛಲೇನ ವೈ ॥೪೯॥**

ಹಿಂದೊಂದು ಕಾಲದಲ್ಲಿ ಅಮೃತಕ್ಕಾಗಿ ದೇವತೆಗಳೂ ರಾಕ್ಷಸರೂ ಸೇರಿ ಈ ಕ್ಷೀರಸಮುದ್ರವನ್ನು ಕಡೆದರು. ಆದರೆ ವಿಷ್ಣುವು ಅಲ್ಲಿ ಉತ್ತಮವಸ್ತುವಾದ ಆ ಅಮೃತವನ್ನೆಲ್ಲ ದೇವತೆಗಳಿಗೇ ಹಂಚಿ, ಅದರಿಂದ ನಮಗೂ ದೇವತೆಗಳಿಗೂ ಅನ್ಯಾಯವಾಗಿ ಭೇದವನ್ನು ಕಲ್ಪಿಸಿದನು.

**ತ್ವಯಾಽಸೌ ಕಲ್ಪಿತಃ ಶೌರಿಃ ಪಾಲಕತ್ವೇ ಜಗದ್ಗುರುಃ ।**
**ತೇನ ಲಕ್ಷ್ಮೀಃ ಸ್ವಯಂ ಲೋಭಾದ್ಗೃಹೀತಾಽಮರಸುಂದರೀ ॥೫೦॥**

ಈ ವಿಷ್ಣುವನ್ನು ನೀನೇ ಜಗತ್ತಿನಲ್ಲಿ ಎಲ್ಲರಿಗೂ ಶ್ರೇಷ್ಠನನ್ನಾಗಿಯೂ ಜಗತ್ತನ್ನು ರಕ್ಷಿಸುವವನನ್ನಾಗಿಯೂ ಕಲ್ಪಿಸಿರುತ್ತೀಯೆ. ಆದರೆ, ಎಲ್ಲರಿಗೂ ಮಾದರಿಯಾಗಿರಬೇಕಾದ ಅವನೂ ಸಹ ಅತ್ಯಂತ ಸುಂದರಿಯಾದ ಲಕ್ಷ್ಮಿಯನ್ನು ಆಸೆಯಿಂದ ತಾನೇ ಗ್ರಹಿಸಿರುತ್ತಾನೆ. ಇಂತಹ ಹರಿಗೂ ಆಸೆಯು ಬಿಡಲಿಲ್ಲವು.

**ಐರಾವತಸ್ತಥೇಂದ್ರೇಣ ಪಾರಿಜಾತೋಽಥ ಕಾಮಧುಕ್ ।**
**ಉಚ್ಚೈಃಶ್ರವಾಃ ಸುರೈಃಸರ್ವಂ ಗೃಹೀತಂ ವೈಷ್ಣವೇಚ್ಛಯಾ ॥೫೧॥**

ಹಾಗೆಯೇ ಆ ವಿಷ್ಣುವಿನ ಇಚ್ಛೆಯಂತೆ ಇಂದ್ರನು ಆ ಕ್ಷೀರಸಮುದ್ರದಿಂದ ಹುಟ್ಟಿದ ಐರಾವತವೆಂಬ ಆನೆಯನ್ನೂ, ಮಂದಾರ, ಪಾರಿಜಾತ ಎಂಬ ಕಲ್ಪವೃಕ್ಷಗಳನ್ನೂ, ಕಾಮಧೇನುವನ್ನೂ, ಉಚ್ಚೈಶ್ರವಸ್ಸೆಂಬ ಕುದುರೆಯನ್ನೂ ಹೀಗೆ ಎಲ್ಲವನ್ನೂ ತೆಗೆದುಕೊಂಡನು.

**ಅನಯಂ ತಾದೃಶಂ ಕೃತ್ವಾ ಜಾತಾ ದೇವಾಸ್ತು ಸಾಧವಃ ।**
**ಅನ್ಯಾಯಿನಃ ಸುರಾ ನೂನಂ ಪಶ್ಯ ತ್ವಂ ಧರ್ಮಲಕ್ಷಣಂ ॥**
**ಸಂಸ್ಥಾಪಿತಾಃ ಸುರಾ ನೂನಂ ವಿಷ್ಣುನಾ ಬಹುಮಾನಿನಾ ॥೫೨॥**

ಇಂತಹ ಅನ್ಯಾಯವನ್ನು ಮಾಡಿದ್ದರೂ ದೇವತೆಗಳು ಸತ್ಪುರುಷರಾದರು. ನಿಜವಾಗಿ ನೋಡಿದರೆ ದೇವತೆಗಳು ನಮ್ಮಿಂದ ಸಹಾಯವನ್ನು ಹೊಂದಿಯೂ ನಮಗೆ ಮೋಸಮಾಡಿರುವುದರಿಂದ ಅನ್ಯಾಯಿಗಳು. ಹೀಗಿದ್ದರೂ ಅವರು ಸಾಧು

ಗಳು ಎಂದು ಗೌರವಿಸುತ್ತಾ ಆ ವಿಷ್ಣುವು ದೇವತೆಗಳೆಲ್ಲರನ್ನೂ ಮೇಲಾದ ಸ್ವರ್ಗದ ಸ್ಥಾನದಲ್ಲಿ ಸ್ಥಿರಗೊಳಿಸಿದನು. ಹೀಗೆ ಆಚರಣೆಯಲ್ಲಿ ಧರ್ಮಕ್ಕೆ ಉಂಟಾಗಿರುವ ಅಧರ್ಮಸ್ವರೂಪವನ್ನು ನೀನೇ ನೋಡಿ ಅದರ ಯುಕ್ತಾಯುಕ್ತತೆಯನ್ನು ನಿರ್ಣಯಿಸು.

**ನೂನಂ ದೈತ್ಯಾಃ ಪರಾಭೂವನ್ನಸ್ಪೃಶ್ಯ ತ್ವಂ ಧರ್ಮಲಕ್ಷಣಂ ।**
**ಕ್ವ ಧರ್ಮಃ ಕೀದೃಶೋ ಧರ್ಮಃ ಕ್ವ ಕಾರ್ಯಂ ಕ್ವ ಚ ಸಾಧುತಾ॥೫೩॥**

ಆಗ ದೇವತೆಗಳು ವಿಷ್ಣುವಿನ ಈ ಬಗೆಯ ಮೋಸದಿಂದ ನಿಜವಾಗಿಯೂ ಸೋತರು. ಹೀಗಿರುವಲ್ಲಿ ಧರ್ಮಲಕ್ಷಣವು ಎಂತಹದೆಂಬುದನ್ನು ನೀನೇ ನೋಡು. ಧರ್ಮವು ಎಲ್ಲಿದ್ದಂತಾಯಿತು? ಧರ್ಮದ ಸ್ವರೂಪವೇನು? ಯಾವುದನ್ನು ಧರ್ಮವೆಂದು ಮಾಡಬೇಕು? ಸಾಧುಸ್ವಭಾವವು ಎಲ್ಲಿರುವುದು?

**ಕಥಯಾಮಿ ಚ ಕಸ್ಯಾಗ್ರೇ ಸಿದ್ಧಂ ಮೈಮಾಂಸಿಕಂ ಮತಂ ।**
**ತಾರ್ಕಿಕಾ ಯುಕ್ತಿವಾದಜ್ಞಾ ವಿಧಿಜ್ಞಾ ವೇದವಾದಕಾಃ ॥೫೪॥**

ಈ ಅನ್ಯಾಯವನ್ನು ಯಾರ ಮುಂದೆ ಹೇಳಲಿ? ಮೀಮಾಂಸಕರಂತೆ ಈಶ್ವರನಿಲ್ಲವೆಂಬ ಸಿದ್ಧಾಂತವು ಪ್ರಾಪ್ತವಾಗುತ್ತದೆ! ಧರ್ಮಪರನಾದ ಈಶ್ವರನು ಇದ್ದರೆ ಹೀಗೆ ದೇವತೆಗಳೂ ರಾಕ್ಷಸರಾದ ನಾವೂ ಸಮಾನರಾದ ಮಕ್ಕಳಾಗಿರುವಾಗ ನಮಗೆ ಮಾತ್ರ ಹೀಗೆ ಅನ್ಯಾಯವಾಗುತ್ತಿರಲಿಲ್ಲವು. ನ್ಯಾಯಶಾಸ್ತ್ರವನ್ನು ಬಲ್ಲವರು ಯುಕ್ತಿನ್ಯಾಯಗಳನ್ನು ತಿಳಿದವರೆಂದೂ, ವೇದವಾದಿಗಳಾದ ಮೀಮಾಂಸಕರು ಯಜ್ಞಯಾಗಾದಿಧರ್ಮಗಳನ್ನು ತಿಳಿದವರೆಂದೂ ಪ್ರಸಿದ್ಧರಾಗಿರುತ್ತಾರೆ. ಜಗತ್ತೆಂಬ ಕಾರ್ಯಕ್ಕೆ ಕಾರಣನಾದ ಈಶ್ವರನಿದ್ದಾನೆಂದು ತಾರ್ಕಿಕರೂ, ಅಂತಹವನಿಲ್ಲವೆಂದು ಮೀಮಾಂಸಕರೂ ಹೇಳುತ್ತಾರೆ.

**ಉಕ್ತಾಃ ಸಕರ್ತೃಕಂ ವಿಶ್ವಂ ವಿವದಂತೇ ಜಡಾತ್ಮಕಾಃ ।**
**ಕರ್ತಾ ಭವತಿ ಚೇದಸ್ಮಿನ್ಸಂಸಾರೇ ವಿತತೇ ಕಿಲ ॥೫೫॥**

**ವಿರೋಧಃ ಕೀದೃಶಸ್ತತ್ರ ಚೈಕಕರ್ಮಣಿ ನೈ ಮಿಥಃ ।**
**ವೇದೇ ನೈಕಮತಿಃ ಕಸ್ಮಾಚ್ಛಾಸ್ತ್ರೇಷ್ವಪಿ ತಥಾ ಪುನಃ ॥೫೬॥**

ಈ ಈರ್ವರೂ ಈ ಜಗತ್ತು ಒಬ್ಬ ಕರ್ತೃವುಳ್ಳದ್ದೇ ಅಥವಾ ಅಲ್ಲವೇ ಎಂಬ ವಿಷಯದಲ್ಲಿ ಉಭಯಸಮ್ಮತವಾದ ತಿಳಿವಳಿಕೆಯಿಲ್ಲದವರಾಗಿ ಪರಸ್ಪರವಾಗಿ

ವಾದವಿವಾದಗಳನ್ನು ಮಾಡುತ್ತಾರೆ. ಆದರೆ, ವಿಸ್ತಾರವಾದ ಈ ಪ್ರಪಂಚದಲ್ಲಿ ಓರ್ವ ಪ್ರಧಾನಕರ್ತೃವು ಇರುವುದಾದರೆ, ಒಂದೇತೆರನಾಗಿ ಉದ್ಯೋಗಶೀಲರಾದ ಇಬ್ಬರ ಪರಸ್ಪರ ವಿರೋಧವೆಂತಹುದು? ಹೀಗೆ ವೇದದ ತಿಳಿವಳಿಕೆಯುಳ್ಳವರಲ್ಲಿ ಎಲ್ಲರೂ ಒಂದೇತೆರನಾದ ಅಭಿಪ್ರಾಯವುಳ್ಳವರು ಅಲ್ಲವು. ಅದರಂತೆ ಶಾಸ್ತ್ರಗಳಲ್ಲಿಯೂ ಅನೇಕ ಮತಗಳಿರುತ್ತವೆ.

**ನೈಕವಾಕ್ಯಂ ವಚಸ್ತೇಷಾಮಪಿ ವೇದವಿದಾಂ ಪುನಃ ।**
**ಯತಃ ಸ್ವಾರ್ಥಪರಂ ಸರ್ವಂ ಜಗತ್ಸ್ಥಾವರಜಂಗಮಂ ॥೫೭॥**

ಆ ವೇದವನ್ನು ಬಲ್ಲ ಅವರಿಗೂ ಒಂದೇ ಸಿದ್ಧಾಂತದ ಮಾತಿಲ್ಲವು ಎಂದರೆ ಐಕಮತ್ಯವಿಲ್ಲವು. ಎಕೆಂದರೆ ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ತನ್ನ ಸ್ವಾರ್ಥ ಸಾಧನೆಗಾಗಿಯೇ ಇರುವುದೆಂದೂ ಅವರು ತಿಳಿದಿರುತ್ತಾರೆ.

**ನಿಸ್ಪೃಹಃ ಕೋಽಪಿ ಸಂಸಾರೇ ನ ಭವೇನ್ನ ಭವಿಷ್ಯತಿ ।**
**ಶಶಿನಾಽಥ ಗುರೋರ್ಭಾರ್ಯಾ ಹೃತಾ ಜ್ಞಾತ್ವಾ ಬಲಾದಪಿ ॥೫೮॥**

ಈ ಜಗತ್ತಿನಲ್ಲಿ ಯಾರೂ ಆಸೆಯನ್ನು ಬಿಟ್ಟವರಿಲ್ಲವು. ಮುಂದೆಯೂ ಅಂತಹವರು ಹುಟ್ಟಲಾರರು. ಉದಾಹರಣೆಗಾಗಿ, ಚಂದ್ರನು ಗುರುಪತ್ನೀಗಮನವನ್ನು ಮಾಡಬಾರದೆಂದು ತಿಳಿದಿದ್ದರೂ, ದೇವಗುರುವಾದ ಬೃಹಸ್ಪತಿಯ ಹೆಂಡತಿಯಾದ ತಾರೆಯನ್ನು ಬಲಾತ್ಕಾರವಾಗಿ ಅಪಹರಿಸಿದನು.

**ಗೌತಮಸ್ಯ ತಥೇಂದ್ರೇಣ ಜಾನತಾ ಧರ್ಮನಿಶ್ಚಯಂ ।**
**ಗುರುಣಾಽನುಜಭಾರ್ಯಾ ಚ ಭುಕ್ತಾ ಗರ್ಭವತೀ ಬಲಾತ್ ॥೫೯॥**

ಅದರಂತೆ ದೇವೇಂದ್ರನು ಪರಸ್ತ್ರೀಗಮನವು ನಿಷಿದ್ಧವೆಂದು ತಿಳಿದಿದ್ದರೂ ಗೌತಮಮುನಿಯ ಪತ್ನಿಯಾದ ಅಹಲ್ಯೆಯನ್ನು ರಮಿಸಿದನು. ದೇವಗುರುವಾದ ಬೃಹಸ್ಪತಿಯೂ ಸಹ ತನ್ನ ಕಿರಿಯ ತಮ್ಮನಾದ ಅನರ್ತನ ಹೆಂಡತಿಯನ್ನು, ಹಿರಿಯ ಬಂಧುವಾದ ಉತಥ್ಯನ ಹೆಂಡತಿ ಮಮತೆಯನ್ನೂ ಅವಳು ಗರ್ಭಿಣಿಯಾಗಿದ್ದರೂ, ಬಲಾತ್ಕಾರವಾಗಿ ಭೋಗಿಸಿದನು.

**ಶಪ್ತೋ ಗರ್ಭಗತೋ ಬಾಲಃ ಕೃತಶ್ಚಾಂಧಸ್ತಥಾ ಪುನಃ ।**
**ವಿಷ್ಣುನಾ ಚ ಶಿರಶ್ಛಿನ್ನಂ ರಾಹೋಶ್ಚಕ್ರೇಣ ವೈ ಬಲಾತ್ ॥೬೦॥**

ಆಗ ಮೈಥುನಕಾಲದಲ್ಲಿ ಉತಥ್ಯಪತ್ನಿಯ ಗರ್ಭದಲ್ಲಿದ್ದ ಬಾಲಕನು ಬೃಹಸ್ಪತಿಯನ್ನು ಕುರಿತು—ಈ ಗರ್ಭದಲ್ಲಿ ನಾನಿರುತ್ತೇನೆ. ನಿನ್ನಿಂದ ಆಗುವ ಇನ್ನೊಂದು ಗರ್ಭಕ್ಕೆ ಇಲ್ಲಿ ಅವಕಾಶವಿಲ್ಲವು. ಆದುದರಿಂದ ಸಂಭೋಗಮಾಡಬೇಡವೆಂದು ಹೇಳಿ ನಿಷೇಧಿಸಿದರೂ ಬೃಹಸ್ಪತಿಯು ಸಿಟ್ಟಿನಿಂದ ಆ ಬಾಲಕನನ್ನು ಕುರುಡನಾಗೆಂದು ಶಪಿಸಿದನು. ಮತ್ತು ವಿಷ್ಣುವೂ ಸಹ ಅಮೃತವನ್ನು ದೇವಾಸುರರಿಗೆ ಹಂಚುವ ಸಮಯದಲ್ಲಿ, ವೇಷವನ್ನು ಮರೆಸಿ ದೇವತೆಗಳ ಪಂಕ್ತಿಯಲ್ಲಿ ಕುಳಿತಿದ್ದ ರಾಹುವಿನ ಶಿರಸ್ಸನ್ನು ಪಕ್ಷಪಾತವುಳ್ಳವನಾಗಿ ತನ್ನ ಚಕ್ರದಿಂದ ಕತ್ತರಿಸಿದನು.

**ಅಪರಾಧಂ ವಿನಾ ಕಾಮಂ ತದಾ ಸತ್ತ್ವವತಾಂಬಿಕೇ ।**
**ಪೌತ್ರೋ ಧರ್ಮವತಾಂ ಶೂರಃ ಸತ್ಯವ್ರತಪರಾಯಣಃ ॥೬೧॥**

ಓ ಮಾತೆಯೇ ಆಗ ಸಾತ್ವಿಕನೆಂದು ಪ್ರಸಿದ್ಧನಾದ ಆ ವಿಷ್ಣುವು ಅಪರಾಧ ಮಾಡದಿದ್ದರೂ ಬೇಕೆಂತಲೇ ರಾಹುವಿನ ಶಿರಸ್ಸನ್ನು ಕತ್ತರಿಸಿದನು. ಅಲ್ಲದೆ ನನ್ನ ಮೊಮ್ಮಗನಾದ, ಧರ್ಮನಿಷ್ಠರಲ್ಲಿ ಶ್ರೇಷ್ಠನಾದ ಮತ್ತು ಸತ್ಯದಲ್ಲಿಯೇ ಆಸಕ್ತನಾದ,

**ಯಜ್ವಾ ದಾನಪತಿಃ ಶಾಂತಃ ಸರ್ವಜ್ಞಃ ಸರ್ವಪೂಜಕಃ ।**
**ಕೃತ್ವಾಥ ವಾಮನಂ ರೂಪಂ ಹರಿಣಾ ಛಲವೇದಿನಾ ॥೬೨॥**
**ವಂಚಿತೋಽಸೌ ಬಲಿಃ ಸರ್ವಂ ಹೃತಂ ರಾಜ್ಯಂ ಪುರಾ ಕಿಲ ।**

ಮತ್ತು ಯಜ್ಞಯಾಗಾದಿಗಳನ್ನು ವಿಧ್ಯುಕ್ತವಾಗಿ ಮಾಡಿರತಕ್ಕ, ದಾನ ಮಾಡುವುದರಲ್ಲಿ ಅಗ್ರಗಣ್ಯನಾಗಿಯೂ, ಶಾಂತಸ್ವಭಾವದನಾಗಿಯೂ ಎಲ್ಲವನ್ನೂ ತಿಳಿದು, ಎಲ್ಲರನ್ನೂ ಯೋಗ್ಯರೀತಿಯಿಂದ ಪೂಜಿಸುವವನಾಗಿಯೂ ಇರುವ ನನ್ನ ಮೊಮ್ಮಗನಾದ ಬಲಿಯು, ಮೋಸವಿಧಾನವನ್ನು ಚನ್ನಾಗಿ ಬಲ್ಲ ಆ ವಿಷ್ಣುವಿನಿಂದ ವಾಮನರೂಪವನ್ನು ಧರಿಸಿ ಮೋಸಗೊಳಿಸಲ್ಪಟ್ಟನು. ಮತ್ತು ಮೋಸವನ್ನೇ ಅವಲಂಬಿಸಿ ಆ ವಿಷ್ಣುವು ಅವನ ಸಮಸ್ತ ರಾಜ್ಯವನ್ನೂ ಅಪಹರಿಸಿದನು.

**ತಥಾಪಿ ದೇವಾನ್ ಧರ್ಮಿಷ್ಠಾನ್ಪ್ರವದಂತಿ ಮನೀಷಿಣಃ ॥೬೩॥**
**ವದಂತಿ ಚಾಟುವಾದಾಂಶ್ಚ ಧರ್ಮವಾದಾಙ್ನಾಯಂ ಗತಾಃ ।**

ದೇವತೆಗಳು ಇಷ್ಟು ಅನ್ಯಾಯಶಾಲಿಗಳಾಗಿದ್ದರೂ, ತಿಳಿದವರೂ ಸಹ ಅವರನ್ನು ಧರ್ಮಿಷ್ಠರೆನ್ನುವರು. ಜಯಶಾಲಿಗಳಾದ ಮೇಲೆ ಇವರು ಹಿಂದೆ ತಾವು

ಮಾಡಿದ ಅನ್ಯಾಯವನ್ನೂ ಮೋಸವನ್ನೂ ಮರೆತು ಧರ್ಮೋಪದೇಶದ ಮಾತು ಗಳನ್ನೂ, ಪೊಳ್ಳುಧರ್ಮವಾದವನ್ನೂ ಹೇಳುತ್ತಾರೆ. ಸ್ಥಿತಿಯು ಹೀಗಿರುತ್ತದೆ!

**ಏವಂ ಜ್ಞಾತ್ವಾ ಜಗನ್ಮಾತರ್ಯಥೇಚ್ಛಸಿ ತಥಾ ಕುರು ॥೬೪॥**
**ಶರಣಾ ದಾನವಾಃ ಸರ್ವೇ ಜಹಿ ವಾ ರಕ್ಷ ವಾ ಪುನಃ ॥**

ಓ ಜಗನ್ಮಾತೆಯೇ, ಈ ರೀತಿಯಲ್ಲಿರುವ ಸ್ಥಿತಿಯನ್ನು ತಿಳಿದು ನಿನಗೆ ಯಾವುದು ಸರಿ ಎಂದು ತೋಚುವುದೋ ಅದರಂತೆ ಮಾಡು. ಈ ರಾಕ್ಷಸರೆಲ್ಲರೂ ನಿನಗೆ ಶರಣಾಗತರಾಗಿರುತ್ತಾರೆ. ಈ ನಮ್ಮನ್ನು ನಿನ್ನ ಇಷ್ಟಬಂದಂತೆ ಸಂಹರಿಸುವುದಾದರೂ ಸಂಹರಿಸು, ಅಥವಾ ರಕ್ಷಿಸುವುದಾದರೂ ರಕ್ಷಿಸು ಎಂದು ಪ್ರಹ್ಲಾದನು ದೇವಿಯನ್ನು ಸ್ತೋತ್ರಮಾಡಿ ಅರಿಕೆಮಾಡಿದನು.

॥ ದೇವ್ಯುವಾಚ ॥

**ಸರ್ವೇ ಗಚ್ಛತ ಪಾತಾಲಂ ತತ್ರ ವಾಸಂ ಯಥೇಪ್ಸಿತಂ ॥೬೫॥**
**ಕಾಲಃ ಪ್ರತೀಕ್ಷ್ಯೋ ಯುಷ್ಮಾಭಿಃ ಕಾರಣಂ ಸಶುಭೇಽಶುಭೇ ॥೬೬॥**

ದೇವಿಯು ಹೇಳಿದಳು—ಈಗ ನೀವೆಲ್ಲರೂ ಪಾತಾಳಕ್ಕೆ ಹೋಗಿ ಅಲ್ಲಿ ನಿಮ್ಮ ಮನಸ್ಸಿಗೆ ಬಂದಂತೆ ವಾಸಮಾಡಿರಿ. ಎಲೈ ರಾಕ್ಷಸರೇ, ನೀವು ದೇವತೆಗಳಲ್ಲಿ ಕೋಪವನ್ನು ಬಿಟ್ಟು, ಯಾವ ಭಯವೂ ಇಲ್ಲದೆ ಅಲ್ಲಿಯೇ ವಾಸಮಾಡುತ್ತಾ ಒಳ್ಳೆಯ ಕಾಲವನ್ನು ನಿರೀಕ್ಷಿಸುತ್ತಲಿರಿ. ಒಳ್ಳೆಯದಕ್ಕಾಗಲಿ, ಕೆಟ್ಟದಕ್ಕಾಗಲೀ ಅವರವರ ಕರ್ಮವು ಫಲೋನ್ಮುಖವಾಗುವ ಕಾಲವೇ ಕಾರಣವು.

**ಸುನಿರ್ವೇದಪರಾಣಾಂ ಹಿ ಸುಖಂ ಸರ್ವತ್ರ ಸರ್ವದಾ ।**
**ತ್ರೈಲೋಕ್ಯಸ್ಯ ಚ ರಾಜ್ಯೇಽಪಿ ನ ಸುಖಂ ಲೋಭಚೇತಸಾಂ ॥೬೭॥**

ಆಶೆಯನ್ನು ಬಿಟ್ಟು ಸದ್ವೃತ್ತಿಯಲ್ಲಿರುವವರಿಗೆ ಎಲ್ಲೆಡೆಯಲ್ಲೂ ಸರ್ವಕಾಲ ದಲ್ಲೂ ಸುಖವು ಲಭಿಸುವುದು. ಆದರೆ ಲೋಭವೆಂಬ ದುರಾಶೆಯಿಂದ ಕೂಡಿದವರಿಗೆ ಮೂರು ಲೋಕದ ರಾಜ್ಯಸುಖವಿದ್ದರೂ ಅವರಿಗೆ ತೃಪ್ತಿಯಾಗಲೀ ಸುಖವಾಗಲಿ ಉಂಟಾಗುವುದಿಲ್ಲವು. ದೇವತೆಗಳಿಗೂ ರಾಕ್ಷಸರಿಗೂ ಸರದಿಯಮೇಲೆ ಸುಖವೂ ದುಃಖವೂ ತಿರುತಿರುಗಿ ಬರುತ್ತಿರುವುದರಿಂದ ಯಾರೂ ನಿರಾಶರಾಗಬೇಕಾದುದಿಲ್ಲವು.

**ಕೃತೇಽಪಿ ನ ಸುಖಂ ಪೂರ್ಣಂ ಸಸ್ಪೃಹಾಣಾಂ ಫಲೈರಪಿ ।**
**ತಸ್ಮಾತ್ತ್ಯಕ್ತ್ವಾ ಮಹೀಮೇತಾಂ ಪ್ರಯಾಂತ್ವದ್ಯ ಮಹೀತಲಂ ॥೬೮॥**

**ಮಮಾಜ್ಞಾಂ ಪುರತಃ ಕೃತ್ವಾ ಸರ್ವೇ ವಿಗತಕಲ್ಮಷಾಃ ।**

ಧರ್ಮಯುಗವಾದ ಕೃತಯುಗದಲ್ಲಿಯೂ ಸಹ ಆಸೆಯುಳ್ಳವರಿಗೆ ಎಂತಹ ಫಲವುಂಟಾದರೂ ಸಂಪೂರ್ಣವಾದ ಸುಖವು ಸಂತತವಾಗಿ ಸರ್ವದಾ ಇಲ್ಲವು. ಇನ್ನು ಉಳಿದ ದ್ವಾಪರಾದಿ ಯುಗಗಳಲ್ಲಿ ಹೇಳಬೇಕಾದುದೇನು? ಆದುದರಿಂದ ನೀವೆಲ್ಲರೂ ಈ ನನ್ನ ಆಜ್ಞೆಯನ್ನು ಗೌರವಿಸಿ ಕೋಪ ಮೊದಲಾದ ಮನಸ್ಸಿನ ಕೆಟ್ಟ ಭಾವನೆಗಳನ್ನು ಬಿಟ್ಟು ಪಾತಾಳಲೋಕಕ್ಕೆ ಹೋಗಿ ಅಲ್ಲಿ ವಾಸಮಾಡಿರಿ. ನಿಮ್ಮ ಸತ್ಕರ್ಮಗಳೂ, ಸದ್ಭಾವನೆಗಳೂ ಫಲೋನ್ಮುಖವಾಗುವ ಕಾಲದಲ್ಲಿ ನಿಮಗೂ ಸುಖವು ತಪ್ಪದೆ ದೊರೆಯುತ್ತದೆ ಎಂದು ತಾತ್ಪರ್ಯವು.

॥ ವ್ಯಾಸ ಉವಾಚ ॥

**ತಚ್ಛ್ರುತ್ವಾ ವಚನಂ ದೇವ್ಯಾಸ್ತಥೇತ್ಯುಕ್ತ್ವಾ ರಸಾತಲಂ ॥೬೯॥**
**ಪ್ರಣಮ್ಯ ದಾನವಾಃ ಸರ್ವೇ ಗತಾಃ ಶಕ್ತ್ಯಾಽಭಿರಕ್ಷಿತಾಃ ।**

ವ್ಯಾಸಋಷಿಯು ಹೇಳಿದನು—ದೇವಿಯ ಈ ಮಾತನ್ನು ಕೇಳಿ ಆ ರಾಕ್ಷಸರೆಲ್ಲರೂ ಹಾಗೆಯೇ ಆಗಲೆಂದು ಅವಳನ್ನು ನಮಸ್ಕರಿಸಿ ಆ ಆದಿಶಕ್ತಿಯಿಂದ ರಕ್ಷಿಸಲ್ಪಟ್ಟವರಾಗಿ ಪಾತಾಳಲೋಕಕ್ಕೆ ಹೋದರು.

**ಅಂತರ್ದಧೇ ತತೋ ದೇವೀ ದೇವಾಃ ಸ್ವಭುವನಂ ಗತಾಃ ॥೭೦॥**
**ತ್ಯಕ್ತ್ವಾ ವೈರಂ ಸ್ಥಿತಾಃ ಸರ್ವೇ ತೇ ತದಾ ದೇವದಾನವಾಃ ।**

ಆಮೇಲೆ ದೇವಿಯು ಅಲ್ಲಿಯೇ ಅದೃಶ್ಯಳಾದಳು. ದೇವತೆಗಳೂ ಸಹ ತಮ್ಮ ಸ್ಥಾನಗಳಿಗೆ ತೆರಳಿದರು. ಆಮೇಲೆ ದೇವತೆಗಳೂ ರಾಕ್ಷಸರೂ ಪರಸ್ಪರ ದ್ವೇಷವನ್ನು ಬಿಟ್ಟು ಶಾಂತಮನಸ್ಕರಾಗಿ ವಾಸಿಸುತ್ತಿದ್ದರು.

**ಏತದಾಖ್ಯಾನಮಖಿಲಂ ಯಃ ಶೃಣೋತಿ ವದತ್ಯಥ ॥೭೧॥**
**ಸರ್ವದುಃಖವಿನಿರ್ಮುಕ್ತಃ ಪ್ರಯಾತಿ ಪದಮುತ್ತಮಂ ॥**

ಈ ದೇವಾಸುರಯುದ್ಧವೇ ಮೊದಲಾದ ಕಥೆಯನ್ನು ಯಾರು ಕೇಳುವರೋ ಮತ್ತು ಯಾರು ವ್ಯಾಖ್ಯಾನಮಾಡಿ ಹೇಳುವರೋ ಅಂಥವರು, ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಎಂಬ ಮೂರುವಿಧವಾದ ದುಃಖವೂ ಇಲ್ಲದವರಾಗಿ ಆ ದೇವಿಯ ಶ್ರೇಷ್ಠವಾದ ಸ್ಥಾನವನ್ನು ಹೊಂದುವರು.

ಈ ಮಹಾಪುರಾಣದಲ್ಲೂ ಗುರು, ಚಂದ್ರ, ತಾರೆ ಇಂತಹವರ ಕಥೆಗಳನ್ನೂ ಹೇಳಿರುವುದು ಮಹಾಪುರಾಣದ ಮಹತ್ತ್ವವನ್ನು ಕಡಿಮೆಮಾಡುತ್ತದೆಂದೂ, ಜನರ ನೀತಿಬುದ್ಧಿಯು ಕೆಡಬಹುದೆಂದೂ ಕೆಲವರು ಅಭಿಪ್ರಾಯಪಡಬಹುದು. ಆದರೆ ಭಾರತಾರ್ಯರ ಸಾಹಿತ್ಯವು, ಇತರರ ಸಾಹಿತ್ಯಗಳಂತೆ, ಜನತೆಯ ಸಂಸ್ಕೃತಿಯನ್ನೂ, ದಿನಗಟ್ಟಲೆಯ ಜೀವನರೀತಿಯನ್ನೂ ಪ್ರತಿಬಿಂಬಿಸುತ್ತದೆ ಎಂಬುದು ವಿಮರ್ಶಕರೆಲ್ಲರಿಗೂ ಮಾನ್ಯವಾದ ಸಿದ್ಧಾಂತವಾಗಿದೆ. ಮೇಲಿನ ಕಥೆಯಂತಹ ಉದಾಹರಣೆಗಳು ಜನರಲ್ಲಿ ದೊರೆಯುತ್ತವೆಂಬುದು ಈಗಲೂ ನಿಜವಾಗಿದೆ. ಆದುದರಿಂದ ಇಂತಹ ಜೀವನದ ಭಾವಗಳನ್ನೂ ಇದ್ದಂತೆಯೇ ಚಿತ್ರಿಸಿ, ಅಂತಹ ಆಕರ್ಷಣೆಯ ಹಳ್ಳಗಳಲ್ಲಿ ಬೀಳಬಾರದೆಂದೂ, ಇತರ ಉತ್ತಮ ಉದಾಹರಣೆಗಳನ್ನೇ ಕಷ್ಟಪಟ್ಟಾದರೂ ಅನುಸರಿಸುವುದೇ ಶ್ರೇಯಸ್ಕರವೆಂದೂ ವಿವೇಕದಿಂದ ಮಾನವನು ಮನಗಾಣುತ್ತಾನೆ. ಅಲ್ಲದೆ ಮಾನವರಂತೆ ದೇವತೆಗಳೂ ದೇಹಿಗಳಾದುದರಿಂದ ಗುಣತ್ರಯದ ಪ್ರಾಬಲ್ಯಕ್ಕೆ ಒಳಗಾಗುವರೆಂದೂ, ಬ್ರಹ್ಮ, ವಿಷ್ಣು, ರುದ್ರ ಮುಂತಾದ ದೊಡ್ಡ ಜನರೂ ಹಾಗಿರುವುದರಿಂದ, ಅವರಿಗಿಂತ ಹೆಚ್ಚುಮಾನ್ಯವಾದ, ಅವರಿಗೂ ಕಾರಣವಾದುದರಿಂದ ಮೇಲಿನ ಅಂತಸ್ತಿನ ತತ್ತ್ವವಾದ, ಮಹಾಮಾಯಾ, ಆದಿಶಕ್ತಿ, ರೂಪಳಾದ ದೇವೀತತ್ವದ ನಿರೂಪಣೆಯು ಈ ಮಹಾಪುರಾಣದ ವಿಶೇಷಧರ್ಮವಾಗಿದೆ ಎಂಬುದನ್ನೂ ಗಮನಿಸಬಹುದು. ಮತ್ತು ಮೂಢಭಕ್ತಿಯ ಪ್ರಾಬಲ್ಯಕ್ಕೆ ತಲೆಬಾಗದೆ ಯುಕ್ತಿಗೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟು, ಸರಿಯಾದ ಕಾರಣಗಳಿಂದ ವಿಮರ್ಶೆಯನ್ನು ಮುಂದುವರಿಸಿ ಏರ್ಪಡುವ ಸಿದ್ಧಾಂತವನ್ನು ಮಾತ್ರ ತೆರೆದ ಮನಸ್ಸಿನಿಂದ ಒಪ್ಪಿ ಉದಾತಹೃದಯದಿಂದ ಮನ್ನಿಸಲು ಹಿಂಜರಿಯದ ಮನೋವೃತ್ತಿಯು ಬೇಕೆಂದು ಬಯಸುವ ಈಗಿನ ಉತ್ತಮವಿಮರ್ಶಕರಂತೆ ಆಗಿನ ಕಾಲದಲ್ಲೂ ಎಂದರೆ ಈ ಪುರಾಣ ರಚನೆಯಕಾಲದ ಜನರೂ, ವರ್ತಿಸುತ್ತಿದ್ದರೆಂಬುದು ಗಮನಾರ್ಹವಾದುದು. ಅದರಂತೆ ಪ್ರಹ್ಲಾದನು ರಾಕ್ಷಸರಿಗೆ ದೇವತೆಗಳಿಂದ ಆಗಿರುವ ಅನ್ಯಾಯವನ್ನು ಮುಕ್ತಕಂಠನಾಗಿ ಉತ್ತಮವಾದಿ (ಅಡ್ವೊಕೇಟ್)ಯಂತೆ ದೇವಿಯಲ್ಲಿ ಹೇಳಿ, ನ್ಯಾಯ್ಯವೂ, ಯುಕ್ತವೂ, ಶ್ರೇಯಸ್ಕರವೂ ಆದ ಕರ್ಮವಾದದ ಸಿದ್ಧಾಂತವನ್ನು ಒಪ್ಪಿ ಮನಸ್ಸಮಾಧಾನವನ್ನೂ

ಶಾಂತಿಸುಖಗಳನ್ನೂ ಪಡೆದುದರಿಂದ ಈ ಪುರಾಣದ ಪಠನವೂ ಶ್ರವಣವೂ ಪುಣ್ಯಕರ ಗಳೆಂದು ವರ್ಣಿಸಿರುವುದು ಅತಿಶಯೋಕ್ತಿಯಲ್ಲವು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಪಂಚದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಹದಿನೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಷೋಡಶೋಽಧ್ಯಾಯಃ ||

### ಹದಿನಾರನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಭೃಗುಶಾಪಾನ್ಮುನಿಶ್ರೇಷ್ಠ ಹರೇರದ್ಭುತಕರ್ಮಣಃ ।**
**ಅವತಾರಾಃ ಕಥಂ ಜಾತಾಃ ಕಸ್ಮಿನ್ಮನ್ವಂತರೇ ವಿಭೋ ॥೧॥**

ಜನಮೇಜಯರಾಜನು ಹೇಳಿದನು—ಋಷಿಗಳಲ್ಲಿ ಶ್ರೇಷ್ಠನಾದ ಮತ್ತು ತಪಸ್ಸಾಮರ್ಥ್ಯವುಳ್ಳ ಓ ವ್ಯಾಸಮುನಿಯೇ, ಆಶ್ಚರ್ಯಕರವಾದ ಕಾರ್ಯಗಳನ್ನು ನೆರವೇರಿಸುವ ಆ ವಿಷ್ಣುವಿಗೆ ಭೃಗುಮಹರ್ಷಿಯು ಕೊಟ್ಟ ಶಾಪದಂತೆ, ಅವತಾರ ಎಂದರೆ, ಭೂಮಿಯಲ್ಲಿ ದಿವ್ಯ (ಚತುರ್ಭುಜಕೃಷ್ಣ), ಮಾನುಷ (ರಾಮ, ವಾಮನ), ತಿರ್ಯಕ್ಪ್ರಾಣಿ (ಮತ್ಸ್ಯ, ಕೂರ್ಮ), ಮಿಶ್ರ (ವರಾಹ, ನರಸಿಂಹ) ರೂಪವುಳ್ಳ ದೇಹಗಳನ್ನು ಪಡೆದು ಹುಟ್ಟುವಿಕೆಗಳು ಯಾವ ಮನ್ವಂತರಗಳಲ್ಲಿ ಹೇಗೆ ಆದುವು ?

**ವಿಸ್ತರಾದ್ವದ ಧರ್ಮಜ್ಞ ಅವತಾರಕಥಾಂ ಹರೇಃ ।**
**ಪಾಪನಾಶಕರೀಂ ಬ್ರಹ್ಮನ್ ಶ್ರುತಾಂ ಸರ್ವಸುಖಾವಹಾಂ ॥೨॥**

ಧರ್ಮಜ್ಞನಾದ, ಬ್ರಹ್ಮಜ್ಞಾನಿಯಾದ ಓ ವ್ಯಾಸಮುನಿಯೇ, ಕೇಳಿದ ಮಾತ್ರದಿಂದಲೇ ಎಲ್ಲ ಪಾಪಗಳ ನಾಶವನ್ನೂ, ಸಮಸ್ತ ಸುಖವನ್ನೂ ಉಂಟು ಮಾಡುವ ಆ ವಿಷ್ಣುವಿನ ಅವತಾರಗಳ ಕಥೆಯನ್ನು ಹೇಳು.

|| ವ್ಯಾಸ ಉವಾಚ ||

**ಶೃಣು ರಾಜನ್ಪ್ರವಕ್ಷ್ಯಾಮಿ ಅವತಾರಾನ್ ಹರೇರ್ಯಥಾ ।**
**ಯಸ್ಮಿನ್ಮನ್ವಂತರೇ ಜಾತಾ ಯುಗೇ ಯಸ್ಮಿನ್ನರಾಧಿಪ ॥೩॥**

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ, ಕೇಳು, ವಿಷ್ಣುವಿನ ಅವತಾರಗಳು ಯಾವ ಮನ್ವಂತರಗಳಲ್ಲಿ ಯಾವ ಯಾವ ಯುಗಗಳಲ್ಲಿ ಆದುವೆಂಬುವುದನ್ನು ನಿನಗೆ ವಿಸ್ತಾರವಾಗಿ ಹೇಳುತ್ತೇನೆ.

**ಯೇನ ರೂಪೇಣ ಯತ್ಕಾರ್ಯಂ ಕೃತಂ ನಾರಾಯಣೇನ ವೈ ।**
**ತತ್ಸರ್ವಂ ನೃಪ ವಕ್ಷ್ಯಾಮಿ ಸಂಕ್ಷೇಪೇಣ ತವಾಧುನಾ ॥೪॥**

ಮತ್ತು ಯಾವ ಅವತಾರದಿಂದ ಯಾವ ಯಾವ ಕಾರ್ಯಗಳನ್ನು ಆ ವಿಷ್ಣುವು ಮಾಡಿದನೆಂಬುವುದನ್ನು ನಿನಗೆ ಈಗ ನಾನು ಸಂಕ್ಷೇಪವಾಗಿ ಹೇಳುತ್ತೇನೆ. ಎಲೈ ರಾಜನೇ, ಕೇಳುವವನಾಗು.

**ಧರ್ಮಸ್ಯೈವಾವತಾರೋಽಭೂಚ್ಚಾಕ್ಷುಷೇ ಮನುಸಂಭವೇ ।**
**ನರನಾರಾಯಣೌ ಧರ್ಮಪುತ್ರೌ ಖ್ಯಾತೌ ಮಹೀತಲೇ ॥೫॥**

ಚಾಕ್ಷುಷವೆಂಬ ಮನ್ವಂತರದಲ್ಲಿ ಧರ್ಮನ ಅವತಾರವು ಆಯಿತು. ಆಗ ಧರ್ಮಪುತ್ರರಾದ ನರನೂ ಮತ್ತು ನಾರಾಯಣನೂ ವಿಷ್ಣುವಿನ ಸ್ವರೂಪರಾಗಿ ಭೂಮಿಯಲ್ಲಿ ಅವತರಿಸಿ ಪ್ರಸಿದ್ಧರಾದರು.

**ಅಥ ವೈವಸ್ವತಾಖ್ಯೇಽಸ್ಮಿನ್ದ್ವಿತೀಯೇ ತು ಯುಗೇ ಪುನಃ ।**
**ದತ್ತಾತ್ರೇಯೋಽವತಾರೋಽತ್ರೇಃ ಪುತ್ರತ್ವಮಗಮದ್ಧರಿಃ ॥೬॥**

ಆ ಮೇಲೆ ವೈವಸ್ವತವೆಂಬ ಈ ಮನ್ವಂತರದಲ್ಲಿ ತ್ರೇತಾಯುಗದಲ್ಲಿ ವಿಷ್ಣುವು ಅತ್ರಿಮಹರ್ಷಿಯ ಮಗನಾದ ದತ್ತಾತ್ರೇಯನ ರೂಪದಿಂದ ಅವತಾರಮಾಡಿದನು.

**ಬ್ರಹ್ಮಾ ವಿಷ್ಣುಸ್ತಥಾ ರುದ್ರಸ್ತ್ರಯೋಽಮೀ ದೇವಸತ್ತಮಾಃ ।**
**ಪುತ್ರತ್ವಮಗಮನ್ದೇವಾಸ್ತಸ್ಯಾತ್ರೇ ರ್ಭಾರ್ಯಯಾ ವೃತಾಃ ॥೭॥**

ಅಲ್ಲದೆ, ದೇವಶ್ರೇಷ್ಠರಾದ ಬ್ರಹ್ಮ ವಿಷ್ಣು ರುದ್ರ ಈ ಮೂವರೂ ಆ ಅತ್ರಿ ಮುನಿಯ ಪತ್ನಿಯಾದ ಅನಸೂಯೆಯಿಂದ ಪ್ರಾರ್ಥಿಸಲ್ಪಟ್ಟವರಾಗಿ ಅವಳ ಪುತ್ರತ್ವವನ್ನು ಪಡೆದರು.

**ಅನಸೂಯಾಽತ್ರಿಪತ್ನೀ ಚ ಸತೀನಾಮುತ್ತಮಾ ಸತೀ ।**
**ಯಯಾ ಸಂಪ್ರಾರ್ಥಿತಾ ದೇವಾಃ ಪುತ್ರತ್ವಮಾಗಮಂಸ್ತ್ರಯಃ ॥೮॥**

ಯಾವ ಅತ್ರಿಸತ್ನಿಯಾದ ಅನಸೂಯೆಯಿಂದ ಪ್ರಾರ್ಥಿತರಾಗಿ ತ್ರಿಮೂರ್ತಿಗಳೂ ಆವಳ ಮಕ್ಕಳಾದರೋ ಆ ಅನುಸೂಯೆಯು ಎಲ್ಲ ಪತಿವ್ರತಾಸ್ತ್ರೀಯರಿಗಿಂತಲೂ ಶ್ರೇಷ್ಠಳಾದ ಪತಿವ್ರತೆಯಾಗಿದ್ದಳು.

**ಬ್ರಹ್ಮಾಽಭೂತ್ಸೋಮರೂಪಸ್ತು ದತ್ತಾತ್ರೇಯೋ ಹರಿಃ ಸ್ವಯಂ ।**
**ದುರ್ವಾಸಾ ರುದ್ರರೂಪೋಽಸೌ ಪುತ್ರತ್ವಂ ತೇ ಪ್ರಪೇದಿರೇ ॥೯॥**

ಆ ದಂಪತಿಗಳಲ್ಲಿ ಬ್ರಹ್ಮನು ಚಂದ್ರನ ರೂಪದಿಂದ ಅವತಾರಮಾಡಿದನು. ದತ್ತಾತ್ರೇಯನು ವಿಷ್ಣುವಿನ ಅವತಾರವು, ದುರ್ವಾಸಮುನಿಯು ರುದ್ರನ ಅವತಾರವು. ಹೀಗೆ ಆ ತ್ರಿಮೂರ್ತಿಗಳು ಅತ್ರಿಮುನಿಯ ಪುತ್ರರಾಗಿ ಹುಟ್ಟಿದರು.

**ನೃಸಿಂಹಸ್ಯಾವತಾರಸ್ತು ದೇವಕಾರ್ಯಾರ್ಥಸಿದ್ಧಯೇ ।**
**ಚತುರ್ಥೇ ತು ಯುಗೇ ಜಾತೋ ದ್ವಿಧಾ ರೂಪೋ ಮನೋಹರಃ ॥**

ಈ ಮನ್ವಂತರದ ನಾಲ್ಕನೆಯ ಕೃತಯುಗದಲ್ಲಿ ಪುರುಷರೂಪವೂ, ಸಿಂಹರೂಪವೂ ಮಿಶ್ರವಾಗಿ ಉಳ್ಳ, ಆದುದರಿಂದಲೇ ಮನೋಹರವಾದ ನರಸಿಂಹಾವತಾರವು ಹಿರಣ್ಯಕಶಿಪುವಿನಿಂದ ದೇವತೆಗಳಿಗೆ ಬಂದಿದ್ದ ವಿಪತ್ತನ್ನು ಹೋಗಲಾಡಿಸುವುದಕ್ಕಾಗಿ ಆ ವಿಷ್ಣುವಿನಿಂದ ಮಾಡಲ್ಪಟ್ಟಿತು.

**ಹಿರಣ್ಯಕಶಿಪೋಃ ಸಮ್ಯಗ್ವಧಾಯ ಭಗವಾನ್ ಹರಿಃ ।**
**ಚಕ್ರೇ ರೂಪಂ ನಾರಸಿಂಹಂ ದೇವಾನಾಂ ವಿಸ್ಮಯಪ್ರದಂ ॥೧೧॥**

ದುಷ್ಟನಾದ ಹಿರಣ್ಯಕಶಿಪುವೆಂಬ ರಾಕ್ಷಸನನ್ನು ಕೊಲ್ಲುವುದಕ್ಕೋಸ್ಕರ ಸರ್ವಸಮರ್ಥನಾದ ಮತ್ತು ಸರ್ವಜ್ಞನಾದ ವಿಷ್ಣುವು ದೇವತೆಗಳಿಗೂ ಆಶ್ಚರ್ಯವನ್ನುಂಟುಮಾಡುವ ಮಹಾಮಹಿಮಶಾಲಿಯಾದ ನರಸಿಂಹರೂಪವನ್ನು ತಾಳಿದನು.

**ಬಲೇರ್ನಿಯಮನಾರ್ಥಾಯ ಶ್ರೇಷ್ಠೇ ತ್ರೇತಾಯುಗೇ ತಥಾ ।**
**ಚಕಾರ ರೂಪಂ ಭಗವಾನ್ವಾಮನಂ ಕಶ್ಯಪಾನ್ಮುನೇಃ ॥೧೨॥**

ಸ್ವಾರ್ಥಗಳಿಗಾಗಿ ಯಾಗವನ್ನು ಮಾಡುತ್ತಾ ಡಾಂಭಿಕನಾಗಿದ್ದ ಬಲಿಚಕ್ರವರ್ತಿಯನ್ನು ನಿಗ್ರಹಿಸುವುದಕ್ಕಾಗಿ ಭಗವಂತನಾದ ವಿಷ್ಣುವು ಶ್ರೇಷ್ಠವಾದ ಏಳನೆಯ ತ್ರೇತಾಯುಗದಲ್ಲಿ ಕಶ್ಯಪಮುನಿಯಿಂದ ಕಪಟ ವಾಮನರೂಪವನ್ನು ತಾಳಿದನು.

**ಛಲಯಿತ್ವಾ ಮಹೀ ಭೂಪಂ ರಾಜ್ಯಂ ತಸ್ಯ ಜಹಾರ ಹ।**
**ಪಾತಾಲೇ ಸ್ಥಾಪಯಾಮಾಸ ಬಲಿಂ ವಾಮನರೂಪಧೃಕ್ ॥೧೩॥**

ಆಗ ವಾಮನನು ತನ್ನ ರೂಪದಿಂದ ವಂಚಿಸಲ್ಪಟ್ಟ ಬಲಿಚಕ್ರವರ್ತಿಯಿಂದ ಯಜ್ಞದಲ್ಲಿ ಮೂರು ಹೆಜ್ಜೆಯಷ್ಟು ಭೂಮಿಯನ್ನು ದಾನವಾಗಿ ಪಡೆದು ತ್ರಿವಿಕ್ರಮನೂ ಆಗಿ ಎರಡು ಹೆಜ್ಜೆಗಳಿಂದಲೇ ಭೂಮ್ಯಾಕಾಶಗಳನ್ನು ವ್ಯಾಪಿಸಿ ಅವನ ರಾಜ್ಯವೆಲ್ಲವನ್ನೂ ಅಪಹರಿಸಿ ಮೂರನೆಯ ಹೆಜ್ಜೆಯಿಂದ ಆ ಬಲಿಯನ್ನು ಪಾತಾಳಕ್ಕೆ ಕಳುಹಿಸಿದನು.

**ಯುಗೇ ಚೈಕೋನವಿಂಶೇಽಥ ತ್ರೇತಾಖ್ಯೇ ಭಗವಾನ್ ಹರಿಃ ।**
**ಜಮದಗ್ನಿಸುತೋ ಜಾತೋ ರಾಮೋ ನಾಮ ಮಹಾಬಲಃ ॥೧೪॥**

ಅನಂತರದಲ್ಲಿ ಹತ್ತೊಂಬತ್ತನೆಯ ತ್ರೇತಾಯುಗದಲ್ಲಿ ಮಹಾಮಹಿಮನಾಗಿ ಪೂಜ್ಯನಾದ ಆ ವಿಷ್ಣುವು ಜಮದಗ್ನಿಯ ಪುತ್ರನಾಗಿ ಜನಿಸಿ ಮಹಾಬಲಶಾಲಿಯಾದ ಪರಶುರಾಮನ ಅವತಾರವನ್ನು ಮಾಡಿದನು.

**ಕ್ಷತ್ರಿಯಾಂತಕರಃ ಶ್ರೀಮಾನ್ಸತ್ಯವಾದೀ ಜಿತೇಂದ್ರಿಯಃ ।**
**ದತ್ತವಾನ್ಮೇದಿನೀಂ ಕೃತ್ಸ್ನಾಂ ಕಶ್ಯಪಾಯ ಮಹಾತ್ಮನೇ ॥೧೫॥**

ಆಗ ಪರಶುರಾಮಾವತಾರಿಯಾದ ಆ ವಿಷ್ಣುವು ದುಷ್ಟರಾದ ಕ್ಷತ್ರಿಯರನ್ನೆಲ್ಲಾ ನಾಶಮಾಡಿ ಸತ್ಯಪರನಾಗಿಯೂ, ಇಂದ್ರಿಯವಿಷಯಾಭಿಲಾಷೆಗಳನ್ನು ಜಯಿಸಿದವನಾಗಿಯೂ ಇದ್ದು ಮಹಾತ್ಮನಾದ ಕಶ್ಯಪಮುನಿಗೆ ತಾನು ಜಯಿಸಿದ ಸಮಸ್ತ ಭೂಮಿಯನ್ನೂ ದಾನಮಾಡಿದನು.

**ಯೋ ವೈ ಪರಶುರಾಮಾಖ್ಯೋ ಹರೇರದ್ಭುತಕರ್ಮಣಃ ।**
**ಅವತಾರಸ್ತು ರಾಜೇಂದ್ರ ಕಥಿತಃ ಪಾಪನಾಶನಃ ॥೧೬॥**

ರಾಜಶ್ರೇಷ್ಠನಾದ ಓ ಜನಮೇಜಯನೇ, ಆಶ್ಚರ್ಯಕರವಾದ ಕೆಲಸಗಳನ್ನು ನೆರವೇರಿಸಿದ ಆ ವಿಷ್ಣುವು, ಪಾಪವನ್ನು ನಾಶಮಾಡುವ ಪರಶುರಾಮಾವತಾರವನ್ನು ಮಾಡಿದ ಸಂಗತಿಯು ನಿನಗೆ ಈಗ ಹೇಳಲ್ಪಟ್ಟಿತು.

**ತ್ರೇತಾಯುಗೇ ರಘೋರ್ವಂಶೇ ರಾಮೋ ದಶರಥಾತ್ಮಜಃ ।**
**ನರನಾರಾಯಣಾಂಶೌ ದ್ವೌ ಜಾತೌ ಭುವಿ ಮಹಾಬಲೌ ॥೧೭॥**

ಮುಂದೆ ಅದೇ ತ್ರೇತಾಯುಗದಲ್ಲಿ ರಘುರಾಜನ ಸೂರ್ಯವಂಶದಲ್ಲಿ ದಶರಥನ ಮಗನಾಗಿ ರಾಮನ ರೂಪದಿಂದ ಅವತಾರವನ್ನು ಮಾಡಿದನು. ಅನಂತರದಲ್ಲಿ ದ್ವಾಪರಯುಗದಲ್ಲಿ ಆ ವಿಷ್ಣುವಿನ ಅವತಾರಿಗಳಾದ ನರನಾರಾಯಣರ ಅಂಶದಿಂದ ಭೂಮಿಯಲ್ಲಿ ಮಹಾಬಲಪರಾಕ್ರಮಶಾಲಿಗಳಾಗಿ ಮುಂದೆ ಹೇಳುವಂತೆ ಹುಟ್ಟಿದರು.

**ಅಷ್ಟಾವಿಂಶೇ ಯುಗೇ ಶಸ್ತೌ ದ್ವಾಪರೇಽರ್ಜುನಶೌರಿಣೌ ।**
**ಧರಾಭಾರಾವತಾರಾರ್ಥಂ ಜಾತೌ ಕೃಷ್ಣಾರ್ಜುನೌ ಭುವಿ ॥೧೮॥**

ಮೇಲೆ ಹೇಳಿದ ನರನಾರಾಯಣರೇ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಕೃಷ್ಣಾರ್ಜುನರೆಂದು ಪ್ರಸಿದ್ಧರಾಗಿ ಅವತರಿಸಿದರು. ಈ ಕೃಷ್ಣಾರ್ಜುನರು ಭೂಭಾರ ವನ್ನು ಕಡಮೆಮಾಡುವುದಕ್ಕಾಗಿಯೇ ಭೂಮಿಯಲ್ಲಿ ಹುಟ್ಟಿದರು.

**ಕೃತವಂತೌ ಮಹಾಯುದ್ಧಂ ಕುರುಕ್ಷೇತ್ರೇಽತಿದಾರುಣಂ ।**
**ಏವಂ ಯುಗೇ ಯುಗೇ ರಾಜನ್ನವತಾರಾ ಹರೇಃ ಕಿಲ ॥೧೯॥**

ಆ ಕೃಷ್ಣಾರ್ಜುನರು ಭೂಭಾರವನ್ನು ಇಳಿಸುವುದಕ್ಕಾಗಿ ಕುರುಕ್ಷೇತ್ರದಲ್ಲಿ ಕೌರವರೊಡನೆ ಅತಿಭಯಂಕರವಾದ ಯುದ್ಧವನ್ನು ಮಾಡಿದರು. ಎಲೈ ಜನಮೇ ಜಯರಾಜನೇ, ಈ ಪ್ರಕಾರವಾಗಿ ಪ್ರತಿಯುಗದಲ್ಲಿಯೂ ವಿಷ್ಣುವಿನ ಅವತಾರಗಳು ಆಗಿರುತ್ತವೆ.

**ಭವಂತಿ ಬಹವಃ ಕಾಮಂ ಪ್ರಕೃತೇರನುರೂಪತಃ ।**
**ಪ್ರಕೃತೇರಖಿಲಂ ಸರ್ವಂ ವಶಮೇತಜ್ಜಗತ್ತ್ರಯಂ ॥೨೦॥**

ಈ ಅನೇಕ ಅವತಾರಗಳೂ ಆದಿಕಾರಣಳಾದ ಮಹಾಮಾಯಾಸ್ವರೂಪಳಾದ ಆ ದೇವಿಯ ಇಚ್ಛೆಯಿಂದಲೇ ಆಗಿರುತ್ತವೆ. ಈ ಮೂರು ಲೋಕವೂ ಮತ್ತು ಎಲ್ಲವೂ ಆ ಆದಿಶಕ್ತಿಯ ಅಧೀನವಾಗಿರುತ್ತದೆ.

**ಯಥೇಚ್ಛತಿ ತಥೈವೇಯಂ ಭ್ರಾಮಯತ್ಯನಿಶಂ ಜಗತ್ ।**
**ಪುರುಷಸ್ಯ ಪ್ರಿಯಾರ್ಥಂ ಸಾ ರಚಯತ್ಯಖಿಲಂ ಜಗತ್ ॥೨೧॥**

ಆ ದೇವಿಯು ಹೇಗೆ ಇಚ್ಛಿಸುವಳೋ ಹಾಗೆ ಈ ಜಗತ್ತನ್ನು ಯಾವಾಗಲೂ ನಡೆಸುತ್ತಿರುವಳು. ಅವಳು ಈ ಎಲ್ಲ ಜಗತ್ತನ್ನೂ ಪುರುಷನ ಎಂದರೆ ಪರಮಾತ್ಮನ ಸ್ವಾಭಾವಿಕವಾದ ಕ್ರೀಡಾವಿನೋದಕ್ಕಾಗಿಯೇ ಸೃಷ್ಟಿಸುತ್ತಿರುವಳು.

**ಸೃಷ್ಟ್ವಾತ್ತು ಪುರಾ ಹಿ ಭಗವಾಞ್ಜಗದೇತಚ್ಚರಾಚರಂ ।**
**ಸರ್ವಾದಿಃ ಸರ್ವಗಶ್ಚಾಸೌ ದುರ್ಜ್ಞೇಯಃ ಪರಮೋಽವ್ಯಯಃ ॥೨೨॥**

ಎಲ್ಲಕ್ಕೂ ಮೊದಲನೆಯವನಾದ ಮತ್ತು ಎಲ್ಲವನ್ನೂ ವ್ಯಾಪಿಸಿರುವ, ಅಜ್ಞಾನಿಗಳಿಂದ ತಿಳಿಯಲಸಾಧ್ಯನಾದ, ಎಲ್ಲಕ್ಕಿಂತಲೂ ಉತ್ಕೃಷ್ಟನಾದ, ನಿತ್ಯನಾದ ಆ ಪರಮಾತ್ಮನು ಈ ಮಾಯಾಶಕ್ತಿರೂಪಳಾದ ದೇವಿಯ ದ್ವಾರಾ ಈ ಸ್ಥಾವರ ಜಂಗಮರೂಪವಾದ ಜಗತ್ತೆಲ್ಲವನ್ನೂ ಮೊದಲು ಸೃಷ್ಟಿಸಿ

**ನಿರಾಲಂಬೋ ನಿರಾಕಾರೋ ನಿಃಸ್ಪೃಹಶ್ಚ ಪರಾತ್ಪರಃ ।**
**ಉಪಾಧಿತಸ್ತ್ರಿಧಾ ಭಾತಿ ಯಸ್ಯಾಃ ಸಾ ಪ್ರಕೃತಿಃ ಪರಾ ॥೨೩॥**

ತನಗೆ ಇನ್ನೊಂದು ಆಲಂಬನೆಯನ್ನು ಅಪೇಕ್ಷಿಸದೆ ಇರುವ, ಎಲ್ಲಕ್ಕೂ ತಾನೇ ಆಧಾರನಾದ, ಕರಚರಣಾದ್ಯವಯವರಹಿತನಾದ, ಯಾವ ಇಚ್ಛೆಯೂ ಇಲ್ಲದಿರುವ ಉತ್ಕೃಷ್ಟವಾದ ಮಾಯಾಶಕ್ತಿಗಿಂತಲೂ ಉತ್ಕೃಷ್ಟನಾದ ಆ ಪರಮಾತ್ಮನು, ಸಾತ್ತ್ವಿಕರಾಜಸತಾಮಸಭೇದದಿಂದ ಬ್ರಹ್ಮ ವಿಷ್ಣು ಮಹೇಶ್ವರರೆಂದು ಮೂರು ವಿಧವಾದ ವ್ಯಕ್ತರೂಪಗಳುಳ್ಳವನಾಗಿ ಪ್ರಕಾಶಿಸುವನು. ಈ ವಿಧವಾಗಿ ತೋರ್ಪಡುವ ಪರಮಾತ್ಮನೇ ತನಗೆ ಉಪಾಧಿರೂಪವಾದ ಮಾಯಾಶಬ್ದವಾಚ್ಯಳಾದ ಪರಾಶಕ್ತಿಸ್ವರೂಪಳಾದ ಆ ದೇವಿಯ ಸ್ವರೂಪವಾಗಿರುತ್ತಾನೆ. ಎಂದರೆ ಆ ಪರಮಾತ್ಮನೇ ವ್ಯಾವಹಾರಿಕ ದಶೆಯಲ್ಲಿ ಮಾಯಾಪ್ರಕೃತಿವಾಚ್ಯನಾಗಿರುವನೆಂದು ತಾತ್ಪರ್ಯವು.

**ಉತ್ಪತ್ತಿಕಾಲಯೋಗಾತ್ಸಾ ಭಿನ್ನಾ ಭಾತಿ ಶಿವಾ ತದಾ ।**
**ಸಾ ವಿಶ್ವಂ ಕುರುತೇ ಕಾಮಂ ಸಾ ಪಾಲಯತಿ ಕಾಮದಾ ॥೨೪॥**

ಆ ಆದಿಶಕ್ತಿಯು ಆ ಬ್ರಹ್ಮನಿಗಿಂತಲೂ ಬೇರೆಯವಳೋ ಅಲ್ಲವೋ ಎಂದರೆ, ಅವಳು ಜಗತ್ತನ್ನು ಸೃಷ್ಟಿಸುವ ಕಾಲದಲ್ಲಿ ಬೇರೆಬೇರೆಯಾಗಿ ಆಯಾಯ ಪದಾರ್ಥಗಳ ರೂಪದಿಂದ, ಮಂಗಳಕರಳಾದ ಅವಳೇ ತೋರುವಳು. ಆದರೆ ಶಕ್ತಿರೂಪಳಾದ ಅವಳು ಶಕ್ತಿಮಂತನಾದ ಭಗವಂತನಿಗಿಂತಲೂ ಬೇರೆಯಲ್ಲವು. ಬೆಂಕಿಯಲ್ಲಿರುವ ಸುಡುವ ಶಕ್ತಿಯು ಬೆಂಕಿಗಿಂತಲೂ ಹೇಗೆ ಬೇರೆಯಲ್ಲವೋ ಅದರಂತೆಯೇ ದೇವೀ ಪರಮಾತ್ಮರ ಸಂಬಂಧವು. ಆ ದೇವಿಯೇ ಈ ಜಗತ್ತನ್ನು ಸೃಷ್ಟಿಸುತ್ತಾಳೆ. ಮತ್ತು ಭಕ್ತರಿಗೆ ಇಷ್ಟಾರ್ಥಗಳನ್ನು ಕೊಟ್ಟು ಈ ಜಗತ್ತನ್ನೂ ಧರ್ಮವನ್ನೂ ಪಾಲಿಸುತ್ತಾಳೆ.

**ಕಲ್ಪಾಂತೇ ಸಂಹರತ್ಯೇವ ತ್ರಿರೂಪಾ ವಿಶ್ವಮೋಹಿನೀ ।**
**ತಯಾ ಯುಕ್ತೋಽಸೃಜದ್ಬ್ರಹ್ಮಾ ವಿಷ್ಣುಃ ಪಾತಿ ತಯಾಽನ್ವಿತಃ ॥**

ಮತ್ತು ಪ್ರಳಯಕಾಲದಲ್ಲಿ ಈ ಜಗತ್ತೆಲ್ಲವನ್ನೂ ಆ ದೇವಿಯೇ ಸಂಹರಿಸುವಳು. ಈ ರೀತಿಯಲ್ಲಿ ಆ ದೇವಿಯು ಸೃಷ್ಟಿಸ್ಥಿತಿನಾಶಗಳನ್ನು ಮಾಡತಕ್ಕ ಮೂರು ರೂಪಗಳುಳ್ಳವಳಾಗಿ ಜಗತ್ತನ್ನೇ ತನ್ನ ಮಹಿಮೆಯಿಂದ ಮೋಹಗೊಳಿಸುತ್ತಾಳೆ. ಇಂತಹ ದೇವಿಯಿಂದ ಯುಕ್ತನಾಗಿಯೇ ಬ್ರಹ್ಮನು ಸೃಷ್ಟಿಸುತ್ತಾನೆ. ವಿಷ್ಣುವೂ ಆ ದೇವಿಯಿಂದ ಕೂಡಿಯೇ ಈ ಜಗತ್ತನ್ನು ಪಾಲಿಸುತ್ತಾನೆ.

**ರುದ್ರಃ ಸಂಹರತೇ ಕಾಮಂ ತಯಾ ಸಂಮಿಲಿತಃ ಶಿವಃ ।**

ಅದರಂತೆಯೇ ಮಂಗಳರೂಪನಾದ ರುದ್ರನೂ ಆ ದೇವಿಯಿಂದ ಯುಕ್ತನಾಗಿ ಈ ಜಗತ್ತನ್ನು ಸಂಹರಿಸುತ್ತಾನೆ. ಎಂದರೆ, ಆ ದೇವಿಯೇ ಬ್ರಹ್ಮ ವಿಷ್ಣು ರುದ್ರ ಇವರ ಮೂಲಕ ಸೃಷ್ಟಿಸ್ಥಿತಿನಾಶ ಇವುಗಳನ್ನು ಮಾಡುತ್ತಾಳೆ. ಬ್ರಹ್ಮಾದಿಗಳು ನಿಮಿತ್ತಮಾತ್ರರು ಎಂದರ್ಥವು.

**ಸಾ ಚೈವೋತ್ಪಾದ್ಯ ಕಾಕುತ್ಸ್ಥಂ ಪುರಾ ವೈ ನೃಪಸತ್ತಮಂ ॥೨೭॥**
**ಕುತ್ರಚಿತ್ಸ್ಥಾಪಯಾಮಾಸ ದಾನವಾನಾಂ ಜಯಾಯ ಚ ।**

ಅಲ್ಲದೆ, ಆ ದೇವಿಯು ಹಿಂದೆ ಸೂರ್ಯವಂಶದಲ್ಲಿ ಕಾಕುತ್ಸ್ಥನೆಂಬ ರಾಜೋತ್ತಮನನ್ನು ಸೃಷ್ಟಿಸಿ ಒಂದು ಕಡೆಯಲ್ಲಿ ಎಂದರೆ ಅಯೋಧ್ಯಾನಗರದಲ್ಲಿ, ಸಮಯ ಬಂದಾಗ ರಾಕ್ಷಸರನ್ನು ಜಯಿಸಲು ಅನುಕೂಲವಾಗಲೆಂದು ಪ್ರತಿಷ್ಠಿಸಿದ್ದಳು.

**ಏವಮಸ್ಮಿಂಶ್ಚ ಸಂಸಾರೇ ಸುಖದುಃಖಾನ್ವಿತಾಃ ಕಿಲ ॥೨೭॥**
**ಭವಂತಿ ಪ್ರಾಣಿನಃ ಸರ್ವೇ ವಿಧಿತಂತ್ರನಿಯಂತ್ರಿತಾಃ ॥**

ಮೇಲೆ ಹೇಳಿದಂತೆ ಈ ಪ್ರಪಂಚದ ಸಂಸಾರಲ್ಲಿ ಸಮಸ್ತಪ್ರಾಣಿಗಳೂ ತಮ್ಮ ತಮ್ಮ ಅದೃಷ್ಟಕ್ಕೆ ಒಳಪಟ್ಟು ಸುಖ ಮತ್ತು ದುಃಖಗಳನ್ನು ಅನುಭವಿಸುತ್ತಲಿರುತ್ತವೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**॥ ಷೋಡಶೋಽಧ್ಯಾಯಃ ॥**

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಹದಿನಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಸಪ್ತದಶೋಽಧ್ಯಾಯಃ ||

### ಹದಿನೇಳನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ವಾರಾಂಗನಾಸ್ತ್ವಯಾ ಖ್ಯಾತಾ ನರನಾರಾಯಣಾಶ್ರಮೇ ।**
**ಏಕಂ ನಾರಾಯಣಂ ಶಾಂತಂ ಕಾಮಯಾನಾಃ ಸ್ಮರಾತುರಾಃ ॥೧॥**

ಪ್ರಸಂಗವಶದಿಂದ ಬಂದ ಕಥೆಗಳನ್ನು ಹೇಳಿ ಮುಗಿಸಿ ಮೊದಲು ಪ್ರಾರಂಭಿಸಿದ್ದ ಮುಖ್ಯ ಕಥೆಯನ್ನು ಹೇಳಿ ಮುಂದುವರಿಯಿಸಬೇಕೆಂದು ಜನಮೇಜಯ ರಾಜನು ವ್ಯಾಸಮುನಿಯನ್ನು ಈರೀಯಲ್ಲಿ ಕೇಳುತ್ತಾನೆ—ಓ ವ್ಯಾಸಮುನಿಯೇ ನೀನು ಹಿಂದೆ ಹೇಳಿದ ಆ ನರನಾರಾಯಣರ ಆಶ್ರಮದಲ್ಲಿ ವಾರಾಂಗನೆಯರು ಜಿತೇಂದ್ರಿಯನಾಗಿ, ಶಾಂತನಾಗಿದ್ದ ಆ ನರನಾರಾಯಣರಲ್ಲಿ ಒಬ್ಬನಾದ ನಾರಾಯಣಮುನಿಯನ್ನು ಕಾಮಾತುರರಾಗಿ ಕಾಮಿಸಿದರು ಎಂದು ನೀನು ಹೇಳಿರುವೆ.

**ಶಪ್ತುಕಾಮಸ್ತದಾ ಜಾತೋ ಮುನಿರ್ನಾರಾಯಣಶ್ಚ ತಾಃ ।**
**ನಿವಾರಿತೋ ನರೇಣಾಥ ಭ್ರಾತ್ರಾ ಧರ್ಮವಿದಾ ನೃಪ ॥೨॥**

ಧರ್ಮದ ತಿಳಿವಳಿಕೆಯನ್ನು ಕೊಡುತ್ತಾ ಜನರನ್ನು ಕಾಪಾಡುತ್ತಿರುವ ವ್ಯಾಸನೇ, ಆಗ ಆ ನಾರಾಯಣಮುನಿಯು ಆ ವೇಶ್ಯೆಯರನ್ನು ಶಪಿಸಲು ಉದ್ಯುಕ್ತನಾದುದನ್ನು ನೋಡಿ ಅವನ ಸಹೋದರನಾದ ಮತ್ತು ಧರ್ಮವನ್ನು ಬಲ್ಲ ನರನಿಂದ ತಡೆಯಲ್ಪಟ್ಟನು ಎಂದೂ ನೀನು ಹೇಳಿರುತ್ತೀಯೆ.

**ಕಿಂ ಕೃತಂ ಮುನಿನಾ ತೇನ ವ್ಯಸನೇ ಸಮುಪಸ್ಥಿತೇ ।**
**ತಾಭಿಃ ಸಂಕಲ್ಪಿತೇನಾರ್ಥಕಾಮಾರ್ಥಾಭಿರ್ಭೃಶಂ ಮುನೇ ॥೩॥**

ಓ ವ್ಯಾಸಮುನಿಯೇ, ಹೀಗೆ ಧನ ಮತ್ತು ಕಾಮವೇ ಮುಖ್ಯವಾದ ಪ್ರಯೋಜನಗಳೆಂದು ತಿಳಿದು ಅವುಗಳಲ್ಲೇ ಆಶೆಯುಳ್ಳವರಾಗಿದ್ದ ಆ ವೇಶ್ಯೆಯರಿಂದ ಮನಸ್ಸಿನಲ್ಲಿ ಆಶಿಸಿ ಅವನ್ನು ಪಡೆಯಲು ನಿಶ್ಚಯಿಸಿಕೊಂಡು ಬಂದಿದ್ದ ಆ ಸ್ತ್ರೀಯರ ಉದ್ದೇಶದಿಂದ ವ್ಯಸನವು ಆ ನಾರಾಯಣಋಷಿಗೆ ಬಂದೊದಗಲು, ಆ ನಾರಾಯಣ ಮುನಿಯು ಮುಂದೆ ಏನನ್ನು ಮಾಡಿದನು ?

**ಶಕ್ರೇಣೋತ್ಪಾದಿತಾಭಿಶ್ಚ ಬಹುಪ್ರಾರ್ಥನಯಾ ಪುನಃ ।**
**ಯಾಚಿತೇನ ವಿವಾಹಾರ್ಥಂ ಕಿಂ ಕೃತಂ ತೇನ ಜಿಷ್ಣುನಾ ॥೪॥**

ದೇವೇಂದ್ರನಿಂದ ಉತ್ಪನ್ನರಾದ ಆ ವೇಶ್ಯೆಯರಿಂದ ತಮ್ಮನ್ನು ಮದುವೆ ಮಾಡಿಕೊಳ್ಳಬೇಕೆಂದು ಬಹುಬಗೆಯಾಗಿ ಪ್ರಾರ್ಥಿಸಲ್ಪಟ್ಟ, ಇಂದ್ರಿಯಜಯಶಾಲಿ ಯಾದ ಆ ನಾರಾಯಣಮುನಿಯು ಮುಂದೆ ಏನನ್ನು ಮಾಡಿದನು ?

**ಇತ್ಯೇತಚ್ಛ್ರೋತುಮಿಚ್ಛಾಮಿ ಚರಿತಂ ತಸ್ಯ ಮೋಕ್ಷದಂ ।**
**ನಾರಾಯಣಸ್ಯ ಮೇ ಬ್ರೂಹಿ ವಿಸ್ತರೇಣ ಪಿತಾಮಹ ॥೫॥**

ಇವೆಲ್ಲವನ್ನೂ ಒಳಗೊಂಡಿರುವ ಆ ನಾರಾಯಣಮುನಿಯ ಮೋಕ್ಷಪ್ರದವಾದ ಚರಿತ್ರೆಯನ್ನು ಕೇಳಲು ಇಚ್ಛಿಸುತ್ತೇನೆ. ತಾತನಾದ ಓ ವ್ಯಾಸಮುನಿಯೇ, ಆ ನಾರಾಯಣಮುನಿಯ ಚರಿತ್ರೆಯನ್ನು ವಿಸ್ತಾರವಾಗಿ ನನಗೆ ಹೇಳು.

॥ ವ್ಯಾಸ ಉವಾಚ ॥

**ಶೃಣು ರಾಜನ್ಪ್ರವಕ್ಷ್ಯಾಮಿ ಯಥಾ ತಸ್ಯ ಮಹಾತ್ಮನಃ ।**
**ಧರ್ಮಪುತ್ರಸ್ಯ ಧರ್ಮಜ್ಞ ವಿಸ್ತರೇಣ ವದಾಮಿ ತೇ ॥೬॥**

ವ್ಯಾಸನು ಹೇಳಿದನು—ಧರ್ಮಗಳನ್ನು ಬಲ್ಲವನಾದ ಓ ಜನಮೇಜಯ ಮಹಾರಾಜನೇ, ಧರ್ಮಪುತ್ರನಾದ ಮತ್ತು ದೊಡ್ಡಸ್ವಭಾವದ ಮನಸ್ಸುಳ್ಳ ಆ ನಾರಾಯಣಮುನಿಯ ಚರಿತ್ರೆಯನ್ನು ವಿಸ್ತಾರವಾಗಿ ಹೇಳುತ್ತೇನೆ, ಕೇಳು.

**ಶಪ್ತುಕಾಮುಸ್ತು ಸಂದೃಷ್ಟ್ವೋ ನರೇಣಾಥ ಯದಾ ಹರಿಃ ।**
**ನಾರಿತೋಷಃ ಸ ಸಮಾಶ್ವಾಸ್ಯ ಮುನಿರ್ನಾರಾಯಣಸ್ತದಾ ॥೭॥**

ಯಾವಾಗ ಕಾಮಾತುರರಾಗಿ ನಿರ್ಬಂಧಪಡಿಸಿದ ಆ ವೇಶ್ಯಾಸ್ತ್ರೀಯರನ್ನು ಶಪಿಸಲುದ್ಯುಕ್ತನಾದ ವಿಷ್ಣುವಿನ ಅವತಾರಿಯಾದ ಆ ನಾರಾಯಣಮುನಿಯನ್ನು ಅವನ ಸಹೋದರನಾದ ನರನು ನೋಡಿದನೋ ಆಗ ಅವನು ಆ ನಾರಾಯಣನನ್ನು ಕುರಿತು ಮನಸ್ಸಮಾಧಾನವನ್ನುಂಟುಮಾಡುವ ಮಾತುಗಳನ್ನು ಹೇಳಿ ತಡೆದನು.

**ಶಾಂತಕೋಪಸ್ತದೋವಾಚ ತಾಸ್ತಪಸ್ವೀ ಮಹಾಮುನಿಃ ।**
**ಸ್ಮಿತಪೂರ್ವಮಿದಂ ವಾಕ್ಯಂ ಮಧುರಂ ಧರ್ಮನಂದನಃ ॥೮॥**

ಹೀಗೆ ಸಹೋದರನಿಂದ ಸಮಾಧಾನಗೊಳಿಸಲ್ಪಟ್ಟು, ಕೋಪವಿಳಿದವನಾದ, ಧರ್ಮಪುತ್ರನಾದ ಆ ನಾರಾಯಣಮಹರ್ಷಿಯು ಮಂದಹಾಸಪೂರ್ವಕವಾಗಿ ಆ ಸ್ತ್ರೀಯರನ್ನು ಕುರಿತು ಇಂಪಾದ ಮಾತನ್ನು ಹೀಗೆ ಹೇಳಿದನು.

**ಅಸ್ಮಿಞ್ಜನ್ಮನಿ ಚಾರ್ವಂಗ್ಯಃ ಕೃತಸಂಕಲ್ಪವಾನಹಂ ।**
**ಆವಾಭ್ಯಾಂ ಚ ನ ಕರ್ತವ್ಯಃ ಸರ್ವಥಾ ದಾರಸಂಗ್ರಹಃ ॥೯॥**

ಸುಂದರವಾದ ಅಂಗಗಳುಳ್ಳ ಓ ಸ್ತ್ರೀಯರೇ, ಈ ಜನ್ಮದಲ್ಲಿ ನಾನು ಪ್ರತಿಜ್ಞೆಯನ್ನು ಮಾಡಿರುತ್ತೇನೆ. ಅದೇನೆಂದರೆ, ನಾವಿಬ್ಬರು ಸಹೋದರರೂ ಈ ಜನ್ಮದಲ್ಲಿ ಖಂಡಿತವಾಗಿಯೂ ಮದುವೆಯನ್ನು ಮಾಡಿಕೊಳ್ಳುವುದಿಲ್ಲವೆಂದು. ಆದುದರಿಂದ ನಾವು ಪತ್ನೀಪರಿಗ್ರಹಮಾಡದೇ ಬ್ರಹ್ಮಚರ್ಯವ್ರತದಲ್ಲಿಯೇ ಇರಬೇಕಾಗಿರುತ್ತದೆ.

**ತಸ್ಮಾದ್ಗಚ್ಛಂತು ತ್ರಿದಿವಂ ಕೃಪಾಂ ಕೃತ್ವಾ ಮನೋಪರಿ ।**
**ಧರ್ಮಜ್ಞಾ ನ ಪ್ರಕುರ್ವಂತಿ ವ್ರತಭಂಗಂ ಪರಸ್ಯ ವೈ ॥೧೦॥**

ಆದುದರಿಂದ ಓ ಮಹಿಳೆಯರೇ, ನೀವೀಗ ನನ್ನಲ್ಲಿ ದಯವಿಟ್ಟು ಸ್ವರ್ಗಲೋಕಕ್ಕೆ ಹಿಂತಿರುಗಿ ಹೋಗಿರಿ. ಧರ್ಮವನ್ನು ಬಲ್ಲ ನಿಮ್ಮಂತಹವರು ಇನ್ನೊಬ್ಬರ ವ್ರತದ ಭಂಗವನ್ನು ಮಾಡುವುದಿಲ್ಲವಲ್ಲವೇ.

**ಶೃಂಗಾರೇಽಸ್ಮಿನ್ರಸೇ ನೂನಂ ಸ್ಥಾಯಿಭಾವೋ ರತಿಃಸ್ಮೃತಃ ।**
**ಕಥಂ ಕರೋಮಿ ಸಂಬಂಧಂ ತದಭಾವೇ ಸುಲೋಚನಾಃ ॥೧೧॥**

ಈ ಶೃಂಗಾರರಸದಲ್ಲಿ ಅನುರಾಗವೇ ಮುಖ್ಯವಾಗಿ ನಿಲ್ಲುವ ಭಾವವಾಗಿದೆ. ಆ ಅನುರಾಗವೇ ರತಿಯಾಗಿ ಸ್ಥಾಯಿತ್ವವನ್ನು ಪಡೆದು ರಸವಾಗುತ್ತದೆ. ಅಂತಹ

ಅನುರಾಗವೇ ಇಲ್ಲದ ಮೇಲೆ, ಓ ಮನೋಹರವಾದ ನಯನವುಳ್ಳ ಸುಂದರಿಯರೇ, ನಿಮ್ಮ ಸಂಬಂಧವನ್ನು ನಾನು ಹೇಗೆ ಮಾಡಲಿ? ಪಶುಗಳ ಹಾಗೆ ವರ್ತಿಸುವುದರಿಂದ ಇಹಪರಗಳೆರಡೂ ಕೆಡುತ್ತವೆ. ಇದನ್ನು ನೀವೂ ಒಪ್ಪಲಾರಿರಿ ಎಂದು ಭಾವವು.

**ಕಾರಣೇನ ವಿನಾ ಕಾರ್ಯಂ ನ ಭವೇದಿತಿ ನಿಶ್ಚಯಃ ।**
**ಕವಿಭಿಃ ಕಥಿತಂ ಶಾಸ್ತ್ರೇ ಸ್ಥಾಯಿಭಾವೋ ರಸಃ ಕಿಲ ॥೧೨॥**

ಕಾರಣವಿಲ್ಲದೆ ಯಾವುದೊಂದು ಕಾರ್ಯವೂ ಆಗಲಾರದು. ಶೃಂಗಾರರಸದ ಅನುಭವಕ್ಕೆ ರತಿಯೇ ಮುಖ್ಯವಾದ ಕಾರಣವಾಗಿದೆ. ಅದೇ ನಮ್ಮಲ್ಲಿ ಇಲ್ಲದ ಮೇಲೆ ಅದರ ಕಾರ್ಯವಾದ ಶೃಂಗಾರರಸಸುಖವು ನಿಮಗೆ ಹೇಗೆ ಎಲ್ಲಿಂದ ಬಂದೀತು?

**ಧನ್ಯಃ ಸುಚಾರುಸರ್ವಾಂಗಃ ಸಭಾಗ್ಯೋಽಹಂ ಧರಾತಲೇ ।**
**ಪ್ರೀತಿಪಾತ್ರಂ ಯತೋ ಜಾತೋ ಭವತೀನಾಮಕೃತ್ರಿಮಂ ॥೧೩॥**

ಓ ಸ್ತ್ರೀಯರೇ ನಿಮ್ಮ ಅಕೃತ್ರಿಮವಾದ ಪ್ರೀತಿಗೆ ಪಾತ್ರನಾಗಲು ನಾನು ಸುಂದರವಾದ ಅವಯವಸೌಷ್ಠವವುಳ್ಳವನಾಗಿರುವುದರಿಂದ ಈ ಭೂಮಿಯಲ್ಲಿ ನಾನೇ ಧನ್ಯನು ಮತ್ತು ಭಾಗ್ಯಶಾಲಿಯು ಎಂದು ತಿಳಿಯುತ್ತೇನೆ.

**ಭವತೀಭಿಃ ಕೃಪಾಂ ಕೃತ್ವಾ ರಕ್ಷಣೀಯಂ ವ್ರತಂ ಮಮ ।**
**ಭವಿಷ್ಯಾಮಿ ಮಹಾಭಾಗಾಃ ಪತಿರಪ್ಯನ್ಯಜನ್ಮನಿ ॥೧೪॥**

ನೀವೆಲ್ಲರೂ ದಯವಿಟ್ಟು ನನ್ನ ಈಗಿನ ಬ್ರಹ್ಮಚರ್ಯದ ವ್ರತವನ್ನು ಕಾಪಾಡಬೇಕು. ಎಲೌ ತುಂಬ ಭಾಗ್ಯಶಾಲಿಗಳಾದ ಸ್ತ್ರೀಯರೇ, ಮುಂದಿನ ಜನ್ಮದಲ್ಲಾದರೂ ನೀವು ಅಪೇಕ್ಷಿಸಿದರೆ ನಾನು ನಿಮಗೆ ಪತಿಯಾಗುವೆನು.

**ಅಷ್ಟಾವಿಂಶೇ ವಿಶಾಲಾಕ್ಷ್ಯೋ ದ್ವಾಪರೇಽಸ್ಮಿನ್ ಧರಾತಲೇ ।**
**ದೇವಾನಾಂ ಕಾರ್ಯಸಿದ್ಧ್ಯರ್ಥಂ ಪ್ರಭವಿಷ್ಯಾಮಿ ಸರ್ವಥಾ ॥೧೫॥**

ವಿಶಾಲವಾದ ನಯನಗಳುಳ್ಳ ಓ ಸ್ತ್ರೀಯರೇ, ಮುಂದೆ ಈ ಭೂಲೋಕದಲ್ಲಿ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ, ದೇವತೆಗಳ ಕಾರ್ಯಸಿದ್ಧಿಗಾಗಿ ನಾನು ಖಂಡಿತವಾಗಿ ಅವತಾರಮಾಡುವೆನು.

**ತದಾ ಭವತ್ಯೋ ಮದ್ದಾರಾಃ ಪ್ರಾಪ್ಯ ಜನ್ಮ ಪೃಥಕ್ಪೃಥಕ್ ।**
**ಭೂಪತೀನಾಂ ಸುತಾ ಭೂತ್ವಾ ಪತ್ನೀಭಾವಂ ಗಮಿಷ್ಯಥ ॥೧೬॥**

ಆಗ ನೀವುಗಳೂ ಬೇರೆಬೇರೆಯಾಗಿ ರಾಜರ ಪುತ್ರಿಯರಾಗಿ ಹುಟ್ಟಿ, ನನ್ನ ಪತ್ನಿಯರೂ ಆಗುವಿರಿ.

**ಇತ್ಯಾಶ್ವಾಸ್ಯ ಹರಿಸ್ತಾಸ್ತು ಪ್ರತಿಶ್ರುತ್ಯ ಪರಿಗ್ರಹಂ ।**
**ವ್ಯಸರ್ಜಯತ್ಸ ಭಗವಾಣ್ಣಗ್ಮುಶ್ಚ ವಿಗತಜ್ವರಾಃ ॥೧೭॥**

ಈ ರೀತಿಯಲ್ಲಿ ವಿಷ್ಣುವಿನ ಅವತಾರಿಯಾದ ನಾರಾಯಣಮುನಿಯು ಆ ಸ್ತ್ರೀಯರನ್ನು ಸಮಾಧಾನಮಾಡಿ, ಇನ್ನೊಂದು ಜನ್ಮದಲ್ಲಿ ಅವರುಗಳನ್ನು ಪತ್ನಿಯರನ್ನಾಗಿ ಸ್ವೀಕರಿಸುವೆನೆಂದು ಒಪ್ಪಿಕೊಂಡು ಅವರನ್ನು ಬೀಳ್ಕೊಟ್ಟನು. ಆ ಸ್ತ್ರೀಯರು ಮುನಿಯ ಸಮಾಧಾನಕರವಾದ ಮಾತಿನಿಂದ ಚಿಂತಾರಹಿತರಾಗಿ ನೆಮ್ಮದಿಯಿಂದ ತಮ್ಮ ಸ್ಥಳಕ್ಕೆ ಹಿಂತಿರುಗಿ ಹೊರಟುಹೋದರು. ಅವರೊಡನೆ ತಾನು ಸೃಷ್ಟಿಸಿದ್ದ ಸ್ತ್ರೀಯರನ್ನೂ ಸ್ವರ್ಗಕ್ಕೆ ಕಳುಹಿಸಿಕೊಟ್ಟನು.

**ಏವಂ ವಿಸರ್ಜಿತಾಸ್ತೇನ ಗತಾಃ ಸ್ವರ್ಗಂ ತದಾಂಗನಾಃ ।**
**ಶಕ್ರಾಯ ಕಥಯಾಮಾಸುಃ ಕಾರಣಂ ಸಕಲಂ ಪುನಃ ॥೧೮॥**

ಈ ರೀತಿಯಲ್ಲಿ ನಾರಾಯಣಮುನಿಯಿಂದ ಬೀಳ್ಕೊಂಡವರಾಗಿ ಆ ಅಪ್ಸರಸ್ತ್ರೀಯರು ತಮ್ಮ ವಾಸಸ್ಥಾನವಾದ ಸ್ವರ್ಗಕ್ಕೆ ಹೋದರು. ಅವರು ಅಲ್ಲಿ ಇಂದ್ರನಿಗೆ, ತಮ್ಮನ್ನು ಆ ನಾರಾಯಣಮುನಿಯು ವರಿಸದಿದ್ದುದಕ್ಕೆ ಉಂಟಾದ ಕಾರಣವೆಲ್ಲವನ್ನೂ ಹೇಳಿದರು.

**ಆಶ್ರುತ್ಯ ಮಘವಾಂಸ್ತಾಭ್ಯೋ ವೃತ್ತಾಂತಂ ತಸ್ಯ ವಿಸ್ತರಾತ್ ।**
**ತುಷ್ಟಾವ ತಂ ಮಹಾತ್ಮಾನಂ ನಾರೀರ್ದೃಷ್ಟ್ವಾ ತಥೋರ್ವಶೀಃ ॥**

ಆ ನಾರಾಯಣಮುನಿಯು ಬ್ರಹ್ಮಚರ್ಯದಲ್ಲಿ ಸ್ಥಿರಚಿತ್ತನಾಗಿರುವ ವೃತ್ತಾಂತವನ್ನು ಆ ಸ್ತ್ರೀಯರಿಂದ ವಿಶದವಾಗಿ ಕೇಳಿ, ಇಂದ್ರನು, ಆ ಮಹಾತ್ಮನಾದ ನಾರಾಯಣಮುನಿಯನ್ನು ತುಂಬ ಸ್ತೋತ್ರಮಾಡಿ ಕೊಂಡಾಡಿದನು. ಮತ್ತು ಊರ್ವಶಿಯೇ ಮೊದಲಾದ ಹದಿನಾರು ಸಾವಿರದ ಐವತ್ತು ಜನ ಊರ್ವಶಿಗೆ ಸಮಾನವಾದ ಸೌಂದರ್ಯವುಳ್ಳ ಅಪ್ಸರಸ್ತ್ರೀಯರನ್ನು ನೋಡಿ,

|| ಇಂದ್ರ ಉವಾಚ ||

**ಅಹೋ ಧೈರ್ಯಂ ಮುನೇಃ ಕಾಮಂ ತಥೈವ ಚ ತಪೋಬಲಂ ।**
**ಯೇನೋರ್ವಶ್ಯಃ ಸ್ವತಪಸಾ ತಾದೃಗ್ರೂಪಾಃ ಪ್ರಕಲ್ಪಿತಾಃ ॥೨೦॥**

ಇಂದ್ರನು ಹೇಳಿದನು—ಇದು ತುಂಬ ಆಶ್ಚರ್ಯವು. ಆ ಮುನಿಯ ಜಿತೇಂದ್ರಿಯತ್ವವೂ, ಮತ್ತು ತಪೋಬಲವೂ ಅದ್ಭುತವಾಗಿರುವುದು. ಏಕೆಂದರೆ ಈ ಮುನಿಯು ಊರ್ವಶಿಯೇ ಮೊದಲಾದ ದೇವಸುಂದರಿಯರನ್ನು ಸಹ ಸ್ವೀಕರಿಸದೆ ಅವರನ್ನು ಸ್ವರ್ಗಕ್ಕೆ ಹಿಂತಿರುಗಿ ಕಳುಹಿಸಿರುವನು. ಅಲ್ಲದೆ ಅಂತಹ ಸುಂದರಿಯರನ್ನು ಸೃಷ್ಟಿಸಿದ ಇವನ ಮಹಿಮೆಯು ಆಶ್ಚರ್ಯಕರವಾದುದೇ ಸರಿ.

**ಇತಿ ಸ್ತುತ್ವಾ ಪ್ರಸನ್ನಾತ್ಮಾ ಬಭೂವ ಸುರರಾಟ್ತತಃ ।**
**ನಾರಾಯಣೋಽಪಿ ಧರ್ಮಾತ್ಮಾ ತಪಸ್ಯಾಭಿರತೋಽಭವತ್ ॥೨೧॥**

ಹೀಗೆಂದು ಆ ನಾರಾಯಣಮುನಿಯನ್ನು ತುಂಬ ಹೊಗಳಿ ದೇವರಾಜನಾದ ಆ ಇಂದ್ರನು ಆ ಮುನಿಯ ವಿಷಯದಲ್ಲಿ ತುಂಬ ಸಂತುಷ್ಟವಾದ ಮನಸ್ಸುಳ್ಳವನಾದನು. ಅತ್ತಲಾಗಿ ಬ್ರಹ್ಮಚರ್ಯವ್ರತನಿಷ್ಠನಾದ ಆ ನಾರಾಯಣ ಮುನಿಯು ತಪಸ್ಸಿನಲ್ಲಿ ಆಸಕ್ತನಾದನು.

**ಇತ್ಯೇತತ್ಸರ್ವಮಾಖ್ಯಾತಂ ಮುನೇರ್ವೃತ್ತಾಂತಮದ್ಭುತಂ ।**
**ನಾರಾಯಣಸ್ಯ ಸಕಲಂ ನರಸ್ಯ ಚ ಮಹಾಮುನೇಃ ॥೨೨॥**

ಓ ಜನಮೇಜಯರಾಜನೇ, ಈ ರೀತಿಯಾಗಿ ಆಶ್ಚರ್ಯಕರವಾದ ಆ ನರನಾರಾಯಣಋಷಿಗಳ ವೃತ್ತಾಂತವೆಲ್ಲವನ್ನೂ ನಿನಗೆ ಹೇಳಿದುದಾಯಿತು.

**ತೌ ಹಿ ಕೃಷ್ಣಾರ್ಜುನೌ ವೀರೌ ಭೂಭಾರಹರಣಾಯ ಚ ।**
**ಜಾತೌ ತೌ ಭರತಶ್ರೇಷ್ಠ ಭೃಗೋಃ ಶಾಪವಶಾದಿಹ ॥೨೩॥**

ಭರತವಂಶದಲ್ಲಿ ಶ್ರೇಷ್ಠನಾದ ಓ ಜನಮೇಜಯರಾಜನೇ, ಆ ನರನಾರಾಯಣರೇ ಭೃಗುಮಹರ್ಷಿಯ ಶಾಪದಿಂದ ಭೂಮಿಯ ಭಾರವನ್ನಿಳಿಸುವುದಕ್ಕಾಗಿ ತಿರುಗಿ ಕೃಷ್ಣ ಮತ್ತು ಅರ್ಜುನರಾಗಿ ಅವತರಿಸಿದರು. ಅವರಲ್ಲಿ ಅರ್ಜುನನು ನರನ ಅವತಾರವು. ಕೃಷ್ಣನು ನಾರಾಯಣನ ಅವತಾರವು.

|| ರಾಜೋವಾಚ ||

**ಕೃಷ್ಣಾವತಾರಚರಿತಂ ವಿಸ್ತರೇಣ ವದಸ್ವ ಮೇ ।**
**ಸಂದೇಹೋ ಮಮ ಚಿತ್ತೇಽಸ್ತಿ ತಂ ನಿವಾರಯ ಮಾನದ ||೨೪||**

ಜನಮೇಜಯರಾಜನು ಹೇಳಿದನು—ಓ ಗೌರವಶಾಲಿಯಾದ ವ್ಯಾಸನೇ, ಕೃಷ್ಣಾವತಾರದ ಚರಿತ್ರೆಯನ್ನು ನನಗೆ ವಿಸ್ತಾರವಾಗಿ ಹೇಳು. ಮುಂದೆ ಹೇಳುವಂತೆ ನನಗೆ ಅನೇಕಬಗೆಯ ಸಂದೇಹವಿರುತ್ತದೆ. ಆ ನನ್ನ ಸಂದೇಹವನ್ನು ನಿವಾರಣೆಮಾಡು.

**ಯಯೋಃ ಪುತ್ರತ್ವಮಾಪನ್ನೌ ಹರ್ಯನಂತೌ ಮಹಾಬಲೌ ।**
**ದೇವಕೀವಸುದೇವೌ ತೌ ದುಃಖಭಾಜೌ ಕಥಂ ಮುನೇ ||೨೫||**

ಓ ಮುನಿಯೇ ತುಂಬ ಬಲಿಷ್ಠರಾದ ವಿಷ್ಣು ಮತ್ತು ಆದಿಶೇಷರು ಯಾವ ದೇವಕೀವಸುದೇವರ ಪುತ್ರರಾದರೋ ಅಂತಹ ಪುಣ್ಯಶಾಲಿಗಳಾದ ಆ ವಸುದೇವ ದೇವಕಿಯರು ಯಾವ ಕಾರಣದಿಂದ ಅಂತಹ ದುಃಖವನ್ನು ಪಡೆದರು? ಅದನ್ನು ಹೇಳು.

**ಕಂಸೇನ ನಿಗಡೇ ಬದ್ಧೌ ಪೀಡಿತೌ ಬಹುವತ್ಸರಾನ್ ।**
**ಯಯೋಃ ಪುತ್ರೋ ಹರಿಃ ಸಾಕ್ಷಾತ್ತಪಸಾ ತೋಷಿತೋಽಭವತ್ ॥**

ಯಾರ ತಪಸ್ಸಿನಿಂದ ಸಂತುಷ್ಟನಾಗಿ ಸಾಕ್ಷಾನ್ನಾರಾಯಣನೂ ಸಹ ಅವರ ಪುತ್ರನಾಗಿ ಅವತರಿಸುವಂತೆ ಅನುಗ್ರಹಿಸಿದನೋ ಅಂತಹ ದೇವಕೀವಸುದೇವರೇ ನೀಚನಾದ ಕಂಸನಿಂದ ಅನೇಕವರ್ಷಗಳ ವರೆಗೆ ಸೆರೆಮನೆಯಲ್ಲಿ ಏಕೆ ಬಂಧಿಸಲ್ಪಟ್ಟಿದ್ದರು?

**ಜಾತೋಽಸೌ ಮಧುರಾಯಾಂ ತು ಗೋಕುಲೇ ಸ ಕಥಂ ಗತಃ ।**
**ಕಂಸಂ ಹತ್ವಾ ದ್ವಾರವತ್ಯಾಂ ನಿವಾಸಂ ಕೃತವಾನ್ಕಥಂ ||೨೭||**

ಅಲ್ಲದೆ ವಿಷ್ಣುವಿನ ಅವತಾರಪುರುಷನಾದ ಆ ಶ್ರೀಕೃಷ್ಣನು ಹುಟ್ಟಿದುದು ಮಧುರೆಯಲ್ಲಿ. ಅವನು ಗೋಕುಲಕ್ಕೆ ಹೋದ ಬಗೆ ಹೇಗೆ? ಮತ್ತು ನೀಚನಾದ ಕಂಸನನ್ನು ಕೊಂದ ಮೇಲೆ ಮುಂದೆ ದ್ವಾರಕಿಯಲ್ಲಿ ಏಕೆ ವಾಸಮಾಡಿದನು?

**ಪಿತ್ರಾದಿಸೇವಿತಂ ದೇಶಂ ಸಮೃದ್ಧಂ ಪಾವನಂ ಕಿಲ ।**
**ತ್ಯಕ್ತ್ವಾ ದೇಶಾಂತರೇಽನಾರ್ಯೇ ಗತವಾನ್ಸ ಕಥಂ ಹರಿಃ ॥೨೮॥**

ತನ್ನ ತಂದೆತಾಯಿಗಳ ದೇಶವಾದ, ಪವಿತ್ರವೂ ಸಕಲಸಂಪತ್ಸಮೃದ್ಧವೂ ಆದ ಮಧುರೆಯನ್ನು ಬಿಟ್ಟು ಯೋಗ್ಯರಿಗೆ ವಾಸಮಾಡಲು ಅನರ್ಹವಾದ ಬೇರೆ ದೇಶಕ್ಕೆ ಏತಕ್ಕಾಗಿ ಆ ಕೃಷ್ಣನು ಹೊರಟುಹೋದನು ?

**ಕುಲಂ ಚ ದ್ವಿಜಶಾಪೇನ ಕಥಮುತ್ಸಾದಿತಂ ಹರೇಃ ।**
**ಭಾರಾವತರಣಂ ಕೃತ್ವಾ ವಾಸುದೇವಃ ಸನಾತನಃ ॥೨೯॥**

ಓರ್ವ ಬ್ರಾಹ್ಮಣನ ಶಾಪದಿಂದ ಆ ಕೃಷ್ಣನ ಯಾದವವಂಶವು ಏಕೆ ನಷ್ಟವಾಯಿತು ? ಅಲ್ಲದೆ ಪುರಾಣಪುರುಷನಾದ ಆ ಕೃಷ್ಣನು ಭೂಮಿಯ ಭಾರವನ್ನು ಇಳಿಸಿ,

**ದೇಹಂ ಮುಮೋಚ ತರಸಾ ಜಗಾಮ ಚ ದಿವಂ ಹರಿಃ ।**
**ಪಾಪಿಷ್ಠಾನಾಂ ಚ ಭಾರೇಣ ವ್ಯಾಕುಲಾಽಭೂಚ್ಚ ಮೇದಿನೀ ॥೩೦॥**

ಕೂಡಲೇ ಅವನು ತನ್ನ ಶರೀರವನ್ನು ಬಿಟ್ಟು ವೈಕುಂಠಕ್ಕೆ ತೆರಳಿದನು. ದುಷ್ಟರಾದ ಪಾಪಿಗಳ ಭಾರದಿಂದ ಭೂಮಿಯು ತುಂಬ ದುಃಖಿತವಾಗಿದ್ದಿತು.

**ತೇ ಹತಾ ವಾಸುದೇವೇನ ಪಾರ್ಥೇನಾಮಿತಕರ್ಮಣಾ ।**
**ಲುಂಠಿತಾ ಯೈರ್ಹರೇಃ ಪತ್ನ್ಯಸ್ತೇ ಕಥಂ ನ ನಿಪಾತಿತಾಃ ॥೩೧॥**

ಅಂತಹ ಪಾಪಿಗಳೆಲ್ಲರನ್ನೂ ಕೃಷ್ಣನೂ ತುಂಬ ಪರಾಕ್ರಮಿಯಾದ, ಅತಿಶಯ ಕಾರ್ಯಗಳನ್ನು ನೆರವೇರಿಸಬಲ್ಲ ಅರ್ಜುನನೂ ನಾಶಮಾಡಿದರು. ಆದರೂ ಕೊನೆಯಲ್ಲಿ ದ್ವಾರಕೆಯಿಂದ ಶ್ರೀಕೃಷ್ಣನ ಪತ್ನಿಯರನ್ನು ಅರ್ಜುನನು ಕರೆದುಕೊಂಡು ಬರುತ್ತಿರಲು ಮಧ್ಯೆ ಕೆಲವು ನಿಷಾದರು ಆ ಸ್ತ್ರೀಯರನ್ನು ಅಪಹರಿಸಿದರು. ಆ ದುಷ್ಟರನ್ನು ಏಕೆ ಕೊಲ್ಲಲಾಗಲಿಲ್ಲ ? ಅವರು ಭೂಮಿಯಲ್ಲಿ ಭಾರವಾಗಿರಲಿಲ್ಲವೇ ?

**ಭೀಷ್ಮೋ ದ್ರೋಣಸ್ತಥಾ ಕರ್ಣೋ ಬಾಹ್ಲೀಕೋಽಪ್ಯಥ ಪಾರ್ಥಿವಃ ।**
**ವೈರಾಟೋಽಥ ವಿಕರ್ಣಶ್ಚ ಧೃಷ್ಟದ್ಯುಮ್ನಶ್ಚ ಪಾರ್ಥಿವಃ ॥೩೨॥**

ಸೋಮದತ್ತಾದಯಃ ಸರ್ವೇ ನಿಹತಾಃ ಸಮರೇ ನೃಪ ।
ತೇಷಾಮುತ್ತಾರಿತೋ ಭಾರಶ್ಚೌರಾಣಾಂ ನ ಹೃತಃ ಕಥಂ ॥೩೩॥

ಭೀಷ್ಮನೂ, ದ್ರೋಣಾಚಾರ್ಯನೂ, ಕರ್ಣನೂ, ಬಾಹ್ಲೀಕರಾಜನೂ, ವಿರಾಟ ಪುತ್ರನಾದ ಉತ್ತರನೂ ವಿಕರ್ಣನೂ, ದ್ರುಪದನ ಪುತ್ರನಾದ ಧೃಷ್ಟದ್ಯುಮ್ನನೂ ಸೋಮದತ್ತನು ಇವರೇ ಮುಂತಾದವರು ಒಳ್ಳೆಯ ನಡೆವಳಿಕೆಯುಳ್ಳವರಾಗಿದ್ದರೂ ಯುದ್ಧದಲ್ಲಿ ಕೊಲ್ಲಲ್ಪಟ್ಟರು. ಇಂತಹ ಉತ್ತಮಪುರುಷರನ್ನು ಸಂಹಾರಮಾಡಿ ಭೂಭಾರವನ್ನು ನಿವಾರಣೆಮಾಡಿರುವಲ್ಲಿ, ಕೃಷ್ಣನ ಪತ್ನಿಯರನ್ನು ಅಪಹರಿಸಿದ ಕಳ್ಳರನ್ನು ನಿಗ್ರಹಿಸಿ ಭೂಭಾರವನ್ನು ಏಕೆ ಇಳಿಸಲಿಲ್ಲವು?

ಕೃಷ್ಣಪತ್ನ್ಯಃ ಕಥಂ ದುಃಖಂ ಪ್ರಾಪ್ತಾಃ ಪ್ರಾಂತೇ ಪತಿವ್ರತಾಃ ।
ಸಂದೇಹೋಽಯಂ ಮುನಿಶ್ರೇಷ್ಠ ಚಿತ್ತೇ ಮೇ ಪರಿವರ್ತತೇ ॥೩೪॥

ಕೊನೆಯಲ್ಲಿ ಪತಿವ್ರತೆಯರಾದ ಆ ಕೃಷ್ಣನ ಪತ್ನಿಯರು ಕಳ್ಳರ ಕೈಗೆ ಸಿಕ್ಕು ವಂತಹ ದುಃಖವನ್ನು ಏಕೆ ಪಡೆದರು? ಈ ವಿಧವಾದ ಸಂದೇಹವು ನನ್ನ ಮನಸ್ಸಿನಲ್ಲಿ ಸುಳಿದಾಡುತ್ತಿದೆ.

ವಸುದೇವಸ್ತು ಧರ್ಮಾತ್ಮಾ ಪುತ್ರದುಃಖೇನ ತಾಪಿತಃ ।
ತ್ಯಕ್ತವಾನ್ ಸ ಕಥಂ ಪ್ರಾಣಾನಪಮೃತ್ಯುಂ ಜಗಾಮ ಹ ॥೩೫॥

ಧರ್ಮಪರನಾದ ವಸುದೇವನೂ ಸಹ ತನ್ನ ಪುತ್ರರ ಮರಣದಿಂದುಂಟಾದ ದುಃಖದಿಂದ ಕಂಗೆಟ್ಟು, ಧರ್ಮವನ್ನು ತಿಳಿದವನಾದರೂ, ದುರ್ಮರಣವಾದ ಆತ್ಮಹತ್ಯೆಯಿಂದ ಏಕೆ ಪ್ರಾಣವನ್ನು ಬಿಟ್ಟನು?

ಪಾಂಡವಾ ಧರ್ಮಸಂಯುಕ್ತಾಃ ಕೃಷ್ಣೇ ಚ ನಿರತಾಃ ಸದಾ ।
ತೇ ಕಥಂ ದುಃಖಭೋಕ್ತಾರೋ ಹ್ಯಭವನ್ಮುನಿಸತ್ತಮ ॥೩೬॥

ಓ ಮುನಿಶ್ರೇಷ್ಠನಾದ ವ್ಯಾಸನೇ, ತುಂಬ ಧರ್ಮಪರರಾದ ಆ ಪಾಂಡವರು ಕೃಷ್ಣನಲ್ಲಿ ಯಾವಾಗಲೂ ಭಕ್ತಿಯುಳ್ಳವರಾಗಿದ್ದರೂ ಅದೇಕೆ ಅನೇಕ ದುಃಖಗಳನ್ನು ಅನುಭವಿಸಿದರು?

ದ್ರೌಪದೀ ಚ ಮಹಾಭಾಗಾ ಕಥಂ ದುಃಖಸ್ಯ ಭಾಗಿನೀ ।
ವೇದೀಮಧ್ಯಾಚ್ಚ ಸಂಜಾತಾ ಲಕ್ಷ್ಮ್ಯಂಶಸಂಭವಾ ಕಿಲ ॥೩೭॥

ಯಜ್ಞಕುಂಡದಿಂದ ಉತ್ಪನ್ನಳಾದ, ಪೂಜ್ಯಳಾದ ದ್ರೌಪದಿಯು ಲಕ್ಷ್ಮಿಯ ಅಂಶದಿಂದ ಹುಟ್ಟಿದ್ದರೂ, ವನವಾಸ ಮೊದಲಾದ ಅನೇಕ ಬಗೆಯ ದುಃಖಗಳಿಗೆ ಹೇಗೆ ಪಾತ್ರಳಾದಳು ?

ಸಭಾಯಾಂ ಚ ಸಮಾನೀತಾ ರಜೋದೋಷಸಮನ್ವಿತಾ ।
ಬಾಲಾ ದುಃಶಾಸನೇನಾಥ ಕೇಶಗ್ರಹಣಕರ್ಶಿತಾ ॥೩೮॥

ಅಲ್ಲದೆ ಬಹಿಷ್ಠೆಯಾಗಿದ್ದರೂ ಆ ಯುವತಿಯಾದ ದ್ರೌಪದಿಯನ್ನು ನೀಚನಾದ ದುಃಶಾಸನನು ಮುಂದಲೆಯನ್ನು ಹಿಡಿದು ಬಲಾತ್ಕಾರವಾಗಿ ತುಂಬಿದ ಸಭೆಗೆ ಎಳೆದುಕೊಂಡು ಬಂದನು.

ಪೀಡಿತಾ ಸಿಂಧುರಾಜ್ಞಾಽಥ ವನಮಧ್ಯಗತಾ ಸತೀ ।
ತಥೈವ ಕೀಚಕೇನಾಪಿ ಪೀಡಿತಾ ರುದತೀಭೃಶಂ ॥೩೯॥

ಮತ್ತು ಕಾಡಿನಲ್ಲಿರುವಾಗಲೂ, ಸಿಂಧುದೇಶದ ರಾಜನಾದ ಜಯದ್ರಥನು ಪತಿವ್ರತೆಯಾದ ಆ ದ್ರೌಪದಿಯನ್ನು ಪೀಡಿಸಿದನು. ಹಾಗೆಯೇ ಅಜ್ಞಾತವಾಸದಲ್ಲಿ ವಿರಾಟನ ಮನೆಯಲ್ಲಿ ವಾಸಿಸುತ್ತಿರುವಾಗ ಕೀಚಕನು ಅಳುತ್ತಲಿರುವ ಆ ದ್ರೌಪದಿಯನ್ನು ತುಂಬ ಹಿಂಸೆಗೊಳಿಸಿದನು.

ಪುತ್ರಾಃ ಪಂಚೈವ ತಸ್ಯಾಸ್ತು ನಿಹತಾ ದ್ರೌಣಿನಾ ಗೃಹೇ ।
ಸುಭದ್ರಾಯಾಃ ಸುತೋ ಯುದ್ಧೇ ಬಾಲ ಏವ ನಿಪಾತಿತಃ ॥೪೦॥

ಅಲ್ಲದೆ, ಆ ದ್ರೌಪದಿಯ ಐವರು ಮಕ್ಕಳೂ ಮನೆಯಲ್ಲಿ ರಾತ್ರೆ ಮಲಗಿರುವಾಗ ದ್ರೋಣನ ಮಗನಾದ ಅಶ್ವತ್ಥಾಮನಿಂದ ಕೊಲ್ಲಲ್ಪಟ್ಟರು. ಸುಭದ್ರೆಯ ಮಗನಾದ, ಇನ್ನೂ ಬಾಲಕನಾದ ಅಭಿಮನ್ಯುವೂ ಯುದ್ಧದಲ್ಲಿ ಶತ್ರುಗಳಿಂದ ಸಂಹರಿಸಲ್ಪಟ್ಟನು.

ತಥಾ ಚ ದೇವಕೀಪುತ್ರಾಃ ಷಟ್ ಕಂಸೇನ ನಿಷೂದಿತಾಃ ।
ಸಮರ್ಥೇನಾಪಿ ಹರಿಣಾ ದೈವಂ ನ ಕೃತಮನ್ಯಥಾ ॥೪೧॥

ಅದರಂತೆ ದೇವಕಿಯ ಆರು ಮಕ್ಕಳೂ ನೀಚನಾದ ಕಂಸನಿಂದ ಹುಟ್ಟಿದ ಒಡನೆಯೇ ಕೊಲ್ಲಲ್ಪಟ್ಟರು. ಅದೃಷ್ಟವನ್ನು ಅನ್ಯಥಾಮಾಡಲು ಸಾಮರ್ಥ್ಯವಿದ್ದರೂ ಶ್ರೀಕೃಷ್ಣನು ಏನನ್ನೂ ಮಾಡಲಿಲ್ಲವು.

**ಯಾದವಾನಾಂ ತಥಾ ಶಾಪಃ ಪ್ರಭಾಸೇ ನಿಧನಂ ಪುನಃ ।**
**ಕುಲಕ್ಷಯಸ್ತಥಾ ತೀವ್ರಸ್ತತ್ಪತ್ನೀನಾಂ ಚ ಲುಂಠನಂ ॥೪೨॥**

ಮತ್ತು ಯಾದವರಿಗೆಲ್ಲಾ ಕುಲಸಹಿತವಾಗಿ ನಾಶವಾಗುವಂತೆ ವಿಪ್ರಶಾಪವು ಬಂದಿತು. ಅದರಂತೆ ಪ್ರಭಾಸವೆಂಬ ಯಮುನೆಯ ತೀರ್ಥಪ್ರದೇಶದಲ್ಲಿ ಅವರು ಪರಸ್ಪರವಾಗಿ ಹೊಡೆದಾಡಿ ನಾಶವಾದರು. ಅದರಿಂದ ಯಾದವರ ಕುಲವೆಲ್ಲವೂ ನಾಶವಾಯಿತು. ಮುಂದೆ ಅರ್ಜುನನು ಕೃಷ್ಣನ ಪತ್ನಿಯರೆಲ್ಲರನ್ನೂ ಕರೆದು ಕೊಂಡುಹೋಗುತ್ತಿರುವಾಗ ಕಳ್ಳರು ಅವರನ್ನು ಮುತ್ತಿ ಅವಮಾನಗೊಳಿಸಿ ಅಪ ಹರಿಸಿದರು.

**ವಿಷ್ಣುನಾ ಚೇಶ್ವರೇಣಾಪಿ ಸಾಕ್ಷಾನ್ನಾರಾಯಣೇನ ಚ ।**
**ಉಗ್ರಸೇನಸ್ಯ ಸೇವಾ ವೈ ದಾಸವತ್ಸತತಂ ಕೃತಾ ॥೪೩॥**

ಸಮಸ್ತಜಗತ್ತಿಗೆ ಒಡೆಯನಾಗಿಯೂ, ವಿಷ್ಣುವಿನ ಸಾಕ್ಷಾದವತಾರಿಯಾ ಗಿಯೂ ಇದ್ದ ಶ್ರೀಕೃಷ್ಣನೂ ಸೇವಕನಂತೆ ತನ್ನ ಅಜ್ಜನಾದ ಉಗ್ರಸೇನರಾಜನ ಸೇವೆಯನ್ನು ಸದಾ ಮಾಡುತ್ತಲಿದ್ದನು.

**ಸಂದೇಹೋಽಯಂ ಮಹಾಭಾಗ ತತ್ರ ನಾರಾಯಣೇ ಮುನೌ ।**
**ಸರ್ವಜಂತುಸಮಾನತ್ವಂ ವ್ಯವಹಾರೇ ನಿರಂತರಂ ॥೪೪॥**

ಅಲ್ಲದೆ, ಹಿಂದೆ ಹೇಳಿದ ನಾರಾಯಣಮುನಿಯ ವಿಷಯದಲ್ಲಿ ಈ ಸಂದೇಹ ವಿರುತ್ತದೆ. ಅದೇನೆಂದರೆ, ಸರ್ವಜಗತ್ತಿಗೊಡೆಯನಾದ ವಿಷ್ಣುವಿನ ಅವತಾರಿಯಾದ ಆ ಮುನಿಯು ಎಲ್ಲ ಪ್ರಾಣಿಗಳಲ್ಲಿಯೂ ಒಂದೇ ತೆರನಾದ ದೃಷ್ಟಿಯನ್ನೂ ವ್ಯವಹಾರ ವನ್ನೂ ಹೇಗೆ ಇಟ್ಟುಕೊಂಡಿದ್ದನು?

**ಹರ್ಷಶೋಕಾದಯೋ ಭಾವಾಃ ಸರ್ವೇಷಾಂ ಸದೃಶಾಃ ಕಥಂ ।**
**ಈಶ್ವರಸ್ಯ ಹರೇರ್ಜಾತಾ ಕಥಮುಷ್ಯನ್ಯಥಾ ಗತಿಃ ॥೪೫॥**

ಸಂತೋಷ ದುಃಖ ಮೊದಲಾದ ಎಲ್ಲ ಭಾವಗಳು ಎಲ್ಲರಲ್ಲಿಯೂ ಒಂದೇ ತೆರನಾಗಿರುವುದೆಂತು ? ಸರ್ವರಿಗೂ ಒಡೆಯನಾದ ನಾರಾಯಣನಿಗೆ ಇದಕ್ಕೆ ವಿರುದ್ಧವಾಗಿ ಸರ್ವರಲ್ಲಿಯೂ ಸಮಾನಭಾವವು ಅದು ಹೇಗೆ ಆಯಿತು ?

**ತಸ್ಮಾದ್ವಿಸ್ತರತೋ ಬ್ರೂಹಿ ಕೃಷ್ಣಸ್ಯ ಚರಿತಂ ಮಹತ್ ।**
**ಅಲೌಕಿಕೇನ ಹರಿಣಾ ಕೃತಂ ಕರ್ಮ ಮಹೀತಲೇ ॥೪೬॥**

ಈ ಎಲ್ಲ ಸಂದೇಹಗಳೂ ಇರುವುದರಿಂದ ಅದರ ನಿವಾರಣೆಗಾಗಿ ಶ್ರೀಕೃಷ್ಣನ ಚರಿತ್ರೆಯನ್ನು ಹೇಳು. ಓ ವ್ಯಾಸಮುನಿಯೇ, ಮಹಾತ್ಮನಾದ ಆ ವಿಷ್ಣುವಿನಿಂದ ಭೂಲೋಕದಲ್ಲಿ ಯಾವ ಯಾವ ದೊಡ್ಡಕಾರ್ಯಗಳು ಮಾಡಲ್ಪಟ್ಟವೋ ಅವುಗಳನ್ನೆಲ್ಲಾ ವಿಸ್ತಾರವಾಗಿ ನನಗೆ ಹೇಳು.

**ಹತಾ ಆಯುಃಕ್ಷಯೇ ದೈತ್ಯಾಃ ಕ್ಲೇಶೇನ ಮಹತಾ ಪುನಃ ।**
**ಕ್ವೈಶ್ವರ್ಯಶಕ್ತಿಃ ಪ್ರಥಿತಾ ಹರಿಣಾ ಮುನಿಸತ್ತಮ ॥೪೭॥**

ಓ ಋಷಿಶ್ರೇಷ್ಠನಾದ ವ್ಯಾಸಮುನಿಯೇ, ಅಲ್ಲದೆ ಆ ಶ್ರೀಕೃಷ್ಣನು, ಭೂಭಾರವನ್ನಿಳಿಸುವುದಕ್ಕಾಗಿ ರಾಕ್ಷಸರನ್ನೆಲ್ಲ ಕೊಂದನು. ಆದರೆ ಆ ರಾಕ್ಷಸರ ಆಯುಸ್ಸು ತೀರಿದ ಮೇಲೆಯೇ ಅವರನ್ನು ತುಂಬಾ ಪ್ರಯತ್ನಪಟ್ಟು ಕೊಂದಿರುತ್ತಾನೆ. ಹೀಗೆ ಅವರವರ ಆಯುಸ್ಸು ತೀರಿದ ಮೇಲೆ ತಾನಾಗಿಯೇ ನಾಶವಾಗತಕ್ಕ ಆ ದುಷ್ಟರನ್ನು ಕೊಂದುದರಿಂದ ಈಶ್ವರೀಶಕ್ತಿಯು ಅದೆಂತು ಪ್ರಸಿದ್ಧವಾದಂತಾಯಿತು ?

**ರುಕ್ಮಿಣೀಹರಣೇ ನೂನಂ ಗೃಹೀತ್ವಾಥ ಪಲಾಯನಂ ।**
**ಕೃತಂ ಹಿ ವಾಸುದೇವೇನ ಚೌರವಚ್ಚರಿತಂ ತದಾ ॥೪೮॥**

ರುಕ್ಮಿಣೀದೇವಿಯನ್ನು ಅಪಹರಿಸುವಾಗ, ಕೈಗೆ ಸಿಕ್ಕಿದುದನ್ನು ಕದ್ದುಕೊಂಡು ಓಡಿಹೋಗುವ ಕಳ್ಳನಂತೆ ಕೃಷ್ಣನೂ ಆ ರುಕ್ಮಿಣಿಯನ್ನು ಅಪಹರಿಸಿಕೊಂಡು ಹೋಗಿ ಕಳ್ಳನಂತೆಯೇ ಆಚರಿಸಿದನಷ್ಟೆ ?

**ಮಧುರಾಮಂಡಲಂ ತ್ಯಕ್ತ್ವಾ ಸಮೃದ್ಧಂ ಕುಲಸಂಮತಂ ।**
**ಜರಾಸಂಧಭಯಾತ್ತೇನ ದ್ವಾರಕಾಗಮನಂ ಕೃತಂ ॥೪೯॥**

ಮತ್ತು ಆ ಕೃಷ್ಣನು ಜರಾಸಂಧನ ಹೆದರಿಕೆಯಿಂದ, ಸರ್ವಸಂಪತ್ತಿನಿಂದ ಕೂಡಿ ತನ್ನ ಕುಲಪರಂಪರೆಯಿಂದ ಬಂದ ಮಧುರೆಯ ರಾಜ್ಯವನ್ನು ಬಿಟ್ಟು ಸಮುದ್ರಮಧ್ಯದಲ್ಲಿರುವ ದ್ವಾರಕೆಗೆ ಹೋಗಿ ವಾಸಮಾಡಿದನು.

ತದಾ ಕೇನಾಪಿ ನ ಜ್ಞಾತೋ ಭಗವಾನ್ ಹರಿರೀಶ್ವರಃ ।
ಕಿಂಚಿತ್ಪ್ರಬ್ರೂಹಿ ಮೇ ಬ್ರಹ್ಮನ್ಕಾರಣಂ ವ್ರಜಗೋಪನಂ ॥೫೦॥

ಆಗ ಮಧುರೆಯನ್ನು ಬಿಟ್ಟು ದ್ವಾರಕೆಗೆ ಹೋಗುವಾಗ ಆ ಕೃಷ್ಣನು ಜಗತ್ತಿಗೆ ಒಡೆಯನಾಗಿಯೂ ಪೂಜ್ಯನಾಗಿಯೂ ಇದ್ದರೂ, ಅವನು ಮಧುರಾಪಟ್ಟಣವನ್ನು ಬಿಟ್ಟು ದ್ವಾರಕೆಗೆ ಹೋದ ಸಮಾಚಾರವು ಶತ್ರುಗಳಿಗಾಗಲೀ ಇತರರಿಗಾಗಲೀ ತಿಳಿಯಲೇ ಇಲ್ಲ. ಈರೀತಿ ಗೋಪ್ಯವಾಗಿ ಹೊರಟು ತನ್ನ ಬಂಧುಸಮೂಹವನ್ನು ರಕ್ಷಿಸಲು ಕಾರಣವೇನು ? ತನ್ನ ಶತ್ರುಗಳನ್ನು ಎದುರಿಸಿ ಯುದ್ಧಮಾಡಿ ಅವರನ್ನು ಜಯಿಸಿ ತನ್ನ ಬಂಧುವರ್ಗದವರನ್ನು ಕಾಪಾಡಲು ಆ ಜಗದೊಡೆಯನಿಗೆ ಸಾಮರ್ಥ್ಯ ವಿರಲಿಲ್ಲವೇ ? ಇದನ್ನು ನನಗೆ ಸ್ವಲ್ಪ ವಿಶದವಾಗಿ ತಿಳಿಸು.

ಏತೇ ಚಾನ್ಯೇ ಚ ಬಹವಃ ಸಂದೇಹಾ ವಾಸವೀಸುತ ।
ನಾಶಯಾದ್ಯ ಮಹಾಭಾಗ ಸರ್ವಜ್ಞೋಽಸಿ ದ್ವಿಜೋತ್ತಮ ॥೫೧॥

ಓ ವ್ಯಾಸಮುನಿಯೇ, ಇವೇ ಮೊದಲಾದ ಹಲವು ಬಗೆಯ ಸಂದೇಹಗಳು ನನಗೆ ಉಂಟಾಗಿರುತ್ತವೆ. ಬ್ರಾಹ್ಮಣಶ್ರೇಷ್ಠನಾದ ಓ ಪೂಜ್ಯನೇ ನೀನು ಎಲ್ಲವನ್ನೂ ಬಲ್ಲವನಾಗಿರುತ್ತೀಯೆ. ಆದುದರಿಂದ ಈ ನನ್ನ ಸಂಶಯಗಳೆಲ್ಲವನ್ನೂ ಈಗ ಪರಿಹಾರಮಾಡು.

ಗೋಪ್ಯಸ್ತ್ವೇಕಃ ಸಂದೇಹೋ ಹೃದಯಾನ್ನ ನಿವರ್ತತೇ ।
ಪಾಂಚಾಲ್ಯಾಃ ಪಂಚಭರ್ತೃತ್ವಂ ಲೋಕೇ ಕಿಂನ ಜುಗುಪ್ಸಿತಂ ॥೫೨॥

ಅಲ್ಲದೆ ನನ್ನ ಹೃದಯದಲ್ಲಿ ಒಂದು ರಹಸ್ಯವಾದ ಸಂದೇಹವು ಇರುತ್ತದೆ. ಅದು ಏನಾದರೂ ಹೋಗಲೊಲ್ಲದು. ಒಬ್ಬ ದ್ರೌಪದಿಗೆ ಐವರು ಪತಿಗಳು ಇರುವಿಕೆಯು ಲೋಕದಲ್ಲಿ ಜುಗುಪ್ಸೆಯನ್ನುಂಟುಮಾಡುವ ವಿಷಯವಲ್ಲವೇ ?

ಸದಾಚಾರಂ ಪ್ರಮಾಣಂ ಹಿ ಪ್ರವದಂತಿ ಮನೀಷಿಣಃ ।
ಪಶುಧರ್ಮಃ ಕಥಂ ತೈಸ್ತು ಸಮರ್ಥೈರಪಿ ಸಂಶ್ರಿತಃ ॥೫೩॥

ಸತ್ಪುರುಷರು ಆಚರಿಸುವ ಆಚಾರವನ್ನು ಪ್ರಮಾಣವೆಂದು, ಎಂದರೆ ಇತರರಿಗೆ ಮಾದರಿ ಎಂದು ತಿಳಿದವರು ಹೇಳುತ್ತಾರೆ. ಆದರೆ ಸತ್ಪುರುಷರಾದ ಮತ್ತು ಸಮರ್ಥರಾದ ಪಾಂಡವರು ಒಬ್ಬ ಸ್ತ್ರೀಗೆ ಐದುಜನ ಪತಿಗಳಾಗಿರುವಂತಹ ಪಶುವೃತ್ತಿಯನ್ನು ಹೇಗೆ ಆಶ್ರಯಿಸಿದರು ?

**ಭೀಷ್ಮೇಣಾಪಿ ಕೃತಂ ಕಿಂ ವಾ ದೇವರೂಪೇಣ ಭೂತಲೇ ।**
**ಗೋಲಕೌ ತೌ ಸಮುತ್ಪಾದ್ಯ ಯತ್ತು ವಂಶಸ್ಯ ರಕ್ಷಣಂ ॥೫೪॥**

ಅಲ್ಲದೆ ದೇವಾಂಶಸಂಭೂತನಾದ ಎಂದರೆ ವಸುವಿನ ಅಂಶವುಳ್ಳ ಭೀಷ್ಮನೂ ಸಹ, ಕೇವಲ ವಂಶರಕ್ಷಣೆಗಾಗಿ, ತನ್ನ ತಮ್ಮಂದಿರ ವಿಧವೆಯರಾದ ಪತ್ನಿಯರಲ್ಲಿ ಧೃತರಾಷ್ಟ್ರ ಮತ್ತು ಪಾಂಡುರಾಜ ಎಂಬ ಗೋಲಕಪುತ್ರರನ್ನು ವ್ಯಾಸಮುನಿಯಿಂದ ಉತ್ಪತ್ತಿಮಾಡಿಸಿದನು.

**ಧಿಗ್ಧರ್ಮನಿರ್ಣಯಃ ಕಾಮಂ ಮುನಿಭಿಃ ಪರಿದರ್ಶಿತಃ ।**
**ಯೇನ ಕೇನಾಪ್ಯುಪಾಯೇನ ಪುತ್ರೋತ್ಪಾದನಲಕ್ಷಣಃ ॥೫೫॥**

ಯಾವುದಾದರೊಂದು ಉಪಾಯದಿಂದ ಪುತ್ರರನ್ನು ಉತ್ಪಾದನೆಮಾಡುವುದಕ್ಕಾಗಿ ಋಷಿಗಳು "ದೇವರೇಣ ಸುತೋತ್ಪತ್ತಿಃ" ಎಂದು ಮುಂತಾಗಿ, ಗಂಡು ಸಂತಾನವಿಲ್ಲದೆ ಪತಿಯು ಮೃತನಾಗಿ ಕುಲವು ನಾಶವಾಗುವ ಸಮಯಬಂದಲ್ಲಿ, ಆಗ ಸ್ತ್ರೀಯು ಪತಿಯ ಅಣ್ಣನಿಂದಾಗಲಿ, ತಮ್ಮನಿಂದಾಗಲಿ ಪುತ್ರೋತ್ಪಾದನೆಯನ್ನು ಮಾಡಿಸಿಕೊಳ್ಳಬೇಕು ಎಂದು ಮೊದಲಾಗಿ ಅನೇಕ ಬಗೆಯ ನಿರ್ಣಯಗಳನ್ನು ತಮ್ಮ ಮನಸ್ಸಿಗೆ ಬಂದಂತೆ ಮಾಡಿರುತ್ತಾರೆ. ಇದು ನಿಂದಾಸ್ಪದವಲ್ಲವೇ ?

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಸಪ್ತದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಚತುರ್ಥಸ್ಕಂಧೇ

## ॥ ಅಷ್ಟಾದಶೋಽಧ್ಯಾಯಃ ॥

### ಹದಿನೆಂಟನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಶೃಣು ರಾಜನ್ಪ್ರವಕ್ಷ್ಯಾಮಿ ಕೃಷ್ಣಸ್ಯ ಚರಿತಂ ಮಹತ್ ।**
**ಅವತಾರಕಾರಣಂ ಚೈವ ದೇವ್ಯಾಶ್ಚರಿತಮದ್ಭುತಂ ॥೧॥**

ವ್ಯಾಸಋಷಿಯು ಹೇಳಿದನು—ಎಲೈ ರಾಜನೇ ಕೇಳು. ದೊಡ್ಡದಾಗಿರುವ ಕೃಷ್ಣನ ಚರಿತ್ರೆಯನ್ನು ಹೇಳುವೆನು. ಮತ್ತು ವಿಷ್ಣುವು ಅವತಾರವಮಾಡಲು ಕಾರಣವನ್ನೂ, ದೇವಿಯ ಆಶ್ಚರ್ಯಕರವಾದ ಚರಿತ್ರೆಯನ್ನೂ ಸಹ ಹೇಳುವೆನು ಕೇಳು.

**ಧರೈಕದಾ ಭರಾಕ್ರಾಂತಾ ರುದತೀ ಚಾತಿಕರ್ಶಿತಾ ।**
**ಗೋರೂಪಧಾರಿಣೀ ದೀನಾ ಭೀತಾಽಗಚ್ಛತ್ತ್ರಿವಿಷ್ಟಪಂ ॥೨॥**

ಒಂದಾನೊಂದು ಕಾಲದಲ್ಲಿ ಭೂದೇವಿಯು ದುಷ್ಟಜನರ ಭಾರದಿಂದ ಪೀಡಿತಳಾಗಿ, ವ್ಯಸನದಿಂದ ಕೃಶಳಾಗಿ, ಸಂಕಟದಿಂದ ಅಳುತ್ತಾ ಹಸುವಿನ ರೂಪವನ್ನು ಧರಿಸಿಕೊಂಡು ಸ್ವರ್ಗಕ್ಕೆ ಹೋದಳು.

**ಪೃಷ್ಟಾ ಶಕ್ರೇಣ ಕಿಂ ತೇಽದ್ಯ ವರ್ತತೇ ಭಯಮಿತ್ಯಥ ।**
**ಕೇನ ವೈ ಪೀಡಿತಾಽಸಿ ತ್ವಂ ಕಿಂ ತೇ ದುಃಖಂ ವಸುಂಧರೇ ॥೩॥**

ಅಲ್ಲಿ ಇಂದ್ರನು ಅವಳನ್ನು ಕುರಿತು—ಎಲೈ ಭೂಮಿದೇವಿಯೇ, ಈಗ ನಿನಗೆ ಭಯವೇನು? ಯಾರು ನಿನಗೆ ತೊಂದರೆಯನ್ನು ಕೊಡುವವರು? ನಿನ್ನ ದುಃಖವೇನು? ಎಂಬದಾಗಿ ಪ್ರಶ್ನೆಮಾಡಿದನು.

ತಚ್ಛ್ರುತ್ವೇಲಾ ತದೋವಾಚ ಶೃಣು ದೇವೇಶ ಮೇಽಖಿಲಂ ।
ದುಃಖಂ ಪೃಚ್ಛಸಿ ಯತ್ತ್ವಂ ಮೇ ಭಾರಾಕ್ರಾಂತಾಽಸ್ಮಿ ಮಾನದ ॥೪॥

ಇಂದ್ರನ ಮಾತನ್ನು ಕೇಳಿ ಭೂದೇವಿಯು—ಎಲೈ ಗೌರವಶಾಲಿಯಾದ ದೇವಪತಿಯೇ, ನೀನು ನನ್ನ ದುಃಖಕಾರಣವನ್ನು ಕೇಳುವೆಯಾದ್ದರಿಂದ, ನನಗೆ ಉಂಟಾಗಿರುವ ದುಃಖವೆಲ್ಲವನ್ನೂ ಹೇಳುವೆನು. ಈಗ ನಾನು ದುಷ್ಟರಾದ ದೈತ್ಯರ ಭಾರದಿಂದ ಪೀಡಿತಳಾಗಿದ್ದೇನೆ, ಎಂದು ಹೇಳಿದಳು.

ಜರಾಸಂಧೋ ಮಹಾಪಾಪೀ ಮಾಗಧೇಷು ಪತಿರ್ಮಮ ।
ಶಿಶುಪಾಲಸ್ತಥಾ ಚೈದ್ಯಃ ಕಾಶಿರಾಜಃ ಪ್ರತಾಪವಾನ್ ॥೫॥

ರುಕ್ಮೀ ಚ ಬಲವಾನ್ ಕಂಸೋ ನರಕಶ್ಚ ಮಹಾಬಲಃ ।
ಶಾಲ್ವಃ ಸೌಭಪತಿಃ ಕ್ರೂರಃ ಕೇಶೀ ಧೇನುಕವತ್ಸಕೌ ॥೬॥

ಮತ್ತು ಆ ಭೂದೇವಿಯು ಈ ರೀತಿಯಲ್ಲಿ ಹೇಳಿದಳು—ನನಗೆ ದುಃಖವನ್ನು ಕೊಡುತ್ತಿರುವ ದುಷ್ಟರಲ್ಲಿ ಕೆಲವರನ್ನು ಹೇಳುವೆನು—ಬಹಳ ಪಾಪಿಯಾದ ಜರಾಸಂಧನೆಂಬುವನು ಮಾಗಧದೇಶದಲ್ಲಿ ನನಗೆ ಸ್ವಾಮಿಯಾಗಿರುವನು. ಅದರಂತೆಯೇ ಚೇದಿದೇಶಕ್ಕೆ ದೊರೆಯಾದ ಶಿಶುಪಾಲನೂ, ಪರಾಕ್ರಮಶಾಲಿಯಾದ ಕಾಶಿರಾಜನೂ, ರುಕ್ಮಿಯೆಂಬುವನೂ, ಬಲಿಷ್ಠನಾದ ಕಂಸನೂ, ನರಕಾಸುರನೂ, ಸೌಭನಗರ (ಹರಿಶ್ಚಂದ್ರಪುರ)ಕ್ಕೆ ಅಧಿಪತಿಯಾದ ಶಾಲ್ವನೂ, ಕ್ರೂರನಾದ ಕೇಶಿ ಎಂಬ ರಾಕ್ಷಸನೂ, ಧೇನುಕ, ವತ್ಸಕರೆಂಬ ರಾಕ್ಷಸರೂ ಅವರವರ ದೇಶಗಳಿಗೆ ಅಧಿಪತಿಗಳಾಗಿ ಪಾಪಾಚರಣೆಯಿಂದ ನನಗೆ ದುಃಖವನ್ನುಂಟುಮಾಡುತ್ತಿರುವರು.

ಸರ್ವಧರ್ಮವಿಹೀನಾಶ್ಚ ಪರಸ್ಪರವಿರೋಧಿನಃ ।
ಪಾಪಾಚಾರಾ ಮದೋನ್ಮತ್ತಾಃ ಕಾಲರೂಪಾಶ್ಚ ಪಾರ್ಥಿವಾಃ ॥೭॥

ತೈರಹಂ ಪೀಡಿತಾ ಶಕ್ರ ಭಾರಾಕ್ರಾಂತಾಽಕ್ಷಮಾ ವಿಭೋ ।
ಕಿಂ ಕರೋಮಿ ಕ್ವ ಗಚ್ಛಾಮಿ ಚಿಂತಾ ಮೇ ಮಹತೀ ಸ್ಥಿತಾ ॥೮॥

ಈ ದುಷ್ಟರಾಕ್ಷಸರು ಒಬ್ಬರಿಗೊಬ್ಬರು ವಿರೋಧವುಳ್ಳವರು, ಕೆಟ್ಟನಡತೆಯುಳ್ಳವರು, ಮದದಿಂದ ಕೊಬ್ಬಿರುವರು. ಈ ರಾಜರೆಲ್ಲರೂ ಲೋಕದಲ್ಲಿ ಯಮ

ರೂಪರಾಗಿರುವರು. ಓ ಇಂದ್ರನೇ ನಾನು ಇವರಿಂದ ಪೀಡಿತಳಾಗಿ ಭಾರವನ್ನು ಹೊರಲಾರದೆ ಅಶಕ್ತಳಾಗಿದೇನೆ. ನಾನು ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ಎಂಬ ದೊಡ್ಡಯೋಚನೆಯು ನನಗೆ ಉಂಟಾಗಿದೆ.

**ಪೀಡಿತಾಽಹಂ ವರಾಹೇಣ ವಿಷ್ಣುನಾ ಪ್ರಭವಿಷ್ಣುನಾ ।**
**ಶಕ್ರ ಜಾನೀಹಿ ಹರಿಣಾ ದುಃಖಾದ್ದುಃಖತರಂ ಗತಾ ॥೯॥**

ಓ ದೇವೇಂದ್ರನೇ, ಹಿಂದೆ ಸರ್ವಸಮರ್ಥನಾದ ವಿಷ್ಣುವಿನಿಂದ ವರಾಹಾವತಾರ ಮಾಡಿ ಸಮುದ್ರದಿಂದ ಎತ್ತಲ್ಪಟ್ಟವಳಾದುದರಿಂದಲೇ ಈಗ ಹೀಗೆ ಪೀಡಿತಳಾಗಿರು ತ್ತೇನೆ. ಇಲ್ಲದೆ ನಾನು ಸಮುದ್ರದಲ್ಲಿಯೇ ಇರುತ್ತಿದ್ದರೆ ಈಗ ಇಷ್ಟೊಂದು ಭಾರ ವನ್ನು ಹೊರುವ ದುಃಖವು ಬರುತ್ತಿರಲಿಲ್ಲವು. ಆದುದರಿಂದ ಆ ಹರಿಯಿಂದ ಉದ್ಧೃತಳಾದುದರಿಂದಲೇ ಈಗ ಇಂತಹ ಒಂದು ದುಃಖದಿಂದ ಇನ್ನೊಂದು ಹೆಚ್ಚಿನ ದುಃಖವನ್ನು ಅನುಭವಿಸುತ್ತಿದೇನೆ.

**ಯತೋಽಹಂ ದುಷ್ಟದೈತ್ಯೇನ ಕಶ್ಯಪಸ್ಯಾತ್ಮಜೇನ ವೈ ।**
**ಹೃತಾಽಹಂ ಹಿರಣ್ಯಾಕ್ಷೇಣ ಮಗ್ನಾ ತಸ್ಮಿನ್ಮಹಾರ್ಣವೇ ॥೧೦॥**

ಕಶ್ಯಪನ ಮಗನಾದ, ದುಷ್ಟರಾಕ್ಷಸನಾದ ಹಿರಣ್ಯಾಕ್ಷನಿಂದ ನಾನು ಅಪಹರಿ ಸಲ್ಪಟ್ಟವಳಾಗಿ ಆ ದೊಡ್ಡದಾದ ಸಮುದ್ರದಲ್ಲಿ ಮುಳುಗಿಸಲ್ಪಟ್ಟೆನು.

**ತದಾ ಸೂಕರರೂಪೇಣ ವಿಷ್ಣುನಾ ನಿಹತೋಽಪ್ಯಸೌ ।**
**ಉದ್ಧೃತಾಹಂ ವರಾಹೇಣ ಸ್ಥಾಪಿತಾ ಹಿ ಸ್ಥಿರಾ ಕೃತಾ ॥೧೧॥**

ಆಗ ವರಾಹರೂಪವನ್ನು ಧರಿಸಿದ ವಿಷ್ಣುವಿನಿಂದ ಆ ರಾಕ್ಷಸನು ಕೊಲ್ಲಲ್ಪಟ್ಟು ಉದ್ಧೃತಳಾದೆನು. ಮತ್ತು ಪೂರ್ವದಂತೆ ಸರಿಯಾದ ರೀತಿ ಇರಿಸಲ್ಪಟ್ಟು ಸ್ಥಿರ ಳಾಗಿ ಮಾಡಲ್ಪಟ್ಟೆನು.

**ನೋ ಚೇದ್ರಸಾತಲೇ ಸ್ವಸ್ಥಾ ಸ್ಥಿತಾ ಸ್ಯಾಂ ಸುಖಶಾಯಿನೀ ।**
**ನ ಶಕ್ತಾಽಸ್ಮ್ಯದ್ಯ ದೇವೇಶ ಭಾರಂ ವೋಢುಂ ದುರಾತ್ಮನಾಂ ॥೧೨॥**

ವಿಷ್ಣುವು ಹೀಗೆ ಮಾಡದಿದ್ದಲ್ಲಿ ನಾನು ರಸಾತಲದಲ್ಲಿ ಸುಖವಾಗಿ ಮಲಗಿ ಕೊಂಡು ಸ್ವಸ್ಥಳಾಗಿರುತ್ತಿದ್ದೆನು. ಎಲೈ ಇಂದ್ರನೇ ಈಗ ನಾನು ದುಷ್ಟರಾದ ಇವರು ಗಳ ಭಾರವನ್ನು ಹೊರಲು ಅಶಕ್ತಳಾಗಿದ್ದೇನೆ.

**ಅಗ್ರೇ ದುಷ್ಟಃ ಸಮಾಯಾತಿ ಹ್ಯಷ್ಟಾವಿಂಶಸ್ತಥಾ ಕಲಿಃ ।**
**ತದಾಽಹಂ ಪೀಡಿತಾ ಶಕ್ರ ಗಂತಾಽಸ್ಮ್ಯಾಶು ರಸಾತಲಂ ॥೧೩॥**

ಇನ್ನು ಮುಂದೆ ದುಷ್ಟವಾದ ಇಪ್ಪತ್ತೆಂಟನೆಯ ಕಲಿಯುಗವು ಬರುತ್ತದೆ. ಆಗ ನಾನು ತೊಂದರೆಗೆ ಸಿಕ್ಕಿ ಬೇಗನೆ ರಸಾತಲಕ್ಕೆ ಹೋಗುವೆನು.

**ತಸ್ಮಾತ್ತ್ವಂ ದೇವದೇವೇಶ ದುಃಖರೂಪಾರ್ಣವಸ್ಯ ಚ ।**
**ಪಾರದೋ ಭವ ಭಾರಂ ಮೇ ಹರ ಪಾದೌ ನಮಾಮಿ ತೇ ॥೧೪॥**

ದೇವತೆಗಳಿಗೆ ಅಧಿಪತಿಯಾದ ಓ ಇಂದ್ರನೇ ನೀನು ದುಃಖರೂಪವಾದ ಈ ಸಮುದ್ರಕ್ಕೆ ದಡವನ್ನು ತೋರಿಸುವವನಾಗು ಮತ್ತು ನನ್ನ ಭಾರವನ್ನು ಪರಿಹರಿಸು. ಇಗೋ ನಿನ್ನ ಪಾದಗಳಿಗೆ ನಮಸ್ಕರಿಸುವೆನು.

॥ ಇಂದ್ರ ಉವಾಚ ॥

**ಇಲೇ ಕಿಂ ತೇ ಕರೋಮ್ಯದ್ಯ ಬ್ರಹ್ಮಾಣಂ ಶರಣಂ ವ್ರಜ ।**
**ಅಹಂ ತತ್ರಾಽಽಗಮಿಷ್ಯಾಮಿ ಸ ತೇ ದುಃಖಂ ಹರಿಷ್ಯತಿ ॥೧೫॥**

ಇಂದ್ರನು ಹೇಳಿದನು—ಎಲೈ ಭೂಮಿಯೇ, ನಾನು ನಿನಗೆ ಏನನ್ನು ಮಾಡಲಿ? ನೀನು ಬ್ರಹ್ಮನನ್ನು ಶರಣುಹೊಂದು. ನಾನೂ ನಿನ್ನ ಜೊತೆಯಲ್ಲಿ ಅವನ ಬಳಿಗೆ ಬರುತ್ತೇನೆ. ಅವನು ನಿನ್ನ ದುಃಖವನ್ನು ಪರಿಹರಿಸುವನು.

**ತಚ್ಛ್ರುತ್ವಾ ತ್ವರಿತಾ ಪೃಥ್ವೀ ಬ್ರಹ್ಮಲೋಕಂ ಗತಾ ತದಾ ।**
**ಶಕ್ರೋಽಪಿ ಪೃಷ್ಠತಃ ಪ್ರಾಪ್ತಃ ಸರ್ವದೇವಪುರಸ್ಸರಃ ॥೧೬॥**

ಇದನ್ನು ಕೇಳಿ ಭೂಮಿಯು ಜಾಗ್ರತೆಯಾಗಿ ಬ್ರಹ್ಮಲೋಕಕ್ಕೆ ಹೋದಳು. ಇವಳ ಹಿಂದೆಯೇ ದೇವತೆಗಳೆಲ್ಲರನ್ನೂ ಕರೆದುಕೊಂಡು ಇಂದ್ರನು ಬ್ರಹ್ಮಲೋಕಕ್ಕೆ ಹೋದನು.

**ಸುರಭೀಮಾಗತಾಂ ತತ್ರ ದೃಷ್ಟ್ವೋವಾಚ ಪ್ರಜಾಪತಿಃ ।**
**ಮಹೀಂ ಜ್ಞಾತ್ವಾ ಮಹಾರಾಜ ಧ್ಯಾನೇನ ಸಮುಪಸ್ಥಿತಾಂ ॥೧೭॥**

ಎಲೈ ಜನಮೇಜಯರಾಜನೇ ಕೇಳು—ಭೂಮಿಯು ಬಂದು ಎದುರಿಗೆ ನಿಂತಿರುವುದನ್ನು ಬ್ರಹ್ಮನು ಧ್ಯಾನದಿಂದ ತಿಳಿದು ಅವಳನ್ನು ನೋಡಿ ಹೀಗೆ ಮಾತನ್ನಾಡಿದನು.

**ಕಸ್ಮಾದ್ರುದಸಿ ಕಲ್ಯಾಣಿ ಕಿಂ ತೇ ದುಃಖಂ ವದಾಧುನಾ ।**
**ಪೀಡಿತಾಸಿ ಚ ಕೇನ ತ್ವಂ ಪಾಪಾಚಾರೇಣ ಭೂರ್ವದ ॥೧೮॥**

ಎಲೈ ಮಂಗಳಕರಳಾದ ಭೂಮಿಯೇ, ನೀನು ಏತಕ್ಕೆ ಅಳುತ್ತಲಿರುವೆ? ಈಗ ನಿನಗೆ ಒದಗಿರುವ ದುಃಖವೇನು? ಕೆಟ್ಟಕೆಲಸಗಳನ್ನು ಮಾಡುವ ದುಷ್ಟಜನರಿಂದ ಪೀಡಿತಳಾಗಿರುವೆಯಾ? ಹೇಳು.

॥ ಧರೋವಾಚ ॥

**ಕಲಿರಾಯಾತಿ ದುಷ್ಟೋಽಯಂ ಬಿಭೇಮಿ ತದ್ಭಯಾದಹಂ ।**
**ಪಾಪಾಚಾರಾಃ ಪ್ರಜಾಸ್ತತ್ರ ಭವಿಷ್ಯಂತಿ ಜಗತ್ಪತೇ ॥೧೯॥**

ಭೂಮಿದೇವಿಯು ಹೇಳಿದಳು—ದುಷ್ಟವಾದ ಕಲಿಯುಗವು ಪ್ರಾಪ್ತವಾಗುತ್ತಲಿದೆ. ಈ ಕಲಿಯ ಭಯದಿಂದ ನಾನು ಹೆದರಿರುವೆನು. ಎಲೈ ಲೋಕಾಧಿಪನಾದ ಬ್ರಹ್ಮನೇ, ಆ ಕಲಿಯುಗದಲ್ಲಿ ಜನಗಳು ಕೆಟ್ಟ ಕೆಲಸಗಳನ್ನು ಆಚರಿಸುವವರಾಗಿ ಇರುವರು.

**ರಾಜಾನಶ್ಚ ದುರಾಚಾರಾಃ ಪರಸ್ಪರವಿರೋಧಿನಃ ।**
**ಚೌರಕರ್ಮರತಾಃ ಸರ್ವೇ ರಾಕ್ಷಸಾಃ ಪೂ(ರ್ವ)ರ್ಣವೈರಿಣಃ ॥೨೦॥**

ಮತ್ತು ಆ ಕಲಿಯುಗದಲ್ಲಿ ರಾಜರುಗಳು ಕೆಟ್ಟಕೆಲಸಗಳನ್ನು ಮಾಡುವವರಾಗಿಯೂ, ಒಬ್ಬರನ್ನೊಬ್ಬರು ದ್ವೇಷಿಸುವವರಾಗಿಯೂ, ಕಳ್ಳತನದಲ್ಲಿಯೇ ಆಸಕ್ತರಾಗಿಯೂ ಇರುವರು. ಮತ್ತು ಕೆಲವರು ರಾಕ್ಷಸರಂತೆ ಹಿಂದಿನ ಸಂಪೂರ್ಣದ್ವೇಷದಿಂದ ಕೂಡಿ ಹಿಂಸೆಯೇ ಮೊದಲಾದ ದುಷ್ಟಕರ್ಮಗಳಲ್ಲಿ ನಿರತರಾಗಿರುತ್ತಾರೆ.

**ತಾನ್ ಹತ್ವಾ ನೃಪತೀನ್ಭಾರಂ ಹರ ಮೇಽದ್ಯ ಪಿತಾಮಹ ।**
**ಪೀಡಿತಾಸ್ಮಿ ಮಹಾರಾಜ ಸೈನ್ಯಭಾರೇಣ ಭೂಭೃತಾಂ ॥೨೧॥**

ಓ ಬ್ರಹ್ಮನೇ ಆ ದೊರೆಗಳನ್ನು ನಾಶಮಾಡಿ ಈಗ ನನ್ನ ಭಾರವನ್ನು ಪರಿಹರಿಸು. ನಾನು ಆ ದೊರೆಗಳ ಸೇನೆಯ ಭಾರದಿಂದ ಬಳಲಿ ತೊಂದರೆಯನ್ನು ಅನುಭವಿಸುತ್ತಿರುತ್ತೇನೆ.

|| ಬ್ರಹ್ಮೋವಾಚ ||

**ನಾಹಂ ಶಕ್ತಸ್ತಥಾ ದೇವಿ ಭಾರಾವತರಣೇ ತವ ।**
**ಗಚ್ಛಾವಃ ಸದನಂ ವಿಷ್ಣೋರ್ದೇವದೇವಸ್ಯ ಚಕ್ರಿಣಃ ॥೨೨॥**

ಬ್ರಹ್ಮನು ಹೇಳಿದನು—ಎಲೈ ಭೂದೇವಿಯೇ, ನಿನ್ನ ಭಾರವನ್ನು ಕಡಿಮೆ ಮಾಡಲು ನಾನು ಶಕ್ತನಲ್ಲವು. ದೇವತೆಗಳಿಗೂ ದೇವನಾಗಿ ಇರುವ ಚಕ್ರಪಾಣಿಯಾದ ಆ ವಿಷ್ಣುವಿನ ವಾಸಸ್ಥಾನಕ್ಕೆ ನಾವು ಹೋಗೋಣ.

**ಸ ತೇ ಭಾರಾಪನೋದಂ ವೈ ಕರಿಷ್ಯತಿ ಜನಾರ್ದನಃ ।**
**ಪೂರ್ವಂ ಮಯಾಪಿ ತೇ ಕಾರ್ಯಂ ಚಿಂತಿತಂ ಸುವಿಚಾರ್ಯ ಚ ॥೨೩॥**

**ತತ್ರ ಗಚ್ಛ ಸುರಶ್ರೇಷ್ಠಃ ಯತ್ರ ದೇವೋ ಜನಾರ್ದನಃ ।**

ಆ ವಿಷ್ಣುವು ನಿನ್ನ ಭಾರವನ್ನು ಕಡಿಮೆ ಮಾಡುವನು. ಎಲೈ ಇಂದ್ರನೇ, ನಾನೂ ಸಹ ಇದಕ್ಕೆ ಮೊದಲು ಈ ವಿಷಯವನ್ನು ಚನ್ನಾಗಿ ವಿಮರ್ಶೆಮಾಡಿ ಕೊಂಡಿರುತ್ತೇನೆ. ಆದುದರಿಂದ ನೀನು ಆ ದೇವದೇವನಾದ ಜನಾರ್ದನನು ಇರುವ ಸ್ಥಳಕ್ಕೆ ಹೋಗು.

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ವೇದಕರ್ತಾಽಸೌ ಪುರಸ್ಕೃತ್ಯ ಸುರಾಂಶ್ಚ ಗಾಂ ॥೨೪॥**
**ಜಗಾಮ ವಿಷ್ಣುಸದನಂ ಹಂಸಾರೂಢಶ್ಚತುರ್ಮುಖಃ ।**

**ತುಷ್ಟಾವ ವೇದವಾಕ್ಯೈಶ್ಚ ಭಕ್ತಿಪ್ರವಣಮಾನಸಃ ॥೨೫॥**

ವ್ಯಾಸನು ಹೇಳಿದನು—ವೇದಗಳನ್ನು ಪ್ರಚಾರ ಮಾಡುವವನಾದ ಆ ಚತುರ್ಮುಖಬ್ರಹ್ಮನು ದೇವತೆಗಳನ್ನೂ, ಭೂಮಿದೇವಿಯನ್ನೂ ಸಹ ಕರೆದುಕೊಂಡು ತನ್ನ ವಾಹನವಾದ ಹಂಸದಮೇಲೆ ಕುಳಿತುಕೊಂಡು ವಿಷ್ಣುವಿನ ಸ್ಥಾನವಾದ ವೈಕುಂ

ಠಕ್ಕೆ ಹೋದನು. ಅಲ್ಲಿಗೆ ಹೋಗಿ ಭಕ್ತಿಯಿಂದ ಕೂಡಿದ ಮನಸ್ಸುಳ್ಳವನಾಗಿ ವೇದವಾಕ್ಯಗಳಿಂದ ವಿಷ್ಣುವನ್ನು ಹೀಗೆ ಸ್ತೋತ್ರಮಾಡಿದನು.

॥ ಬ್ರಹ್ಮೋವಾಚ ॥

ಸಹಸ್ರಶೀರ್ಷಾ ತ್ವಮಸಿ ಸಹಸ್ರಾಕ್ಷಃ ಸಹಸ್ರಪಾತ್ ।
ತ್ವಂ ವೇದಪುರುಷಃ ಪೂರ್ವಂ ದೇವದೇವಃ ಸನಾತನಃ ॥೨೬॥

ಬ್ರಹ್ಮನು ಹೇಳಿದನು—ಎಲೈ ಸ್ವಾಮಿಯೇ, ನೀನು ಸಾವಿರ ಶಿರಸ್ಸುಗಳುಳ್ಳವನೂ, ಸಾವಿರ ಕಣ್ಣುಗಳುಳ್ಳವನೂ, ಸಾವಿರ ಕಾಲುಗಳುಳ್ಳವನೂ ಆದ ವಿರಾಟ್ಪುರುಷನಾಗಿರುತ್ತೀಯೆ. ನೀನು ವೇದಗಳ ಸ್ವರೂಪನು, ನಮಗೆಲ್ಲರಿಗೂ ಮೊದಲಿನವನು, ದೇವತೆಗಳಿಗೂ ದೇವನಾಗಿರುವವನು, ಆದುದರಿಂದಲೇ ನೀನು ಯಾವಾಗಲೂ ಇರುವ ಅನಾದಿಪುರುಷನು.

ಭೂತಪೂರ್ವಂ ಭವಿಷ್ಯಚ್ಚ ವರ್ತಮಾನಂ ಚ ಯದ್ವಿಭೋ ।
ಅಮರತ್ವಂ ತ್ವಯಾ ದತ್ತಮಸ್ಮಾಕಂ ಚ ರಮಾಪತೇ ॥೨೭॥

ನೀನು ಮೊದಲೂ ಇದ್ದೆ. ಈಗಲೂ ಇರುತ್ತೀಯೆ. ಇನ್ನು ಮುಂದೆಯೂ ಇರುವೆ. ಎಲೈ ಲಕ್ಷ್ಮೀಪತಿಯೇ ನೀನು ನಮಗೆ ದೇವತ್ವವನ್ನು ಕೊಟ್ಟಿರುತ್ತೀಯೆ.

ಏತಾವಾನ್ಮಹಿಮಾ ತೇಽಸ್ತಿ ಕೋ ನ ವೇತ್ತಿ ಜಗತ್ತ್ರಯೇ ।
ತ್ವಂ ಕರ್ತಾಽಪ್ಯವಿತಾ ಹಂತಾ ತ್ವಂ ಸರ್ವ ಗತಿರೀಶ್ವರಃ ॥೨೮॥

ನಿನ್ನ ಮಹಿಮೆಯು ಈ ಪ್ರಕಾರವಾಗಿ ಇಷ್ಟರಮಟ್ಟಿಗೆ ಇದೆಯೆಂಬುದನ್ನು ಮೂರುಲೋಕದಲ್ಲಿ ಯಾರುತಾನೇ ತಿಳಿಯದಿರುವರು? ನೀನು ಪ್ರಪಂಚವನ್ನು ನಿರ್ಮಿಸುವವನು, ಅದನ್ನು ರಕ್ಷಣೆಮಾಡುವವನು, ಅನಂತರದಲ್ಲಿ ಅದನ್ನು ನಾಶಮಾಡುವವನು. ಎಲ್ಲಕ್ಕೂ ನೀನೇ ಗತಿಯಾಗಿರುತ್ತೀಯೆ ಮತ್ತು ಅಧಿಪತಿಯಾಗಿರುತ್ತೀಯೆ.

॥ ವ್ಯಾಸ ಉವಾಚ ॥

ಇತೀಡಿತಃ ಪ್ರಭುರ್ವಿಷ್ಣುಃ ಪ್ರಸನ್ನೋ ಗರುಡಧ್ವಜಃ ।
ದರ್ಶನಂ ಚ ದದೌ ತೇಭ್ಯೋ ಬ್ರಹ್ಮಾದಿಭ್ಯೋಽಮಲಾಶಯಃ ॥೨೯॥

ವ್ಯಾಸನು ಹೇಳಿದನು—ಬ್ರಹ್ಮನು ಈ ರೀತಿಯಾಗಿ ಸ್ತೋತ್ರಮಾಡಲು, ಗರುಡಧ್ವಜನಾದ, ಸ್ವಾಮಿಯಾದ ಆ ವಿಷ್ಣುವು ಪ್ರಸನ್ನನಾಗಿ, ನಿರ್ಮಲವಾದ ಅಭಿಪ್ರಾಯವುಳ್ಳವನಾಗಿ ಆ ಬ್ರಹ್ಮನೇ ಮೊದಲಾದ ದೇವತೆಗಳಿಗೆ ದರ್ಶನವನ್ನು ಕೊಟ್ಟನು.

**ಪಪ್ರಚ್ಛ ಸ್ವಾಗತಂ ದೇವಾನ್ಪ್ರಸನ್ನವದನೋ ಹರಿಃ ।**
**ತತಸ್ತ್ವಾಗಮನೇ ತೇಷಾಂ ಕಾರಣಂ ಚ ಸವಿಸ್ತರಂ ॥೩೦॥**

ಅನಂತರದಲ್ಲಿ ಆ ವಿಷ್ಣುವು ಪ್ರಸನ್ನಮುಖವುಳ್ಳವನಾಗಿ ದೇವತೆಗಳನ್ನು ಸ್ವಾಗತಿಸಿ, ಕುಶಲಪ್ರಶ್ನೆಯನ್ನು ಮಾಡಿದನಂತರ ಅವರು ಬಂದ ಕಾರಣವನ್ನು ವಿಸ್ತಾರವಾಗಿ ತಿಳಿಸಬೇಕೆಂದು ಕೇಳಿದನು.

**ತಮುವಾಚಾಬ್ಜಜೋ ನತ್ವಾ ಧರಾದುಃಖಂ ಚ ಸಂಸ್ಮರನ್ ।**
**ಭಾರಾವತರಣಂ ವಿಷ್ಣೋ ಕರ್ತವ್ಯಂ ತೇ ಜನಾರ್ದನ ॥೩೧॥**

ಆಗ ಬ್ರಹ್ಮನು ನಮಸ್ಕಾರಮಾಡಿ ಭೂಮಿದೇವಿಯ ದುಃಖವನ್ನು ಮನಸ್ಸಿನಲ್ಲಿ ನೆನೆದು, ಎಲೈ ವಿಷ್ಣುವೇ, ಈ ಭೂಮಿದೇವಿಯ ಭಾರವನ್ನು ನೀನು ಇಳುಹಿಸಬೇಕೆಂದು ಪ್ರಾರ್ಥಿಸಿದನು.

**ಭುವಿ ಧೃತ್ವಾವತಾರಂ ತ್ವಂ ದ್ವಾಪರಾಂತೇ ಸಮಾಗತೇ ।**
**ಹತ್ವಾ ದುಷ್ಟಾನ್ನೃಪಾನುರ್ವ್ಯಾ ಹರ ಭಾರಂ ದಯಾನಿಧೇ ॥೩೨॥**

ಮತ್ತು ಬ್ರಹ್ಮನು ಹೀಗೆ ಹೇಳಿದನು—ಓ ದಯಾನಿಧಿಯೇ, ಭೂಮಿಯಲ್ಲಿ ನೀನು ದ್ವಾಪರಯುಗದ ಕೊನೆಯಲ್ಲಿ ಅವತಾರಮಾಡಿ ದುಷ್ಟರಾದ ರಾಜರನ್ನು ಕೊಂದು ಭೂಮಿಯ ಭಾರವನ್ನು ಕಡಿಮೆಮಾಡು.

॥ ವಿಷ್ಣುರುವಾಚ ॥

**ನಾಹಂ ಸ್ವತಂತ್ರ ಏವಾತ್ರ ನ ಬ್ರಹ್ಮಾ ನ ಶಿವಸ್ತಥಾ ।**
**ನೇಂದ್ರೋಽಗ್ನಿರ್ನ ಯಮಸ್ತ್ವಷ್ಟಾ ನ ಸೂರ್ಯೋ ವರುಣಸ್ತಥಾ॥೩೩॥**

ವಿಷ್ಣುವು ಹೇಳಿದನು—ಭೂಮಿಯ ಭಾರವನ್ನು ಕಡಮೆಮಾಡುವ ವಿಷಯದಲ್ಲಿ ನಾನು ಸ್ವತಂತ್ರನಲ್ಲವು. ಬ್ರಹ್ಮ, ಶಿವ, ಇಂದ್ರ, ಅಗ್ನಿ, ಯಮ, ತ್ವಷ್ಟೃ, ಸೂರ್ಯ, ವರುಣ ಇವರುಗಳಲ್ಲಿ ಯಾರೂ ಸಹ ಸ್ವತಂತ್ರರಲ್ಲವು.

**ಯೋಗಮಾಯಾವಶೇ ಸರ್ವಮಿದಂ ಸ್ಥಾವರಜಂಗಮಂ ।**
**ಬ್ರಹ್ಮಾದಿಸ್ತಂಬಪರ್ಯಂತಂ ಗ್ರಥಿತಂ ಗುಣಸೂತ್ರತಃ ॥೩೪॥**

ಚರಾಚರಾತ್ಮಕವಾದ, ಬ್ರಹ್ಮನಿಂದ ತೃಣದವರೆಗೂ ಇರುವ ಈ ಪ್ರಪಂಚವೆಲ್ಲವೂ ತ್ರಿಗುಣವೆಂಬ ದಾರದಿಂದ ಕಟ್ಟಲ್ಪಟ್ಟು ಯೋಗಮಾಯೆಯ ಅಧೀನದಲ್ಲಿರುತ್ತದೆ.

**ಯಥಾ ಸಾ ಸ್ವೇಚ್ಛಯಾ ಪೂರ್ವಂ ಕರ್ತುಮಿಚ್ಛತಿ ಸುವ್ರತ ।**
**ತಥಾ ಕರೋತಿ ಸುಹಿತಾ ವಯಂ ಸರ್ವೇಽಪಿ ತದ್ವಶಾಃ ॥೩೫॥**

ಹಿತಕರಳಾದ ಆ ಯೋಗಮಾಯೆಯು ತನ್ನ ಇಚ್ಛೆಯಿಂದ ಯಾವುದನ್ನು ಹೇಗೆ ಮಾಡಬೇಕೆಂದು ಅಪೇಕ್ಷೆಮಾಡುವಳೋ ಅದನ್ನು ಹಾಗೆಯೇ ನಿರ್ಮಾಣ ಮಾಡುವಳು. ನಾವೆಲ್ಲರೂ ಕೂಡ ಆ ದೇವಿಯ ಅಧೀನದಲ್ಲಿರುವವರು.

**ಯದ್ಯಹಂ ಸ್ಯಾಂ ಸ್ವತಂತ್ರೋ ವೈ ಚಿಂತಯಂತು ಧಿಯಾ ಕಿಲ ।**
**ಕುತೋಽಭವಂ ಮತ್ಸ್ಯವಪುಃ ಕಚ್ಛಪೋ ವಾ ಮಹಾರ್ಣವೇ ॥೩೬॥**

ನಾನು ಸ್ವತಂತ್ರನಾಗಿದ್ದಲ್ಲಿ ಮಹಾಸಮುದ್ರದಲ್ಲಿ ಮತ್ಸ್ಯಕೂರ್ಮರೂಪಗಳನ್ನು ಧರಿಸಿ ಏಕೆ ಇರುತ್ತಿದ್ದೆನು? ಇದನ್ನು ನೀವು ನಿಮ್ಮ ಬುದ್ಧಿಯಿಂದ ಯೋಚನೆಮಾಡಿ.

**ತಿರ್ಯಗ್ಯೋನಿಷು ಕೋ ಭೋಗಃ ಕಾ ಕೀರ್ತಿಃ ಕಿಂ ಸುಖಂಪುನಃ ।**
**ಕಿಂ ಪುಣ್ಯಂ ಕಿಂ ಫಲಂ ತತ್ರ ಕ್ಷುದ್ರಯೋನಿಗತಸ್ಯ ಮೇ ॥೩೭॥**

ತಿರ್ಯಕ್ಪ್ರಾಣಿಗಳ ಜನ್ಮಗಳಲ್ಲಿ ಸುಖಪಡುವುದೇನು? ಅಲ್ಲಿ ಯಾವ ಕೀರ್ತಿಯನ್ನು ಗಳಿಸಲಾಗುವುದು? ಏನು ಸುಖವು? ಯಾವ ಪುಣ್ಯವು ಲಭಿಸುವುದು? ಹೀಗಿರುವಲ್ಲಿ ನೀಚವಾದ ಆ ತಿರ್ಯಗ್ಜನ್ಮದಲ್ಲಿ ಹುಟ್ಟಿದ್ದರಿಂದ ನನಗೆ ಏನು ಪ್ರಯೋಜನವು?

**ಕೋಲೇ ವಾಥ ನೃಸಿಂಹೋ ವಾ ವಾಮನೋ ವಾಽಭವಂ ಕುತಃ ।**
**ಜಮದಗ್ನಿಸುತಃ ಕಸ್ಮಾತ್ಸಂಭವೇಯಂ ಪಿತಾಮಹ ॥೩೮॥**

ಎಲೈ ಬ್ರಹ್ಮನೇ ಕೇಳು—ನಾನು ವರಾಹವಾಗಿಯಾಗಲಿ, ನರಸಿಂಹನಾಗಿಯಾಗಲಿ, ವಾಮನನಾಗಿಯಾಗಲಿ, ಜಮದಗ್ನಿಋಷಿಯ ಮಗನಾದ ಪರಶುರಾಮನಾಗಿಯಾಗಲಿ ಏತಕ್ಕೆ ಹುಟ್ಟಬೇಕಾಗಿತ್ತು?

**ನೃಶಂಸಂ ವಾ ಕಥಂ ಕರ್ಮ ಕೃತವಾನಸ್ಮಿ ಭೂತಲೇ ।**
**ಕ್ಷತಜೈಸ್ತು ಹ್ರದಾನ್ಸರ್ವಾನ್ಪೂರಯೇಯಂ ಕಥಂ ಪುನಃ ॥೩೯॥**

ಭೂಮಿಯಲ್ಲಿ ಹಿಂಸಾಕೃತ್ಯಗಳನ್ನು ಪರಶುರಾಮಾವತಾರದಲ್ಲಿ ಹೇಗೆತಾನೇ ನಾನು ಮಾಡುತ್ತಿದ್ದೆನು ? ಮತ್ತು ಅನೇಕರನ್ನು ಸಂಹರಿಸಿ ಅವರ ರಕ್ತದಿಂದ ಎಲ್ಲ ಕೊಳಗಳನ್ನೂ ಏತಕ್ಕೆ ತುಂಬಬೇಕಾಗಿತ್ತು ?

**ತತ್ಕಥಂ ಜಮದಗ್ನೇಶ್ಚ ಪುತ್ರೋ ಭೂತ್ವಾ ದ್ವಿಜೋತ್ತಮಃ ।**
**ಕ್ಷತ್ರಿಯಾನ್ ಹತವಾನಾಜೌ ನಿರ್ದಯೋ ಗರ್ಭಗಾನಪಿ ॥೪೦॥**

ನಾನು ಜಮದಗ್ನಿಯ ಪುತ್ರನಾಗಿ ಹುಟ್ಟಿ ದ್ವಿಜಶ್ರೇಷ್ಠನಾಗಿದ್ದರೂ ಯುದ್ಧ ದಲ್ಲಿ ಕ್ಷತ್ರಿಯರನ್ನೂ, ಗರ್ಭದಲ್ಲಿದ್ದವರನ್ನೂ ಸಹ ಬಿಡದೆ ನಿರ್ದಯದಿಂದ ಏತಕ್ಕೆ ಸಂಹರಿಸುತ್ತಲಿದ್ದೆನು ?

**ರಾಮೋ ಭೂತ್ವಾಽಥ ದೇವೇಂದ್ರ ಪ್ರಾವಿಶದ್ದಂಡಕಂ ವನಂ ।**
**ಪದಾತಿಶ್ಚೀರವಾಸಾಶ್ಚ ಜಟಾವಲ್ಕಲವಾನ್ಪುನಃ ॥೪೧॥**

ಎಲೈ ಇಂದ್ರನೇ ಕೇಳು—ನಾನು ರಾಮಾವತಾರವನ್ನು ಮಾಡಿ, ರಾಜಪುತ್ರ ನಾಗಿದ್ದರೂ, ಜಟೆಯನ್ನು ಧರಿಸಿ, ನಾರುಮಡಿಯನ್ನುಟ್ಟು, ಕಾಲುನಡಿಗೆಯಿಂದ ದಂಡಕಾರಣ್ಯವನ್ನು ಪ್ರವೇಶಮಾಡಿದೆನು.

**ಅಸಹಾಯೋ ಹ್ಯಪಾಥೇಯೋ ಭೀಷಣೇ ನಿರ್ಜನೇ ವನೇ ।**
**ಕುರ್ವನ್ನಾಖೇಟಕಂ ತತ್ರ ವ್ಯಚರಂ ವಿಗತತ್ರಪಃ ॥೪೨॥**

ಜನಸಂಚಾರವಿಲ್ಲದೇ ಇರುವ ಭಯಂಕರವಾದ ಆ ಕಾಡಿನಲ್ಲಿ ಯಾರ ಸಹಾಯವೂ ಇಲ್ಲದವನಾಗಿ ತಿನ್ನುವುದಕ್ಕೆ ಏನೂ ಇಲ್ಲದೆ ಬೇಟೆಯನ್ನು ಆಡುತ್ತಾ ನಾಚಿಕೆ ಇಲ್ಲದವನಾಗಿ ತಿರುಗುತ್ತಿದ್ದೆನು.

**ನ ಜ್ಞಾತವಾನ್ ಮೃಗಂ ಹೈಮಂ ಮಾಯಯಾ ಪಿಹಿತಸ್ತದಾ ।**
**ಉಟಜೇ ಜಾನಕೀಂ ತ್ಯಕ್ತ್ವಾ ನಿರ್ಗತಸ್ತತ್ಪದಾನುಗಃ ॥೪೩॥**

ಆಗ ಚಿನ್ನದ ಮೃಗದ ಮೋಸವನ್ನು ಮಾಯೆಯಿಂದ ಆವರಿಸಲ್ಪಟ್ಟ ನಾನು, ತಿಳಿದುಕೊಳ್ಳಲಾರದೆ ಹೋದೆನು. ಅಲ್ಲದೆ ನಾನು ಗುಡಿಸಲಿನಲ್ಲಿ ಸೀತೆಯನ್ನು ಬಿಟ್ಟು ಆ ಮೃಗವನ್ನು ಹಿಂಬಾಲಿಸಿಕೊಂಡು ಹೊರಟೆನು.

**ಲಕ್ಷ್ಮಣೋಽಪಿ ಚ ತಾಂ ತ್ಯಕ್ತ್ವಾ ನಿರ್ಗತೋ ಮತ್ಪದಾನುಗಃ ।**
**ವಾರಿತೋಽಪಿ ಮಯಾತ್ಯರ್ಥಂ ಮೋಹಿತಃ ಪ್ರಾಕೃತೈರ್ಗುಣೈಃ ॥೪೪॥**

ಸೀತೆಯೊಬ್ಬಳನ್ನೇ ಆಶ್ರಮದಲ್ಲಿ ಬಿಟ್ಟು ಬರಬೇಡವೆಂದು ನಾನು ಎಷ್ಟು ಹೇಳಿ ತಡೆದಿದ್ದರೂ, ಪ್ರಕೃತಿಯ ಗುಣಗಳಿಂದ ಮೋಹಿತನಾಗಿ ಆ ಲಕ್ಷ್ಮಣನೂ ಕೂಡ ಸೀತೆಯನ್ನು ಬಿಟ್ಟು ನನ್ನನ್ನು ಹಿಂಬಾಲಿಸಿ ಹೊರಟನು.

**ಭಿಕ್ಷುರೂಪಂ ತತಃ ಕೃತ್ವಾ ರಾವಣಃ ಕಪಟಾಕೃತಿಃ ।**
**ಜಹಾರ ತರಸಾ ರಕ್ಷೋ ಜಾನಕೀಂ ಶೋಕಕರ್ಶಿತಾಂ ॥೪೫॥**

ಲಕ್ಷ್ಮಣನು ನನ್ನನ್ನು ಹಿಂಬಾಲಿಸಿ ಬಂದಮೇಲೆ ರಾವಣನು ಮೋಸದಿಂದ ಸನ್ಯಾಸಿಯ ವೇಷವನ್ನು ಧರಿಸಿಕೊಂಡು ಬಂದು ದುಃಖದಿಂದ ಕೃಶವಾಗಿರುವ ಸೀತೆಯನ್ನು ಬಲಾತ್ಕಾರದಿಂದ ಅಪಹರಿಸಿದನು.

**ದುಃಖಾರ್ತೇನ ಮಯಾ ತತ್ರ ರುದಿತಂ ಚ ವನೇ ವನೇ ।**
**ಸುಗ್ರೀವೇಣ ಚ ಮಿತ್ರತ್ವಂ ಕೃತಂ ಕಾರ್ಯವಶಾನ್ಮಯಾ ॥೪೬॥**

ಆ ಮೇಲೆ ನಾನು ಸೀತೆಯ ವಿಯೋಗದುಃಖದಿಂದ ಪೀಡಿತನಾಗಿ ಪ್ರತಿಯೊಂದು ಅರಣ್ಯದಲ್ಲೂ ಅಳುತ್ತಾ ಅಲೆದೆನು. ಸೀತೆಯನ್ನು ಹುಡುಕಲು ಸಹಾಯವಾಗುವುದೆಂಬ ಕಾರಣದಿಂದ ಸುಗ್ರೀವನೊಂದಿಗೆ ಸ್ನೇಹವನ್ನು ಬೆಳೆಸಿದೆನು.

**ಅನ್ಯಾಯೇನ ಹತೋ ವಾಲೀ ಶಾಪಾಚ್ಚೈವ ನಿವಾರಿತಃ ।**
**ಸಹಾಯಾನ್ವಾನರಾನ್ಕೃತ್ವಾ ಲಂಕಾಯಾಂ ಚಲಿತಂ ಪುನಃ ॥೪೭॥**

ಯಾವ ತಪ್ಪುಗಳಿಲ್ಲದಿದ್ದರೂ ವಾಲಿಯನ್ನು ನಾನು ಅನ್ಯಾಯವಾಗಿ ಕೊಂದು ಮತಂಗಮುನಿಯ ಶಾಪದಿಂದ ಮುಕ್ತನನ್ನಾಗಿ ಮಾಡಿದೆನು. ಕಪಿಗಳನ್ನು ಸಹಾಯಕರನ್ನಾಗಿ ಮಾಡಿಕೊಂಡು ಲಂಕಾಪಟ್ಟಣಕ್ಕೆ ಮುತ್ತಿಗೆ ಹಾಕಿದೆನು.

**ಬದ್ಧೋಽಹಂ ನಾಗಪಾಶೈಶ್ಚ ಲಕ್ಷ್ಮಣಶ್ಚ ಮಮಾನುಜಃ ।**
**ವಿಸಂಜ್ಞೌ ಪತಿತೌ ದೃಷ್ಟ್ವಾ ವಾನರಾ ವಿಸ್ಮಯಂ ಗತಾಃ ॥೪೮॥**

ಆಮೇಲೆ ರಾಕ್ಷಸರೊಂದಿಗೆ ಯುದ್ಧಮಾಡುವಾಗ ನಾನೂ ನನ್ನ ತಮ್ಮನಾದ ಲಕ್ಷ್ಮಣನೂ ಇಂದ್ರಜಿತುವು ಪ್ರಯೋಗಿಸಿದ ನಾಗಪಾಶದಿಂದ ಕಟ್ಟಲ್ಪಟ್ಟವರಾಗಿ

ಎಚ್ಚರವಿಲ್ಲದೆ ಭೂಮಿಯಲ್ಲಿ ಬಿದ್ದಿದ್ದೆವು. ಇದನ್ನು ನೋಡಿ ನಮ್ಮ ಸಹಾಯಕರಾದ ವಾನರರೆಲ್ಲರೂ ವಿಷಾದಾಶ್ಚರ್ಯಗಳನ್ನು ಹೊಂದಿದರು.

**ಗರುಡೇನ ತದಾಽಽಗತ್ಯ ಮೋಚಿತೌ ಭ್ರಾತರೌ ಕಿಲ ।**
**ಚಿಂತಾ ಮೇ ಮಹತೀ ಜಾತಾ ದೈವಂ ಕಿಂ ವಾ ಕರಿಷ್ಯತಿ ॥೪೯॥**

ಆಗ ಗರುಡನು ಬಂದು ಅಣ್ಣತಮ್ಮಂದಿರಾದ ನಮ್ಮನ್ನು ನಾಗಪಾಶದಿಂದ ಬಿಡಿಸಿದನು. ಆಗ ನನಗೆ, ಅದೃಷ್ಟವು ಏನನ್ನು ತಾನೇ ಮಾಡಲಾರದು? ಎಂದು ಮೊದಲಾಗಿ ದೊಡ್ಡ ಚಿಂತೆಯುಂಟಾಯಿತು.

**ಹೃತಂ ರಾಜ್ಯಂ ವನೇ ವಾಸೋ ಮೃತಸ್ತಾತಃ ಪ್ರಿಯಾ ಹೃತಾ ।**
**ಯುದ್ಧಂ ಕಷ್ಟಂ ದದಾತ್ಯೇವಮಗ್ರೇ ಕಿಂ ವಾ ಕರಿಷ್ಯತಿ ॥೫೦॥**

ರಾಜ್ಯವು ಹೋಯಿತು. ಅರಣ್ಯವಾಸವು ಪ್ರಾಪ್ತವಾಯಿತು. ತಂದೆಯು ಮೃತನಾದನು. ನನ್ನ ಪ್ರಿಯತಮೆಯಾದ ಸೀತೆಯು ಅಪಹರಿಸಲ್ಪಟ್ಟಳು. ಯುದ್ಧವು ಹೀಗೆ ಕಷ್ಟವನ್ನು ಕೊಡುತ್ತಿದೆ. ಮುಂದೆ, ದೈವದಿಂದ ಇನ್ನೇನು ಕಷ್ಟವು ಪ್ರಾಪ್ತವಾಗುವುದೋ ಎಂದು ಚಿಂತೆಯುಂಟಾಯಿತು.

**ಪ್ರಥಮಂ ತು ಮಹಾದುಃಖಮರಾಜ್ಯಸ್ಯ ವನಾಶ್ರಯಂ ।**
**ರಾಜಪುತ್ರ್ಯಾನ್ವಿತಸ್ಯೈವ ಧನಹೀನಸ್ಯ ಮೇ ಸುರಾಃ ॥೫೧॥**

ಓ ದೇವತೆಗಳೇ, ಆ ರಾಮಾವತಾರದಲ್ಲಿ ನನಗೆ ಅನೇಕ ದುಃಖಗಳು ಬಂದೊದಗಿದುವು. ಪ್ರಾರಂಭದಲ್ಲಿ ರಾಜ್ಯಭ್ರಷ್ಟನಾಗಿ ಧನಸಹಾಯವಿಲ್ಲದೆ, ರಾಜಪುತ್ರಿಯಾದ ಸೀತೆಯೊಂದಿಗೆ ಘೋರವಾದ ವನದಲ್ಲಿ ವಾಸಮಾಡಬೇಕಾದ ಮಹಾ ದುಃಖವು ಸಂಭವಿಸಿತು.

**ವರಾಟಿಕಾಪಿ ಪಿತ್ರಾ ಮೇ ನ ದತ್ತಾ ವನನಿರ್ಗಮೇ ।**
**ಪದಾತಿರಸಹಾಯೋಽಹಂ ಧನಹೀನಶ್ಚ ನಿರ್ಗತಃ ॥೫೨॥**

ನಾನು ಕಾಡಿಗೆ ಹೊರಡುವ ಕಾಲದಲ್ಲಿ ನನ್ನ ತಂದೆಯಾದ ದಶರಥನು ನನಗೆ ಒಂದು ಕರುಡುಕವಡೆಯನ್ನೂ ಸಹ ಕೊಡಲಿಲ್ಲವು. ನಾನು ಧನಹೀನ

ನಾಗಿಯೂ, ಮತ್ತಾವ ಸಹಾಯವೂ ಇಲ್ಲದೆ ಕಾಲುನಡಿಗೆಯಿಂದಲೇ ವನವಾಸಕ್ಕಾಗಿ ತೆರಳಿದೆನು.

**ಚತುರ್ದಶೈವ ವರ್ಷಾಣಿ ನೀತಾನಿ ಚ ತದಾ ಮಯಾ ।**
**ಕ್ಷಾತ್ರಂ ಧರ್ಮಂ ಪರಿತ್ಯಜ್ಯ ವ್ಯಾಧವೃತ್ತ್ಯಾ ಮಹಾವನೇ ॥೫೩॥**

ಹದಿನಾಲ್ಕು ವರ್ಷಗಳು ಪೂರ್ಣವಾಗುವವರೆಗೆ ನಾನು ದೊಡ್ಡದೊಡ್ಡ ಅರಣ್ಯಗಳಲ್ಲಿ ಅಲೆಯುತ್ತಾ ನನ್ನ ಜನ್ಮಸಿದ್ಧವಾದ ಕ್ಷತ್ರಿಯಧರ್ಮವನ್ನು ಬಿಟ್ಟು ಬೇಟೆಗಾರನ ವೃತ್ತಿಯಿಂದ ಕಾಲವನ್ನು ಕಳೆದೆನು.

**ದೈವಾದ್ಯುದ್ಧೇ ಜಯಃ ಪ್ರಾಪ್ತೋ ನಿಹತೋಽಸೌ ಮಹಾಸುರಃ ।**
**ಆನೀತಾ ಚ ಪುನಃ ಸೀತಾ ಪ್ರಾಪ್ತಾಽಯೋಧ್ಯಾ ಮಯಾ ತಥಾ॥೫೪॥**

ಮುಂದೆ ರಾಕ್ಷಸರೊಂದಿಗೆ ಮಾಡಿದ ಯುದ್ಧದಲ್ಲಿ ಅದೃಷ್ಟವಶದಿಂದ ನನಗೆ ಜಯವು ಲಭಿಸಿತು. ಸೀತೆಯನ್ನು ಅಪಹರಿಸಿದ ಮಹಾದೈತ್ಯನಾದ ಆ ರಾವಣನು ಸಂಹರಿಸಲ್ಪಟ್ಟನು. ಆಮೇಲೆ ಸೀತೆಯನ್ನು ಪುನಃ ಪಡೆದು ಅಯೋಧ್ಯೆಗೆ ಅವ ಳನ್ನು ಕರತಂದೆನು.

**ವರ್ಷಾಣಿ ಕತಿಚಿತ್ತತ್ರ ಸುಖಂ ಸಂಸಾರಸಂಭವಂ ।**
**ಪ್ರಾಪ್ತಂ ರಾಜ್ಯಂ ಚ ಸಂಪೂರ್ಣಂ ಕೋಸಲಾನಧಿತಿಷ್ಠತಾ ॥೫೫॥**

ಆ ಅಯೋಧ್ಯೆಯಲ್ಲಿ ಕೆಲವು ವರ್ಷಗಳ ಪರಿಯಂತರ ಸಂಸಾರಸುಖವನ್ನು ಅನುಭವಿಸಿದೆನು. ಸಮಸ್ತ ರಾಜ್ಯಗಳ ಆಧಿಪತ್ಯವನ್ನೂ ಪಡೆದು ಕೋಸಲ ದೇಶ ದಲ್ಲಿ ರಾಜ್ಯವನ್ನಾಳುತ್ತಾ ಸುಖವಾಗಿದ್ದೆನು.

**ಪುರೈವಂ ವರ್ತಮಾನೇನ ಪ್ರಾಪ್ತರಾಜ್ಯೇನ ವೈ ತದಾ ।**
**ಲೋಕಾಪವಾದಭೀತೇನ ತ್ಯಕ್ತ್ವಾ ಸೀತಾ ವನೇ ಮಯಾ ॥೫೬॥**

ಈರೀತಿಯಾಗಿ ಆ ಕಾಲದಲ್ಲಿ ನಾನು ರಾಜ್ಯವನ್ನೂ ಪಡೆದು ಆಳುತ್ತಿರುವಾಗ ಜನಗಳ ಅಪವಾದಕ್ಕೆ ಹೆದರಿ ಸೀತೆಯನ್ನು ಕಾಡಿನಲ್ಲಿ ಬಿಟ್ಟುಬಿಟ್ಟೆನು.

**ಕಾಂತಾವಿರಹಜಂ ದುಃಖಂ ಪುನಃ ಪ್ರಾಪ್ತಂ ದುರಾಸದಂ ।**
**ಪಾತಾಲಂ ಸಾ ಗತಾ ಪಶ್ಚಾದ್ಧರಾಂ ಭಿತ್ವಾ ಧರಾತ್ಮಜಾ ॥೫೭॥**

ತಡೆಯಲಸಾಧ್ಯವಾದ ಪತ್ನೀವಿಯೋಗದುಃಖವು ನನಗೆ ತಿರುಗಿ ಪ್ರಾಪ್ತ ವಾಯಿತು. ಆ ಮೇಲೆ ಭೂದೇವಿಯ ಮಗಳಾದ ಆ ಸೀತೆಯು ದುಃಖದಿಂದ ಭೂಮಿಯನ್ನು ಸೀಳಿಕೊಂಡು ಹೋಗಿ ಪಾತಾಳಗರ್ಭದಲ್ಲಿ ಸೇರಿದಳು.

**ಏವಂ ರಾಮಾವತಾರೇಽಪಿ ದುಃಖಂ ಪ್ರಾಪ್ತಂ ನಿರಂತರಂ ।**
**ಪರತಂತ್ರೇಣ ಮೇ ನೂನಂ ಸ್ವತಂತ್ರಃ ಕೋ ಭವೇತ್ತದಾ ॥೫೮॥**

ಹೀಗೆ ರಾಮಾವತಾರದಲ್ಲಿಯೂ ಸತತವಾಗಿ ದುಃಖವನ್ನು ಅನುಭವಿಸಿದೆನು. ಹೀಗೆ ನಾನೇ ಸ್ವತಂತ್ರನಲ್ಲದ ಮೇಲೆ ಇನ್ನುಳಿದ ಸಾಮಾನ್ಯಜನರು ಹೇಗೆತಾನೇ ಸ್ವತಂತ್ರರಾದಾರು?

**ಪಶ್ಚಾತ್ಕಾಲವಶಾತ್ಪ್ರಾಪ್ತಃ ಸ್ವರ್ಗೋ ಮೇ ಭ್ರಾತೃಭಿಃ ಸಹ ।**
**ಪರತಂತ್ರಸ್ಯ ಕಾ ವಾರ್ತಾ ವಕ್ತವ್ಯಾ ವಿಬುಧೇನ ವೈ ॥೫೯॥**

ಆಮೇಲೆ ನಿರ್ಯಾಣದ ಸಮಯವು ಬರಲು, ಲಕ್ಷ್ಮಣನೇ ಮೊದಲಾದ ತಮ್ಮಂದಿರೊಡನೆ ಸ್ವರ್ಗವನ್ನು ಸೇರಿದೆನು. ಹೀಗೆ ಆದುದರಿಂದ ಸ್ವತಂತ್ರನಲ್ಲದೆ ಕಾಲಕ್ಕೂ ಅದೃಷ್ಟಕ್ಕೂ ಪರಾಧೀನನಾಗಿರುವ ನನ್ನ ಅವಸ್ಥೆಯು ಹೇಗೆ ಇರುವುದೆಂಬುದನ್ನು ತಿಳಿವಳಿಕೆಯುಳ್ಳವರು ಹೇಳಬಹುದಾಗಿದೆ.

**ಪರತಂತ್ರೋಽಸ್ಮ್ಯಹಂ ನೂನಂ ಪದ್ಮಯೋನೇ ನಿಶಾಮಯ ।**
**ತಥಾ ತ್ವಮಪಿ ರುದ್ರಶ್ಚ ಸರ್ವೇ ಚಾನ್ಯೇ ಸುರೋತ್ತಮಾಃ ॥೬೦॥**

ಆದುದರಿಂದ ಎಲೈ ಪದ್ಮಸಂಭವನೇ ಕೇಳು ನಾನು ನಿಶ್ಚಯವಾಗಿಯೂ ಪರಾಧೀನನು. ಅದರಂತೆ ನೀನೂ, ಶಿವನೂ, ಮತ್ತು ಇಂದ್ರನೇ ಮೊದಲಾದ ಇತರ ದೇವೋತ್ತಮರೂ ಸಹ ಪರಾಧೀನರೆಂದು ತಿಳಿ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಅಷ್ಟಾದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಏಕೋನವಿಂಶೋಽಧ್ಯಾಯಃ ||

### ಹತ್ತೊಂಬತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ಭಗವಾನ್ವಿಷ್ಣುಃ ಪುನರಾಹ ಪ್ರಜಾಪತಿಂ ।**
**ಯನ್ಮಾಯಾಮೋಹಿತಸ್ಸರ್ವಸ್ತತ್ತ್ವಂ ಜಾನಾತಿ ನೋ ಜನಃ ॥೧॥**

ವ್ಯಾಸಮಹರ್ಷಿಯು ಹೇಳಿದನು—ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವು ಹೀಗೆ ತಿಳಿಸಿ ಬ್ರಹ್ಮನನ್ನು ಕುರಿತು ಪುನಃ ಹೇಳಿದನು. ಜನಗಳು ಎಲ್ಲರೂ ಯಾರ ಮಾಯೆಯ ಪ್ರಭಾವದಿಂದ, ಅಜ್ಞಾನದಿಂದ ಕೂಡಿದವರಾಗಿ ನಿಜಸ್ಥಿತಿಯನ್ನು ತಿಳಿಯಲಾರದೆ ಇರುತ್ತಾರೆಯೋ ಅಂಥಾ ಆ ದೇವಿಯ ಸ್ಮರಣೆಯನ್ನು ಮಾಡಬೇಕು.

**ವಯಂ ಮಾಯಾವೃತಾಃ ಕಾಮಂ ನ ಸ್ಮರಾಮೋ ಜಗದ್ಗುರುಂ ।**
**ಪರಮಂ ಪುರುಷಂ ಶಾಂತಂ ಸಚ್ಚಿದಾನಂದಮವ್ಯಯಂ ॥೨॥**

**ಅಹಂ ವಿಷ್ಣುರಹಂ ಬ್ರಹ್ಮಾ ಶಿವೋಽಹಮಿತಿ ಮೋಹಿತಾಃ ।**
**ನ ಜಾನೀಮೋ ವಯಂ ಧಾತಃ ಪರಂ ವಸ್ತು ಸನಾತನಂ ॥೩॥**

ಎಲ್ಲರಿಗಿಂತಲೂ ಉತ್ತಮನಾದ, ಶಾಂತಸ್ವಭಾವವುಳ್ಳ, ಸಚ್ಚಿದಾನಂದಸ್ವರೂಪನಾದ, ಯಾವಾಗಲೂ ನಾಶಹೊಂದದಿರುವ, ಜ್ಞಾನರೂಪನಾದ ಆನಂದಮಯನಾದ ನಿರ್ವಿಕಾರನಾದ, ಎಲ್ಲರಿಗೂ ತಿಳಿವಳಿಕೆಯನ್ನು ಅನುಗ್ರಹಿಸುವ ಜಗದ್ಗುರುವಾದ ಪುರುಷನನ್ನು ನಾವುಗಳು ಮಾಯೆಯಿಂದ ಮೂಢರಾಗಿ ಸ್ಮರಣೆಮಾಡುತ್ತಿಲ್ಲ. ಎಲ್ಲೈ

ಬ್ರಹ್ಮನೇ, ನಾನು ವಿಷ್ಣುವು, ನಾನು ಬ್ರಹ್ಮನು, ನಾನು ಶಿವನು ಎಂಬದಾಗಿ ಅಹಂಭಾವ ಮತ್ತು ಅಜ್ಞಾನದಿಂದ ಮುಚ್ಚಲ್ಪಟ್ಟವರಾಗಿ ನಿತ್ಯವಾಗಿರುವ ಪರಬ್ರಹ್ಮ ನನ್ನು ತಿಳಿಯುವುದಿಲ್ಲವು.

**ಯನ್ಮಾಯಾಮೋಹಿತಶ್ಚಾಹಂ ಸದಾ ವರ್ತೇ ಪರಾತ್ಮನಃ ।**
**ಪರವಾನ್ ದಾರುಪಾಂಚಾಲೀ ಮಾಯಿಕಸ್ಯ ಯಥಾ ವಶೇ ॥೪॥**

ಮರದ ಬೊಂಬೆಯು ಯಕ್ಷಿಣೀ ಆಟಗಾರನ ಅಧೀನಕ್ಕೆ ಒಳಪಟ್ಟಿರುವ ಹಾಗೆ ನಾನು, ಮಾಯೆಯನ್ನು ವಶಪಡಿಸಿಕೊಂಡಿರುವ ಪರಮಾತ್ಮನ ಅಧೀನದಲ್ಲಿ ಮಾಯೆ ಯಿಂದ ಮೋಹಿತನಾಗಿರುವೆನು.

**ಭವತಾಪಿ ತಥಾ ದೃಷ್ಟ್ವಾ ವಿಭೂತಿಸ್ತಸ್ಯ ಚಾದ್ಭುತಾ ।**
**ಕಲ್ಪಾದೌ ಭವಯುಕ್ತೇನ ಮಯಾಪಿ ಚ ಸುಧಾರ್ಣವೇ ॥೫॥**

**ಮಣಿದ್ವೀಪೇಽಥ ಮಂದಾರವಿಟಪೇ ರಾಸಮಂಡಲೇ ।**
**ಸಮಾಜೇ ತತ್ರ ಸಾ ದೃಷ್ಟ್ವಾ ಶ್ರುತಾ ನ ವಚಸಾಪಿ ಚ ॥೬॥**

ಪರಮಾತ್ಮನ ಅದ್ಭುತವಾದ ಮಹಿಮೆಯನ್ನು ಸೃಷ್ಟಿಕಾಲದ ಮೊದಲಿನಲ್ಲಿ ಶಿವನೊಡನೆ ನೀನೂ ನಾನೂ ಕೂಡ ನೋಡಿರುತ್ತೇವೆ. ಅಮೃತಸಮುದ್ರದಲ್ಲಿ, ಮಂದಾರವೃಕ್ಷಗಳುಳ್ಳ ಮಣಿದ್ವೀಪದಲ್ಲಿ, ರಾಸಕ್ರೀಡೆಯಲ್ಲಿ, ಇನ್ನೂ ಇತರ ದೇವತೆ ಗಳ ಸಮೂಹದ ಮಧ್ಯದಲ್ಲಿ ಆ ಪರತತ್ವದ ಮುಖ್ಯ ಮೂರ್ತಿಯನ್ನು ನೋಡಿದೆವು. ಅದರ ವಾಸ್ತವಸ್ವರೂಪವು ವಾಕ್ಕಿಗೂ ಗೋಚರವಾಗದೆ ಅಪರೋಕ್ಷಸಾಕ್ಷಾತ್ಕಾರದ ಅನು ಭವರೂಪವಾಗಿದೆ. ಆದರೂ ಭಕ್ತರನ್ನು ಅನುಗ್ರಹಿಸುವಾಗ ಮಾತ್ರ ತನಗೆ ಸ್ವಾಧೀನ ವಾಗಿರುವ ಮಾಯೆಯಿಂದ ಕೂಡಿ ಸಗುಣವೂ ಸಾಕಾರವೂ ಆದ ರೂಪನ್ನು ಪಡೆಯುತ್ತದೆ.

**ತಸ್ಮಾತ್ತಾಂ ಪರಮಾಂ ಶಕ್ತಿಂ ಸ್ಮರಂತ್ವದ್ಯ ಸುರಾಃ ಶಿವಾಂ ।**
**ಸರ್ವಕಾಮಪ್ರದಾಂ ಮಾಯಾಮಾದ್ಯಾಂ ಶಕ್ತಿಂ ಪರಾತ್ಮನಃ ॥೭॥**

ಎಲೈ ದೇವತೆಗಳಿರಾ, ನಾನೂ ಕೂಡ ಆ ಮಾಯೆಗೆ ಅಧೀನನಾಗಿರುತ್ತೇನೆ ಯಾಗಿ, ನೀವೆಲ್ಲರೂ ಈಗ ಪರಮಾತ್ಮನೊಡನೆ ಅವಿನಾಭಾವ ಸಂಬಂಧದಿಂದ ಸೇರಿ ರುವ ಎಲ್ಲಕ್ಕೂ ಮೊದಲನೆಯದಾದ ಮಾಯಾಶಕ್ತಿಯನ್ನು ಸ್ಮರಿಸಿರಿ. ಇದು ಎಲ್ಲ

ರಿಗೂ ಅವರವರ ಇಷ್ಟಗಳನ್ನು ಕೊಡುವುದು. ಪರಮಾತ್ಮನ ಈ ಶಕ್ತಿಯು ಪರಮಾತ್ಮನನ್ನು ಬಿಟ್ಟು ಬೇರೆ ಇರುವುದಿಲ್ಲ. ಕೆಲವು ಕಡೆಗಳಲ್ಲಿ ದೇವಿಯಾದ ಈ ಶಕ್ತಿಗೆ ಪ್ರಾಧಾನ್ಯವೂ, ಮತ್ತೆ ಕೆಲವೆಡೆಗಳಲ್ಲಿ ಪರಮಾತ್ಮನಿಗೆ ಪ್ರಾಧಾನ್ಯವೂ ಹೇಳಲ್ಪಟ್ಟಿರುವುದು. ಶಕ್ತಿ ಎಂದರೆ ವಿಶಿಷ್ಟವಾದ ಪರಮಾತ್ಮರೂಪ, ಪರಮೇಶ್ವರನು ಶಕ್ತಿವಿಶಿಷ್ಟನು ಎಂದು ಇವರಿಬ್ಬರಿಗೂ ಅವಿನಾಭಾವವು ಸ್ವತಸ್ಸಿದ್ಧವಾಗಿರುವುದು.

॥ ವ್ಯಾಸ ಉವಾಚ ॥

**ಇತ್ಯುಕ್ತಾ ಹರಿಣಾ ದೇವಾ ಬ್ರಹ್ಮಾದ್ಯಾ ಭುವನೇಶ್ವರೀಂ ।**
**ಸಸ್ಮರುರ್ಮನಸಾ ದೇವೀಂ ಯೋಗಮಾಯಾಂ ಸನಾತನೀಂ ॥೮॥**

ಬ್ರಹ್ಮನೇ ಮೊದಲಾದ ದೇವತೆಗಳು ವಿಷ್ಣುವಿನಿಂದ ಹೀಗೆ ಹೇಳಲ್ಪಟ್ಟವರಾಗಿ, ನಿತ್ಯಳಾಗಿರುವ, ಲೋಕಕ್ಕೆಲ್ಲಕ್ಕೂ ಅಧಿಪತಿಯಾಗಿರುವ, ಮಣಿದ್ವೀಪದಲ್ಲಿ ತಾವು ನೋಡಿದ ಯೋಗಮಾಯಾದೇವಿಯ ದಿವ್ಯರೂಪವನ್ನು ಮನಸ್ಸಿನಿಂದ ಸ್ಮರಿಸಿದರು.

**ಸ್ಮೃತಮಾತ್ರಾ ತದಾ ದೇವೀ ಪ್ರತ್ಯಕ್ಷಂ ದರ್ಶನಂ ದದೌ ।**
**ಪಾಶಾಂಕುಶವರಾಭೀತಿಧರಾ ದೇವೀ ಜಪಾರುಣಾ ॥೯॥**
**ದೃಷ್ಟ್ವಾ ಪ್ರಮುದಿತಾ ದೇವಾಸ್ತುಷ್ಟುವುಸ್ತಾಂ ಸುದರ್ಶನಾಂ ॥**

ಈ ರೀತಿಯಲ್ಲಿ ದೇವತೆಗಳು ಸ್ಮರಣೆಮಾಡಿದ ಕೂಡಲೇ ದೇವಿಯು, ದಾಸವಾಳದ ಹೂವಿನಂತೆ ಬಣ್ಣವುಳ್ಳವಳಾಗಿ, ಪಾಶ, ಅಂಕುಶ, ವರದ, ಅಭಯಮುದ್ರೆ, ಇವುಗಳಿಂದ ಕೂಡಿದ ಹಸ್ತಗಳನ್ನು ಧರಿಸಿದವಳಾಗಿ ಈ ದೇವತೆಗಳ ಕಣ್ಣಿಗೆ ಕಾಣಿಸಿಕೊಂಡಳು. ನೋಡಲು ಸುಂದರಳಾಗಿರುವ ಆ ದೇವಿಯನ್ನು ನೋಡಿ ದೇವತೆಗಳು ಸಂತೋಷಗೊಂಡು ಸ್ತೋತ್ರಮಾಡಿದರು.

॥ ದೇವಾ ಊಚುಃ ॥

**ಊರ್ಣನಾಭಾದ್ಯಥಾ ತಂತುರ್ವಿಸ್ಫುಲಿಂಗಾ ವಿಭಾವಸೋಃ ।**
**ತಥಾ ಜಗದ್ಯದೇತಸ್ಯಾ ನಿರ್ಗತಂ ತಾಂ ನತಾ ವಯಂ ॥೧೦॥**

ಜೇಡರ ಹುಳುವಿನಿಂದ ದಾರವು ಹೇಗೆ ಹೊರಹೊಮ್ಮುವುದೋ, ಅಗ್ನಿಯಿಂದ ಕಿಡಿಗಳು ಹೇಗೆ ಚಿಮ್ಮುವುವೋ ಹಾಗೆ ಆದಿಶಕ್ತಿಯಾದ ಈ ದೇವಿಯ ದೆಸೆ

ಯಿಂದ ಚೇತನಾಚೇತನಾತ್ಮಕವಾದ ಈ ಜಗತ್ತು ಹುಟ್ಟಿರುತ್ತದೆ. ಇಂತಹ ಮಹಿಮೆಯುಳ್ಳ ದೇವಿಯನ್ನು ನಾವು ನಮಸ್ಕರಿಸುತ್ತೇವೆ.

**ಯನ್ಮಾಯಾಶಕ್ತಿಸಂಕ್ಲೃಪ್ತಂ ಜಗತ್ಸರ್ವಂ ಚರಾಚರಂ ।**
**ತಾಂ ಚಿತಂ ಭುವನಾಧೀಶಾಂ ಸ್ಮರಾಮಃ ಕರುಣಾರ್ಣವಾಂ ॥೧೧॥**

ಯಾವ ಮಾಯಾಶಕ್ತಿಯಿಂದ ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ನಿರ್ಮಿಸಲ್ಪಟ್ಟಿರುತ್ತದೆಯೋ ಅಂತಹ ದಯಾಸಮುದ್ರಳಾದ, ಲೋಕಕ್ಕೆ ಅಧೀಶ್ವರಿಯಾದ ಆ ಚಿಚ್ಛಕ್ತಿಯನ್ನು ನಾವು ಸ್ಮರಿಸುತ್ತೇವೆ.

**ಯದಜ್ಞಾನಾದ್ಭವೋತ್ಪತ್ತಿರ್ಯತ್ ಜ್ಞಾನಾದ್ಭವನಾಶನಂ ।**
**ಸಂವಿದ್ರೂಪಾಂ ಚ ತಾಂ ದೇವೀಂ ಸ್ಮರಾಮಃ ಸಾ ಪ್ರಚೋದಯಾತ್॥**

ಯಾವ ದೇವಿಯ ಅಜ್ಞಾನರೂಪವಾದ ಮಾಯಾಶಕ್ತಿಯಿಂದ ಜನನಮರಣರೂಪವಾದ ಸಂಸಾರವು ಉಂಟಾಗುವುದೋ ಮತ್ತು ಯಾವ ದೇವಿಯ ಜ್ಞಾನರೂಪವಾದ ಶಕ್ತಿಯಿಂದ ಮೋಕ್ಷವುಂಟಾಗುವುದೋ ಆ ದೇವಿಯನ್ನು ಸ್ಮರಿಸುವೆವು. ಸ್ಮರಿಸಲ್ಪಟ್ಟವಳಾಗಿ ಜ್ಞಾನಸ್ವರೂಪಳಾಗಿರುವ ಆ ದೇವಿಯು ನಮ್ಮ ಬುದ್ಧಿಯನ್ನು ಪ್ರೇರಿಸಲಿ.

**ಮಹಾಲಕ್ಷ್ಮ್ಯೈ ಚ ವಿದ್ಮಹೇ ಸರ್ವಶಕ್ತ್ಯೈ ಚ ಧೀಮಹಿ ।**
**ತನ್ನೋ ದೇವೀ ಪ್ರಚೋದಯಾತ್ ॥೧೩॥**

ಮಹಾಲಕ್ಷ್ಮಿಯ ಸಾಕ್ಷಾತ್ಕಾರ ಅನುಗ್ರಹಗಳಿಗಾಗಿ ಆ ದೇವಿಯ ಸ್ವರೂಪವನ್ನು ತಿಳಿಯುತ್ತೇವೆ. ಸರ್ವಶಕ್ತಿಸ್ವರೂಪಳಾದ ಆ ದೇವಿಯನ್ನು ಧ್ಯಾನಮಾಡೋಣ. ದೇವಿಯು ನಮ್ಮ ಬುದ್ಧಿಯನ್ನು ಶ್ರೇಯಸ್ಸನ್ನು ಪಡೆಯಲು ಪ್ರೇರಿಸಲಿ.

**ಮಾತರ್ನತಾಃ ಸ್ಮ ಭುವನಾರ್ತಿಹರೇ ಪ್ರಸೀದ**
**ಶಂ ನೋ ವಿಧೇಹಿ ಕುರು ಕಾರ್ಯಮಿದಂ ದಯಾರ್ದ್ರೇ ।**
**ಭಾರಂ ಹರಸ್ವ ವಿನಿಹತ್ಯ ಸುರಾರಿವರ್ಗಂ**
**ಮಹ್ಯಾ ಮಹೇಶ್ವರಿ ಸತಾಂ ಕುರು ಶಂ ಭವಾನಿ ॥೧೪॥**

ಲೋಕದ ಕಷ್ಟಗಳನ್ನು ಪರಿಹರಿಸುವ ಓ ತಾಯಿಯೇ ನಿನಗೆ ನಾವು ನಮಸ್ಕಾರವನ್ನು ಮಾಡುತ್ತಿದ್ದೇವೆ. ನೀನು ದಯೆಯಿಂದ ಕೂಡಿ ನಮಗೆ ಪ್ರಸನ್ನ

ಳಾಗು ಮತ್ತು ಕ್ಷೇಮವನ್ನುಂಟುಮಾಡು. ಓ ಮಹೇಶ್ವರಿಯೇ, ನೀನು ದೇವತೆಗಳ ಶತ್ರುಸಮೂಹವನ್ನು ನಾಶಪಡಿಸಿ ಭೂಮಿಯ ಭಾರವನ್ನು ನಾಶಮಾಡು. ಓ ಈಶ್ವರನ ಪತ್ನಿಯಾದ ದೇವಿಯೇ, ಸತ್ಪುರುಷರಿಗೆ ಕ್ಷೇಮವನ್ನುಂಟುಮಾಡು.

**ಯದ್ಯಂಬುಜಾಕ್ಷಿ ದಯಸೇ ನ ಸುರಾನ್ಕದಾಚಿ**
**ತ್ಕಿಂ ತೇ ಕ್ಷಮಾ ರಣಮುಖೇಽಸಿಶರೈಃ ಪ್ರಹರ್ತುಂ ।**
**ಏತತ್ತ್ವಯೈವ ಗದಿತಂ ನನು ಯಕ್ಷರೂಪಂ**
**ಧೃತ್ವಾ ತೃಣಂ ದಹ ಹುತಾಶಪದಾಭಿಲಾಷೈಃ ॥೧೫॥**

ಕಮಲದಂತಿರುವ ಕಣ್ಣುಳ್ಳ ಓ ದೇವಿಯೇ, ನೀನು ನಮ್ಮ ವಿಷಯದಲ್ಲಿ ಯಾವಾಗಲಾದರೂ ದಯವುಳ್ಳವಳಾಗಿಲ್ಲದಿದ್ದಲ್ಲಿ ದೇವತೆಗಳಾದ ನಾವು ಯುದ್ಧದಲ್ಲಿ ಕತ್ತಿ ಮತ್ತು ಬಾಣ ಇವುಗಳಿಂದ ಯುದ್ಧಮಾಡುವುದಕ್ಕೆ ಶಕ್ತರಾದೇವೇನು? ನಿನ್ನ ದಯವಿಲ್ಲದೆ ದೇವತೆಗಳಿಗೂ ಜಯವು ದೊರೆಯಲಿಲ್ಲ, ಈ ವಿಷಯವು (ಕೇನ) ತಲವಕಾರೋಪನಿಷತ್ತಿನಲ್ಲಿ ಹೇಳಲ್ಪಟ್ಟಿರುತ್ತೆ. ದೇವತೆಗಳಿಗೆ ಜಯವು ಆದಕಾಲದಲ್ಲಿ ಅವರನ್ನು ಪರೀಕ್ಷಿಸುವುದಕ್ಕಾಗಿ ಯಕ್ಷರೂಪವನ್ನು ಧರಿಸಿಕೊಂಡು ಬಂದು ಇರುವ ನಿನ್ನ ತತ್ತ್ವವನ್ನು ತಿಳಿಯುವುದಕ್ಕಾಗಿ ಅಗ್ನಿಯು ಬಂದನು. ಅವನ ಮುಂದೆ ತೃಣವನ್ನು ಇಟ್ಟು ಅವನು ಅದನ್ನು ಸುಡಲು ಆಗದಿರಲು, ಆಗ ನಿನ್ನ ತತ್ತ್ವವನ್ನು ದೇವತೆಗಳೆಲ್ಲರಿಗೂ ಗೊತ್ತಾಗುವಂತೆ ನೀನು ತಿಳಿಸಿರುತ್ತೀಯೆ.

**ಕಂಸಃ ಕುಜೋಽಥ ಯವನೇಂದ್ರಸುತಶ್ಚ ಕೇಶೀ**
**ಬಾರ್ಹದ್ರಥೋ ಬಕಬಕೀಖರಶಾಲ್ವಮುಖ್ಯಾಃ ।**
**ಯೇಽನ್ಯೇ ತಥಾ ನೃಪತಯೋ ಭುವಿ ಸಂತಿ ತಾಂಸ್ತ್ವಂ**
**ಹತ್ವಾ ಹರಸ್ವ ಜಗತೋ ಭರಮಾಶು ಮಾತಃ ॥೧೬॥**

ಕಂಸ, ನರಕಾಸುರ, ಕಾಲಯವನ, ಕೇಶೀ ಜರಾಸಂಧ, ಬಕಾಸುರ, ಪೂತನಾ, ಖರಾಸುರ, ಸಾಲ್ವ ಇವರೇ ಮೊದಲಾದ ರಾಕ್ಷಸರೂ, ಇನ್ನೂ ಇತರ ರಾಜರೂ ಸಹ ಭೂಮಿಯಲ್ಲಿರುತ್ತಾರೆ. ಓ ತಾಯಿಯೇ, ನೀನು ಭೂಮಿಗೆ ಭಾರವಾಗಿರುವ ಇವರುಗಳನ್ನು ಸಂಹರಿಸಿ ಲೋಕದ ಭಾರವನ್ನು ಬೇಗನೆ ಕಡಿಮೆಮಾಡು.

**ಯೇ ವಿಷ್ಣುನಾ ನ ನಿಹತಾಃ ಕಿಲ ಶಂಕರೇಣ**
**ಯೇ ವಾ ವಿಗೃಹ್ಯ ಜಲಜಾಕ್ಷಿ ಪುರಂದರೇಣ ।**

**ತೇ ತೇ ಮುಖಂ ಸುಖಕರಂ ಸುಸಮೀಕ್ಷಮಾಣಾಃ**
**ಸಂಖ್ಯೇ ಶರೈರ್ವಿನಿಹತಾ ನಿಜಲೀಲಯಾ ತೇ ॥೧೭॥**

ಯಾವ ರಾಕ್ಷಸರನ್ನು ವಿಷ್ಣುವು ನಾಶಪಡಿಸಲಿಲ್ಲವೋ, ಈಶ್ವರನಿಂದಲೂ ಕೂಡ ಯಾವ ರಾಕ್ಷಸರು ನಾಶಹೊಂದಲಿಲ್ಲವೋ, ಇಂದ್ರನಿಂದ ಯಾರು ಕೊಲ್ಲಲ್ಪಡ ಲಿಲ್ಲವೋ, ಆಯಾಯ ರಾಕ್ಷಸರೆಲ್ಲರೂ, ಸುಖಕರವಾದ ನಿನ್ನ ಮುಖವನ್ನು ನೋಡು ವವರಾಗಿ ನಿನ್ನ ಲೀಲೆಯಿಂದಲೇ ಬಾಣದಿಂದ ಹತರಾದರು. ನಿನಗೆ ದೇವತೆಗಳ ವಿಷಯದಲ್ಲಿ ಇರುವ ದಯೆಯನ್ನು ನಾವು ವರ್ಣನೆ ಮಾಡಲು ಶಕ್ತರಲ್ಲವು.

**ಶಕ್ತಿಂ ವಿನಾ ಹರಿಹರಪ್ರಮುಖಾಃ ಸುರಾಶ್ಚ**
**ನೈವೇಶ್ವರಾ ವಿಚಲಿತುಂ ತವ ದೇವದೇವಿ ।**
**ಕಿಂ ಧಾರಣಾವಿರಹಿತಃ ಪ್ರಭುರಪ್ಯನಂತೋ**
**ಧರ್ತುಂ ಧರಾಂ ಚ ರಜನೀಶಕಲಾವತಂಸೇ ॥೧೮॥**

ಚಂದ್ರಕಲೆಯನ್ನು ಆಭರಣವನ್ನಾಗಿ ಇಟ್ಟುಕೊಂಡಿರುವ, ದೇವತೆಗಳಿಗೂ ದೇವತೆಯಾಗಿರುವ ಓ ದೇವಿಯೇ, ವಿಷ್ಣು, ಶಿವ ಇವರೇ ಮೊದಲಾದ ದೇವತೆ ಗಳೂ ಕೂಡ ನಿನ್ನ ಶಕ್ತಿಯ ಬೆಂಬಲವಿಲ್ಲದೆ ಅವರವರ ಕೆಲಸಗಳನ್ನು ಮಾಡಲು ಸಮರ್ಥರಲ್ಲ. ಆದಿಶೇಷನು ಮಹಿಮೆಯುಳ್ಳವನಾಗಿದ್ದರೂ ನಿನ್ನ ಸಂಬಂಧಿಯಾದ ಧಾರಣಾ ಎಂಬ ಶಕ್ತಿಯು ಅವನಿಗೆ ಇಲ್ಲದಿದ್ದರೆ ಅವನು ಈ ಭೂಮಿಯನ್ನು ಧರಿಸ ಬಲ್ಲನೇ ?

॥ ಇಂದ್ರ ಉವಾಚ ॥

**ವಾಚಾ ವಿನಾ ವಿಧಿರಲಂ ಭವತೀಹ ವಿಶ್ವಂ**
**ಕರ್ತುಂ ಹರಿಃ ಕಿಮು ರಮಾರಹಿತೋಽಥ ಪಾತುಂ ।**
**ಸಂಹರ್ತುಮೀಶ ಉಮಯೋಜ್ಝಿತ ಈಶ್ವರಃ ಕಿಂ**
**ತೇ ತಾಭಿರೇವ ಸಹಿತಾಃ ಪ್ರಭವಃ ಪ್ರಜೇಶಾಃ ॥೧೯॥**

ಇಂದ್ರನು ಹೇಳಿದನು—ಬ್ರಹ್ಮನು, ಸರಸ್ವತೀರೂಪವಾದ ಶಕ್ತಿಯ ಅವಲಂ ಬನೆಯು ಇಲ್ಲದಿದ್ದರೆ, ಈ ಜಗತ್ತನ್ನು ಸೃಷ್ಟಿಸಲು ಶಕ್ತನಾಗುತ್ತಿದ್ದನೇ ? ವಿಷ್ಣುವು ಲಕ್ಷ್ಮೀರೂಪವಾದ ಶಕ್ತಿಯಿಂದ ಕೂಡಿರದಿದ್ದಲ್ಲಿ ಜಗತ್ತನ್ನು ರಕ್ಷಿಸಲು ಸಮರ್ಥ

ನಾಗುವನೇ ? ಹಾಗೆಯೇ ಈಶ್ವರನೂ ಸಹ ಉಮಾದೇವೀರೂಪವಾದ ಶಕ್ತಿಯಿಂದ ರಹಿತನಾಗಿದ್ದಲ್ಲಿ ಜಗತ್ತಿನ ಸಂಹಾರಕಾರ್ಯವನ್ನು ಮಾಡಲು ಸಮರ್ಥನಾಗುತ್ತಿದ್ದನೇ ? ಈ ಬ್ರಹ್ಮವಿಷ್ಣುಮಹೇಶ್ವರರು ಆಯಾಯ ಶಕ್ತಿಗಳಿಂದ ಕೂಡಿದವರಾಗಿರುವುದರಿಂದಲೇ, ಪ್ರಭುಗಳಾಗಿಯೂ, ಮಹಿಮೆಯುಳ್ಳವರಾಗಿಯೂ, ಲೋಕಕ್ಕೆ ಅಧಿಪತಿಗಳಾಗಿಯೂ ಇರುತ್ತಾರೆ.

॥ ವಿಷ್ಣುರುವಾಚ ॥

**ಕರ್ತುಂ ಪ್ರಭುರ್ನ ದ್ರುಹಿಣೋ ನ ಕದಾಚನಾಽಹಂ**
**ನಾಪೀಶ್ವರಸ್ತವ ಕಲಾರಹಿತಸ್ತ್ರಿಲೋಕ್ಯಾಃ ।**
**ಕರ್ತುಂ ಪ್ರಭುತ್ವಮನಘೇಽತ್ರ ತಥಾ ವಿಹರ್ತುಂ**
**ತ್ವಂ ವೈ ಸಮಸ್ತವಿಭವೇಶ್ವರಿ ಭಾಸಿ ನೂನಂ ॥೨೦॥**

ವಿಷ್ಣುವು ಹೇಳಿದನು—ಓ ದೇವಿಯೇ, ನಿನ್ನ ಶಕ್ತಿಯ ಸಹಾಯವಿಲ್ಲದೆ ಯಾವಾಗಲೂ ಬ್ರಹ್ಮನು ಸೃಷ್ಟಿಮಾಡಲು ಸಮರ್ಥನಲ್ಲವು. ನಿನ್ನ ಕಲೆಯಿಂದ ಎಂದರೆ, ಶಕ್ತಿಯ ಅಂಶದಿಂದ ರಹಿತನಾಗಿ ನಾನೂ ನನ್ನ ಕಾರ್ಯವನ್ನು ನಿರ್ವಹಿಸಲಾರೆನು. ಇದರಂತೆಯೇ ಈಶ್ವರನೂ ನಿನ್ನ ಶಕ್ತಿಯ ಬೆಂಬಲವಿಲ್ಲದೆ ಮೂರು ಲೋಕಕ್ಕೂ ಅಧಿಪತಿಯಾಗಲಾರನು, ಪಾಪರಹಿತಳಾದ ಓ ದೇವಿಯೇ, ನೀನು ಪ್ರಪಂಚವನ್ನು ನಿರ್ಮಿಸುವುದರಲ್ಲಿಯೂ ಅದನ್ನು ಆಳುವುದರಲ್ಲಿಯೂ ಮತ್ತು ಲೀಲೆಯಿಂದ ಅದರಲ್ಲಿ ವಿಹರಿಸುವುದರಲ್ಲಿಯೂ ಸಹ ಸ್ವತಂತ್ರಳೂ ಸಮರ್ಥಳೂ ಆಗಿ, ಎಲ್ಲ ಮಹಿಮೆಗಳಿಗೂ ಅಧೀಶ್ವರಿಯಾಗಿ, ಪ್ರಕಾಶಿಸುತ್ತಿರುತ್ತೀಯೆ. ಇದು ಸತ್ಯವಾದುದು.

॥ ವ್ಯಾಸ ಉವಾಚ ॥

**ಏವಂ ಸ್ತುತಾ ತದಾ ದೇವೀ ತಾನಾಹ ವಿಬುಧೇಶ್ವರಾನ್ ।**
**ಕಿಂ ತತ್ಕಾರ್ಯಂ ವದಂತ್ವದ್ಯ ಕರೋಮಿ ವಿಗತಜ್ವರಾಃ ॥೨೧॥**

**ಅಸಾಧ್ಯಮಪಿ ಲೋಕೇಽಸ್ಮಿಂಸ್ತತ್ಕರೋಮಿ ಸುರೇಪ್ಸಿತಂ ।**
**ಶಂಸಂತು ಭವತಾಂ ದುಃಖಂ ಧರಾಯಾಶ್ಚ ಸುರೋತ್ತಮಾಃ ॥೨೨॥**

ವ್ಯಾಸಮುನಿಯು ಹೇಳಿದನು—ಈ ಲೋಕದಲ್ಲಿ ಯಾರಿಂದಲೂ ಮಾಡುವುದಕ್ಕಾಗದೇ ಇರುವ ಕೆಲಸವನ್ನು ದೇವತೆಗಳಿಗೆ ಇಷ್ಟವಾದದ್ದನ್ನು ನಾನು ಮಾಡು

ತ್ತೀನೆ. ನಿಮ್ಮ ದುಃಖವೇನು ? ಭೂಮಿಗೆ ಬಂದಿರುವ ಕಷ್ಟವೇನು ? ಇವೆಲ್ಲವನ್ನೂ ನನಗೆ ಹೇಳಿ. ನೀವು ಸಂಕಟವಿಲ್ಲದವರಾಗಿರಿ ಎಂಬುದಾಗಿ ದೇವತೆಗಳಿಂದ ಸ್ತೋತ್ರ ಮಾಡಲ್ಪಟ್ಟ ದೇವಿಯು ಹೇಳಿದಳು.

|| ದೇವಾ ಊಚುಃ ||,

**ವಸುಧೇಯಂ ಭರಾಕ್ರಾಂತಾ ಸಂಪ್ರಾಪ್ತಾ ವಿಬುಧಾನ್ಪ್ರತಿ ।**
**ರುದತೀ ವೇಪಮಾನಾ ಚ ಪೀಡಿತಾ ದುಷ್ಟಭೂಭುಜೈಃ ॥೨೩॥**

ದೇವತೆಗಳು ಹೇಳಿದರು— ಈ ಭೂಮಿಯು ದುಷ್ಟರಾಜರುಗಳಿಂದ ತೊಂದರೆಯನ್ನು ಅನುಭವಿಸುವವಳಾಗಿ ನಡುಗುತ್ತಾ, ಅಳುತ್ತಾ ಹೊರೆಯಿಂದ ಕೂಡಿದವಳಾಗಿ ದೇವತೆಗಳ ಹತ್ತಿರಕ್ಕೆ ಬಂದಳು.

**ಭಾರಾಪಹರಣಂ ಚಾಸ್ಯಾಃ ಕರ್ತವ್ಯಂ ಭುವನೇಶ್ವರಿ ।**
**ದೇವಾನಾಮೀಪ್ಸಿತಂ ಕಾರ್ಯಮೇತದೇವಾಽಧುನಾ ಶಿವೇ ॥೨೪॥**

ಲೋಕಾಧಿಪತಿಯಾದ ದೇವಿಯೇ, ಈ ಭೂಮಿಯ ಭಾರವನ್ನು ಕಡಿಮೆ ಮಾಡಬೇಕಾದುದೇ ಈಗ ಮಾಡಬೇಕಾದ ಕೆಲಸವು. ಇದೇ ದೇವತೆಗಳಿಗೆ ಇಷ್ಟವಾದ ಕೆಲಸವು.

**ಘಾತಿತಸ್ತು ಪುರಾ ಮಾತಸ್ತ್ವಯಾ ಮಹಿಷರೂಪಭೃತ್ ।**
**ದಾನವೋಽತಿಬಲಾಕ್ರಾಂತಸ್ತತ್ಸಹಾಯಾಶ್ಚ ಕೋಟಿಶಃ ॥೨೫॥**

ಓ ತಾಯಿಯೇ, ಪೂರ್ವದಲ್ಲಿ ಎಮ್ಮೆಯ ಆಕಾರವನ್ನು ಹೊಂದಿದ್ದ ಮಹಾಬಲಿಷ್ಠನಾದ ರಾಕ್ಷಸನನ್ನು ನೀನು ನಾಶಮಾಡಿರುತ್ತೀಯೆ. ಅವನ ಸಹಾಯಕರಾದವರನ್ನೂ ಕೋಟಿಗಟ್ಟಲೆಯಾಗಿ ಸಂಹರಿಸಿರುತ್ತೀಯೆ.

**ತಥಾ ಶುಂಭೋ ನಿಶುಂಭಶ್ಚ ರಕ್ತಬೀಜಸ್ತಥಾಪರಃ ।**
**ಚಂಡಮುಂಡೌ ಮಹಾವೀರ್ಯೌತಥೈವ ಧೂಮ್ರಲೋಚನಃ ॥೨೬॥**

ಶುಂಭನೆಂಬವನೂ, ನಿಶುಂಭನೂ, ರಕ್ತಬೀಜಾಸುರನೆಂಬ ಇನ್ನೊಬ್ಬನೂ, ಚಂಡಮುಂಡರೆಂಬ ಮಹಾಬಲಿಷ್ಠರಾದ ರಾಕ್ಷಸರೂ, ಹಾಗೆಯೇ ಧೂಮ್ರಲೋಚನನೆಂಬ ಅಸುರನೂ ಸಹ ನಿನ್ನಿಂದ ನಾಶವನ್ನು ಹೊಂದಿರುತ್ತಾರೆ.

**ದುರ್ಮುಖೋ ದುಃಸಹಶ್ಚೈವ ಕರಾಲಶ್ಚಾತಿವೀರ್ಯವಾನ್ ।**
**ಅನ್ಯೇ ಚ ಬಹವಃ ಕ್ರೂರಾಸ್ತ್ವಯೈವ ಚ ನಿಪಾತಿತಾಃ ॥೨೭॥**

**ತಥೈವ ಚ ಸುರಾರೀಂಶ್ಚ ಜಹಿ ಸರ್ವಾನ್ಮಹೀಶ್ವರಾನ್ ।**
**ಭಾರಂ ಹರ ಧರಾಯಾಶ್ಚ ದುರ್ಧರಂ ದುಷ್ಟಭೂಭುಜಾಂ ॥**

ದುರ್ಮುಖ, ದುಸ್ಸಹ, ಕರಾಳರೆಂಬ ಬಲಿಷ್ಠರಾದ ಮತ್ತು ಕ್ರೂರರಾದ ರಾಕ್ಷಸರು ನಿನ್ನಿಂದ ಹತರಾಗಿರುತ್ತಾರೆ. ಆ ರಾಕ್ಷಸರನ್ನು ಸಂಹಾರಮಾಡಿದಂತೆ ಈ ದುಷ್ಟರಾಜರನ್ನು ನಿಗ್ರಹಿಸಿ ಅವರಿಂದ ಭೂಮಿಗೆ ಉಂಟಾಗಿರುವ ಹೊರಲಶಕ್ಯವಾದ ಹೊರೆಯನ್ನು ತಪ್ಪಿಸು.

॥ ವ್ಯಾಸ ಉವಾಚ ॥

**ಇತ್ಯುಕ್ತಾ ಸಾ ತದಾ ದೇವೀ ದೇವಾನಾಹಾಂಬಿಕಾ ಶಿವಾ ॥೨೮॥**
**ಸಂಪ್ರಹಸ್ಯಾಸಿತಾಪಾಂಗೀ ಮೇಘಗಂಭೀರಯಾ ಗಿರಾ ।**

ವ್ಯಾಸಋಷಿಯು ಹೇಳಿದನು—ಆಗ ಕಾಡಿಗೆಯಂತೆ ಕಪ್ಪಾಗಿರುವ ಕಟಾಕ್ಷವುಳ್ಳವಳಾದ ದೇವಿಯು, ದೇವತೆಗಳಿಂದ ಹೀಗೆ ಹೇಳಲ್ಪಟ್ಟವಳಾಗಿ, ಮೇಘದ ಧ್ವನಿಯಂತೆ ಗಂಭೀರವಾಗಿರುವ ಮಾತಿನಿಂದ ದೇವತೆಗಳನ್ನು ಕುರಿತು ನಗುತ್ತಾ ಹೀಗೆ ಹೇಳಿದನು.

॥ ಶ್ರೀದೇವ್ಯುವಾಚ ॥

**ಮಯೇದಂ ಚಿಂತಿತಂ ಪೂರ್ವಮಂಶಾವತರಣಂ ಸುರಾಃ ॥೨೯॥**

**ಭಾರಾವತರಣಂ ಚೈವ ಯಥಾ ಸ್ಯಾದ್ದುಷ್ಟಭೂಭುಜಾಂ ।**
**ಮಯಾ ಸರ್ವೇ ನಿಹಂತವ್ಯಾ ದೈತ್ಯೇಶಾ ಯೇ ಮಹೀಭುಜಃ ॥೩೦॥**

ಎಲೈ ದೇವತೆಗಳೇ ಕೇಳಿ. ನೀವು ಇಲ್ಲಿ ನನಗೆ ಹೇಳುವುದಕ್ಕಿಂತ ಮುಂಚಿತವಾಗಿಯೇ, ಅಂಶದಿಂದ ಭೂಮಿಯಲ್ಲಿ ಅವತಾರಮಾಡಬೇಕೆಂತಲೂ, ಭೂಮಿಯಲ್ಲಿ ರಾಜರಾಗಿ ಇರುವ ರಾಕ್ಷಸರನ್ನೂ ಮತ್ತು ದುಷ್ಟರನ್ನೂ ನಾಶಮಾಡಿ ಭೂಭಾರವನ್ನು ಕಡಿಮೆ ಮಾಡಬೇಕೆಂತಲೂ ಆಲೋಚನೆಯನ್ನು ಮಾಡಿಯೇ ಇದ್ದೆನು.

ಮಾಗಧಾದ್ಯಾ ಮಹಾಭಾಗಾಃ ಸ್ವಶಕ್ತ್ಯಾಽಮಂದತೇಜಸಃ ।
ಭವದ್ಭಿರಪಿ ಸ್ವೈರಂಶೈರವತೀರ್ಯ ಧರಾತಲೇ ॥೩೦॥
ಮಚ್ಛಕ್ತಿಯುಕ್ತೈಃ ಕರ್ತವ್ಯಂ ಭಾರಾವತರಣಂ ಸುರಾಃ ।

ಎಲೈ ಪುಣ್ಯಶಾಲಿಗಳಾದ, ಹೆಚ್ಚಾದ ತೇಜಸ್ಸುಳ್ಳವರಾದ ದೇವತೆಗಳಿರಾ, ನನ್ನ ಶಕ್ತಿಯಿಂದ ಕೂಡಿ, ನಿಮ್ಮ ನಿಮ್ಮ ಅಂಶಗಳಿಂದ ನೀವುಗಳೂ ಭೂಮಿಯಲ್ಲಿ ಅವತಾರಮಾಡಿ ಭೂಮಿಯ ಭಾರವನ್ನು ಕಡಿಮೆ ಮಾಡಬೇಕು.

ಕಶ್ಯಪೋ ಭಾರ್ಯಯಾ ಸಾರ್ಧಂ ದಿವಿಜಾನಾಂ ಪ್ರಜಾಪತಿಃ ॥೩೨॥
ಯಾದವಾನಾಂ ಕುಲೇ ಪೂರ್ವಂ ಭವಿತಾಽಽನಕದುಂದುಭಿಃ ।

ಕಶ್ಯಪಬ್ರಹ್ಮನು ತನ್ನ ಪತ್ನಿಯೊಡನೆ ದೇವಾಂಶದಿಂದ ಕೂಡಿರುವ ಯಾದವರ ವಂಶದಲ್ಲಿ, ನಾನು ಭೂಮಿಯಲ್ಲಿ ಅವತಾರ ಮಾಡುವುದಕ್ಕಿಂತ ಮುಂಚಿತವಾಗಿ ವಸುದೇವನಾಗಿ ಹುಟ್ಟುವನು.

ತಥೈವ ಭೃಗುಶಾಪಾದ್ವೈ ಭಗವಾನ್ವಿಷ್ಣುರವ್ಯಯಃ ॥೩೩॥
ಅಂಶೇನ ಭವಿತಾ ತತ್ರ ವಸುದೇವಸುತೋ ಹರಿಃ ।
ತದಾಽಹಂ ಪ್ರಭವಿಷ್ಯಾಮಿ ಯಶೋದಾಯಾಂ ಚ ಗೋಕುಲೇ ॥೩೪॥

ಹಾಗೆಯೇ, ಪರಿಪೂರ್ಣನಾಗಿರುವ ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವು ಭೃಗುಋಷಿಗಳ ಶಾಪದಿಂದ, ತನ್ನ ಅಂಶದಿಂದ ವಸುದೇವನ ಮಗನಾಗಿ ಹುಟ್ಟುವನು. ಆಗ ನಾನು ಗೋಕುಲದಲ್ಲಿ ಯಶೋದಾದೇವಿಯಲ್ಲಿ ಅವತಾರ ಮಾಡುವೆನು.

ಕಾರ್ಯಂ ಸರ್ವಂ ಕರಿಷ್ಯಾಮಿ ಸುರಾಣಾಂ ಸುರಸತ್ತಮಾಃ ।
ಕಾರಾಗಾರೇ ಗತಂ ವಿಷ್ಣುಂ ಪ್ರಾಪಯಿಷ್ಯಾಮಿ ಗೋಕುಲೇ ॥೩೫॥

ಎಲೈ ದೇವಶ್ರೇಷ್ಠರಾ, ಕೇಳಿರಿ. ನಾನು ನಿಮ್ಮ ಕಾರ್ಯಗಳೆಲ್ಲವನ್ನೂ ಮಾಡುವೆನು. ಸೆರೆಮನೆಯಲ್ಲಿ ಇರುವ ವಿಷ್ಣುವನ್ನು ಗೋಕುಲಕ್ಕೆ ಸೇರಿಸುವೆನು.

ಶೇಷಂ ಚ ದೇವಕೀಗರ್ಭಾತ್ಪ್ರಾಪಯಿಷ್ಯಾಮಿ ರೋಹಿಣೀಂ ।
ಮಚ್ಛಕ್ತ್ಯೋಪಚಿತೌ ತೌ ಚ ಕರ್ತಾರೌ ದುಷ್ಟಸಂಕ್ಷಯಂ ॥೩೬॥

ಬಲರಾಮನಾಗಿ ಅವತರಿಸಿರುವ ಆದಿಶೇಷನನ್ನು ದೇವಕೀ ಗರ್ಭದಿಂದ ರೋಹಿಣೀ ಗರ್ಭಕ್ಕೆ ಸೇರಿಸುವೆನು. ಈ ರಾಮಕೃಷ್ಣರಿಬ್ಬರೂ ನನ್ನ ಶಕ್ತಿಯಿಂದ ಚೆನ್ನಾಗಿ ವೃದ್ಧಿಹೊಂದಿದವರಾಗಿ ದುಷ್ಟರನ್ನು ನಾಶಮಾಡುವರು.

**ದುಷ್ಟಾನಾಂ ಭೂಭುಜಾಂ ಕಾಮಂ ದ್ವಾಪರಾಂತೇ ಸುನಿಶ್ಚಿತಂ ।**
**ಇಂದ್ರಾಂಶೋಽಪ್ಯರ್ಜುನಃ ಸಾಕ್ಷಾತ್ಕರಿಷ್ಯತಿ ಬಲಕ್ಷಯಂ ॥೩೭॥**

ದ್ವಾಪರಯುಗದ ಕೊನೆಯಲ್ಲಿ ಇಂದ್ರನ ಅಂಶದಿಂದ ಹುಟ್ಟಿದ ಅರ್ಜುನನು ದುಷ್ಟರಾದ ರಾಜರ ಸೇನೆಸಾಮರ್ಥ್ಯಗಳನ್ನು ತನ್ನ ಇಚ್ಛೆಬಂದಮಟ್ಟಿಗೂ ಖಂಡಿತವಾಗಿ ನಾಶಮಾಡುವನು.

**ಧರ್ಮಾಂಶೋಽಪಿ ಮಹಾರಾಜೋ ಭವಿಷ್ಯತಿ ಯುಧಿಷ್ಠಿರಃ ।**
**ವಾಯ್ವಂಶೋ ಭೀಮಸೇನಶ್ಚಾಶ್ವಿನ್ಯಂಶೌ ಚ ಯಮಾವಪಿ ॥೩೮॥**

**ವಸೋರಂಶೋಽಥ ಗಾಂಗೇಯಃ ಕರಿಷ್ಯತಿ ಬಲಕ್ಷಯಂ ।**

ಯಮಧರ್ಮರಾಜನ ಅಂಶದಿಂದ ಯುಧಿಷ್ಠಿರನು ಹುಟ್ಟಿ ರಾಜನಾಗುವನು. ವಾಯುವಿನ ಅಂಶದಿಂದ ಭೀಮಸೇನನೂ, ಅಶ್ವಿನೀದೇವತೆಗಳ ಅಂಶದಿಂದ ನಕುಲ ಸಹದೇವರೂ ಯಮಳರಾಗಿ ಹುಟ್ಟುವರು. ವಸುವಿನ ಅಂಶದಿಂದ ಅವತರಿಸಿದ ಭೀಷ್ಮನು ದುಷ್ಟರಾದ ರಾಜರನ್ನು ನಾಶಮಾಡುವನು.

**ವ್ರಜಂತು ಚ ಭವಂತೋಽದ್ಯ ಧರಾ ಭವತು ಸುಸ್ಥಿರಾ ॥೩೯॥**

**ಭಾರಾವತರಣಂ ನೂನಂ ಕರಿಷ್ಯಾಮಿ ಸುರೋತ್ತಮಾಃ ।**
**ಕೃತ್ವಾ ನಿಮಿತ್ತಮಾತ್ರಾಂಸ್ತಾನ್ಸ್ವಶಕ್ತ್ಯಾಽಹಂ ನ ಸಂಶಯಃ ॥೪೦॥**

ಎಲೈ ದೇವತೆಗಳಿರಾ, ನೀವುಗಳು ಈಗ ಇಲ್ಲಿಂದ ಹೊರಡಿರಿ. ಭೂದೇವಿಯು ಯಾವ ಯೋಚನೆಯನ್ನೂ ಮಾಡದೆ ನಿಶ್ಚಿಂತೆಯಿಂದಿರಲಿ. ನಾನು ಈ ರಾಮ ಕೃಷ್ಣರೇ ಮುಂತಾದವರನ್ನು ನಿಮಿತ್ತವಾಗಿ ನಿಲ್ಲಿಸಿಕೊಂಡು ನನ್ನ ಶಕ್ತಿಯಿಂದ ಭೂಮಿಯ ಭಾರವನ್ನು ಖಂಡಿತವಾಗಿ ಇಳಿಸುವೆನು. ಈ ವಿಷಯದಲ್ಲಿ ಸಂದೇಹವಿಲ್ಲವು.

**ಕುರುಕ್ಷೇತ್ರೇ ಕರಿಷ್ಯಾಮಿ ಕ್ಷತ್ರಿಯಾಣಾಂ ಚ ಸಂಕ್ಷಯಂ ।**
**ಅಸೂಯೇರ್ಷ್ಯಾಮತಿಸ್ತೃಷ್ಣಾ ಮಮತಾಭಿಮತಾಸ್ಪೃಹಾ ॥೪೧॥**

**ಜಿಗೀಷಾ ಮದನೋ ಮೋಹೋ ದೋಷೈರ್ನಂಕ್ಷ್ಯಂತಿ ಯಾದವಾಃ ।**

ಕುರುಕ್ಷೇತ್ರದಲ್ಲಿ ಯುದ್ಧದಿಂದ ಕ್ಷತ್ರಿಯರ ನಾಶವನ್ನು ಮಾಡುವೆನು. ಇನ್ನೊಬ್ಬರ ವೃದ್ಧಿಯ ವಿಷಯದಲ್ಲಿ ಅಸಹನೆ, ಇತರರ ಗುಣದಲ್ಲೂ ದೋಷಾರೋಪಣೆಯ ಬುದ್ಧಿ, ದುರಾಸೆ, ಮಮಕಾರ, ಮತ್ತೊಬ್ಬರನ್ನು ಜಯಿಸಬೇಕೆಂಬ ಇಚ್ಛೆ, ಕಾಮವಿಕಾರ, ಅಜ್ಞಾನ ಈ ದೋಷಗಳಿಂದ ಯಾದವರು ನಾಶವನ್ನೈದುವರು.

**ಬ್ರಾಹ್ಮಣಸ್ಯ ಚ ಶಾಪೇನ ವಂಶನಾಶೋ ಭವಿಷ್ಯತಿ ॥೪೨॥**
**ಭಗವಾನಪಿ ಶಾಪೇನ ತ್ಯಕ್ಷ್ಯತ್ಯೇತತ್ಕಲೇವರಂ ।**

ಬ್ರಾಹ್ಮಣನ ಶಾಪದಿಂದ ಯಾದವರ ವಂಶವು ಹಾಳಾಗುವುದು. ಮಹಾಮಹಿಮನಾದ ಶ್ರೀಕೃಷ್ಣನೂ ಕೂಡ ಶಾಪದಿಂದ ಈ ಶರೀರವನ್ನು ತ್ಯಾಗಮಾಡುವನು.

**ಭವಂತೋಽಪಿ ನಿಜಾಂಗೈಶ್ಚ ಸಹಾಯಾಃ ಶಾರ್ಙ್ಗಧನ್ವನಃ ॥೪೩॥**
**ಪ್ರಭವಂತು ಸನಾರೀಕಾ ಮಥುರಾಯಾಂ ಚ ಗೋಕುಲೇ ।**

ನೀವುಗಳೂ ನಿಮ್ಮ ಸ್ತ್ರೀಯರೂ ಕೂಡ ನಿಮ್ಮ ನಿಮ್ಮ ಅಂಶಗಳಿಂದ ಅವತರಿಸಿ ಮಥುರೆಯಲ್ಲಿಯೂ, ಗೋಕುಲದಲ್ಲಿಯೂ ವಿಷ್ಣುವಿನ ಅವತಾರವಾದ ಶ್ರೀಕೃಷ್ಣನಿಗೆ ಸಹಾಯಕರಾಗಿರಿ.

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾಽಂತರ್ದಧೇ ದೇವೀ ಯೋಗಮಾಯಾ ಪರಾತ್ಮನಃ ॥೪೪॥**

**ಸಧರಾ ವೈ ಸುರಾಸ್ಸರ್ವೇ ಜಗ್ಮುಃ ಸ್ವಾನ್ಯಾಲಯಾನಿ ಚ ।**
**ಧರಾಽಪಿ ಸುಸ್ಥಿರಾ ಜಾತಾ ತಸ್ಯಾ ವಾಕ್ಯೇನ ತೋಷಿತಾ ॥೪೫॥**

ವ್ಯಾಸನು ಹೇಳಿದನು—ಹೀಗೆಂದು ಹೇಳಿ ಪರಬ್ರಹ್ಮನ ಯೋಗಮಾಯಾ ದೇವಿಯೂ ಅಂತರ್ಧಾನವನ್ನು ಹೊಂದಿದಳು. ದೇವತೆಗಳೆಲ್ಲರೂ ಭೂಮಿದೇವಿಯನ್ನು ಜೊತೆಯಲ್ಲಿ ಕರೆದುಕೊಂಡು ತಮ್ಮ ತಮ್ಮ ವಾಸಸ್ಥಾನಗಳಿಗೆ ಹೊರಟುಹೋದರು. ಆ ದೇವಿಯ ಸಮಾಧಾನದ ಮಾತಿನಿಂದ ಭೂದೇವಿಯೂ ಸಂತೋಷವುಳ್ಳವಳಾಗಿ ಮನಸ್ಸಿನ ಆತಂಕವನ್ನು ಬಿಟ್ಟು ನಿಶ್ಚಿಂತೆಯುಳ್ಳವಳಾದಳು.

**ಔಷಧೀವೀರುಧೋಪೇತಾ ಬಭೂವ ಜನಮೇಜಯ ।**
**ಪ್ರಜಾಶ್ಚ ಸುಖಿನೋ ಜಾತಾ ದ್ವಿಜಾಶ್ಚಾಪುರ್ಮಹೋದಯಂ ॥**
**ಸಂತುಷ್ಟಾ ಮುನಯಃ ಸರ್ವೇ ಬಭೂವುರ್ಧರ್ಮತತ್ಪರಾಃ ॥೪೬॥**

ಎಲೈ ಜನಮೇಜಯರಾಜನೇ, ಭೂಮಿಯು ಮೂಲಿಕೆ ಮತ್ತು ಬಳ್ಳಿ ಮೊದಲಾದವುಗಳಿಂದ ಪರಿಪೂರ್ಣವಾಗಿ ಶೋಭಿಸಿತು. ಜನರೆಲ್ಲರೂ ಸುಖವುಳ್ಳವರಾದರು. ಬ್ರಾಹ್ಮಣ ಕ್ಷತ್ರಿಯ ವೈಶ್ಯರೂ ಕೂಡ ಬಹಳಮಟ್ಟಿನ ವೃದ್ಧಿಯನ್ನು ಹೊಂದಿದರು. ಎಲ್ಲರೂ ಸಂತೋಷಚಿತ್ತರಾಗಿದ್ದರು. ಧರ್ಮದಲ್ಲಿ ಋಷಿಗಳು ಹೆಚ್ಚಾದ ಆಸಕ್ತಿಯುಳ್ಳವರಾದರು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ಏಕೋನವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಚತುರ್ಥಸ್ಕಂಧೇ

## || ವಿಂಶೋಽಧ್ಯಾಯಃ ||

## ಇಪ್ಪತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಶೃಣು ಭಾರತ ವಕ್ಷ್ಯಾಮಿ ಭಾರಾವತರಣಂ ತಥಾ ।**
**ಕುರುಕ್ಷೇತ್ರೇ ಪ್ರಭಾಸೇ ಚ ಕ್ಷಪಿತಂ ಯೋಗಮಾಯಯಾ ॥೧॥**

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯರಾಜನೇ ಕೇಳು—ಕುರುಕ್ಷೇತ್ರದಲ್ಲಿಯೂ ಪ್ರಭಾಸಕ್ಷೇತ್ರದಲ್ಲಿಯೂ ಸಹ ಯೋಗಮಾಯೆಯಿಂದ ಮಾಡಲ್ಪಟ್ಟ ಸೇನಾನಾಶವನ್ನೂ ಭೂಮಿಯ ಭಾರಾವತರಣಕ್ರಮವನ್ನೂ ಹೇಳುವೆನು.

**ಯದುವಂಶೇ ಸಮುತ್ಪತ್ತಿರ್ವಿಷ್ಣೋರಮಿತತೇಜಸಃ ।**
**ಭೃಗುಶಾಪಪ್ರತಾಪೇನ ಮಹಾಮಾಯಾಬಲೇನ ಚ ॥೨॥**
**ಕ್ಷಿತಿಭಾರಸಮುತ್ತಾರನಿಮಿತ್ತಮಿತಿ ಮೇ ಮತಿಃ ।**

ಅಪರಿಮಿತವಾದ ತೇಜಸ್ಸುಳ್ಳ ವಿಷ್ಣುವು, ಭೃಗುಋಷಿಯ ಶಾಪದ ಫಲವಾಗಿ ಮಹಾಮಾಯೆಯ ಇಚ್ಛೆಯ ಬಲದಿಂದ ಯದುವಂಶದಲ್ಲಿ, ಭೂಮಿಯ ಹೊರೆಯನ್ನು ಕಡಿಮೆಮಾಡುವುದಕ್ಕಾಗಿ ಕೃಷ್ಣರೂಪದಿಂದ ಅವತರಿಸಿದನು. ಇದರಲ್ಲಿ ದೇವಿಯ ಇಚ್ಛೆಯೇ ಮುಖ್ಯವಾದ ಮೂಲಕಾರಣವು. ಎಂದು ನಾನು ತಿಳಿದಿರುತ್ತೇನೆ.

**ಮಾಯಯಾ ವಿಹಿತೋ ಯೋಗೋ ವಿಷ್ಣೋರ್ಜನ್ಮ ಧರಾತಲೇ॥೩॥**
**ಕಿಂ ಚಿತ್ರಂ ನೃಪ ದೇವೀ ಸಾ ಬ್ರಹ್ಮವಿಷ್ಣುಸುರಾನಪಿ ।**
**ನರ್ತಯತ್ಯನಿಶಂ ಮಾಯಾ ತ್ರಿಗುಣಾನಪರಾನ್ಕಿಮು ॥೪॥**

ಭೂಮಿಯಲ್ಲಿ ವಿಷ್ಣುವಿನ ಅವತಾರವು ಆದಿಶಕ್ತಿಯ ಇಚ್ಛೆಯಿಂದ ಉಂಟು ಮಾಡಲ್ಪಡುವುದು. ಎಲೈ ರಾಜನೇ, ಈ ದೇವಿಯು ಬ್ರಹ್ಮ ವಿಷ್ಣು ಮೊದಲಾದ ದೇವತೆಗಳನ್ನೂ ಸ್ವೇಚ್ಛೆಯಿಂದ ಕುಣಿಸುತ್ತಿರುತ್ತಾಳೆ. ಹೀಗಿರುವಾಗ ತ್ರಿಗುಣದಿಂದ ಕೂಡಿದವರಾದ ಇತರರನ್ನು ಯಾವಾಗಲೂ ಆಟವಾಡಿಸುವುದು ಏನು ಆಶ್ಚರ್ಯವು?

**ಗರ್ಭವಾಸೋದ್ಭವಂ ದುಃಖಂ ವಿಣ್ಮೂತ್ರಸ್ನಾಯುಸಂಯುತಂ ।**
**ವಿಷ್ಣೋರಾಪಾದಿತಂ ಸಮ್ಯಗ್ಯಯಾ ವಿಗತಲೀಲಯಾ ॥೫॥**

ನರಗಳೂ, ಮಲಮೂತ್ರವೂ ಇವುಗಳಿಂದ ಕೂಡಿರುವ ಇಕ್ಕಟ್ಟಿನ ಗರ್ಭವಾಸ ದಲ್ಲಿ ಉಂಟಾಗುವ ದುಃಖವು ವಿಷ್ಣುವಿಗೂ ಪ್ರಸಿದ್ಧವಾದ ವಿಹಾರವುಳ್ಳವಳಾದ ದೇವಿಯಿಂದ ಉಂಟುಮಾಡಲ್ಪಟ್ಟಿತು.

**ಪುರಾ ರಾಮಾವತಾರೇಽಪಿ ನಿರ್ಜರಾ ವಾನರಾಃ ಕೃತಾಃ ।**
**ವಿದಿತಂ ತೇ ಯಥಾ ವಿಷ್ಣುಃ ದುಃಖಪಾಶೇನ ಮೋಹಿತಃ ॥೬॥**

ಪೂರ್ವದಲ್ಲಿ ನಡೆದ ರಾಮಾವತಾರದಲ್ಲಿಯೂ ಕೂಡ ದೇವತೆಗಳು ಕಪಿಗಳಾ ಗಿದ್ದರು. ವಿಷ್ಣುವಿನ ಅವತಾರವಾದ ರಾಮನು ದುಃಖದ ಬಲೆಯಿಂದಲೂ ಶಾಪ ದಿಂದಲೂ ಮೂಢನಾಗಿದ್ದನೆಂಬುದು ನಿನಗೆ ತಿಳಿದೇ ಇರುತ್ತದೆ.

**ಅಹಂ ಮಮೇತಿ ಪಾಶೇನ ಸುದೃಢೇನ ನರಾಧಿಪ ।**
**ಯೋಗಿನೋ ಮುಕ್ತಸಂಗಾಶ್ಚ ಭುಕ್ತಿಕಾಮಾ ಮುಮುಕ್ಷವಃ ॥೭॥**
**ತಾಮೇವ ಸಮುಪಾಸಂತೇ ದೇವೀಂ ವಿಶ್ವೇಶ್ವರೀಂ ಶಿವಾಂ ।**

ಎಲೈ ರಾಜನೇ ಕೇಳು, ಮೋಕ್ಷವನ್ನು ಹೊಂದಲು ಇಚ್ಛೆಯುಳ್ಳವರಾದ ಸರ್ವಸಂಗವನ್ನೂ ಬಿಟ್ಟವರಾದ ಯೋಗಿಗಳೂ ಕೂಡ, ನಾನು, ನನ್ನದು ಎಂಬ ಅಹಂಕಾರಮಮಕಾರಗಳನ್ನು ಹೊಂದಿ ಭೋಗಾಪೇಕ್ಷಿಗಳಾಗಿ ಸಮಸ್ತಕ್ಕೂ ಅಧಿಪತಿ ಯಾಗಿರುವ ಮಂಗಳಕರಳಾದ ಆ ದೇವಿಯ ಸೇವೆಯನ್ನು ಮಾಡುವರು.

**ಯದ್ಭಕ್ತಿಲೇಶಲೇಶಾಂಶಲೇಶಲೇಶಲವಾಂಶಕಂ ॥೮॥**
**ಲಬ್ಧ್ವಾ ಮುಕ್ತೋ ಭವೇಜ್ಜಂತುಸ್ತಾಂ ನ ಸೇವೇತ ಕೋ ಜನಃ ।**

ಯಾವ ದೇವೀವಿಷಯಕವಾದ ಭಕ್ತಿಯ ಅತಿಸೂಕ್ಷ್ಮವಾದ ಭಾಗವನ್ನು ಹೊಂದಿದ ಮಾತ್ರದಿಂದ ಪ್ರಾಣಿಯು ಮೋಕ್ಷವನ್ನು ಹೊಂದುವನೋ, ಅಂಥಾ ದೇವಿಯನ್ನು ಯಾರು ತಾನೇ ಸೇವಿಸದಿರುವರು ?

**ಭುವನೇಶೀತ್ಯೇವ ವಕ್ತ್ರೇ ದದಾತಿ ಭುವನತ್ರಯಂ ॥೯॥**
**ಮಾಂ ಪಾಹೀತ್ಯಸ್ಯ ವಚಸೋ ದೇಯಾಽಭಾವಾದೃಣಾನ್ವಿತಾ ।**

ಯಾರು ಭುವನೇಶಿ ಎಂದು ಆ ದೇವಿಯ ನಾಮಸ್ಮರಣೆಯನ್ನು ಬಾಯಿಯಿಂದ ಮಾಡುವರೋ ಅವರಿಗೆ ಉದಾರಳೂ, ಶೀಘ್ರಫಲಪ್ರದಳೂ ಆದ ಆ ದೇವಿಯು ತನ್ನ ನಾಮಸ್ಮರಣೆಯನ್ನು ಮಾಡುವ ಭಕ್ತನಾದ ಅವನಿಗೆ ಮೂರು ಲೋಕಗಳನ್ನೂ ಕೊಡುವಳು. ಭುವನೇಶಿ ಎಂಬ ಪದದ ಜೊತೆಯಲ್ಲಿ ನನ್ನನ್ನು ರಕ್ಷಿಸು ಎಂದು ಹೇಳುವವರಿಗೆ ಕೊಡುವ ಸರಿಯಾದ ಪದಾರ್ಥವಿಲ್ಲದೇ ಇರುವುದರಿಂದ ಆ ದೇವಿಯು ಸರ್ವದಾ ಸಕಲೇಷ್ಟಗಳನ್ನು ಕೊಟ್ಟರೂ ಇನ್ನೂ ಋಣಿಯಾಗಿಯೇ ಇರುವಳು.

**ವಿದ್ಯಾಽವಿದ್ಯೇತಿ ತಸ್ಯಾ ದ್ವೇ ರೂಪೇ ಜಾನೀಹಿ ಪಾರ್ಥಿವ ॥೧೦॥**
**ವಿದ್ಯಯಾ ಮುಚ್ಯತೇ ಜಂತುರ್ಬಧ್ಯತೇಽವಿದ್ಯಯಾ ಪುನಃ ।**

ಆ ದೇವಿಗೆ ಎರಡು ರೂಪಗಳುಂಟು. ವಿದ್ಯೆ ಎಂಬುದು ಒಂದು ರೂಪವು. ಅವಿದ್ಯೆ ಎಂಬುದು ಇನ್ನೊಂದು ರೂಪವು. ಎಲೈ ರಾಜನೇ, ಪ್ರಾಣಿಯು ವಿದ್ಯೆ ಎಂಬ ರೂಪವನ್ನು ಸೇವಿಸುವವನಾದರೆ ' ಸಂಪ್ರಾಪ್ಯ ವಿದ್ಯಾಂ ' ಎಂಬ ಶ್ರುತಿಯಂತೆ ಮುಕ್ತಿಯನ್ನು ಹೊಂದುವನು. ಅವಿದ್ಯೆಯನ್ನು ಆಶ್ರಯಿಸಿದರೆ ' ಅವಿದ್ಯಾಯಾ ಮಂತರೇ ವರ್ತಮಾನಾಃ ' ಎಂಬ ಶ್ರುತಿಯಂತೆ ಇಹಪರಭೋಗಗಳಿಂದ ಬಂಧನವನ್ನು ಹೊಂದುವನು.

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸರ್ವೇ ತಸ್ಯಾ ವಶಾನುಗಾಃ ॥೧೧॥**
**ಅವತಾರಾಃ ಸರ್ವ ಏವ ಯಂತ್ರಿತಾ ಇವ ದಾಮಭಿಃ ।**

ಬ್ರಹ್ಮನು, ವಿಷ್ಣುವು, ರುದ್ರನು ಇವರೆಲ್ಲರೂ ಕೂಡ ಆ ದೇವಿಯ ಅಧೀನರಾಗಿರುವರು. ಇವರ ಎಲ್ಲ ಅವತಾರಗಳೂ ಹಗ್ಗದಿಂದ ಬಿಗಿದು ಕಟ್ಟಿ ಆಟವಾಡಿಸುವ ಬೊಂಬೆಗಳ ಹಾಗೆ ದೇವಿಯ ಸಂಕಲ್ಪಕ್ಕೆ ವಶವಾಗಿರುತ್ತವೆ.

**ಕದಾಚಿಚ್ಚ ಸುಖಂ ಭುಂಙ್ತೇ ವೈಕುಂಠೇ ಕ್ಷೀರಸಾಗರೇ ॥೧೨॥**

**ಕದಾಚಿತ್ಕುರುತೇ ಯುದ್ಧಂ ದಾನವೈರ್ಬಲವತ್ತರೈಃ ।**
**ಹರಿಃ ಕದಾಚಿದ್ಯಜ್ಞಾನ್ವೈ ವಿತತಾನ್ಸ್ವ ಕರೋತಿ ಚ ॥೧೩॥**

ವಿಷ್ಣುವು ವೈಕುಂಠದಲ್ಲಿ ಕೆಲವುಕಾಲ ಸುಖವನ್ನು ಅನುಭವಿಸುವನು. ಕ್ಷೀರಸಾಗರದಲ್ಲಿ ವಟಪತ್ರಶಾಯಿಯಾಗಿ ಸುಖವನ್ನು ಅನುಭವಿಸುವನು. ಕೆಲವುಕಾಲ ಶೂರರಾದ ರಾಕ್ಷಸರ ಸಂಗಡ ಯುದ್ಧವನ್ನು ಮಾಡುವನು. ಕೆಲವು ವೇಳೆಯಲ್ಲಿ ದೊಡ್ಡದಾದ ಯಜ್ಞವನ್ನು ಮಾಡುವನು.

**ಕದಾಚಿಚ್ಚ ತಪಸ್ತೀವ್ರಂ ತೀರ್ಥೇ ಚರತಿ ಸುವ್ರತ ।**
**ಕದಾಚಿಚ್ಛಯನೇ ಶೇತೇ ಯೋಗನಿದ್ರಾಮುಪಾಶ್ರಿತಃ ॥೧೪॥**

ಒಳ್ಳೆಯ ವಿಷಯಗಳನ್ನು ಪಾಲಿಸುವ ಜನಮೇಜಯನೇ, ವಿಷ್ಣುವು ಕೆಲವು ವೇಳೆ ಪವಿತ್ರವಾದ ತೀರ್ಥಗಳಲ್ಲಿ ನಿಯಮದಿಂದ ಉಗ್ರವಾದ ತಪಸ್ಸನ್ನು ಮಾಡುವನು. ಕೆಲವು ವೇಳೆ ಶೇಷಶಯ್ಯೆಯಲ್ಲಿ ಯೋಗನಿದ್ರೆಯನ್ನು ಹೊಂದಿ ಮಲಗುವನು.

**ನ ಸ್ವತಂತ್ರಃ ಕದಾಚಿಚ್ಚ ಭಗವಾನ್ಮಧುಸೂದನಃ ।**
**ತಥಾ ಬ್ರಹ್ಮಾ ತಥಾ ರುದ್ರಸ್ತಥೇಂದ್ರೋ ವರುಣೋ ಯಮಃ ॥೧೫॥**

**ಕುಬೇರೋಽಗ್ನೀ ರವೀಂದೂ ಚ ತಥಾಽನ್ಯೇ ಸುರಸತ್ತಮಾಃ ।**
**ಮುನಯಃ ಸನಕಾದ್ಯಾಶ್ಚ ವಸಿಷ್ಠಾದ್ಯಾಸ್ತಥಾಽಪರೇ ॥೧೬॥**

**ಸರ್ವೇಽಮ್ಬಾವಶಗಾ ನಿತ್ಯಂ ಪಾಂಚಾಲೀವ ನರಸ್ಯ ಚ ।**

ಷಡ್ಗುಣೈಶ್ವರ್ಯಸಂಪನ್ನನಾದ ಆ ವಿಷ್ಣುವು ಯಾವಾಗಲೂ ಸ್ವತಂತ್ರನಾಗಿರದೆ ಮೇಲೆ ಹೇಳಿದ ಹಾಗೆ ಅಂಬಾದೇವಿಗೆ ಪರಾಧೀನನಾಗಿರುವನು. ಹೀಗೆಯೇ ಬ್ರಹ್ಮನೂ ರುದ್ರನೂ ಸಹ ಪರತಂತ್ರರಾಗಿರುವರು. ಇಂದ್ರ, ವರುಣ, ಯಮ, ಕುಬೇರ, ಅಗ್ನಿ ಸೂರ್ಯ ಚಂದ್ರ ಇವರೇ ಮೊದಲಾದ ದೇವತೆಗಳೂ ಸಹ ದೇವಿಯ ಅಧೀನಕ್ಕೆ ಒಳಪಟ್ಟವರು. ಸನಕಾದಿಮುನಿಗಳೂ ಮತ್ತು ವಸಿಷ್ಠನೇ ಮೊದಲಾದ ಋಷಿಗಳು ಇವರೆಲ್ಲರೂ, ಸೂತ್ರಧಾರಿಯಾದ ಮನುಷ್ಯನಿಗೆ ಮರದ ಬೊಂಬೆಯು ಅಧೀನವಾಗಿರುವಂತೆ, ದೇವಿಯ ಅಧೀನದಲ್ಲಿರುವರು.

**ನಸಿ ಪ್ರೋತಾ ಯಥಾ ಗಾವೋ ವಿಚರಂತಿ ವಶಾನುಗಾಃ ॥೧೭॥**
**ತಥೈವ ದೇವತಾಃ ಸರ್ವಾಃ ಕಾಲಪಾಶನಿಯಂತ್ರಿತಾಃ ।**

ದನಗಳು ಮೂಗುದಾರಹಾಕಲ್ಪಟ್ಟವುಗಳಾಗಿ ಇನ್ನೊಬ್ಬರ ಅಧೀನದಲ್ಲಿರುವಂತೆ ದೇವತೆಗಳೆಲ್ಲರೂ ಅವರವರ ಅದೃಷ್ಟದ ಫಲಕಾಲವೆಂಬ ಪಾಶದಿಂದ ಕಟ್ಟಲ್ಪಟ್ಟಿರುತ್ತಾರೆ.

**ಹರ್ಷಶೋಕಾದಯೋ ಭಾವಾ ನಿದ್ರಾತಂದ್ರಾಲಸಾದಯಃ ॥೧೮॥**
**ಸರ್ವೇಷಾಂ ಸರ್ವದಾ ರಾಜನ್ದೇಹಿನಾಂ ದೇಹಸಂಶ್ರಿತಾಃ ।**

ಸಂತೋಷ, ದುಃಖ, ನಿದ್ರೆ, ಆಲಸ್ಯ ಇವೇ ಮೊದಲಾದ ಚಿತ್ತವೃತ್ತಿಗಳೂ ದೇಹವನ್ನು ಹೊಂದಿರುವ ಎಲ್ಲ ಪ್ರಾಣಿಗಳಿಗೂ ಅವರವರ ದೇಹವನ್ನು ಆಶ್ರಯಿಸಿಕೊಂಡು ಯಾವಾಗಲೂ ಇದ್ದೇ ಇರುವುವು.

**ಅಮರಾ ನಿರ್ಜರಾಃ ಪ್ರೋಕ್ತಾ ದೇವಾಶ್ಚ ಗ್ರಂಥಕಾರಕೈಃ ॥೧೯॥**
**ಅಭಿಧಾನಾಚ್ಚಾರ್ಥತೋ ನ ತೇ ನೂನಂ ತಾದೃಶಾಃ ಕ್ವಚಿತ್ ।**

ದೇವತೆಗಳಿಗೆ ಮರಣವಿಲ್ಲ, ಮುಪ್ಪಿಲ್ಲವೆಂದು ಗ್ರಂಥಗಳನ್ನು ಬರೆದವರು ಹೇಳುತ್ತಾರೆ. ಆದರೆ ಆ ದೇವತೆಗಳು ಹೆಸರಿನಿಂದ ಮಾತ್ರ ಅಜರಾಮರರೇ ಹೊರತು ಅರ್ಥದಿಂದಲೂ ಸಹ ಅದಕ್ಕೆ ಅನುರೂಪರಾಗಿಲ್ಲವು. ಏಕೆಂದರೆ,

**ಉತ್ಪತ್ತಿಸ್ಥಿತಿನಾಶಾಖ್ಯಾ ಭಾವಾ ಯೇಷಾಂ ನಿರಂತರಂ ॥೨೦॥**
**ಅಮರಾಸ್ತೇ ಕಥಂ ವಾಚ್ಯಾ ನಿರ್ಜರಾಶ್ಚ ಕಥಂ ಪುನಃ ।**
**ಕಥಂ ದುಃಖಾಭಿಭೂತಾ ವಾ ಜಾಯಂತೇ ವಿಬುಧೋತ್ತಮಾಃ ॥೨೧॥**

ಯಾವ ದೇವತೆಗಳಿಗೆ ಜನನ, ಸ್ಥಿತಿ, ಮರಣಗಳು ತಪ್ಪದೆ ಇರುತ್ತವೆಯೋ ಆ ದೇವತೆಗಳನ್ನು ಅಮರರು, ನಿರ್ಜರರು ಎಂಬುದಾಗಿ ಹೇಗೆ ಹೇಳಲಾದೀತು? ಮತ್ತು ಆ ದೇವತೆಗಳು ಅವರ ಹೆಸರಿನ ಅರ್ಥಕ್ಕೆ ಅನುಸಾರವಾಗಿರುವ ಪಕ್ಷದಲ್ಲಿ ಅವರು ಅವತಾರಗಳಲ್ಲಿ ದುಃಖಕ್ಕೆ ಹೇಗೆತಾನೇ ಅಧೀನರಾಗುವರು?

**ಕಥಂ ದೇವಾಶ್ಚ ವಕ್ತವ್ಯಾ ವ್ಯಸನೇ ಕ್ರೀಡನಂ ಕಥಂ ।**
**ಕ್ಷಣಾದುತ್ಪತ್ತಿನಾಶಶ್ಚ ದೃಶ್ಯತೇಽಸ್ಮಿನ್ನ ಸಂಶಯಃ ॥೨೨॥**

ದುಃಖದಲ್ಲಿ ವ್ಯಸನಪಡುವವರಾಗಿರುವ ಈ ದೇವತೆಗಳಲ್ಲಿ ಒಂದೊಂದು ಕ್ಷಣದಲ್ಲಿಯೂ ಕೂಡ ಉತ್ಪತ್ತಿವಿನಾಶಗಳು ಸಂದೇಹವಿಲ್ಲದೆ ಕಂಡುಬರುವುದರಿಂದ ಇವರನ್ನು ದೇವರು ಎಂದರೆ ಕ್ರೀಡಿಸುತ್ತಿರುವರು, ಎಂದು ಹೇಗೆತಾನೇ ಹೇಳುವುದು ?

**ಜಲಜಾನಾಂ ಚ ಕೀಟಾನಾಂ ಮಶಕಾನಾಂ ತಥಾ ಪುನಃ ।**
**ಉಪಮಾ ನ ಕಥಂ ಚೈಷಾಮಾಯುಷೋಽನ್ತೇಽಮರಾಃ ಸ್ಮೃತಾಃ ॥**

ಈ ದೇವತೆಗಳನ್ನು ಅಮರರೆಂದು ಹೇಳಿದ್ದರೂ ಇವರ ಆಯುಸ್ಸಿನ ಅಂತ್ಯದಲ್ಲಿ, ನೀರಿನಲ್ಲಿರುವ ಹುಳುಗಳಿಗೂ ಕ್ರಿಮಿಕೀಟಗಳಿಗೂ ಸೊಳ್ಳೆಗಳಿಗೂ ಇರುವಂತೆ, ಇವರಿಗೂ ಮರಣಗಳು ಇರುವುದರಿಂದ, ಏತಕ್ಕೆ ಅವುಗಳೊಡನೆ ಹೋಲಿಸಬಾರದು ?

**ತತೋ ವರ್ಷಾಯುಷಶ್ಚಾಪಿ ಶತವರ್ಷಾಯುಷಸ್ತಥಾ ।**
**ಮನುಷ್ಯಾ ಹ್ಯಮರಾ ದೇವಾಸ್ತಸ್ಮಾದ್ಬ್ರಹ್ಮಾ ಪರಃ ಸ್ಮೃತಃ ॥೨೪॥**

ಮನುಷ್ಯರಲ್ಲೂ ವರ್ಷ ಆಯುಸ್ಸುಳ್ಳವರು, ನೂರು ವರ್ಷದವರು ಎಂದು ಮುಂತಾಗಿ ಇರುವಂತೆ, ದೇವತೆಗಳು ಹೆಚ್ಚು ವರ್ಷಗಳು ಇರುವುದರಿಂದ ಇವರಿಗೆ ಅಮರರೆಂದು ಹೆಸರಾಯಿತು. ಇವರುಗಳಲ್ಲಿ ಬ್ರಹ್ಮನು ಉತ್ಕೃಷ್ಟನು.

**ರುದ್ರಸ್ತಥಾ ತಥಾ ವಿಷ್ಣುಃ ಕ್ರಮಶಶ್ಚ ಭವಂತಿ ಹಿ ।**
**ನಶ್ಯಂತಿ ಕ್ರಮಶಶ್ಚೈವ ವರ್ಧಂತಿ ಚೋತ್ತರೋತ್ತರಂ ॥೨೫॥**

ಬ್ರಹ್ಮನಿಗಿಂತ ರುದ್ರನೂ, ವಿಷ್ಣುವೂ ಸಹ ಕ್ರಮವಾಗಿ ಹೆಚ್ಚುಕಾಲವುಳ್ಳವರಾಗಿ ಇರುತ್ತಾರೆ. ಮತ್ತು ಕ್ರಮವಾಗಿ ಹೆಚ್ಚುಕಾಲ ಅಭಿವೃದ್ಧಿಯುಳ್ಳವರಾಗಿ ಇರುತ್ತಾರೆ. ಮತ್ತು ಕ್ರಮವಾಗಿ ನಾಶವನ್ನೂ ಹೊಂದುತ್ತಾರೆ.

**ನೂನಂ ದೇಹವತೋ ನಾಶೋ ಮೃತಸ್ಯೋತ್ಪತ್ತಿರೇವ ಚ ।**
**ಚಕ್ರವದ್ಭ್ರಮಣಂ ರಾಜನ್ ಸರ್ವೇಷಾಂ ನಾತ್ರ ಸಂಶಯಃ ॥೨೬॥**

ದೇಹವನ್ನು ಹೊಂದಿದ ಪ್ರಾಣಿಗಳಿಗೆ ನಾಶವೂ, ಸತ್ತವನಿಗೆ ಪುನಃ ಹುಟ್ಟುವುದೂ ಸಹ ನಿಯತವಾದುದು. ಎಲೈ ದೊರೆಯೇ ಕೇಳು, ಬಂಡಿಯ ಗಾಲಿಗಳು ತಿರುಗುವಂತೆ ಎಲ್ಲ ಪ್ರಾಣಿಗಳೂ ಜನನಮರಣಗಳಿಂದ ಸುತ್ತುತ್ತಲಿರುತ್ತವೆ. ಸಂಶಯವಿಲ್ಲವು.

**ಮೋಹಜಾಲಾऽऽವೃತೋ ಜಂತುರ್ಮುಚ್ಯತೇ ನ ಕದಾಚನ ।**
**ಮಾಯಾಯಾಂ ವಿದ್ಯಮಾನಾಯಾಂ ಮೋಹಜಾಲಂ ನ ನಶ್ಯತಿ॥೨೭॥**

ಅಜ್ಞಾನವೆಂಬ ಬಲೆಯಿಂದ ಕೂಡಿರುವ ಪ್ರಾಣಿಯು ಯಾವಾಗಲೂ ಬಿಡುಗಡೆ ಯನ್ನು ಹೊಂದಲಾರದು. ಮಾಯೆಯು ಇರುವಾಗ ಅಜ್ಞಾನವೂ ಹೋಗುವುದಿಲ್ಲ.

**ಉತ್ಪತ್ತಿ ಕಾಲ ಉತ್ಪತ್ತಿಃ ಸರ್ವೇಷಾಂ ನೃಪ ಜಾಯತೇ ।**
**ತಥೈವ ನಾಶಃ ಕಲ್ಪಾಂತೇ ಬ್ರಹ್ಮಾದೀನಾಂ ಯಥಾಕ್ರಮಂ ॥೨೮॥**

ಎಲೈ ರಾಜನೇ, ಬ್ರಹ್ಮನೇ ಮೊದಲಾದ ಎಲ್ಲರಿಗೂ ಹುಟ್ಟತಕ್ಕ ಕಾಲದಲ್ಲಿ ಹುಟ್ಟುವಿಕೆಯು ಉಂಟಾಗುತ್ತದೆ. ಹಾಗೆಯೇ ಪ್ರಳಯಕಾಲದಲ್ಲಿ ನಾಶವೂ ಕ್ರಮವಾಗಿ ಉಂಟಾಗುವುದು.

**ನಿಮಿತ್ತಂ ಯಸ್ತು ಯನ್ನಾಶೇ ಸ ಘಾತಯತಿ ತಂ ನೃಪ ।**
**ನಾನ್ಯಥಾ ತದ್ಭವೇನ್ನೂನಂ ವಿಧಿನಾ ನಿರ್ಮಿತಂ ತು ಯತ್ ॥೨೯॥**

ಎಲೈ ದೊರೆಯೇ, ಯಾವ ಪ್ರಾಣಿಯ ನಾಶಕ್ಕೆ ಯಾವ ಕರ್ಮವು ಹೇಗೆ ಕಾರಣವಾಗುವುದೋ, ಅದು ಆ ಪ್ರಾಣಿಯನ್ನು ನಾಶಪಡಿಸುವುದು. ವಿಧಿಯಿಂದ ಹೇಗೆ ಯಾವುದು ನಿಶ್ಚಯಿಸಲ್ಪಟ್ಟಿರುತ್ತದೆಯೋ ಅದು ಅದಕ್ಕೆ ಯಾವಾಗಲೂ ವ್ಯತಿರಿಕ್ತವಾಗಿ ಆಗುವುದಿಲ್ಲ. ಇದು ಖಂಡಿತವು.

**ಜನ್ಮಮೃತ್ಯುಜರಾವ್ಯಾಧಿದುಃಖಂ ವಾ ಸುಖಮೇವ ವಾ ।**
**ತತ್ತಥೈವ ಭವೇತ್ಕಾಮಂ ನಾನ್ಯಥೇಹ ವಿನಿರ್ಣಯಃ ॥೩೦॥**

ಜನ್ಮ, ಮರಣ, ಮುಪ್ಪು, ವ್ಯಾಧಿಗಳು ಈ ಅವಸ್ಥೆಗಳಲ್ಲಿ ಉಂಟಾಗಬಹು ದಾದ ದುಃಖವಾಗಲೀ, ಸುಖವಾಗಲೀ ಹೇಗೆ ಆಗಬೇಕೆಂದು ಇರುವುದೋ ಹಾಗೆ ಆಗುವುದೇ ಹೊರತು ಅದನ್ನು ಬೇರೆ ವಿಧವಾಗಿ ಮಾರ್ಪಡಿಸಲು ಸಾಧ್ಯವೇ ಇಲ್ಲ ವೆಂದು ನಿಶ್ಚಯವಾಗಿರುತ್ತದೆ.

**ಸರ್ವೇಷಾಂ ಸುಖದೌ ದೇವೌ ಪ್ರತ್ಯಕ್ಷೌ ಶಶಿಭಾಸ್ಕರೌ ।**
**ನ ನಶ್ಯತಿ ತಯೋಃ ಪೀಡಾ ಕ್ವಚಿತ್ತದ್ವೈರಿಸಂಭವಾ ॥೩೧॥**

ಲೋಕದಲ್ಲಿ ಎಲ್ಲರಿಗೂ ಸುಖವನ್ನು ಕೊಡುವವರಾಗಿ ಪ್ರತ್ಯಕ್ಷ ದೇವತೆಗಳಾಗಿರುವ ಚಂದ್ರಸೂರ್ಯರುಗಳಿಗೂ ಅವರ ಶತ್ರುಗಳಾದ ರಾಹು ಕೇತು ಇವರಿಂದುಂಟಾಗುವ ಬಾಧೆಯು ಯಾವಾಗಲೂ ತಪ್ಪಿದುದಲ್ಲ. ಅಲ್ಲದೆ,

**ಭಾಸ್ಕರಸ್ಯ ಸುತೋ ಮಂದಃ ಕ್ಷಯೀ ಚಂದ್ರಃ ಕಳಂಕವಾನ್ ।**
**ಪಶ್ಯ ರಾಜನ್ ವಿಧೇಃ ಸೂತ್ರಂ ದುರ್ವಾರಂ ಮಹತಾಮಪಿ ॥೩೨॥**

ಸೂರ್ಯನ ಮಗನು ದಡ್ಡನು ; ಚಂದ್ರನು ಕಳಂಕವುಳ್ಳವನು ಮತ್ತು ಕ್ಷಯಿಸುವವನು. ಎಲೈ ರಾಜನೇ ನೋಡು. ವಿಧಿಯು ಮಾಡಿರುವ ಈ ನಿಯಮವು ದೊಡ್ಡವರಿಗೂ ಸಹ ಮೀರಲಸಾಧ್ಯವು.

**ವೇದಕರ್ತಾ ಜಗದ್ಧರ್ತಾ ಬುದ್ಧಿದಸ್ತು ಚತುರ್ಮುಖಃ ।**
**ಸೋಽಪಿ ವಿಕ್ಲಬತಾಂ ಪ್ರಾಪ್ತೋ ದೃಷ್ಟ್ವಾ ಪುತ್ರೀಂ ಸರಸ್ವತೀಂ ॥**

ವೇದವನ್ನು ಎಲ್ಲರಿಗೂ ಉಪದೇಶವನ್ನು ಮಾಡುವವನಾಗಿಯೂ, ಲೋಕವೆಲ್ಲಕ್ಕೂ ಜ್ಞಾನವನ್ನುಂಟುಮಾಡುವವನಾಗಿಯೂ, ಲೋಕವನ್ನು ಕಾಪಾಡುವವನಾಗಿಯೂ ಇರುವ ಚತುರ್ಮುಖಬ್ರಹ್ಮನೇ ತನ್ನ ಮಗಳಾದ ಸರಸ್ವತಿಯನ್ನು ನೋಡಿ ಇಂದ್ರಿಯಪರವಶನಾಗಿ ಕಾಮವಿಕಾರಕ್ಕೊಳಗಾದನು.

**ಶಿವಸ್ಯಾಪಿ ಮೃತಾ ಭಾರ್ಯಾ ಸತೀ ದಗ್ಧ್ವಾ ಕಳೇಬರಂ ।**
**ಸೋಽಭವದ್ದುಃಖಸಂತಪ್ತಃ ಕಾಮಾರ್ತಶ್ಚ ಜನಾರ್ತಿಹಾ ॥೩೪॥**

ಶಿವನ ಹೆಂಡತಿಯಾದ ಸತೀದೇವಿಯು ಅಗ್ನಿಕುಂಡದಲ್ಲಿ ಪ್ರವೇಶಿಸಿ ತನ್ನ ಶರೀರವನ್ನು ಸುಟ್ಟುಕೊಂಡು ಮೃತಳಾದಳು. ಇತರರ ದುಃಖವನ್ನು ನಾಶಮಾಡುವ ಅಂತಹ ಶಿವನೇ ಕಾಮವಿಕಾರಕ್ಕೊಳಗಾಗಿ ದುಃಖಕ್ಕೀಡಾದನು.

**ಕಾಮಾಗ್ನಿದಗ್ಧದೇಹಸ್ತು ಕಾಳಿಂದ್ಯಾಂ ಪತಿತಃ ಶಿವಃ ।**
**ಸಾಪಿ ಶ್ಯಾಮಜಲಾ ಜಾತಾ ತನ್ನಿದಾಘವಶಾನ್ನೃಪ ॥೩೫॥**

ಶಿವನು ಕಾಮಾಗ್ನಿಯಿಂದ ಸಂತಪ್ತಶರೀರವುಳ್ಳವನಾಗಿ ಯಮುನಾನದಿಯಲ್ಲಿ ಬಿದ್ದನು. ಎಲೈ ಜನಮೇಜಯರಾಜನೇ, ಕೇಳು ಆ ಶಿವನ ದೇಹದ ಜ್ವಾಲೆಯಿಂದ ಆ ನದಿಯ ನೀರು ಕಪ್ಪಾಯಿತು.

**ಕಾಮಾರ್ತೋ ರಮಮಾಣಸ್ತು ನಗ್ನಃ ಸೋऽಪಿ ಭೃಗೋರ್ವನಂ ।**
**ಗತಃ ಪ್ರಾಪ್ತೋऽಥ ಭೃಗುಣಾ ಶಪ್ತಃ ಕಾಮಾತುರೋ ಭೃಶಂ ॥೩೬॥**

ಶಿವನು ಕಾಮಾರ್ತನಾಗಿ, ದಿಗಂಬರನಾಗಿ ವಿಹರಿಸುತ್ತಾ ಭೃಗುಋಷಿಯ ತಪೋವನವನ್ನು ಸೇರಿ ಅಲ್ಲಿ ಭೃಗುಋಷಿಯ ಶಾಪಕ್ಕೆ ಗುರಿಯಾದನು.

**ಪತತ್ವದ್ಯೈವ ತೇ ಲಿಂಗಂ ನಿರ್ಲಜ್ಜೇತಿ ಭೃಶಂ ಕಿಲ ।**
**ಪಪೌ ಚಾಮೃತವಾಪೀಂ ಚ ದಾನವೈರ್ನಿರ್ಮಿತಾಂ ಮುದೇ ॥೩೭॥**

ಎಲೈ ನಾಚಿಕೆಯಿಲ್ಲದವನೇ, ನಿನ್ನ ಲಿಂಗವು ಈಕ್ಷಣವೇ ಬಿದ್ದುಹೋಗಲಿ ಎಂದು ಭೃಗುಋಷಿಯು ಶಿವನಿಗೆ ಶಾಪವನ್ನು ಕೊಟ್ಟನಂತೆ. ಅಲ್ಲದೆ, ರಾಕ್ಷಸರು ತಮ್ಮ ಸಂತೋಷಕ್ಕಾಗಿ ಮಾಡಿಕೊಂಡಿದ್ದ ಅಮೃತದ ಭಾವಿಯ ನೀರನ್ನೆಲ್ಲಾ ಶಿವನು ತಾನೇ ಕುಡಿದುಬಿಟ್ಟನು.

**ಇಂದ್ರೋऽಪಿ ಚ ವೃಷೋ ಭೂತ್ವಾ ವಾಹನತ್ವಂ ಗತಃ ಕ್ಷಿತೌ ।**
**ಆದ್ಯಸ್ಯ ಸರ್ವಲೋಕಸ್ಯ ವಿಷ್ಣೋರೇವ ವಿವೇಕಿನಃ ॥೩೮॥**

ಇಂದ್ರನೂ ಕೂಡ, ವಿವೇಕಿಯೂ, ಲೋಕಕ್ಕೆಲ್ಲಾ ಆದಿಪುರುಷನೂ ಆದ ವಿಷ್ಣುವಿಗೆ, ಗೂಳಿಯ ರೂಪದಿಂದ ಭೂಮಿಯಲ್ಲಿ ವಾಹನವಾಗಿದ್ದನು.

**ಸರ್ವಜ್ಞತ್ವಂ ಗತಂ ಕುತ್ರ ಪ್ರಭುಶಕ್ತಿಃ ಕುತೋ ಗತಾ ।**
**ಯದ್ಧೇಮಮೃಗವಿಜ್ಞಾನಂ ನ ಜ್ಞಾತಂ ಹರಿಣಾ ಕಿಲ ॥೩೯॥**

ರಾಮರೂಪದಿಂದ ಅವತರಿಸಿದ ವಿಷ್ಣುವಿಗೆ ಸರ್ವಜ್ಞತ್ವವು ಎಲ್ಲಿ ಹೋಯಿತು ? ಪ್ರಭುಶಕ್ತಿಯೂ ಎಲ್ಲಿ ಹೋಯಿತು ? ಏಕೆಂದರೆ, ಆ ರಾಮನು ಚಿನ್ನದ ಮೃಗದಂತೆ ಕಾಣುತ್ತಿರುವ ಮೃಗದ ನಿಜವಾದ ಸ್ವರೂಪವನ್ನು ತಿಳಿಯಲು ಸಮರ್ಥನಾಗಲಿಲ್ಲ.

**ರಾಜನ್ ಮಾಯಾಬಲಂ ಪಶ್ಯ ರಾಮೋ ಹಿ ಕಾಮಮೋಹಿತಃ ।**
**ರಾಮೋ ವಿರಹಸಂತಪ್ತೋ ರುರೋದ ಭೃಶಮಾತುರಃ ॥೪೦॥**

ಎಲೈ ರಾಜನೇ ಮಾಯೆಯ ಸಾಮರ್ಥ್ಯವನ್ನು ನೋಡು. ಶ್ರೀರಾಮನು ಕಾಮದಿಂದ ಮೋಹಿತನಾಗಿ ವಿಯೋಗದುಃಖದ ಸಂಕಟದಿಂದ ಬಹಳವಾಗಿ ಧೈರ್ಯ ಗೆಟ್ಟು ಅತ್ತನು.

ಯೋಽಪೃಚ್ಛತ್ಪಾದಪಾನ್ಮೂಢಃ ಕ್ವ ಗತಾ ಜನಕಾತ್ಮಜಾ ।
ಭಕ್ಷಿತಾ ವಾ ಹೃತಾ ಕೇನ ರುದನ್ನುಚ್ಚತರಂ ತತಃ ॥೪೧॥

ಮತ್ತು ಆ ರಾಮನು ಸೀತಾವಿರಹದಿಂದ ಯುಕ್ತಾಯುಕ್ತ ವಿವೇಕವಿಲ್ಲದವನಾಗಿ, ಸೀತೆಯು ಎಲ್ಲಿ ಹೋದಳು ? ಯಾರಿಂದಲಾದರೂ ಅವಳು ಭಕ್ಷಿಸಲ್ಪಟ್ಟಳೇ ? ಅಥವಾ ಅಪಹರಿಸಲ್ಪಟ್ಟಳೇ ಎಂದು ಮಾತನಾಡಲು ಶಕ್ತಿಯಿಲ್ಲದ ವೃಕ್ಷಗಳನ್ನು ಸಹ ಕೇಳುತ್ತಾ ಗಟ್ಟಿಯಾಗಿ ದುಃಖದಿಂದ ಗೋಳಾಡಿದನು.

ಲಕ್ಷ್ಮಣಾಹಂ ಮರಿಷ್ಯಾಮಿ ಕಾಂತಾವಿರಹದುಃಖಿತಃ ।
ತ್ವಂ ಚಾಪಿ ಮಮ ದುಃಖೇನ ಮರಿಷ್ಯಸಿ ವನೇಽನುಜ ॥೪೨॥

ಎಲೈ ತಮ್ಮನಾದ ಲಕ್ಷ್ಮಣನೇ ನಾನು ಸೀತೆಯ ವಿರಹದುಃಖದಿಂದ ಸಾಯುವೆನು. ನಾನು ಸತ್ತಮೇಲೆ ನನಗಾಗಿ ದುಃಖಪಟ್ಟು ನೀನು ಸಹ ಈ ಕಾಡಿನಲ್ಲಿ ಸಾಯುವೆ.

ಆವಯೋರ್ಮರಣಂ ಜ್ಞಾತ್ವಾ ಮಾತಾ ಮಮ ಮರಿಷ್ಯತಿ ।
ಶತ್ರುಘ್ನೋಽಪ್ಯತಿದುಃಖಾರ್ತಃ ಕಥಂ ಜೀವಿತುಮರ್ಹತಿ ॥೪೩॥

ನಮ್ಮಿಬ್ಬರ ಮರಣವನ್ನು ಕೇಳಿ ನನ್ನ ತಾಯಿಯು ಮರಣವನ್ನು ಹೊಂದುವಳು. ಶತ್ರುಘ್ನನೂ ಸಹ ಈ ನಮ್ಮ ಮರಣಗಳಿಂದ ಉಂಟಾಗುವ ದುಃಖವನ್ನು ಸಹಿಸಿಕೊಂಡು ಹೇಗೆತಾನೇ ಜೀವಿಸಿರಬಲ್ಲನು ?

ಸುಮಿತ್ರಾ ಜೀವಿತಂ ಜಹ್ಯಾತ್ ಪುತ್ರವ್ಯಸನಕರ್ಶಿತಾ ।
ಪೂರ್ಣಕಾಮಾಽಥ ಕೈಕೇಯೀ ಭವೇತ್ಪುತ್ರಸಮನ್ವಿತಾ ॥೪೪॥

ಪುತ್ರಶೋಕದಿಂದ ಕೃಶಳಾಗಿ ಸುಮಿತ್ರೆಯು ಪ್ರಾಣವನ್ನು ಬಿಟ್ಟಾಳು. ನಾವೆಲ್ಲರೂ ಹೀಗೆ ನಾಶವನ್ನು ಹೊಂದಿದ ಮೇಲೆ ಕೈಕೇಯಿಯು ತನ್ನ ಇಷ್ಟವು ಪೂರ್ಣವಾಯಿತೆಂದು ತನ್ನ ಮಗನೊಡನೆ ಸಂತೋಷಪಡಬಹುದು.

ಹಾ ಸೀತೇ ಕ್ವ ಗತಾಽಸಿ ತ್ವಂ ಮಾಂ ವಿಹಾಯ ಸ್ಮರಾತುರಾ ।
ಏಹ್ಯೇಹಿ ಮೃಗಶಾಬಾಕ್ಷಿ ಮಾಂ ಜೀವಯ ಕೃಶೋದರಿ ॥೪೫॥

ಕಿಂ ಕರೋಮಿ ಕ್ವ ಗಚ್ಛಾಮಿ ತ್ವದಧೀನಂ ಚ ಜೀವಿತಂ ।
ಸಮಾಶ್ವಾಸಯ ದೀನಂ ಮಾಂ ಪ್ರಿಯಂ ಜನಕನಂದಿನಿ ॥೪೬॥

ಅಯ್ಯೋ! ಎಲೈ ಸೀತೆಯೇ, ನೀನು ನನ್ನನ್ನು ಬಿಟ್ಟು ಎಲ್ಲಿಗೆ ಹೋಗಿದ್ದೀಯೆ? ನೀನೂ ಕಾಮಾತುರವುಳ್ಳವಳಾಗಿರುವವಳು. ಬಾ, ಬಾ, ಕೃಶವಾದ ಉದರ ಉಳ್ಳವಳೂ, ಜಿಂಕೆ ಮರಿಯ ಕಣ್ಣಿನಂತಿರುವ ಸುಂದರವಾದ ಕಣ್ಣುಗಳುಳ್ಳವಳೂ ಆದ ನೀನು ಬಂದು ನನ್ನನ್ನು ಜೀವಿಸುವಂತೆ ಮಾಡು. ನಾನು ಏನನ್ನು ಮಾಡಲಿ, ಎಲ್ಲಿಗೆ ಹೋಗಲಿ? ನನ್ನ ಪ್ರಾಣವು ನಿನ್ನ ಅಧೀನವಾಗಿರುವುದು. ಎಲೈ ಜನಕಪುತ್ರಿಯಾದ ಸೀತೆಯೇ, ಸಂಕಟದಿಂದ ದುಃಖಪಡುತ್ತಿರುವ ನಿನ್ನ ಪ್ರಿಯನಾದ ನನ್ನನ್ನು ಸಮಾಧಾನಪಡಿಸು ಎಂಬುದಾಗಿ ರಾಮನು ದುಃಖಿಸಿದನು.

**ಏವಂ ವಿಲಪತಾ ತೇನ ರಾಮೇಣಾಮಿತತೇಜಸಾ ।**
**ವನೇ ವನೇ ಚ ಭ್ರಮತಾ ನೇಕ್ಷಿತಾ ಜನಕಾತ್ಮಜಾ ॥೪೭॥**

ಅಪರಿಮಿತ ತೇಜಶ್ಶಾಲಿಯಾದ ಶ್ರೀರಾಮನು ಹೀಗೆ ಅಳುತ್ತಾ ಪ್ರತಿಯೊಂದು ಕಾಡಿನಲ್ಲಿಯೂ ಸೀತೆಯನ್ನು ಹುಡುಕಿಕೊಂಡು ಅಲೆಯುತ್ತಾ ಇದ್ದರೂ ಸೀತೆಯನ್ನು ಕಾಣಲಿಲ್ಲವು.

**ಶರಣ್ಯಃ ಸರ್ವಲೋಕಾನಾಂ ರಾಮಃ ಕಮಲಲೋಚನಃ ।**
**ಶರಣಂ ವಾನರಾಣಾಂ ಸ ಗತೋ ಮಾಯಾವಿಮೋಹಿತಃ ॥೪೮॥**

ಕಮಲದಂತೆ ಸುಂದರವಾದ ಕಣ್ಣುಗಳುಳ್ಳ, ಸರ್ವಲೋಕಕ್ಕೂ ರಕ್ಷಕನಾದ ಶ್ರೀರಾಮನು ಮಾಯೆಯಿಂದ ಮೋಹಿತನಾಗಿ ವಾನರರನ್ನು ಶರಣುಹೊಂದಿದನು.

**ಸಹಾಯಾನ್ ವಾನರಾನ್ಕೃತ್ವಾ ಬಬಂಧ ವರುಣಾಲಯಂ ।**
**ಜಘಾನ ರಾವಣಂ ವೀರಂ ಕುಂಭಕರ್ಣಂ ಮಹೋದರಂ ॥೪೯॥**

ಅನಂತರದಲ್ಲಿ ಶ್ರೀರಾಮನು ಕಪಿಗಳನ್ನು ಸಹಾಯಕರನ್ನಾಗಿ ಮಾಡಿಕೊಂಡು ಸಮುದ್ರಕ್ಕೆ ಸೇತುವನ್ನು ನಿರ್ಮಿಸಿ, ಶೂರನಾದ ರಾವಣನನ್ನೂ, ಕುಂಭಕರ್ಣನನ್ನೂ ಮಹೋದರನನ್ನೂ ಸಹ ಕೊಂದನು.

**ಆನೀಯ ಚ ತತಸ್ಸೀತಾಂ ರಾಮೋ ದಿವ್ಯಮಕಾರಯತ್ ।**
**ಸರ್ವಜ್ಞೋಽಪಿ ಹೃತಾಂ ಮತ್ವಾ ರಾವಣೇನ ದುರಾತ್ಮನಾ ॥೫೦॥**

ಶ್ರೀರಾಮನು ರಾವಣನನ್ನು ಸಂಹಾರಮಾಡಿದನಂತರ ತಾನು ಸರ್ವಜ್ಞನಾಗಿ ಇದ್ದಾಗ್ಯೂ, ದುಷ್ಟನಾದ ರಾವಣನು ಸೀತೆಯನ್ನು ಅಪಹರಿಸಿದನೆಂದು ಸೀತೆಯ ವಿಷಯದಲ್ಲಿ ಪರಿಶುದ್ಧತೆಗಾಗಿ ದಿವ್ಯಪರೀಕ್ಷೆಯಾದ ಅಗ್ನಿ ಪರೀಕ್ಷೆಯನ್ನು ಮಾಡಿಸಿದನು.

**ಕಿಂ ಬ್ರವೀಮಿ ಮಹಾರಾಜ ಯೋಗಮಾಯಾಬಲಂ ಮಹತ್ ।**
**ಯಯಾ ವಿಶ್ವಮಿದಂ ಸರ್ವಂ ಭ್ರಾಮಿತಃ ಭ್ರಮತೇ ಕಿಲ ॥೫೧॥**

ಎಲೈ ಮಹಾರಾಜನೇ, ಯಾವ ಯೋಗಮಾಯೆಯಿಂದ ಈ ಜಗತ್ತೆಲ್ಲವೂ ಸುತ್ತಿಸಲ್ಪಡುತ್ತಿರುವುದೋ ಎಂದರೆ ಜಗದ್ವ್ಯಾಪಾರವೆಲ್ಲವೂ ಕರ್ಮನಿಯಮಕ್ಕನು ಸಾರವಾಗಿ ನಡೆಸಲ್ಪಡುತ್ತಿರುವುದೋ ಅಂತಹ ಮಹಾಯೋಗಮಾಯೆಯ ಸಾಮರ್ಥ್ಯ ವನ್ನು ನಾನು ಏನೆಂದು ವರ್ಣಿಸಲಿ? ನೀನು ಕೇಳಿದ ಸಂಗತಿಗಳೆಲ್ಲಕ್ಕೂ ಈ ಮಾಯೆಯೇ ಕಾರಣವೆಂದು ತಿಳಿ.

**ಏವಂ ನಾನಾವತಾರೇಽತ್ರ ವಿಷ್ಣುಃ ಶಾಪವಶಂ ಗತಃ ।**
**ಕರೋತಿ ವಿವಿಧಾಶ್ಚೇಷ್ಟಾ ದೈವಾಧೀನಃ ಸದೈವ ಹಿ ॥೫೨॥**

ವಿಷ್ಣುವೂ ಸಹ ದೈವಗತಿಗೆ ಅಧೀನನಾಗಿಯೂ, ಶಾಪವಶಕ್ಕೆ ಸಿಕ್ಕಿಯೂ ಆಯಾಯ ಅವತಾರಗಳಲ್ಲಿ ಅನೇಕಪ್ರಕಾರವಾದ ಕೆಲಸಗಳನ್ನು ಮಾಡುತ್ತಾನೆ.

**ತವಾಹಂ ಕಥಯಿಷ್ಯಾಮಿ ಕೃಷ್ಣಸ್ಯಾಪಿ ವಿಚೇಷ್ಟಿತಂ ।**
**ಪ್ರಭವಂ ಮಾನುಷೇ ಲೋಕೇ ದೇವಕಾರ್ಯಾರ್ಥಸಿದ್ಧಯೇ ॥೫೩॥**

ದೇವತೆಗಳ ಕಾರ್ಯಸಿದ್ಧಿಗೋಸ್ಕರ ಮನುಷ್ಯಲೋಕದಲ್ಲಿ ಕೃಷ್ಣನು ಹುಟ್ಟಿ ಅವನು ಮಾಡಿದ ಅನೇಕ ಕಾರ್ಯಗಳನ್ನು ನಿನಗೆ ನಾನು ಹೇಳುವೆನು.

**ಕಾಳಿಂದೀಪುಳಿನೇ ರಮ್ಯೇ ಹ್ಯಾಸೀನ್ಮಧುವನಂ ಪುರಾ ।**
**ಲವಣೋ ಮಧುಪುತ್ರಸ್ತು ತತ್ರಾಸೀದ್ದಾನವೋ ಬಲೀ ॥೫೪॥**

ಯಮುನಾನದಿಯ ಮನೋಹರವಾದ ಮರಳುಗುಡ್ಡೆಯಲ್ಲಿ ರಮ್ಯವಾದ ಮಧುವನವು ಇದ್ದಿತು. ಪೂರ್ವಕಾಲದಲ್ಲಿ ಬಲಿಷ್ಠನಾದ ಮಧುವೆಂಬ ರಾಕ್ಷಸನಿಗೆ ಮಗನಾದ ಲವಣಾಸುರನು ಅಲ್ಲಿ ವಾಸವಾಗಿದ್ದನು.

ದ್ವಿಜಾನಾಂ ದುಃಖದಃ ಪಾಪೋ ವರದಾನೇನ ಗರ್ವಿತಃ ।
ನಿಹತೋಽಸೌ ಮಹಾಭಾಗ ಲಕ್ಷ್ಮಣಸ್ಯಾನುಜೇನ ವೈ ॥೫೫॥

ಈ ಲವಣಾಸುರನು ವರದಿಂದ ಗರ್ವವುಳ್ಳವನಾಗಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ತೊಂದರೆಯನ್ನು ಕೊಡುತ್ತಾ ಪಾಪಿಯಾಗಿದ್ದನು. ಓ ಪುಣ್ಯಶಾಲಿಯಾದ ಜನಮೇಜಯನೇ, ಇವನನ್ನು ಲಕ್ಷ್ಮಣನ ತಮ್ಮನಾದ ಶತ್ರುಘ್ನನು ಕೊಂದುಹಾಕಿದನು.

ಶತ್ರುಘ್ನೇನಾಥ ಸಂಗ್ರಾಮೇ ತಂ ನಿಹತ್ಯ ಮಹೋತ್ಕಟಂ ।
ವಾಸಿತಾ ಮಧುರಾ ನಾಮ ಪುರೀ ಪರಮಶೋಭನಾ ॥೫೬॥

ಹೀಗೆ ಶತ್ರುಘ್ನನು ಯುದ್ಧದಲ್ಲಿ ದುರಹಂಕಾರಿಯಾದ ಲವಣಾಸುರನನ್ನು ಕೊಂದ ಮೇಲೆ ಆ ಸ್ಥಳದಲ್ಲಿ ಮಧುರಾ ಎಂಬ ಹೆಸರುವಾಸಿಯಾದ ಉತ್ತಮವಾದ ಪಟ್ಟಣವನ್ನು ನಿರ್ಮಿಸಿದನು.

ಸ ತತ್ರ ಪುಷ್ಕರಾಕ್ಷೌ ದ್ವೌ ಪುತ್ರೌ ಶತ್ರುನಿಷೂದನಃ ।
ನಿವೇಶ್ಯ ರಾಜ್ಯೇ ಮತಿಮಾನ್ ಕಾಲೇ ಪ್ರಾಪ್ತೇ ದಿವಂಗತಃ ॥೫೭॥

ಅನಂತರದಲ್ಲಿ ಬುದ್ಧಿಶಾಲಿಯಾದ ಆ ಶತ್ರುಘ್ನನು ಆ ಮಧುರಾನಗರದಲ್ಲಿ ಕಮಲದಂತೆ ಸುಂದರವಾದ ಕಣ್ಣುಳ್ಳ, ಆ ಲವಣಾಸುರನ ಇಬ್ಬರು ಮಕ್ಕಳನ್ನು ರಾಜ್ಯವಾಳುವಂತೆ ನಿಯಮಿಸಿ, ಕೆಲವು ಕಾಲಾನಂತರದಲ್ಲಿ ತಾನು ಸ್ವರ್ಗವಾಸಿಯಾದನು.

ಸೂರ್ಯವಂಶಕ್ಷಯೇ ತಾಂತು ಯಾದವಾಃ ಪ್ರತಿಪೇದಿರೇ ।
ಮಧುರಾಂ ಮುಕ್ತಿದಾಂ ರಾಜನ್ ಯಯಾತಿತನಯಾಃ ಪುರಾ ॥೫೮॥

ಸೂರ್ಯವಂಶವು ಕ್ಷೀಣವಾದ ಮೇಲೆ ಯಯಾತಿಯ ಮಕ್ಕಳಾದ ಯಾದವರು, ವಾಸಮಾಡುವವರಿಗೆ ಮುಕ್ತಿಯನ್ನು ಕೊಡುವ ಆ ಮಧುರಾನಗರದಲ್ಲಿ ಬಂದು ಸೇರಿದರು.

ಶೂರಸೇನಾಭಿಧಶ್ಶೂರಸ್ತತ್ರಾಭೂನ್ಮೇದಿನೀಪತಿಃ ।
ಮಾಧುರಾಞ್ಛೂರಸೇನಾಂಶ್ಚ ಬುಭುಜೇ ವಿಷಯಾನ್ನೃಪ ॥೫೯॥

ಶೂರಸೇನನೆಂಬ ವೀರನಾದ ರಾಜನು ದೊರೆಯಾದನು. ಮತ್ತು ಅವನು ಆ ಮಧುರಾಪಟ್ಟಣದಲ್ಲಿರುವವರನ್ನೂ ಸಹ ಆ ದೇಶಗಳ ಜೊತೆಯಲ್ಲಿ ಕಾಪಾಡುತ್ತಿದ್ದನು.

ತತ್ರೋತ್ಪನ್ನಃ ಕಶ್ಯಪಾಂಶಃ ಶಾಪಾಚ್ಚ ವರುಣಸ್ಯ ವೈ ।
ವಸುದೇವೋಽತಿವಿಖ್ಯಾತಃ ಶೂರಸೇನಸುತಸ್ತದಾ ॥೬೦॥

ಆ ಮಧುರಾಪಟ್ಟಣದಲ್ಲಿ ವರುಣನ ಶಾಪದಿಂದ ಕಶ್ಯಪನು ತನ್ನ ಅಂಶದಿಂದ ಶೂರಸೇನರಾಜನಿಗೆ ಮಗನಾಗಿ ಹುಟ್ಟಿ ವಸುದೇವನೆಂದು ತುಂಬ ಪ್ರಸಿದ್ಧನಾದನು.

ವೈಶ್ಯವೃತ್ತಿರತಃ ಸೋಽಭೂನ್ಮೃತೇ ಪಿತರಿ ಮಾಧವಃ ।
ಉಗ್ರಸೇನೋ ಬಭೂವಾಥ ಕಂಸಸ್ತಸ್ಯಾತ್ಮಜೋ ಮಹಾನ್ ॥೬೧॥

ಆ ವಸುದೇವನು ವೈಶ್ಯವೃತ್ತಿಯನ್ನು ಅವಲಂಬಿಸಿಕೊಂಡು ಇದ್ದನು. ಶೂರಸೇನನು ಕಾಲವಾದನಂತರ ಉಗ್ರಸೇನನೆಂಬುವನು ರಾಜನಾದನು. ಅವನಿಗೆ ಕಂಸನೆಂಬುವನು ಮಗನಾದನು.

ಅದಿತಿರ್ದೇವಕೀ ಜಾತಾ ದೇವಕಸ್ಯ ಸುತಾ ತದಾ ।
ಶಾಪಾದ್ವೈ ವರುಣಸ್ಯಾಥ ಕಶ್ಯಪಾನುಗತಾ ಕಿಲ ॥೬೨॥

ಕಶ್ಯಪಋಷಿಯ ಪತ್ನಿಯಾದ ಆದಿತಿಯು ವರುಣನ ಶಾಪಾನುಸಾರವಾಗಿ ದೇವಕನಿಗೆ ಮಗಳಾಗಿ ಹುಟ್ಟಿ ದೇವಕಿಯೆಂಬ ಹೆಸರಿನಿಂದ ಪ್ರಸಿದ್ಧಳಾದಳು.

ದತ್ತಾ ಸಾ ವಸುದೇವಾಯ ದೇವಕೇನ ಮಹಾತ್ಮನಾ ।
ವಿವಾಹೇ ರಚಿತೇ ತತ್ರ ವಾಗಭೂದ್ಗಗನೇ ತದಾ ॥೬೩॥

ಮಹಾನುಭಾವನಾದ ದೇವಕನು ತನ್ನ ಮಗಳಾದ ದೇವಕಿಯನ್ನು ವಸುದೇವನಿಗೆ ಕೊಟ್ಟು ಮದುವೆಮಾಡಿದನು. ಈ ಮದುವೆಯು ಆಗುವಾಗ ಅಂತರಿಕ್ಷದಲ್ಲಿ ಅಶರೀರವಾಣಿಯುಂಟಾಯಿತು.

ಕಂಸ ಕಂಸ ಮಹಾಭಾಗ ದೇವಕೀಗರ್ಭಸಂಭವಃ ।
ಅಷ್ಟಮಸ್ತು ಸುತಃ ಶ್ರೀಮಾನ್ ತವ ಹಂತಾ ಭವಿಷ್ಯತಿ ॥೬೪॥

ಎಲೈ ಅದೃಷ್ಟಶಾಲಿಯಾದ ಕಂಸನೇ, ದೇವಕಿಯ ಗರ್ಭದಲ್ಲಿ ಹುಟ್ಟುವ ಪುಣ್ಯಶಾಲಿಯಾದ ಎಂಟನೆಯ ಮಗನು ನಿನ್ನನ್ನು ಕೊಲ್ಲುವವನಾಗುವನು.

**ತಚ್ಛ್ರುತ್ವಾ ವಚನಂ ಕಂಸೋ ವಿಸ್ಮಿತೋಽಭೂನ್ಮಹಾಬಲಃ ।**
**ದೇವವಾಚಂ ತು ತಾಂ ಮತ್ವಾ ಸತ್ಯಾಂ ಚಿಂತಾಮವಾಪ ಸಃ ॥೬೫॥**

ಬಹಳ ಬಲಿಷ್ಠನಾದ ಕಂಸನು ಆ ಮಾತನ್ನು ಕೇಳಿ ಆಶ್ಚರ್ಯಪಟ್ಟನು. ಮತ್ತು ಅವನು, ಆ ದೇವವಚನವು ನಿಜವಾದದ್ದೆಂದು ತಿಳಿದು ಆತಂಕದಿಂದ ವ್ಯಸನವನ್ನು ಹೊಂದಿದನು.

**ಕಿಂ ಕರೋಮೀತಿ ಸಂಚಿಂತ್ಯ ವಿಮರ್ಶಮಕರೋತ್ತದಾ ।**
**ನಿಹತ್ಯೈನಾಂ ನ ಮೇ ಮೃತ್ಯುಃ ಭವೇದದ್ಯೈವ ಸತ್ವರಂ ॥೬೬॥**

ಆಗ ಕಂಸನು ಏನನ್ನು ಮಾಡಲಿ ಎಂದು ಯೋಚಿಸಿ ಮನಸ್ಸಿನಲ್ಲಿ ಹೀಗೆ ವಿಚಾರಮಾಡಿದನು. ನಾನು ಈಗಲೇ ಸಾವಕಾಶಮಾಡದೆ ದೇವಕಿಯನ್ನು ಕೊಂದ ಪಕ್ಷದಲ್ಲಿ ನನಗೆ ಮರಣವು ಸಂಭವಿಸುವುದಿಲ್ಲವು.

**ಉಪಾಯೋ ನಾನ್ಯಥಾ ಚಾಸ್ಮಿನ್ ಕಾರ್ಯೇ ಮೃತ್ಯುಭಯಾವಹೇ ।**
**ಇಯಂ ಪಿತೃಷ್ವಸಾ ಪೂಜ್ಯಾ ಕಥಂ ಹನ್ಮೀತ್ಯಚಿಂತಯತ್ ॥೬೭॥**

ಮೃತ್ಯುಭಯವನ್ನುಂಟುಮಾಡುವ ಈ ಕೆಲಸದಲ್ಲಿ ದೇವಕಿಯನ್ನು ಕೊಲ್ಲುವುದಕ್ಕಿಂತ ಬೇರೆ ಯಾವ ಉಪಾಯವೂ ಇರುವುದಿಲ್ಲ. ಆದರೆ ಇವಳು ನನ್ನ ತಂದೆಯ ತಂಗಿಯಾಗಿದ್ದಾಳೆ ; ಇವಳು ನನಗೆ ತಂದೆಯಂತೆ ಪೂಜ್ಯಳು. ಇವಳನ್ನು ನಾನು ಹೇಗೆ ತಾನೇ ಕೊಲ್ಲಲಿ ? ಎಂಬುದಾಗಿ ಯೋಚಿಸಿದನು.

**ಪುನರ್ವಿಚಾರಯಾಮಾಸ ಮರಣಂ ಮೇಽಸ್ತ್ಯಹೋ ಸ್ವಸಾ ।**
**ಪಾಪೇನಾಪಿ ಪ್ರಕರ್ತವ್ಯಾ ದೇಹರಕ್ಷಾ ವಿಪಶ್ಚಿತಾ ॥೬೭॥**

ಬುದ್ಧಿವಂತನು ತನ್ನ ದೇಹಸಂರಕ್ಷಣೆಗೋಸ್ಕರ ಪಾಪಕೆಲಸವನ್ನು ಮಾಡಿಯಾದರೂ ದೇಹವನ್ನು ರಕ್ಷಿಸಬೇಕು. ನನಗೆ ಪಿತೃಷ್ವಸೃವಿನಿಂದ ಮರಣವು ಎಂಬುದು ಆಶ್ಚರ್ಯವಾಗಿದೆ. ಎಂದು ಮತ್ತೆ ವಿಚಾರಮಾಡಿದನು.

**ಪ್ರಾಯಶ್ಚಿತ್ತೇನ ಪಾಪಸ್ಯ ಶುದ್ಧಿರ್ಭವತಿ ಸರ್ವದಾ ।**
**ಪ್ರಾಣರಕ್ಷಾ ಪ್ರಕರ್ತವ್ಯಾ ಬುಧೈರಪ್ಯೇನಸಾ ತಥಾ ॥೬೮॥**

ಇವಳನ್ನು ಈಗ ಕೊಲ್ಲದಿದ್ದರೆ ನನಗೆ ಇವಳಿಂದ ಮರಣವು ಉಂಟಾಗುವುದು. ಹೇಗಾದರೂ ಇವಳನ್ನು ಕೊಂದ ಪಾಪವನ್ನು ಪ್ರಾಯಶ್ಚಿತ್ತದಿಂದ ಕಳೆದುಕೊಂಡು ಶುದ್ಧನಾಗಬಹುದು. ಕೆಟ್ಟಕೆಲಸವನ್ನು ಮಾಡಿಯಾದರೂ ಪ್ರಾಣರಕ್ಷಣೆಯನ್ನು ಮಾಡಿಕೊಳ್ಳಬೇಕು.

**ವಿಚಿಂತ್ಯ ಮನಸಾ ಕಂಸಃ ಖಡ್ಗಮಾದಾಯ ಸತ್ವರಃ ।**
**ಜಗ್ರಾಹ ತಾಂ ವರಾರೋಹಾಂ ಕೇಶೇಷ್ವಾಕೃಷ್ಯ ಪಾಪಕೃತ್ ॥೬೯॥**

ಪಾಪಿಷ್ಠನಾದ ಕಂಸನು ಹೀಗೆಂದು ಮನಸ್ಸಿನಲ್ಲಿ ಯೋಚಿಸಿಕೊಂಡು ಜಾಗ್ರತೆಯಾಗಿ ಕತ್ತಿಯನ್ನು ತೆಗೆದುಕೊಂಡು, ಆ ದೇವಕಿಯನ್ನು ಕೊಲ್ಲಲು ಅವಳ ಮುಂದಲೆಯನ್ನು ಹಿಡಿದೆಳೆದನು.

**ಕೋಶಾತ್ಖಡ್ಗಮುಪಾಕೃತ್ಯ ಹಂತುಕಾಮೋ ದುರಾಶಯಃ ।**
**ಪಶ್ಯತಾಂ ಸರ್ವಲೋಕಾನಾಂ ನವೋಢಾಂ ತಾಂ ಚಕರ್ಷ ಹ ॥೭೦॥**

ಎಲ್ಲ ಜನರೂ ನೋಡುತ್ತಿರುವಾಗಲೇ ದುಷ್ಟಾಭಿಪ್ರಾಯದವನಾದ ಕಂಸನು ಮದವಣಗಿತ್ತಿಯಾಗಿರುವ ದೇವಕಿಯನ್ನು ಕೊಲ್ಲಲು ಇಚ್ಛೆಯುಳ್ಳವನಾಗಿ ಒರೆಯಿಂದ ಕತ್ತಿಯನ್ನು ಹಿರಿದು ಆ ದೇವಕಿಯನ್ನು ಹಿಡಿದೆಳೆದನು.

**ಹನ್ಯಮಾನಾಂ ಚ ತಾಂ ದೃಷ್ಟ್ವಾ ಹಾಹಾಕಾರೋ ಮಹಾನಭೂತ್ ।**
**ವಸುದೇವಾನುಗಾ ವೀರಾಃ ಯುದ್ಧಾಯೋದ್ಯತಕಾರ್ಮುಕಾಃ ॥೭೧॥**

**ಮುಂಚ ಮುಂಚೇತಿ ಪ್ರೋಚುಸ್ತಂ ತೇ ತದಾಽದ್ಭುತಸಾಹಸಾಃ ।**
**ಕೃಪಯಾ ಮೋಚಯಾಮಾಸುರ್ದೇವಕೀಂ ದೇವಮಾತರಂ ॥೭೨॥**

ಕಂಸನು ದೇವಕಿಯನ್ನು ಕೊಲ್ಲಲುದ್ಯುಕ್ತನಾದುದನ್ನು ಕಂಡಕೂಡಲೇ ಅಲ್ಲಿ ಬಹಳ ಹಾಹಾಕಾರವುಂಟಾಯಿತು. ವಸುದೇವನ ಕಡೆಯ ಶೂರರೆಲ್ಲರೂ ಯುದ್ಧಕ್ಕಾಗಿ ಬಿಲ್ಲನ್ನು ಸಿದ್ಧಮಾಡಿಕೊಂಡರು. ಸಾಹಸಪರರಾದ ಆ ವೀರರೆಲ್ಲರೂ ದೇವಕಿಯನ್ನು ಬಿಡುಬಿಡೆಂದು ಕಂಸನಿಗೆ ಹೇಳಿ, ಅವನನ್ನು ತಡೆದು ದೇವನಿಗೆ ಮಾತೆಯಾಗುವ ದೇವಕೀದೇವಿಯನ್ನು ದಯೆಯಿಂದ ಕಂಸನ ಹಿಡಿತದಿಂದ ಬಿಡಿಸಿದರು.

**ತದ್ಯುದ್ಧಮಭವದ್ಘೋರಂ ಧೀರಾಣಾಂ ಚ ಪರಸ್ಪರಂ ।**
**ವಸುದೇವಸಹಾಯಾನಾಂ ಕಂಸೇನ ಚ ಮಹಾತ್ಮನಾ ॥೭೩॥**

ಧೈರ್ಯಶಾಲಿಗಳಾದ ವಸುದೇವನ ಕಡೆಯವರಿಗೂ ಮಹಾತ್ಮನಾದ ಕಂಸನಿಗೂ ಸಹ ಪರಸ್ಪರವಾಗಿ ಭಯಂಕರವಾದ ಯುದ್ಧವು ನಡೆಯಿತು.

**ವರ್ತಮಾನೇ ತಥಾ ಯುದ್ಧೇ ದಾರುಣೇ ಲೋಮಹರ್ಷಣೇ ।**
**ಕಂಸಂ ನಿವಾರಯಾಮಾಸುರ್ವೃದ್ಧಾ ಯೇ ಯದುಸತ್ತಮಾಃ ॥೭೪॥**

ಭಯಂಕರವಾದ, ರೋಮಾಂಚವನ್ನುಂಟುಮಾಡುವುದಾದ ಯುದ್ಧವು ಹಾಗೆ ನಡೆಯುತ್ತಿರುವಾಗ ಯಾದವರಲ್ಲಿ ಹಿರಿಯರಾದವರು ಕಂಸನಿಗೆ ಸಮಾಧಾನವಾಗುವ ಮಾತನ್ನು ಹೇಳಿ ಯುದ್ಧವನ್ನು ನಿಲ್ಲಿಸಿದರು.

**ಪಿತೃಷ್ವಸೇಯಂ ತೇ ವೀರ ಪೂಜನೀಯಾ ಚ ಬಾಲಿಶಾ ।**
**ನ ಹಂತವ್ಯಾ ತ್ವಯಾ ವೀರ ವಿವಾಹೋತ್ಸವಸಂಗಮೇ ॥೭೫॥**

ಎಲೈ ಶೂರನಾದ ಕಂಸನೇ, ಈ ದೇವಕಿಯು ನಿನಗೆ ಸೋದರತ್ತೆಯಾಗಬೇಕು. ಆದುದರಿಂದ ಮರ್ಯಾದೆಗೆ ಅರ್ಹಳು. ಮತ್ತು ಇವಳು ಇನ್ನೂ ಹುಡುಗಿಯು. ಹಟಗಾರನಾದ ಕಂಸನೇ, ಇವಳನ್ನು ನೀನು ಸಂತೋಷಸಮಯವಾದ ಈ ವಿವಾಹಕಾಲದಲ್ಲಿ ಕೊಲ್ಲತಕ್ಕದ್ದಲ್ಲವು.

**ಸ್ತ್ರೀಹತ್ಯಾ ದುಸ್ಸಹಾ ವೀರ ಕೀರ್ತಿಘ್ನೀ ಪಾಪಕೃತ್ತಮಾ ।**
**ಭೂತಭಾಷಿತಮಾತ್ರೇಣ ನ ಕರ್ತವ್ಯಾ ವಿಜಾನತಾ ॥೭೬॥**

ಎಲೈ ವೀರನಾದ ಕಂಸನೇ ಕೇಳು. ಸ್ತ್ರೀಹತ್ಯೆಯು ಕೀರ್ತಿಯನ್ನು ನಾಶಮಾಡುವುದು ಮತ್ತು ಬಹಳ ಪಾತಕವನ್ನುಂಟುಮಾಡುವುದು. ಆಕಾಶವಾಣಿಯು ಕೇಳಿಬಂದ ಮಾತ್ರದಿಂದ ಬುದ್ಧಿವಂತನಾದವನು ಅದನ್ನು ನಂಬಿ ಪಾಪವನ್ನು ಮಾಡಬಾರದು.

**ಅಂತರ್ಹಿತೇನ ಕೇನಾಪಿ ಶತ್ರುಣಾ ತವ ಚಾಸ್ಯ ವಾ ।**
**ಉದಿತೇತಿ ಕುತೋ ನ ಸ್ಯಾದ್ವಾಗನರ್ಥಕರೀ ವಿಭೋ ॥೭೭॥**

ಎಲೈ ರಾಜನಾದ ಕಂಸನೇ ನಿನಗೆ ಶತ್ರುವಾದವನೂ ಈ ವಸುದೇವನಿಗೆ ಶತ್ರುವಾದವನೂ ಆದ ಯಾವನೋ ಒಬ್ಬನು ಮರೆಯಾಗಿದ್ದು ನಿಮಗೆ ಕೆಟ್ಟದ್ದನ್ನು ಉಂಟುಮಾಡುವ ಸಲುವಾಗಿ ಈ ಮಾತನ್ನು ಏಕೆ ಹೇಳಿರಬಾರದು ?

**ಯಶಸಸ್ತೇ ವಿಘಾತಾಯ ವಸುದೇವಗೃಹಸ್ಯ ಚ ।**
**ಅರಿಣಾ ರಚಿತಾ ವಾಣೀ ಗುಣಮಾಯಾವಿದಾ ನೃಪ ॥೭೮॥**

ಉಪಾಯಗಾರನಾಗಿ ಮೋಸವನ್ನು ತಿಳಿದಿರುವ ನಿನ್ನ ಶತ್ರುವೋ ಅಥವಾ ವಸುದೇವನ ಹೆಂಡತಿಯ ಶತ್ರುವೋ ಆಗಿರುವ ಯಾವನೋ ಒಬ್ಬನು ನಿನ್ನ ಕೀರ್ತಿಯನ್ನು ನಾಶಮಾಡುವುದಕ್ಕಾಗಿಯೂ, ವಸುದೇವನ ಮನೆಯನ್ನು ಹಾಳು ಮಾಡುವುದಕ್ಕಾಗಿಯೂ ಓ ದೊರೆಯೇ, ಈ ಮಾತನ್ನು ಆಡಿರಬಹುದು.

**ಬಿಭೇಷಿ ವೀರಸ್ತ್ವಂ ಭೂತ್ವಾ ಭೂತಭಾಷಿತಭಾಷಯಾ ।**
**ಯಶೋಮೂಲವಿಘಾತಾರ್ಥಮುಪಾಯಸ್ತ್ವರಿಣಾ ಕೃತಃ ॥೭೯॥**

ಶೂರನಾಗಿರುವ ನೀನು ಈ ಆಕಾಶವಾಕ್ಯಿಗೆ ಹೆದರಬಹುದೇ ? ಕೀರ್ತಿಯನ್ನೂ ವಂಶಮೂಲವನ್ನೂ ಹಾಳುಮಾಡುವುದಕ್ಕಾಗಿ ಶತ್ರುವು ಮಾಡಿರುವ ಉಪಾಯವಿದು.

**ಪಿತೃಷ್ವಸಾ ನ ಹಂತವ್ಯಾ ವಿವಾಹಸಮಯೇ ಪುನಃ ।**
**ಭವಿತವ್ಯಂ ಮಹಾರಾಜ ಭವೇಚ್ಚ ಕಥಮನ್ಯಥಾ ॥೮೦॥**

ಎಲೈ ಮಹಾರಾಜನಾದ ಕಂಸನೇ ನಿನಗೆ ತಂದೆಯಂತೆ ಪೂಜ್ಯಳಾದ ಸೋದರತ್ತೆಯನ್ನು ಕೊಲ್ಲುವುದು ಸರಿಯಲ್ಲವು. ವಿವಾಹಕಾಲದಲ್ಲಂತೂ ಇಂಥಾ ಕಾರ್ಯವನ್ನು ಮಾಡಲೇಕೂಡದು. ಹೀಗೆಯೇ ಆಗಬೇಕೆಂದು ವಿಧಿನಿಯಮವಿರುವ ಪಕ್ಷದಲ್ಲಿ ಆ ಕಾರ್ಯವನ್ನು ಬೇರೆ ವಿಧವಾಗಿ ಹೇಗೆ ತಾನೇ ಬದಲಾಯಿಸಲು ಆದೀತು ?

**ಏವಂ ತೈರ್ಬೋಧ್ಯಮಾನೋಽಸೌ ನಿವೃತ್ತೋ ನಾಭವದ್ಯದಾ ।**
**ತದಾ ತಂ ವಸುದೇವೋಽಪಿ ನೀತಿಜ್ಞಃ ಪ್ರತ್ಯಭಾಷತ ॥೮೧॥**

ಯಾದವರಲ್ಲಿ ವೃದ್ಧರಾದವರು ಕಂಸನಿಗೆ ಈರೀತಿಯಲ್ಲಿ ಬುದ್ಧಿಹೇಳುತ್ತಿದ್ದಾಗ್ಯೂ ಕಂಸನು ಆ ದುಷ್ಕೃತ್ಯವನ್ನು ಮಾಡದೆ ಬಿಡಲು ಒಪ್ಪಲಿಲ್ಲ. ಆಗ ಸಮಯೋಚಿತವಾದ ನೀತಿಯಲ್ಲಿ ತಿಳಿವಳಿಕೆಯುಳ್ಳ ವಸುದೇವನು ಕಂಸನಿಗೆ ಹೀಗೆ ಹೇಳಿದನು.

**ಕಂಸ ಸತ್ಯಂ ಬ್ರವೀಮ್ಯದ್ಯ ಸತ್ಯಾಧಾರಂ ಜಗತ್ರಯಂ ।**
**ದಾಸ್ಯಾಮಿ ದೇವಕೀಪುತ್ರಾನುತ್ಪನ್ನಾಂಸ್ತವ ಸರ್ವಶಃ ॥೬೨॥**

ಎಲೈ ಕಂಸನೇ, ಮೂರು ಲೋಕವೂ ಸಹ ಸತ್ಯದ ಆಧಾರದಿಂದಲೇ ನಿಂತಿರುವುದು. ಅಂತಹ ಸತ್ಯವನ್ನೇ ಆಧಾರವಾಗಿ ಮಾಡಿ ನಿನಗೆ ನಾನು ಈ ಮಾತನ್ನು ಹೇಳುತ್ತೇನೆ. ದೇವಕಿಯು ಹೆತ್ತಮಕ್ಕಳನ್ನೆಲ್ಲವನ್ನೂ ನಿನಗೆ ತಂದುಕೊಡುವೆನು.

**ಜಾತಂ ಜಾತಂ ಸುತಂ ತುಭ್ಯಂ ನ ದಾಸ್ಯಾಮಿ ಯದಿ ಪ್ರಭೋ ।**
**ಕುಂಭೀಪಾಕೇ ತದಾ ಘೋರೇ ಪತಂತು ಮಮ ಪೂರ್ವಜಾಃ ॥೬೩॥**

ಮಕ್ಕಳು ಹುಟ್ಟಿದ ಹಾಗೆಲ್ಲಾ ಅವನ್ನು ನಾನು ನಿನಗೆ ತಂದು ಕೊಡದಿದ್ದರೆ ಆಗ ನನ್ನ ಪೂರ್ವಿಕರು ಘೋರವಾದ ಕುಂಭೀಪಾಕವೆಂಬ ನರಕದಲ್ಲಿ ಬೀಳಲಿ.

**ಶ್ರುತ್ವಾಽಥ ವಚನಂ ಸತ್ಯಂ ಪೌರವಾ ಯೇ ಪುರಸ್ಸ್ಥಿತಾಃ ।**
**ಊಚುಸ್ತೇ ತ್ವರಿತಾಃ ಕಂಸಂ ಸಾಧು ಸಾಧು ಪುನಃಪುನಃ ॥೬೪॥**

ವಸುದೇವನು ಆಡಿದ ಸತ್ಯವಾದ ಈ ಮಾತನ್ನು ಕೇಳಿ ಯಾದವರು ಜಾಗ್ರತೆಯಾಗಿ ಕಂಸನನ್ನು ಕುರಿತು—ಈ ಮಾತು ಬಹಳ ಚನ್ನಾಗಿದೆ, ಚನ್ನಾಗಿದೆ ಎಂದು ಅನೇಕಸಾರಿ ಹೇಳಿದರು.

**ನ ಮಿಥ್ಯಾಭಾಷತೇ ಕ್ವಾಪಿ ವಸುದೇವೋ ಮಹಾಮನಾಃ ।**
**ಕೇಶಂ ಮುಂಚ ಮಹಾಭಾಗ ಸ್ತ್ರೀಹತ್ಯಾಪಾತಕಂ ತಥಾ ॥೬೫॥**

ಧೀರಮನಸ್ಸುಳ್ಳವನಾದ ಈ ವಸುದೇವನು ಯಾವಾಗಲೂ ಸುಳ್ಳನ್ನು ಹೇಳುವುದಿಲ್ಲ. ಎಲೈ ಅದೃಷ್ಟಶಾಲಿಯಾದ ಕಂಸನೇ ದೇವಕಿಯ ಕೇಶಪಾಶವನ್ನು ಬಿಡು. ಸ್ತ್ರೀಹತ್ಯೆಯು ಪಾಪವನ್ನುಂಟುಮಾಡುವುದು. ಅದನ್ನೂ ಮಾಡಬೇಡ.

॥ ವ್ಯಾಸ ಉವಾಚ ॥

**ಏವಂ ಪ್ರಬೋಧಿತಃ ಕಂಸೋ ಯದುವೃದ್ಧೈರ್ಮಹಾತ್ಮಭಿಃ ।**
**ಕ್ರೋಧಂ ತ್ಯಕ್ತ್ವಾ ಸ್ಥಿತಸ್ತತ್ರ ಸತ್ಯವಾಕ್ಯಾನುಮೋದಿತಃ ॥೬೬॥**

ವ್ಯಾಸಋಷಿಯು ಹೇಳಿದನು—ಮಹಿಮೆಯುಳ್ಳವರಾದ ಯದುವೃದ್ಧರು ಹೀಗೆ ಕಂಸನಿಗೆ ತಿಳಿವಳಿಕೆಯನ್ನು ಕೊಟ್ಟಮೇಲೆ ವಸುದೇವನ ಸತ್ಯವಾಕ್ಯವನ್ನು ಅನುಮೋದಿಸಿ ಆ ಕಂಸನು ತನ್ನ ಕೋಪವನ್ನು ಬಿಟ್ಟು ಸುಮ್ಮನಾದನು.

**ತತೋ ದುಂದುಭಯೋ ನೇದುರ್ವಾದಿತ್ರಾಣಿ ಚ ಸಸ್ವನುಃ ।**
**ಜಯಶಬ್ದಸ್ತು ಸರ್ವೇಷಾಮುತ್ಪನ್ನಸ್ತತ್ರ ಸಂಸದಿ ॥೮೭॥**

ಆ ಮೇಲೆ ನಗಾರಿಗಳು ಭೋರ್ಗರೆದವು. ಓಲಗ ಮುಂತಾದ ವಾದ್ಯಗಳೂ ನೊಳಗಿದವು. ಆ ಜನಸ್ತೋಮದಲ್ಲಿ ಎಲ್ಲರೂ ಜಯಶಬ್ದಗಳನ್ನು ಮಾಡಿದರು.

**ಪ್ರಸಾದ್ಯ ಕಂಸಂ ಪ್ರತಿಮೋಚ್ಯ ದೇವಕೀಂ**
**ಮಹಾಯಶಾಃ ಶೂರಸುತಸ್ತದಾನೀಂ ।**
**ಜಗಾಮ ಗೇಹಂ ಸ್ವಜನಾನುವೃತ್ತೋ**
**ನವೋಢಯಾ ವೀತಭಯಸ್ತರಸ್ವೀ ॥೮೮॥**

ಕೀರ್ತಿವಂತನೂ ಶೂರನೂ ಆದ, ಶೂರಸೇನನ ಮಗನಾದ ವಸುದೇವನು ಆಗ ಕಂಸನನ್ನು ಸಮಾಧಾನಮಾಡಿ, ದೇವಕಿಯನ್ನು ಬಿಡಿಸಿಕೊಂಡು, ಯಾವ ಭಯವೂ ಇಲ್ಲದೆ, ಹೊಸದಾಗಿ ಮದುವೆಯಾದ ಆ ದೇವಕಿಯೊಡನೆ ತನ್ನ ಪರಿಜನರು ಹಿಂಬಾಲಿಸುತ್ತಿರಲು ತನ್ನ ಮನೆಯನ್ನು ಜಾಗ್ರತೆಯಿಂದ ಸೇರಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಚತುರ್ಥಸ್ಕಂಧೇ

### || ಏಕವಿಂಶೋಽಧ್ಯಾಯಃ ||

### ಇಪ್ಪತ್ತೊಂದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಅಥ ಕಾಲೇ ತು ಸಂಪ್ರಾಪ್ತೇ ದೇವಕೀ ದೇವರೂಪಿಣೀ ।**
**ಗರ್ಭಂ ದಧಾರ ವಿಧಿವದ್ವಸುದೇವೇನ ಸಂಗತಾ** ||೧||

ವ್ಯಾಸಮುನಿಯು ಹೇಳಿದನು—ಮದುವೆಯು ಆದಮೇಲೆ, ಸರಿಯಾದ ಕಾಲದಲ್ಲಿ ದೇವತೆಯಂತೆ ಸೌಂದರ್ಯಶಾಲಿನಿಯಾದ ದೇವಕಿಯು ಶಾಸ್ತ್ರೋಕ್ತವಾದ ರೀತಿಯಿಂದ ವಸುದೇವನೊಡನೆ ಸಂಬಂಧವನ್ನು ಪಡೆದು ಗರ್ಭವನ್ನು ಧರಿಸಿದಳು.

**ಪೂರ್ಣೇಽಥ ದಶಮೇ ಮಾಸೇ ಸುಷುವೇ ಸುತಮುತ್ತಮಂ ।**
**ರೂಪಾವಯವಸಂಪನ್ನಂ ದೇವಕೀ ಪ್ರಥಮಂ ಯದಾ** ||೨||

ಆಗ ಹತ್ತನೆಯ ತಿಂಗಳು ತುಂಬಿದ ಮೇಲೆ, ದೇವಕಿಯು ಒಳ್ಳೆಯ ರೂಪಿನಿಂದಲೂ ಅವಯವಸೌಷ್ಠವದಿಂದಲೂ ಕೂಡಿರುವ ತನ್ನ ಮೊದಲನೆಯ ಮಗನನ್ನು ಹೆತ್ತಳು.

**ತದಾಹ ವಸುದೇವಸ್ತಾಂ ಸತ್ಯವಾಕ್ಯಾನುಮೋದಿತಃ ।**
**ಭಾವಿತ್ವಾಚ್ಚ ಮಹಾಭಾಗೋ ದೇವಕೀಂ ದೇವಮಾತರಂ** ||೩||

ಸತ್ಯವಾಕ್ಯಕ್ಕೆ ಅನುಸರಿಸಿ ನಡೆಯುವವನಾದ ಮತ್ತು ಅದೃಷ್ಟಶಾಲಿಯಾದ ವಸುದೇವನು, ದೇವಾಂಶನಾದ ಕೃಷ್ಣನಿಗೆ ತಾಯಿಯಾಗುವ ಆ ದೇವಕಿಯನ್ನು

ಕುರಿತು, ಹುಟ್ಟಿದ ಮಗುವಿನ ಅದೃಷ್ಟಾನುಸಾರವಾಗಿ ನಡೆಯಬೇಕಾಗಿದ್ದುದರಿಂದ ಆಗ ಹೀಗೆ ಹೇಳಿದನು.

**ವರೋರು ಸಮಯಂ ಮೇ ತ್ವಂ ಜಾನಾಸಿ ಸ್ವಸುತಾರ್ಪಣೇ ।**
**ಮೋಚಿತಾ ತ್ವಂ ಮಹಾಭಾಗೇ ಶಪಥೇನ ಮಯಾ ತದಾ ॥೪॥**

ಎಲೌ ದೇವಕಿಯೇ, ನೀನು ನನ್ನ ಮಗುವನ್ನು ಕಂಸನಿಗೆ ಅರ್ಪಿಸುವ ವಿಷಯದಲ್ಲಿ ನಾನು ಕಂಸನ ಸಂಗಡ ಮಾಡಿಕೊಂಡಿರುವ ಒಪ್ಪಂದವನ್ನು ತಿಳಿದಿರುತ್ತೀಯೆ. ಮತ್ತು ಆ ಕಾಲದಲ್ಲಿ ನಾನು ಮೇಲೆ ಹೇಳಿದಂತೆ ಪ್ರತಿಜ್ಞೆಯನ್ನು ಮಾಡಿ ಕಂಸನಿಂದ ನಿನ್ನನ್ನು ಬಿಡಿಸಿದೆನು. ಅದನ್ನೂ ನೀನು ತಿಳಿದಿದ್ದೀಯೆ.

**ಇಮಂ ಪುತ್ರಂ ಸುಕೇಶಾಂತೇ ದಾಸ್ಯಾಮಿ ಭ್ರಾತೃಸೂನವೇ ।**
**ಖಲೇ ಕಂಸೇ ವಿನಾಶಾರ್ಥಂ ದೈವೇ ಕಿಂ ವಾ ಕರಿಷ್ಯಸಿ ॥೪॥**

ಎಲೌ ಸುಂದರವಾದ ಕೇಶರಾಶಿಯುಳ್ಳವಳೇ, ಈ ಮಗುವನ್ನು ಸೋದರ ಮಗನಾದ ನೀಚನಾದ ಕಂಸನಿಗೆ ಕೊಲ್ಲುವುದಕ್ಕಾಗಿ ಕೊಡುವೆನು. ದೈವಗತಿಯು ಹೀಗೆ ಇರುವಾಗ ನೀನು ಏನನ್ನು ತಾನೇ ಮಾಡುತ್ತೀಯೆ.

**ವಿಚಿತ್ರಕರ್ಮಣಾಂ ಪಾಕೋ ದುರ್ಜ್ಞೇಯೋ ಹ್ಯಕೃತಾತ್ಮಭಿಃ ॥**
**ಸರ್ವೇಷಾಂ ಕಿಲ ಜೀವಾನಾಂ ಕಾಲಪಾಶಾನುವರ್ತಿನಾಂ ।**
**ಭೋಕ್ತವ್ಯಂ ಸ್ವಕೃತಂ ಕರ್ಮ ಶುಭಂ ವಾ ಯದಿ ವಾಽಶುಭಂ ॥೬॥**
**ಪ್ರಾರಬ್ಧಂ ಸರ್ವಥೈವಾತ್ರ ಜೀವಸ್ಯ ವಿಧಿನಿರ್ಮಿತಂ ।**

ಜಿತೇಂದ್ರಿಯರಲ್ಲದವರು ಅನೇಕ ವಿಧವಾದ ಕರ್ಮಗಳ ಪರಿಪಾಕವೈಚಿತ್ರ್ಯವನ್ನು ತಿಳಿಯಲಾರರು. ಕಾಲಪಾಶಕ್ಕೆ ಎಲ್ಲ ಪ್ರಾಣಿಗಳೂ ಅಧೀನರಾಗಿ ತಾವು ಮಾಡಿದ ಕರ್ಮಗಳ ಫಲವನ್ನು, ಅದು ಒಳ್ಳೆಯದಾಗಲಿ, ಅಥವಾ ಕೆಟ್ಟದ್ದಾಗಲಿ, ಅನುಭವಿಸಿಯೇ ತೀರಬೇಕಲ್ಲವೇ? ಮತ್ತು ಈ ಲೋಕದಲ್ಲಿ ಜೀವನು ಪ್ರಾರಬ್ಧ ಫಲವನ್ನು ಎಂದರೆ ಹಿಂದೆ ಜೀವನು ಮಾಡಿರುವ ಅನೇಕ ಕರ್ಮಗಳ ಪೈಕಿ ಈಗ ಫಲವನ್ನು ಕೊಡಲು ಪ್ರಾರಂಭಮಾಡಿರುವ ಕರ್ಮದ ಫಲವನ್ನು ಸರ್ವಪ್ರಕಾರದಿಂದಲೂ ಅನುಭವಿಸಲೇಬೇಕೆಂದು ವಿಧಿಯು ಗೊತ್ತುಮಾಡಿರುತ್ತಾನೆ.

|| ದೇವಕ್ಯುವಾಚ ||

**ಸ್ವಾಮಿನ್ಪೂರ್ವಕೃತಂ ಕರ್ಮ ಭೋಕ್ತವ್ಯಂ ಸರ್ವಥಾ ನೃಭಿಃ ॥೭॥**
**ತೀರ್ಥೈಸ್ತಪೋಭಿರ್ದಾನೈರ್ವಾ ಕಿಂ ನ ಯಾತಿ ಕ್ಷಯಂ ಹಿ ತತ್ ।**
**ಲಿಖಿತೋ ಧರ್ಮಶಾಸ್ತ್ರೇಷು ಪ್ರಾಯಶ್ಚಿತ್ತವಿಧಿರ್ನೃಪ ॥೮॥**
**ಪೂರ್ವಾರ್ಜಿತಾನಾಂ ಪಾಪಾನಾಂ ವಿನಾಶಾಯ ಮಹಾತ್ಮಭಿಃ ।**

ದೇವಕಿಯು ವಸುದೇವನನ್ನು ಕುರಿತು ಹೇಳಿದಳು—ಓ ಸ್ವಾಮಿಯೇ, ಜೀವನು ಈ ಲೋಕದಲ್ಲಿ ಪ್ರಾರಬ್ಧಕರ್ಮದ ಫಲವನ್ನು ಹೇಗಾದರೂ ಅನುಭವಿಸ ಬೇಕಾಗಿರುವುದು ನಿಜವು. ಆದರೆ ತೀರ್ಥಸ್ನಾನಾದಿಗಳಿಂದಾಗಲಿ, ತಪಸ್ಸಿನಿಂದಾಗಲಿ, ದಾನ ಮಾಡುವುದರಿಂದಾಗಲಿ ಪೂರ್ವಾರ್ಜಿತವಾದ ಎಂದರೆ ಹಿಂದಿನ ಜನ್ಮಗಳಲ್ಲಿ ಸಂಪಾದಿಸಿರುವ ಪಾಪಗಳನ್ನು ನಿವಾರಿಸಲಾಗುವುದಿಲ್ಲವೇ? ಏಕೆಂದರೆ ಅಂಥವನ್ನು ನಾಶಪಡಿಸುವುದಕ್ಕಾಗಿ ಮಹಾತ್ಮರು ಧರ್ಮಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತಕ್ರಮವನ್ನು ಬರೆದಿರುವರಲ್ಲವೇ?

**ಬ್ರಹ್ಮಹಾ ಹೇಮಹಾರೀ ಚ ಸುರಾಪೋ ಗುರುತಲ್ಪಗಃ ॥೯॥**
**ದ್ವಾದಶಾಬ್ದವ್ರತೇ ಚೀರ್ಣೇ ಶುದ್ಧಿಂ ಯಾತಿ ಯತಸ್ತತಃ ।**

ಬ್ರಹ್ಮಹತ್ಯೆಯನ್ನು ಮಾಡಿದವನೂ, ಸುವರ್ಣವನ್ನು ಕದ್ದವನೂ, ಮದ್ಯ ಪಾಯಿಯಾದವನೂ, ಗುರುದಾರಗಮನ ಮಾಡಿದವನೂ ಕೂಡ ಹನ್ನೆರಡು ವರ್ಷ ಗಳ ವ್ರತವೆಂಬ ಪ್ರಾಯಶ್ಚಿತ್ತವನ್ನು ಮಾಡಿದರೆ ಶುದ್ಧಿಯನ್ನು ಹೊಂದುವನೆಂದು ಧರ್ಮಶಾಸ್ತ್ರದಲ್ಲಿ ಹೇಳಿರುವುದಿಲ್ಲವೇ? ಆದುದರಿಂದ

**ಮನ್ವಾದಿಭಿರ್ಯಥೋದ್ದಿಷ್ಟಂ ಪ್ರಾಯಶ್ಚಿತ್ತಂ ವಿಧಾನತಃ ॥೧೦॥**
**ತಥಾ ಕೃತ್ವಾ ನರಃ ಪಾಪಾನ್ಮುಚ್ಯತೇ ವಾ ನ ವಾಽನಘ ।**

ಓ ಪಾಪರಹಿತನಾದ ವಸುದೇವನೇ, ಮನುವೇ ಮೊದಲಾದ ಧರ್ಮಶಾಸ್ತ್ರ ಕಾರರಿಂದ ಹೇಳಲ್ಪಟ್ಟಿರುವ ಕ್ರಮದಂತೆ ಪ್ರಾಯಶ್ಚಿತ್ತವನ್ನು ಕ್ರಮವಾಗಿ ಮಾಡಿದರೆ, ಮನುಷ್ಯನು ಪಾಪಕರ್ಮಗಳಿಂದ ಬಿಡುಗಡೆಯನ್ನು ಹೊಂದುವನೋ ಅಥವಾ ಹೊಂದುವುದಿಲ್ಲವೋ?

**ವಿಗೀತವಚನಾಸ್ತೇ ಕಿಂ ಮುನಯಸ್ತತ್ತ್ವದರ್ಶಿನಃ ॥೧೧॥**
**ಯಾಜ್ಞವಲ್ಕ್ಯಾದಯಃ ಸರ್ವೇ ಧರ್ಮಶಾಸ್ತ್ರಪ್ರವರ್ತಕಾಃ ।**

ಪ್ರಾಯಶ್ಚಿತ್ತಾಚರಣೆಯಿಂದ ಪಾಪಕರ್ಮಗಳು ನಾಶವಾಗುವುದಿಲ್ಲವೆಂದು ಹೇಳುವುದಾದರೆ, ಅಂತಹ ಧರ್ಮಶಾಸ್ತ್ರಗಳನ್ನು ಬರೆದು ಅವುಗಳಂತೆ ಆಚರಿಸುತ್ತಿರುವ ತತ್ತ್ವಜ್ಞಾನಿಗಳಾದ ಯಾಜ್ಞವಲ್ಕ್ಯರೇ ಮೊದಲಾದ ಋಷಿಗಳೆಲ್ಲರೂ ವ್ಯರ್ಥವಾದ ಮಾತುಗಳನ್ನು ಹೇಳಿದವರಂತಾಗುತ್ತಾರೆಯಲ್ಲವೇ?

**ಭವಿತವ್ಯಂ ಭವತ್ಯೇವ ಯದ್ಯೇವಂ ನಿಶ್ಚಯಃ ಪ್ರಭೋ ॥೧೨॥**

**ಆಯುರ್ವೇದಃ ಸ ಮಿಥ್ಯೈವ ಮಂತ್ರವಾದಾಸ್ತಥಾಖಿಲಾಃ ।**
**ಉದ್ಯಮಸ್ತು ವೃಥಾ ಸರ್ವಮೇವಂ ಚೇದ್ದೈವ ನಿರ್ಮಿತಂ ॥೧೩॥**

ಪೂರ್ವಜನ್ಮದ ಪಾಪಗಳು ಪ್ರಾಯಶ್ಚಿತ್ತಾದಿಗಳಿಂದ ನಾಶವಾಗದೆ ಇರುವುದಾದರೆ ಆಗಬೇಕಾದುದು ಆಗಿಯೇ ತೀರುತ್ತದೆ ಎಂಬುದೇ ನಿಶ್ಚಯವಾಗುತ್ತದೆ. ಆಗ ಪಾಪಕರ್ಮಫಲವಾದ ರೋಗಾದಿಗಳಿಗೆ ಪ್ರತೀಕಾರಗಳನ್ನು ಹೇಳುವ ಆಯುರ್ವೇದ ಎಂದರೆ ವೈದ್ಯಶಾಸ್ತ್ರವೂ, ಮಂತ್ರಶಾಸ್ತ್ರಗಳೂ ಮತ್ತು ಕಷ್ಟಪರಿಹಾರಕ್ಕಾಗಿ ಜನಗಳು ಮಾಡುತ್ತಿರುವ ಪ್ರಯತ್ನಗಳೂ, ಇವೆಲ್ಲವೂ ವ್ಯರ್ಥವಾಗುವುವು.

**ಭವಿತವ್ಯಂ ಭವತ್ಯೇವ ಪ್ರವೃತ್ತಿಸ್ತು ನಿರರ್ಥಿಕಾ ।**
**ಅಗ್ನಿಷ್ಟೋಮಾದಿಕಂ ವ್ಯರ್ಥಂ ನಿಯತಂ ಸ್ವರ್ಗಸಾಧನಂ ॥೧೪॥**

**ಯದಾ ತದಾ ಪ್ರಮಾಣಂ ಹಿ ವೃಥೈವ ಪರಿಭಾಷಿತಂ ।**
**ವಿತಥೇ ತತ್ಪ್ರಮಾಣೇ ತು ಧರ್ಮೋಚ್ಛೇದಃ ಕುತೋ ನ ಹಿ ॥೧೫॥**

ಆಗಬೇಕಾದುದು ಆಗಿಯೇ ತೀರುತ್ತದೆ ಎಂಬ ಪೂರ್ವಾರ್ಜಿತವಾದ ಕರ್ಮಕ್ಕೇ ಪ್ರಾಬಲ್ಯವನ್ನು ಹೇಳುವುದಾದರೆ, ಸ್ವರ್ಗವನ್ನು ಸಾಧಿಸುವುದಕ್ಕಾಗಿ ಮಾಡುವ ಅಗ್ನಿಷ್ಟೋಮಾದಿ ಯಜ್ಞಧರ್ಮಗಳೂ ವ್ಯರ್ಥವಾಗುತ್ತವೆ! ಮತ್ತು ವೇದೋಕ್ತವಾದ ಕರ್ಮಗಳಿಗೆ ಅಪ್ರಯೋಜಕತ್ವವನ್ನು ಹೇಳುವುದಾದರೆ ವೇದರೂಪವಾದ ಪ್ರಮಾಣವೂ ಸುಳ್ಳಾಗುತ್ತದೆ. ವೇದವು ಸುಳ್ಳಾದರೆ ಧರ್ಮವೇ ಅಪ್ರಾಮಾಣಿಕವಾಗಿ ನಾಶವಾಗುತ್ತದೆ ಎಂದು ಏಕೆ ಹೇಳಬಾರದು?

**ಉದ್ಯಮೋ ಚ ಕೃತೇ ಸಿದ್ಧಿಃ ಪ್ರತ್ಯಕ್ಷೇಣೈವ ಸಾಧ್ಯತೇ ।**
**ತಸ್ಮಾದತ್ರ ಪ್ರಕರ್ತವ್ಯಃ ಪ್ರಪಂಚಶ್ಚಿತ್ತಕಲ್ಪಿತಃ ॥೧೬॥**

ಲೋಕದಲ್ಲಿ ಪ್ರಾರಬ್ಧಕರ್ಮವೆಂದು ಸುಮ್ಮನೆ ಕೂತಿರದೆ ಜನಗಳು ಪ್ರಯತ್ನವನ್ನು ಮಾಡಿ ಕಾರ್ಯಸಿದ್ಧಿಯನ್ನು ಪಡೆಯುತ್ತಿರುವುದು ಪ್ರತ್ಯಕ್ಷವಾಗಿರುವ ವಿಷಯವಾಗಿರುತ್ತದೆ. ಆದುದರಿಂದ ಪ್ರಪಂಚವು ನಮ್ಮ ಮನಸ್ಸಿಗೆ ಅಧೀನವಾಗಿರುತ್ತದೆ.

**ಯಥಾಯಂ ಬಾಲಕಃ ಕ್ಷೇಮಂ ಪ್ರಾಪ್ನೋತಿ ಮಮ ಪುತ್ರಕಃ ।**
**ಮಿಥ್ಯಾ ಯದಿ ಪ್ರಕರ್ತವ್ಯಂ ವಚನಂ ಶುಭಮಿಚ್ಛತಾ ॥೧೭॥**

ಆದುದರಿಂದ ಈಗ ಹುಟ್ಟಿರುವ ನನ್ನ ಮಗನು ಹೇಗೆ ಕ್ಷೇಮವನ್ನು ಹೊಂದುವನೋ ಅದಕ್ಕನುಸಾರವಾಗಿ ಕೆಲಸಮಾಡಬೇಕು. ಶುಭವನ್ನು ಅಪೇಕ್ಷಿಸುವವನು, ತಾನು ಹಿಂದೆ ಹೇಳಿದ್ದ ಮಾತನ್ನು ಸುಳ್ಳುಮಾಡಿಯಾದರೂ ತನಗೆ ಅನುಕೂಲವಾದ ಕೆಲಸವನ್ನು ಮಾಡಬೇಕೆಂಬುದು ಯುಕ್ತವಾದುದು.

**ನ ತತ್ರ ದೂಷಣಂ ಕಿಂಚಿತ್ಪ್ರವದಂತಿ ಮನೀಷಿಣಃ ।**

ನಾವು ಹೀಗೆ ಕೆಲಸಮಾಡಿ ಕ್ಷೇಮವನ್ನು ಹೊಂದಿದರೆ ಈ ವಿಷಯದಲ್ಲಿ ಪ್ರಾಜ್ಞರಾದವರು ನಮ್ಮನ್ನು ಕೊಂಚವೂ ನಿಂದೆಮಾಡುವುದಿಲ್ಲ ಎಂದು ದೇವಕಿಯು ಹೇಳಿದಳು.

॥ ವಸುದೇವ ಉವಾಚ ॥

**ನಿಶಾಮಯ ಮಹಾಭಾಗೇ ಸತ್ಯಮೇತದ್ಬ್ರವೀಮಿ ತೇ ॥೧೮॥**

ಇದಕ್ಕೆ ವಸುದೇವನು ಹೀಗೆ ಪ್ರತ್ಯುತ್ತರವನ್ನು ಹೇಳಿದನು—ಎಲೌ ಅದೃಷ್ಟಶಾಲಿನಿಯೇ ಕೇಳು. ನೀನು ಈಗ ಹೇಳಿದ್ದೇನೋ ಸತ್ಯವೇ ಆಗಿರುವುದು. ಆದರೂ ನಾನು ಹೇಳುವುದನ್ನು ಕೇಳು.

**ಉದ್ಯಮಃ ಖಲು ಕರ್ತವ್ಯಃ ಫಲಂ ದೈವವಶಾನುಗಂ ।**
**ತ್ರಿವಿಧಾನೀಹ ಕರ್ಮಾಣಿ ಸಂಸಾರೇಽತ್ರ ಪುರಾವಿದಃ ॥೧೯॥**
**ಪ್ರವದಂತೀಹ ಜೀವಾನಾಂ ಪುರಾಣೇಷ್ವಾಗಮೇಷು ಚ ।**

ಪ್ರಯತ್ನವನ್ನು ಅವಶ್ಯಕವಾಗಿಯೂ ಮಾಡಬೇಕು. ಆದರೆ ಪ್ರಯತ್ನಮಾಡುವುದರಲ್ಲಿ ಎಲ್ಲ ಸಹಾಯಸಂಪತ್ತಿಯು ಇದ್ದಾಗ್ಯೂ ಫಲವುಂಟಾಗುವುದು ಕೆಲವೆಡೆಗಳಲ್ಲಿ ಕಂಡುಬರುವುದಿಲ್ಲವಾದುದರಿಂದ ಪ್ರಯತ್ನವು ನಮ್ಮ ಅಧೀನವೆಂ

ತಲೂ, ಫಲವು ದೈವಗತಿಯಿಂದ ಉಂಟಾಗುವುದೆಂತಲೂ ತಿಳಿಯಬೇಕಾಗಿರುತ್ತದೆ. ಈ ಸಂಸಾರದಲ್ಲಿ ಪೂರ್ವೀಕರು, ಪುರಾಣಗಳಲ್ಲಿಯೂ ಶಾಸ್ತ್ರಗಳಲ್ಲಿಯೂ ಸಹ ಜೀವರ ಕರ್ಮಗಳು ಮೂರು ವಿಧಗಳೆಂದು ಹೇಳಿರುತ್ತಾರೆ.

**ಸಂಚಿತಾನಿ ಚ ಜೀರ್ಣಾನಿ ಪ್ರಾರಬ್ಧಾನಿ ಸುಮಧ್ಯಮೇ ॥೨೦॥**
**ವರ್ತಮಾನಾನಿ ವಾಮೋರು ತ್ರಿವಿಧಾನೀಹ ದೇಹಿನಾಂ ।**

ಎಲೌ ಸುಂದರವಾದ ನಡುವುಳ್ಳ ದೇವಕಿಯೇ, ಕೇಳು—ಫಲೋನ್ಮುಖ ವಾಗದೆ ಎಂದರೆ ಫಲವನ್ನು ಕೊಡುವುದಕ್ಕೆ ಕಾಲವು ಬಂದಿಲ್ಲವಾದುದರಿಂದ ಸುಮ್ಮನೆ ರಾಶಿಯಾಗಿರುವ ಪೂರ್ವಾರ್ಜಿತವಾದ ಕರ್ಮಗಳು ಸಂಚಿತಗಳೆನಿಸಿಕೊಳ್ಳುವುವು. ಫಲವನ್ನು ಕೊಡಲು ಕಾಲವು ಬಂದಕಾರಣ ಫಲವನ್ನು ಕೊಡುತ್ತಿರುವ ಕರ್ಮವು ಪ್ರಾರಬ್ಧವೆನಿಸುವುದು. ಈ ಜನ್ಮದಲ್ಲಿ ಮಾಡುತ್ತಿರುವ ಕರ್ಮಗಳು ಮುಂದೆ ಫಲವನ್ನು ಕೊಡುವುವಾದುದರಿಂದ ಇವುಗಳಿಗೆ ವರ್ತಮಾನವೆಂದು ಹೆಸರು. ಅಥವಾ ಇದನ್ನು ಆಗಾಮಿ ಎಂತಲೂ ಹೇಳುವುದುಂಟು. ಆದುದರಿಂದ ಸಂಚಿತ, ಪ್ರಾರಬ್ಧ, ವರ್ತಮಾನ ಅಥವಾ ಆಗಾಮಿ ಎಂಬ ಮೂರು ವಿಧವಾದ ಕರ್ಮಗಳು ಎಲ್ಲ ಪ್ರಾಣಿಗಳಿಗೂ ಇರುತ್ತವೆ.

**ಶುಭಾಶುಭಾನಿ ಕರ್ಮಾಣಿ ಬೀಜಭೂತಾನಿ ಯಾನಿ ಚ ॥೨೧॥**
**ಬಹುಜನ್ಮಸಮುತ್ಥಾನಿ ಕಾಲೇ ತಿಷ್ಠಂತಿ ಸರ್ವಥಾ ।**

ಬಹು ಜನ್ಮಗಳಿಂದಲೂ ಮಾಡಿದ ಕರ್ಮಗಳು ಅವುಗಳ ಕಾಲಬಂದಾಗ ಫಲವನ್ನು ಕೊಡಲು ಕಾರಣಗಳಾಗಿರುತ್ತವೆ. ಇವುಗಳು ಶುಭ ಅಥವಾ ಅಶುಭ ಫಲವನ್ನು ಕೊಡುವುದರಿಂದ, ಈ ಕರ್ಮಗಳನ್ನು ಶುಭಕರ್ಮ ಅಥವಾ ಅಶುಭ ಕರ್ಮವೆಂದು ಎರಡು ವಿಧವಾಗಿರುವುವೆಂದು ಹೇಳುತ್ತಾರೆ.

**ಪೂರ್ವದೇಹಂ ಪರಿತ್ಯಜ್ಯ ಜೀವಃ ಕರ್ಮವಶಾನುಗಃ ॥೨೨॥**
**ಸ್ವರ್ಗಂ ವಾ ನರಕಂ ವಾಪಿ ಪ್ರಾಪ್ನೋತಿ ಸ್ವಕೃತೇನ ವೈ ।**

ಹಿಂದಿನ ಶರೀರವನ್ನು ಬಿಟ್ಟಮೇಲೆ ಜೀವನು ಕರ್ಮಗಳಿಗೆ ಅಧೀನನಾಗಿ "ಪುಣ್ಯೇನಪುಣ್ಯಂ ಲೋಕಂನಯತಿ, ಪಾಪೇನಪಾಪಂ, ಉಭಾಭ್ಯಾಮೇವ ಮನುಷ್ಯ ಲೋಕಂ" ಎಂದು ವಿಧಿಸಿರುವಂತೆ ತಾನು ಮಾಡಿದ ಕರ್ಮಫಲವಾದ ಸ್ವರ್ಗ ವನ್ನಾಗಲಿ, ನರಕವನ್ನಾಗಲಿ, ಈ ಭೂಲೋಕವನ್ನಾಗಲಿ ಹೊಂದುತ್ತಾನೆ.

**ದಿವ್ಯದೇಹಂ ಚ ಸಂಪ್ರಾಪ್ಯ ಯಾತನಾದೇಹಮುರ್ಥಜಂ ॥೨೩॥**
**ಭುನಕ್ತಿ ವಿವಿಧಾನ್ಭೋಗಾನ್ಸ್ವರ್ಗೇ ವಾ ನರಕೇಽಥ ವಾ ।**

ಈ ಶರೀರವನ್ನು ಬಿಟ್ಟನಂತರದಲ್ಲಿ ಜೀವನು ಶುಭಕರ್ಮದ ಫಲವನ್ನು ಅನುಭವಿಸುವಾಗ ಉತ್ತಮವಾದ ಶರೀರವನ್ನು ಹೊಂದಿ ಸ್ವರ್ಗದಲ್ಲಿ ಸೌಖ್ಯವನ್ನು ಅನುಭವಿಸುವನು. ಅಶುಭ ಕರ್ಮದ ಫಲವನ್ನು ಅನುಭವಿಸುವಾಗ ನರಕದಲ್ಲಿ ದುಃಖವನ್ನು ಅನುಭವಿಸುವುದಕ್ಕಾಗಿ ಯಾತನಾ ಶರೀರವನ್ನು ಹೊಂದಿ ಆ ಶರೀರದಲ್ಲಿ ನರಕದುಃಖವನ್ನು ಅನುಭವಿಸುವನು.

**ಭೋಗಾಂತೇ ಚ ಯದೋತ್ಪತ್ತೇಃ ಸಮಯಸ್ತಸ್ಯ ಜಾಯತೇ ॥೨೪॥**
**ಲಿಂಗ ದೇಹೇನ ಸಹಿತಂ ಜಾಯತೇ ಜೀವಸಂಜ್ಞಿತಂ ।**
**ತದೈವ ಸಂಚಿತೇಭ್ಯಶ್ಚ ಕರ್ಮಭ್ಯಃ ಕರ್ಮಭಿಃ ಪುನಃ ॥೨೫॥**
**ಯೋಜಯತ್ಯೇವ ತಂ ಕಾಲಂ ಕರ್ಮಾಣಿ ಪ್ರಾಕ್ಕೃತಾನಿ ಚ ।**

ಶುಭಾಶುಭರೂಪವಾದ ಕರ್ಮಫಲವನ್ನು ಅನುಭವಿಸಿದನಂತರ ಹಿಂದಿನಂತೆ ಹುಟ್ಟತಕ್ಕ ಕಾಲವು ಬರುತ್ತದೆ. ಆಗ ಆ ಪ್ರಾಣಿಯು ಲಿಂಗಶರೀರದಿಂದ ಕೂಡಿದ್ದಾಗಿ ಜೀವನೆಂಬ ಹೆಸರನ್ನು ಹೊಂದುತ್ತಾನೆ. ಆ ಲಿಂಗಶರೀರದಲ್ಲಿ ಸೇರುವ ಕಾಲದಲ್ಲಿಯೇ, ಹಿಂದಿನ ಜನ್ಮದಲ್ಲಿ ಆ ಪ್ರಾಣಿಯು ಮಾಡಿರುವ ಸಂಚಿತಕರ್ಮಗಳಿಂದ ಜನ್ಮಾರಂಭಕವಾದ ಕರ್ಮಗಳೊಡನೆ ಸೇರಿಕೊಳ್ಳುತ್ತಾನೆ. ಅನಂತರದಲ್ಲಿ ಆ ಕರ್ಮದ ಫಲವನ್ನು ಆಯಾಯ ಕಾಲಬಂದಕೂಡಲೇ ಅನುಭವಿಸುತ್ತಾನೆ.

**ದೇಹೇನಾನ್ಯೇನ ಭಾವ್ಯಾನಿ ಶುಭಾನಿ ಚಾಶುಭಾನಿ ಚ ॥೨೬॥**
**ಪ್ರಾರಬ್ಧಾನಿ ಚ ಜೀವೇನ ಭೋಕ್ತವ್ಯಾನಿ ಸುಲೋಚನೇ ।**

ಎಲೈ ಸುಂದರವಾದ ಕಣ್ಣುಗಳುಳ್ಳ ದೇವಕಿಯೇ, ಬೇರೆ ಶರೀರದಿಂದ ಅವಶ್ಯವಾಗಿ ಅನುಭವಿಸಬೇಕಾದ ಒಳ್ಳೆಯದಾದ ಮತ್ತು ಕೆಟ್ಟದಾದ ಆಗಾಮಿ ಮತ್ತು ಪ್ರಾರಬ್ಧಕರ್ಮಫಲಗಳು ಈ ಜೀವನಿಂದ ಅನುಭವಿಸಲ್ಪಡಬೇಕಾಗಿರುತ್ತವೆ.

**ಪ್ರಾಯಶ್ಚಿತ್ತೇನ ನಶ್ಯಂತಿ ವರ್ತಮಾನಾನಿ ಭಾಮಿನಿ ॥೨೭॥**
**ಸಂಚಿತಾನಿ ತಥೈವಾಶು ಯಥಾರ್ಥಂ ವಿಹಿತೇನ ಚ ।**
**ಪ್ರಾರಬ್ಧಕರ್ಮಣಾಂ ಭೋಗಾತ್ ಸಂಕ್ಷಯೋ ನಾನ್ಯಥಾ ಭವೇತ್ ॥**

ಎಲೈ ದೇವಕಿಯೇ ಕೇಳು, ಮುಂದೆ ಫಲವನ್ನು ಕೊಡುವುದಾಗಿರುವ ವರ್ತಮಾನ ಅಥವಾ ಆಗಾಮಿಕರ್ಮಗಳೂ, ಸಂಚಿತವೆಂಬ ಫಲವನ್ನು ಕೊಡಲು ಪ್ರಾರಂಭವಿಲ್ಲದಿರುವ ಕರ್ಮಗಳೂ ಸಹ ಶಾಸ್ತ್ರಕ್ಕೆ ಅನುಸಾರವಾಗಿ ಮಾಡಲ್ಪಟ್ಟ ಪ್ರಾಯಶ್ಚಿತ್ತಗಳಿಂದ ನಾಶವನ್ನು ಹೊಂದುವುವು. ಪಾರಬ್ಧಕರ್ಮವು ಎಂದರೆ ಫಲವನ್ನು ಕೊಡಲು ಉಪಕ್ರಮವನ್ನು ಮಾಡಿರುವ ಕರ್ಮವು ಮಾತ್ರ ಅದರ ಫಲವನ್ನು ಅನುಭವಿಸದೇ ಮುಗಿಯುವುದಿಲ್ಲವು. ಪ್ರಾಯಶ್ಚಿತ್ತದಿಂದಲೂ ಇದು ನಾಶವನ್ನು ಹೊಂದುವುದಿಲ್ಲವು.

**ತೇನಾಯಂ ತೇ ಕುಮಾರೋ ನೈ ದೇಯಃ ಕಂಸಾಯ ಸರ್ವಥಾ ।**
**ನ ಮಿಥ್ಯಾವಚನಂ ಮೇಽಸ್ತಿ ಲೋಕನಿಂದಾಭಿದೂಷಿತಂ ॥೨೯॥**

ಅಲ್ಲದೆ ಲೋಕದಲ್ಲಿ ಸುಳ್ಳುಹೇಳಿದವರನ್ನು ಜನಗಳು ನಿಂದಿಸುವರು. ಕಂಸನಿಗೆ ಮಗುವನ್ನು ಕೊಡುವೆನೆಂದು ಪ್ರತಿಜ್ಞೆಮಾಡಿಕೊಟ್ಟು ಈಗ ಅದಕ್ಕೆ ತಪ್ಪಿದೆನಾದರೆ ಸುಳ್ಳುಮಾತನ್ನಾಡುವ ಮನುಷ್ಯನನ್ನಾಗಿ ಹೇಳುತ್ತಾ ನನ್ನನ್ನು ಎಲ್ಲರೂ ನಿಂದಿಸುವರು. ಈ ಕಾರಣದಿಂದಲೂ, ಮತ್ತು ಪ್ರಾರಬ್ಧಕರ್ಮವನ್ನು ಅನುಭವಿಸಲೇ ಬೇಕಾಗಿರುವುದರಿಂದಲೂ ಸಹ ನಾನು ಕಂಸನಿಗಾಗಿ ಈ ನಿನ್ನ ಮಗುವನ್ನು ಒಪ್ಪಿಸಲೇ ಬೇಕು.

**ಅನಿತ್ಯೇಽಸ್ಮಿಂಸ್ತು ಸಂಸಾರೇ ಧರ್ಮಸಾರೇ ಮಹಾತ್ಮನಾಂ ।**
**ದೈವಾಧೀನಂ ಹಿ ಸರ್ವೇಷಾಂ ಜನನಂ ಮರಣಂ ತಥಾ ॥೩೦॥**

ಮಹಾತ್ಮರಾದವರಿಗೆ ಧರ್ಮವನ್ನು ಮಾಡಲು ತುಂಬ ಅವಕಾಶವಿರುವ, ಅನಿತ್ಯವಾದರೂ ಧರ್ಮಾಚರಣೆಯೇ ತಿರುಳಾಗಿರುವ, ಈ ಸಂಸಾರದಲ್ಲಿ ಎಲ್ಲ ಪ್ರಾಣಿಗಳಿಗೂ ಸುಖದುಃಖಾನುಭವಗಳಿಗೆ ಬೇಕಾಗುವ ದೇಹಗಳಿಗೆ ಜನನವೂ ಮತ್ತು ಮರಣವೂ ದೈವಕ್ಕೆ ಎಂದರೆ, " ಜನ್ಮಾಂತರಕೃತಂಕರ್ಮ ದೈವಮಿತ್ಯಭಿಧೀಯತೇ " ಎಂಬಂತೆ ಪೂರ್ವಾರ್ಜಿತಕರ್ಮಕ್ಕೆ ಅಧೀನವಾಗಿರುವುದು.

**ತಸ್ಮಾತ್ ಶೋಕೋ ನ ಕರ್ತವ್ಯಃ ದೇಹಿನಾ ಹಿ ನಿರರ್ಥಕಃ ।**
**ಸತ್ಯಂ ಯಸ್ಯ ಗತಂ ಕಾಂತೇ ವೃಥಾ ತಸ್ಯೈವ ಜೀವಿತಂ ॥೩೧॥**

ಹೀಗೆ ಜನನಮರಣಗಳೆರಡೂ ದೈವದ ಅಧೀನದಲ್ಲಿರುವ ಕಾರಣ ಯಾವ ಪ್ರಾಣಿಯೂ ಈ ವಿಚಾರದಲ್ಲಿ ವ್ಯಸನ ಪಡಬಾರದು. ವ್ಯಸನಪಟ್ಟರೂ ಪ್ರಯೋ

ಜನವಿಲ್ಲವು. ಮತ್ತು ಅಷ್ಟೇಅಲ್ಲದೆ ಎಲೈ ಪ್ರಿಯಳಾದ ದೇವಕಿಯೇ, ಸತ್ಯಕ್ಕೆ ತಪ್ಪಿ ನಡೆಯುವವನ ಜೀವನವು ವ್ಯರ್ಥವೂ ಆಗುವುದು. ಏಕೆಂದರೆ ಈಗ ಈ ಜನ್ಮದಲ್ಲಿ ಅನುಭವಿಸಬೇಕಾದ ದುಃಖವು ತಪ್ಪದೆಯೂ, ಮುಂದಿನ ಜನ್ಮದಲ್ಲಾದರೂ ಸುಖಾನುಭವಕ್ಕೆ ಅಥವಾ ಕಡೆಗೆ ಸಂಸಾರದಿಂದ ಬಿಡುಗಡೆ ಎಂಬ ಮೋಕ್ಷದ ನಿತ್ಯಸುಖಾನುಭವಕ್ಕೆ ಬೇಕಾದ ಸತ್ಕರ್ಮಾಚರಣೆಯೂ ಒಳ್ಳೆಯ ಭಾವಗಳ ಬೆಳವಳಿಗೆಯೂ ಇಲ್ಲದೆ ವ್ಯರ್ಥವಾಗುವುದೆಂದು ಭಾವವು.

**ಇಹಲೋಕೋ ಗತೋ ಯಸ್ಮಾತ್ಪರಲೋಕಃ ಕುತಸ್ತತಃ ।**
**ಅತೋ ದೇಹಿ ಸುತಂ ಸುಭ್ರು ಕಂಸಾಯ ಪ್ರದದಾಮ್ಯಹಂ ॥೩೨॥**

ಸುಳ್ಳು ಹೇಳುವವನನ್ನು ಇಲ್ಲಿಯೂ ಯಾರೂ ನಂಬುವುದಿಲ್ಲವು. ಅಂಥವನಿಗೆ ಈ ಲೋಕದಲ್ಲಿ ಗೌರವಾರ್ಹತೆಗಳೂ, ಸುಖವೂ, ಸತ್ಕರ್ಮಾಚರಣೆ, ಸದ್ಭಾವನೆಗಳೂ ಇಲ್ಲದಿರುವಾಗ ಪರಲೋಕದಲ್ಲಿ ಸುಖಾನುಭವದ ಮಾತೆಂದರೇನು ? ಆದುದರಿಂದ ಸತ್ಯವನ್ನು ಬಿಡದೆ ಆಚರಿಸಬೇಕು. ಈ ಕಾರಣದಿಂದ ಎಲೌ ಒಳ್ಳೆಯ ಹುಬ್ಬುಳ್ಳ ದೇವಕಿಯೇ ಮಗುವನ್ನು ಕೊಡು. ನಾನು ಅದನ್ನು ಕಂಸನಿಗೆ ಕೊಡುವೆನು.

**ಸತ್ಯಸಂಸ್ತರಣಾದ್ದೇವಿ ಶುಭಮಗ್ರೇ ಭವಿಷ್ಯತಿ ।**
**ಕರ್ತವ್ಯಂ ಸುಕೃತಂ ಪುಂಭಿಃ ಸುಖೇ ದುಃಖೇ ಸತಿ ಪ್ರಿಯೇ ॥೩೩॥**
**ಸತ್ಯಸಂರಕ್ಷಣಾದ್ದೇವಿ ಶುಭಮೇವ ಭವಿಷ್ಯತಿ ।**

ಎಲೌ ದೇವಕಿಯೇ, ಸತ್ಯವನ್ನು ಅನುಸರಿಸುವವನಿಗೆ ಈಗಿಲ್ಲದಿದ್ದರೆ ಮುಂದೆಯಾದರೂ ಶುಭವುಂಟಾಗುವುದು. ಸುಖವಾಗಿರುವಾಗಲೂ, ದುಃಖದಿಂದಿರುವಾಗಲೂ ಸಹ ಮನುಷ್ಯನು ಒಳ್ಳೆಯದನ್ನೇ ಮಾಡಬೇಕು. ಸತ್ಯಸಂರಕ್ಷಣೆ ಮಾಡುವುದರಿಂದ ಎಂದರೆ ಯಾವಾಗಲೂ ಸತ್ಯವನ್ನೇ ಯೋಚಿಸುವುದು, ಹೇಳುವುದು, ಆಚರಿಸುವುದು, ಇದರಿಂದ ಕಡೆಗಾದರೂ ಶುಭವೇ ಆಗುತ್ತದೆ.

॥ ವ್ಯಾಸ ಉವಾಚ ॥

**ಇತ್ಯುಕ್ತವತಿ ಕಾಂತೇ ಸಾ ದೇವಕೀ ಶೋಕಸಂಯುತಾ ।**
**ದದೌ ಪುತ್ರಂ ಪ್ರಸೂತಂ ಚ ವೇಪಮಾನಾ ಮನಸ್ವಿನೀ ॥೩೪॥**

ವ್ಯಾಸಮಹರ್ಷಿಯು ಹೇಳಿದನು—ತನ್ನ ಪತಿಯಾದ ವಸುದೇವನು ಹೀಗೆ ಹೇಳಿದ ಮೇಲೆ ಒಳ್ಳೆಯ ಮನಸ್ಸಿನವಳಾದ ದೇವಕಿಯು ಯುಕ್ತವೂ ಉಚಿತವೂ ಆದ ಉಪದೇಶವನ್ನು ಒಪ್ಪಿದರೂ ಹೆತ್ತ ತಾಯಿಯ ದುಃಖದಿಂದ ಕೂಡಿದವಳಾಗಿ ಆಗತಾನೇ ಹುಟ್ಟಿದ್ದ ಮಗುವನ್ನು ನಡುಗುತ್ತಾ ಕೊಟ್ಟಳು.

**ವಸುದೇವೋಽಪಿ ಧರ್ಮಾತ್ಮಾ ಆದಾಯ ಸ್ವಸುತಂ ಶಿಶುಂ ।**
**ಜಗಾಮ ಕಂಸಸದನಂ ಮಾರ್ಗೇ ಲೋಕೈರಭಿಷ್ಟುತಃ ॥೩೫॥**

ಧರ್ಮಿಷ್ಠನಾದ ವಸುದೇವನೂ ಆ ತನ್ನ ಮಗುವನ್ನು ತೆಗೆದುಕೊಂಡು ಕಂಸನ ಮನೆಗೆ ಹೋದನು. ದಾರಿಯಲ್ಲಿ ಇವನನ್ನು ನೋಡಿದ ಜನರೆಲ್ಲರೂ ಇವನ ಸತ್ಯಸಂಧತೆಗಾಗಿ ಹೊಗಳುತ್ತಿದ್ದರು.

॥ ಲೋಕಾ ಊಚುಃ ॥

**ಪಶ್ಯಂತು ವಸುದೇವಂ ಭೋ ಲೋಕಾ ಏವಂ ಮನಸ್ವಿನಂ ।**
**ಸ್ವವಾಕ್ಯಮನುರುಧ್ಯೈವ ಬಾಲಮಾದಾಯ ಯಾತ್ಯಸೌ ॥೩೬॥**

ಜನಗಳು ಪರಸ್ಪರವಾಗಿ ಹೀಗೆ ಹೇಳುತ್ತಿದ್ದರು. ಎಲೈ ಜನಗಳಿರಾ, ಧೀರನಾದ ಈ ವಸುದೇವನನ್ನು ನೋಡಿರಿ. ಇವನು ತನ್ನ ಮಾತಿಗೆ ಕಟ್ಟುಬಿದ್ದು ಮಗುವನ್ನು ತೆಗೆದುಕೊಂಡು ಹೋಗುತ್ತಿದ್ದಾನೆ.

**ಮೃತ್ಯವೇ ದಾತುಕಾಮೋಽದ್ಯ ಸತ್ಯವಾಗನಸೂಯಕಃ ।**
**ಸಫಲಂ ಜೀವಿತಂ ಚಾದ್ಯ ಧೈರ್ಯಂ ಪಶ್ಯಂತು ಚಾದ್ಭುತಂ ॥೩೭॥**

**ಯಃ ಪುತ್ರಂ ಯಾತಿ ಕಂಸಾಯ ದಾತುಂ ಕಾಲಾತ್ಮನೇಽಪಿ ಹಿ ।**

ಈ ವಸುದೇವನು ಕೊಂಚವೂ ಅಸೂಯೆಪಡದೆ ನಿಜವನ್ನು ಅನುಸರಿಸುವುದಕ್ಕಾಗಿ ತನ್ನ ಸ್ವಂತ ಮಗುವನ್ನು ಮೃತ್ಯುವಿನಂತೆ ಇರುವ ಕಂಸನಿಗೆ ಕೊಡಲು ತೆಗೆದುಕೊಂಡು ಹೋಗುತ್ತಿದ್ದಾನೆ. ಇವನ ಈ ಸತ್ಯಪರತೆಯ ಜೀವನವು ಶ್ಲಾಘ್ಯವಾದುದು. ಅಲ್ಲದೆ, ಇವನ ಈ ಆಶ್ಚರ್ಯಕರವಾದ, ಧಾರ್ಮಿಕವಾದ ಸಾಹಸವನ್ನು ನೋಡಿರಿ.

|| ವ್ಯಾಸ ಉವಾಚ ||

**ಇತಿ ಸಂಸ್ತೂಯಮಾನಸ್ತು ಪ್ರಾಪ್ತಃ ಕಂಸಾಲಯಂ ನೃಪ ||೩೮||**
**ದದಾವಸ್ಮೈ ಕುಮಾರಂ ತಂ ಜಾತಮಾತ್ರಮಮಾನುಷಂ ।**

ವ್ಯಾಸಋಷಿಯು ಹೇಳಿದನು—ಎಲೈ ಜನಮೇಜಯರಾಜನೇ ಕೇಳು. ಆ ಬಳಿಕ, ಜನಗಳು ಈ ರೀತಿಯಲ್ಲಿ ವಸುದೇವನನ್ನು ಶ್ಲಾಘಿಸುತ್ತಿರಲಾಗಿ, ವಸುದೇವನು ಕಂಸನ ಮನೆಯನ್ನು ಸೇರಿದನು. ಮತ್ತು ದೇವತೆಯಂತಿರುವ ಆಗತಾನೇ ಹುಟ್ಟಿದ ಆ ಮಗುವನ್ನು ಕಂಸನಿಗೆ ಕೊಟ್ಟನು.

**ಕಂಸೋಽಪಿ ವಿಸ್ಮಯಂ ಪ್ರಾಪ್ತೋ ದೃಷ್ಟ್ವಾ ಧೈರ್ಯಂ ಮಹಾತ್ಮನಃ ।**
**ಗೃಹೀತ್ವಾ ಬಾಲಕಂ ಪ್ರಾಹ ಸ್ಮಿತಪೂರ್ವಮಿದಂ ವಚಃ ।**

ಕಂಸನೂ ಕೂಡ ಮಹಾನುಭಾವನಾದ ವಸುದೇವನ ಈ ವಿಧವಾದ ಧೈರ್ಯವನ್ನು ನೋಡಿ ಆಶ್ಚರ್ಯಪಟ್ಟು, ಮಗುವನ್ನು ತನ್ನ ಕೈಗೆ ತೆಗೆದುಕೊಂಡು ವಸುದೇವನನ್ನು ಕುರಿತು ಮುಗುಳುನಗೆಯಿಂದ ಈ ರೀತಿಯಲ್ಲಿ ಹೇಳಿದನು.

**ಧನ್ಯಸ್ತ್ವಂ ಶೂರಪುತ್ರಾಽದ್ಯ ಜ್ಞಾತಃ ಪುತ್ರಸಮರ್ಪಣಾತ್ ||೪೦||**
**ಮಮ ಮೃತ್ಯುರ್ನ ಚಾಯಂ ವೈ ಗಿರಾ ಪ್ರೋಕ್ತಸ್ತು ಚಾಷ್ಟಮಃ ।**
**ನ ಹಂತವ್ಯೋ ಮಯಾ ಕಾಮಂ ಬಾಲೋಽಯಂ ಯಾತು ತೇ ಗೃಹಂ||**

ಎಲೈ ಶೂರಸೇನನ ಮಗನಾದ ವಸುದೇವನೇ, ನೀನು ನಿನ್ನ ಮಾತಿನಂತೆ ಸತ್ಯಧರ್ಮಪರನಾಗಿ ನಿನ್ನ ಮಗುವನ್ನು ನನಗೆ ತಂದು ಒಪ್ಪಿಸಿರುವುದರಿಂದ ನೀನು ಧನ್ಯನೆಂದು ಈಗ ತಿಳಿದೆನು. ನನಗೆ ಈ ಮಗುವಿನಿಂದ ಮರಣವುಂಟಾಗುವುದಿಲ್ಲವು. ಆಕಾಶವಾಣಿಯಿಂದ ಎಂಟನೆಯ ಮಗುವಿನಿಂದ ನನಗೆ ಮರಣವೆಂದು ಹೇಳಲ್ಪಟ್ಟಿದೆ. ಆದುದರಿಂದ ನಾನು ಈ ಮಗುವನ್ನು ಕೊಲ್ಲುವುದಿಲ್ಲ. ಈ ಮಗುವನ್ನು ನೀನು ನಿನ್ನ ಮನೆಗೆ ತೆಗೆದುಕೊಂಡು ಹೋಗಬಹುದು.

**ಅಷ್ಟಮಸ್ತು ಪ್ರದಾತವ್ಯಸ್ತ್ವಯಾ ಪುತ್ರೋ ಮಹಾಮತೇ ।**
**ಇತ್ಯುಕ್ತ್ವಾ ವಸುದೇವಾಯ ದದಾವಾಶು ಖಲಃ ಶಿಶುಂ ||೪೨||**

ಎಲೈ ಬುದ್ಧಿಶಾಲಿಯಾದ ವಸುದೇವನೇ, ಆದರೆ ನೀನು ಎಂಟನೆಯ ಮಗುವನ್ನು ನನಗೆ ತಂದುಕೊಡಬೇಕು. ಹೀಗೆ ಹೇಳಿ ಆ ಮಗುವನ್ನು ಆ ದುಷ್ಟನಾದ ಕಂಸನು ವಸುದೇವನಿಗೆ ಕೂಡಲೆ ಹಿಂದಕ್ಕೆ ಕೊಟ್ಟನು.

**ಗಚ್ಛತ್ವಯಂ ಗೃಹೇ ಬಾಲಃ ಕ್ಷೇಮಂ ವ್ಯಾಹೃತವಾನ್ನೃಪ ।**
**ತಮಾದಾಯ ತದಾ ಶೌರಿರ್ಜಗಾಮ ಸ್ವಗೃಹಂ ಮುದಾ ॥೪೩॥**

ಎಲೈ ರಾಜನೇ ಕೇಳು—ಈ ಮಗುವು ಮನೆಗೆ ಹೋಗಲಿ ಎಂದು ಕಂಸನು ಕ್ಷೇಮ (ದೊರೆತುದನ್ನು ಕಾಪಾಡುವುದು) ದ ಮಾತನ್ನು ವಸುದೇವನಿಗೆ ಹೇಳಿದನು. ಆಗ ವಸುದೇವನು ಸಂತೋಷದಿಂದ ಆ ಮಗುವನ್ನು ತೆಗೆದುಕೊಂಡು ತನ್ನ ಮನೆಗೆ ಹೋದನು.

**ಕಂಸೋಽಪಿ ಸಚಿವಾನಾಹ ವೃಥಾ ಕಿಂ ಘಾತಯೇ ಶಿಶುಂ ।**
**ಅಷ್ಟಮಾದ್ದೇವಕೀಪುತ್ರಾನ್ಮಮ ಮೃತ್ಯುರುದಾಹೃತಃ ॥೪೪॥**

**ಅತಃ ಕಿಂ ಪ್ರಥಮಂ ಬಾಲಂ ಹತ್ವಾ ಪಾಪಂ ಕರೋಮ್ಯಹಂ ।**

ನನಗೆ ದೇವಕಿಯ ಎಂಟನೆಯ ಮಗನಿಂದ ಮರಣವೆಂದು ಹೇಳಲ್ಪಟ್ಟಿರುವ ಕಾರಣ ಈ ಮೊದಲನೆಯ ಮಗುವನ್ನು ಕೊಂದು ಸುಮ್ಮನೆ ಏಕೆ ಪಾಪವನ್ನು ಹೊಂದಲಿ ಎಂದು ಕಂಸನು ತನ್ನ ಮಂತ್ರಿಗಳಿಗೆ ಹೇಳಿದನು.

**ಸಾಧು ಸಾಧ್ವಿತಿ ತೇಽಪ್ಯುಕ್ತಾಃ ಸಂಸ್ಥಿತಾ ಮಂತ್ರಿಸತ್ತಮಾಃ ॥೪೫॥**
**ವಿಸರ್ಜಿತಾಸ್ತು ಕಂಸೇನ ಜಗ್ಮುಸ್ತೇ ಸ್ವಗೃಹಾನ್ಪ್ರತಿ ।**
**ಗತೇಷು ತೇಷು ಸಂಪ್ರಾಪ್ತೋ ನಾರದೋ ಮುನಿಸತ್ತಮಃ ॥೪೬॥**

ಆ ಮಂತ್ರಿಗಳೂ ಕಂಸನು ಹೇಳಿದ ಮಾತನ್ನು ಕೇಳಿ ಅದು ಬಹಳ ಒಳ್ಳೆಯ ದೆಂದು ಹೇಳಿದರು ಮತ್ತು ಕಂಸನಿಂದ ಬೀಳ್ಕೊಂಡು ಅವರವರ ಮನೆಗಳಿಗೆ ಹೋದರು. ಅವರು ಹೊರಟುಹೋದಮೇಲೆ ಮುನಿಶ್ರೇಷ್ಠನಾದ ನಾರದನು ಕಂಸನನ್ನು ನೋಡುವುದಕ್ಕಾಗಿ ಬಂದನು.

**ಅಭ್ಯುತ್ಥಾನಾರ್ಘ್ಯಪಾದ್ಯಾದಿ ಚಕಾರೋಗ್ರಸುತಸ್ತದಾ ।**
**ಪಪ್ರಚ್ಛ ಕುಶಲಂ ರಾಜಾ ತತ್ರಾಗಮನಕಾರಣಂ ॥೪೭॥**

ಆಗ ಉಗ್ರಸೇನನ ಮಗನಾದ ಕಂಸರಾಜನು ಆ ನಾರದಋಷಿಗೆ, ಪ್ರತ್ಯುತ್ಥಾನ, ಅರ್ಘ್ಯ, ಪಾದ್ಯ ಮೊದಲಾದ ಉಪಚಾರಗಳನ್ನು ಮಾಡಿ ಕುಶಲಪ್ರಶ್ನೆಯನ್ನು ಕೇಳಿದ ಅನಂತರದಲ್ಲಿ ಆ ನಾರದಋಷಿಯನ್ನು ಕುರಿತು ಬಂದಕಾರಣವೇನೆಂದು ಬೆಸಗೊಂಡನು.

ನಾರದಸ್ತಂ ತದೋವಾಚ ಸ್ಮಿತಪೂರ್ವಮಿದಂ ವಚಃ ।
ಕಂಸ ಕಂಸ ಮಹಾಭಾಗ ಗತೋಽಹಂ ಹೇಮಪರ್ವತಂ ॥೪೮॥

ಆಗ ನಾರದನು ಮಂದಹಾಸಪೂರ್ವಕವಾಗಿ ಆ ಕಂಸನನ್ನು ಕುರಿತು ಹೀಗೆ ಹೇಳಿದನು—ಎಲೈ ಅದೃಷ್ಟಶಾಲಿಯಾದ ಕಂಸನೇ ಕೇಳು—ನಾನು ಮೇರುಪರ್ವತಕ್ಕೆ ಹೋಗಿದ್ದೆನು.

ತತ್ರ ಬ್ರಹ್ಮಾದಯೋ ದೇವಾ ಮಂತ್ರಂ ಚಕ್ರುಸ್ಸಮಾಹಿತಾಃ ।
ದೇವಕ್ಯಾಂ ವಸುದೇವಸ್ಯ ಭಾರ್ಯಾಯಾಂ ಸುರಸತ್ತಮಃ ॥೪೯॥

ವಧಾರ್ಥಂ ತವ ವಿಷ್ಣುಶ್ಚ ಜನ್ಮ ಚಾತ್ರ ಕರಿಷ್ಯತಿ ।
ತತ್ಕಥಂ ನಹತಃ ಪುತ್ರಸ್ತ್ವಯಾ ನೀತಿಂ ವಿಜಾನತಾ ॥೫೦॥

ಆ ಮೇರುಪರ್ವತದಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು ಒಟ್ಟಾಗಿ ಸೇರಿ ಮಂತ್ರಾಲೋಚನೆಯನ್ನು ಮಾಡುತ್ತಿದ್ದರು. ವಸುದೇವನ ಹೆಂಡತಿಯಾದ ದೇವಕಿಯಲ್ಲಿ ದೇವಶ್ರೇಷ್ಠನಾದ ವಿಷ್ಣುವು ನಿನ್ನನ್ನು ಸಂಹರಿಸುವುದಕ್ಕಾಗಿ ಜನ್ಮವನ್ನೆತ್ತುವನು. ಆದುದರಿಂದ ಸಮಯದಲ್ಲಿ ಅನುಸರಿಸಬೇಕಾದ ಆತ್ಮರಕ್ಷಣೆಯ ನೀತಿಯನ್ನು ತಿಳಿದಿರುವ ನೀನು ವಸುದೇವನು ತಂದು ಕೊಟ್ಟ ಮಗುವನ್ನು ಏಕೆ ಕೊಲ್ಲಲಿಲ್ಲ? ಎಂಬುದಾಗಿ ಕೇಳಿದನು.

॥ ಕಂಸ ಉವಾಚ ॥

ಅಷ್ಟಮಂ ಚ ಹನಿಷ್ಯೇಽಹಂ ಮೃತ್ಯುಂ ಮೇ ದೇವಭಾಷಿತಂ ।

ನನಗೆ, ದೇವವಾಣಿಯು ಎಂಟನೆಯ ಮಗುವಿನಿಂದ ಮೃತ್ಯುವು ಸಂಭವಿಸುವುದೆಂದು ಹೇಳಿದ ಕಾರಣ ನಾನು ಆ ಎಂಟನೆಯ ಮಗುವನ್ನು ಮಾತ್ರ ಕೊಲ್ಲುವೆನೆಂದು ಕಂಸನು ಹೇಳಿದನು.

॥ ನಾರದ ಉವಾಚ ॥

ನ ಜಾನಾಸಿ ನೃಪಶ್ರೇಷ್ಠ ರಾಜನೀತಿಂ ಶುಭಾಶುಭಂ ॥೫೧॥

ಅದಕ್ಕೆ ನಾರದನು ಹೀಗೆ ಹೇಳಿದನು—ಎಲೈ ರಾಜಶ್ರೇಷ್ಠನಾದ ಕಂಸನೇ, ಕೇಳು—ಸರಿಯಾಗಿ ತಿಳಿದುಕೊಂಡು ನಡೆದರೆ ಒಳ್ಳೆಯದನ್ನೂ ಇಲ್ಲದಿದ್ದರೆ ಕೆಟ್ಟ

ದ್ದನ್ನೂ ಉಂಟುಮಾಡುವ ರಾಜನೀತಿಯನ್ನೂ ನೀನು ತಿಳಿದಿಲ್ಲವು. ಅದನ್ನೂ ನಿನಗೆ ನಾನು ಹೇಳುತ್ತೇನೆ ಕೇಳು.

**ಮಾಯಾಬಲಂ ಚ ದೇವಾನಾಂ ನ ತ್ವಂ ವೇತ್ಸಿ ವದಾಮಿ ಕಿಂ ।**
**ರಿಪುರಲ್ಪೋಽಪಿ ಶೂರೇಣ ನೋಪೇಕ್ಷ್ಯಃ ಶುಭಮಿಚ್ಛತಾ ॥೫೨॥**

ನೀನು ದೇವತೆಗಳ ಮೋಸದ ಶಕ್ತಿಯನ್ನು ತಿಳಿದಿಲ್ಲವು. ನಾನು ಏನನ್ನು ಹೇಳಲಿ ? ಒಳ್ಳೆಯದನ್ನು ಅಪೇಕ್ಷಿಸುವ ರಾಜನು ಶೂರನಾದರೂ ಶತ್ರುವನ್ನು ಸಣ್ಣವನೆಂದು ಉಪೇಕ್ಷೆ ಮಾಡಬಾರದು.

**ಸಂಮೇಲನಕ್ರಿಯಾಯಾಂ ತು ಸರ್ವೇ ತೇ ಹೃಷ್ಟಮಾಃಸ್ಮೃತಾಃ ।**
**ಮೂರ್ಖತ್ವಮರಿಸಂತ್ಯಾಗಃ ಕೃತೋಽಯಂ ಜಾನತಾ ತ್ವಯಾ ॥೫೩॥**

ಎಲ್ಲರನ್ನೂ ಕೂಡಿಸಿ ಲೆಕ್ಕವನ್ನು ಮಾಡಿದರೆ ಅವರಲ್ಲಿ ಯಾರು ಬೇಕಾದರೂ ಎಂಟನೆಯವರು ಆಗುತ್ತಾರೆ. ಹೀಗಿರುವಲ್ಲಿ ಎಲ್ಲವನ್ನೂ ತಿಳಿದಿರುವ ನೀನು ಶತ್ರುವನ್ನು ಕೊಲ್ಲದೆ ಬಿಡುವುದು ಮೂರ್ಖತನವೆಂದು ತಿಳಿದಿದ್ದರೂ, ಹೀಗೆ ಮಾಡಿರುತ್ತೀಯೆ !

**ಇತ್ಯುಕ್ತ್ವಾಽಶು ಗತಃ ಶ್ರೀಮಾನ್ ನಾರದೋ ದೇವದರ್ಶನಃ ।**
**ಗತೇಽಥ ನಾರದೇ ಕಂಸಃ ಸಮಾಹೂಯಾಥ ಬಾಲಕಂ ॥೫೪॥**

**ಪಾಷಾಣೇ ಪೋಥಯಾಮಾಸ ಸುಖಂ ಪ್ರಾಪ ಚ ಮಂದಧೀಃ ।**

ದೇವತೆಗಳಂತೆ ಸೌಮ್ಯರೂಪವುಳ್ಳ ನಾರದಋಷಿಯು ಹೀಗೆ ಹೇಳಿ ಜಾಗ್ರತೆಯಾಗಿ ಹೊರಟು ಹೋದನು. ಅವನು ಹೋದಬಳಿಕ ದಡ್ಡನಾದ ಕಂಸನು ಆ ಮಗುವನ್ನು ತರಿಸಿಕೊಂಡು ಕಲ್ಲಿನ ಮೇಲೆ ಹೊಡೆದಪ್ಪಳಿಸಿ ಕೊಂದು ನೆಮ್ಮದಿಯನ್ನು ಪಡೆದಂತೆ ಭಾವಿಸಿ ಸಂತೋಷವನ್ನು ಹೊಂದಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ಏಕವಿಂಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ದ್ವಾವಿಂಶೋಽಧ್ಯಾಯಃ ||

### ಇಪ್ಪತ್ತೆರಡನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಕಿಂ ಕೃತಂ ಪಾತಕಂ ತೇನ ಬಾಲಕೇನ ಪಿತಾಮಹ ।**
**ಯೋ ಜಾತಮಾತ್ರೋ ನಿಹತಸ್ತಥಾ ತೇನ ದುರಾತ್ಮನಾ ॥೧॥**

ಜನಮೇಜಯರಾಜನು ವ್ಯಾಸಮುನಿಯನ್ನು ಕೇಳಿದನು—ಎಲೈ ಪಿತಾಮಹನಾದ ವ್ಯಾಸಋಷಿಯೇ, ದುಷ್ಟನಾದ ಆ ಕಂಸನಿಂದ ಆಗತಾನೇ ಹುಟ್ಟಿದ ಮಗುವು ಕೊಲ್ಲಲ್ಪಟ್ಟಿತೆಂದು ಹೇಳಿದೆಯಲ್ಲವೇ ? ಆ ರೀತಿಯಲ್ಲಿ ಮರಣವನ್ನು ಹೊಂದಲು ಆ ಮಗುವು ಮಾಡಿದ್ದ ಪಾಪವೇನು ?

**ನಾರದೋಽಪಿ ಮುನಿಶ್ರೇಷ್ಠೋ ಜ್ಞಾನವಾನ್ಧರ್ಮತತ್ಪರಃ ।**
**ಕಥಮೇವಂ ವಿಧಂ ಪಾಪಂ ಕೃತವಾನ್ಬ್ರಹ್ಮವಿತ್ತಮಃ ॥೨॥**

ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾಗಿಯೂ, ಮುನಿಗಳಲ್ಲಿ ಉತ್ತಮನಾಗಿಯೂ ಧರ್ಮಾಚರಣೆಯಲ್ಲಿ ಆಸಕ್ತನಾಗಿಯೂ, ಒಳ್ಳೆಯ ಜ್ಞಾನಿಯಾಗಿಯೂ ಇರುವ ನಾರದಋಷಿಯೂ ಕೂಡ ಇಂಥ ಪಾಪಕಾರ್ಯಕ್ಕೆ ಪ್ರೇರಿಸುವ ಕೆಲಸವನ್ನು ಏತಕ್ಕೆ ಮಾಡಿದನು ?

**ಕರ್ತಾ ಕಾರಯಿತಾ ಪಾಪೇ ತುಲ್ಯಪಾಪೌ ಸ್ಮೃತೌ ಬುಧೈಃ ।**
**ಸ ಕಥಂ ಪ್ರೇರಯಾಮಾಸ ಮುನಿಃ ಕಂಸಂ ಖಲಂ ತದಾ ॥೩॥**

ಕೆಟ್ಟಕೆಲಸವನ್ನು ಮಾಡಿದವನೂ, ಮಾಡಿಸಿದವನೂ ಇವರಿಬ್ಬರೂ ಸಮಾನವಾಗಿ ಪಾಪವನ್ನು ಹೊಂದುವರೆಂದು ವಿದ್ವಾಂಸರು ಹೇಳುತ್ತಾರೆ. ಹೀಗಿರುವಲ್ಲಿ ನಾರದಮುನಿಯು ಆಗ ದುಷ್ಟನಾದ ಕಂಸನನ್ನು ಏತಕ್ಕಾಗಿ ಆ ಮಗುವನ್ನು ಕೊಲ್ಲಲು ಪ್ರೇರಿಸಿದನು ?

**ಸಂಶಯೋಽಯಂ ಮಹಾನ್ಮೇಽತ್ರ ಬ್ರೂಹಿ ಸರ್ವಂ ಸವಿಸ್ತರಂ ।**
**ಯೇನ ಕರ್ಮವಿಪಾಕೇನ ಬಾಲಕೋ ನಿಧನಂ ಗತಃ ॥೪॥**

ಈ ವಿಷಯದಲ್ಲಿ ನನಗೆ ತುಂಬ ಸಂಶಯವಿರುತ್ತದೆ. ಈ ಮಗುವು ಯಾವ ಕೆಟ್ಟ ಕರ್ಮದ ಪರಿಪಾಕದಿಂದ ಮರಣವನ್ನು ಹೊಂದಿತು ? ಇದನ್ನು ವಿವರಿಸು.

॥ ವ್ಯಾಸ ಉವಾಚ ॥

**ನಾರದಃ ಕೌತುಕಪ್ರೇಕ್ಷೀ ಸರ್ವದಾ ಕಲಹಪ್ರಿಯಃ ।**
**ದೇವಕಾರ್ಯಾರ್ಥಮಾಗತ್ಯ ಸರ್ವಮೇತಚ್ಚಕಾರ ಹ ॥೫॥**

ವ್ಯಾಸಮುನಿಯು ಹೇಳಿದನು—ನಾರದನು ಯಾವಾಗಲೂ ಎಲ್ಲವನ್ನೂ ವಿನೋದವನ್ನು ಹೇಗೋ ಹಾಗೆ ಸಾಕ್ಷಿಯಂತೆ ನೋಡುವವನು. ಮತ್ತು ಜಗಳಗಳನ್ನು ಉಂಟುಮಾಡುವುದರಲ್ಲಿ ಆ ನಾರದನಿಗೆ ಆಸೆಯು ಇರುವಂತೆ ತೋರುವುದು. ಆದರೂ ವಾಸ್ತವವಾಗಿ ಅವನು ದೇವತೆಗಳ ಕಾರ್ಯಕ್ಕಾಗಿ ಕಂಸನ ಹತ್ತಿರಕ್ಕೆ ಬಂದು ಇದೆಲ್ಲವನ್ನೂ ಮಾಡಿಸಿದನು.

**ನ ಮಿಥ್ಯಾಭಾಷಣೇ ಬುದ್ಧಿರ್ಮುನೇಸ್ತಸ್ಯ ಕದಾಚನ ।**
**ಸತ್ಯವಕ್ತಾ ಸುರಾಣಾಂ ಸ ಕರ್ತವ್ಯೇ ನಿರತಃ ಶುಚಿಃ ॥೬॥**

ಆ ನಾರದಋಷಿಗೆ ಯಾವಾಗಲೂ ಸುಳ್ಳು ಹೇಳುವುದರಲ್ಲಿ ಬುದ್ಧಿಯುಂಟಾಗುವುದೇ ಇಲ್ಲವು. ಅವನು ಯಾವಾಗಲೂ ನಿಜವನ್ನೇ ಹೇಳುವವನು, ದೇವತೆಗಳ ಕಾರ್ಯದಲ್ಲಿ ನಿರತನಾದವನು ಮತ್ತು ಪರಿಶುದ್ಧನು. ದೇವತೆಗಳು ಮಾಡಬೇಕಾದ ಕೆಲಸಗಳು ಕ್ರಮವಾಗಿ ನೆರವೇರಲು ಅನುಕೂಲಪಡಿಸಿದನು. ಇವನು ಹೀಗೆಮಾಡಿ ಜನರ ಕರ್ಮಗಳು ಫಲಿಸಲು ಬರುವ ಅಡ್ಡಿಯನ್ನು ನಿವಾರಿಸಿದನು.

**ಏವಂ ಷಡ್ಬಾಲಕಾಸ್ತೇನ ಜಾತಾ ಜಾತಾ ನಿಪಾತಿತಾಃ ।**
**ಷಡ್ಗರ್ಭಾಃ ಶಾಪಯೋಗೇನ ಸಂಭೂಯ ಮರಣಂ ಗತಾಃ ॥೭॥**

ಮೇಲೆ ಹೇಳಿದಂತೆ ಆರುಮಕ್ಕಳೂ ಹುಟ್ಟಿದ ಕೂಡಲೇ ಕಂಸನಿಂದ ಮರಣವನ್ನು ಹೊಂದಿದುವು. ಈ ಆರು ಮಕ್ಕಳಿಗೂ ಷಡ್ಗರ್ಭಾಃ ಎಂಬುದಾಗಿ ಹೆಸರು. ಇವರಿಗೆ ಶಾಪವು ಬಂದಿತ್ತು. ಆ ಶಾಪದಿಂದ ಇವರೆಲ್ಲರೂ ಹುಟ್ಟಿದ ಕೂಡಲೇ ಮರಣವನ್ನು ಹೊಂದಿದರು. ದೇವೀಭಾಗವತ ಸ್ಕಂ. ೨. ಅ. ೩. ಶ್ಲೋ. ೩೫-೪೪ ನೋಡಿ.

**ಶೃಣು ರಾಜನ್ಪ್ರವಕ್ಷ್ಯಾಮಿ ತೇಷಾಂ ಶಾಪಸ್ಯ ಕಾರಣಂ ।**
**ಸ್ವಾಯಂಭುವೇಽನ್ತರೇ ಪುತ್ರಾ ಮರೀಚೇಃ ಷಣ್ಮಹಾಬಲಾಃ ॥೮॥**

**ಊರ್ಣಾಯಾಂಚೈವ ಭಾರ್ಯಾಯಾಮಾಸನ್ಧರ್ಮವಿಚಕ್ಷಣಾಃ ।**
**ಬ್ರಹ್ಮಾಣಂ ಜಹಸುರ್ವೀಕ್ಷ್ಯ ಸುತಾಂ ಯಭಿತುಮುದ್ಯತಂ ॥೯॥**

ಎಲೈ ಜನಮೇಜಯರಾಜನೇ ಕೇಳು— ಅವರಿಗೆ ಶಾಪಬರಲು ಕಾರಣವನ್ನು ಹೇಳುತ್ತೇನೆ. ಸ್ವಾಯಂಭುವಮನ್ವಂತರದಲ್ಲಿ ಮರೀಚಿಬ್ರಹ್ಮನಿಗೆ ಊರ್ಣಾ ಎಂಬ ಹೆಂಡಿತಿಯಲ್ಲಿ ಆರು ಜನ ಮಕ್ಕಳು ಹುಟ್ಟಿದರು. ಇವರು ಆರು ಜನಗಳೂ ಧರ್ಮಮಾರ್ಗದಲ್ಲಿ ಇರುವವರಾಗಿದ್ದರು. ಇವರು, ಬ್ರಹ್ಮನು ತನ್ನ ಮಗಳ ಸಂಭೋಗದಲ್ಲಿ ಉದ್ಯುಕ್ತನಾದನೆಂದು ತಿಳಿದು ಬ್ರಹ್ಮನನ್ನು ನೋಡಿ ಅಪಹಾಸ್ಯಮಾಡಿದರು.

**ಶಶಾಪ ತಾಂಸ್ತದಾ ಬ್ರಹ್ಮಾ ದೈತ್ಯಯೋನಿಂ ವಿಶಂತ್ವಥಃ ।**
**ಕಾಲನೇಮಿಸುತಾ ಜಾತಾಸ್ತೇ ಷಡ್ಗರ್ಭಾ ವಿಶಾಂಪತೇ ॥೧೦॥**

ಎಲೈ ರಾಜನೇ ಕೇಳು. ಆಗ ಬ್ರಹ್ಮನು ಅವರನ್ನು ಕುರಿತು—ನೀವು ರಾಕ್ಷಸರ ಹೊಟ್ಟೆಯಲ್ಲಿ ಹುಟ್ಟಿರಿ ಎಂದು ಶಾಪವನ್ನು ಕೊಟ್ಟನು. ಅವರು ಬ್ರಹ್ಮನ ಈ ಶಾಪದಿಂದ ಕಾಲನೇಮಿ ಎಂಬ ಅಸುರನ ಮಕ್ಕಳಾಗಿ ಕೆಳಲೋಕದಲ್ಲಿ ಹುಟ್ಟಿದರು.

**ಅವತಾರೇ ಪರೇ ತೇ ತು ಹಿರಣ್ಯಕಶಿಪೋಃ ಸುತಾಃ ।**
**ಜಾತಾಸ್ತೇ ಜ್ಞಾನಸಂಯುಕ್ತಾಃ ಪೂರ್ವಶಾಪಭಯಾನ್ನೃಪ ॥೧೧॥**

ಇನ್ನೊಂದು ಜನ್ಮದಲ್ಲಿ ಅವರು ಹಿರಣ್ಯಕಶಿಪುವಿನ ಮಕ್ಕಳಾಗಿ ಹುಟ್ಟಿದ್ದರು. ಎಲೈ ಧೊರೆಯೇ ಕೇಳು. ಆದರೆ ಅವರು ಹಿಂದಿನ ಶಾಪದ ಭಯದಿಂದ ದೈತ್ಯಸ್ವಭಾವವನ್ನು ಬಿಟ್ಟು ಜ್ಞಾನಿಗಳಾಗಿ ಇದ್ದರು.

**ತಸ್ಮಿಞ್ಜನ್ಮನಿ ಶಾಂತಾಶ್ಚ ತಪಶ್ಚಕ್ರುಃ ಸಮಾಹಿತಾಃ ।**
**ತೇಷಾಂ ಪ್ರೀತೋಽಭವದ್ಬ್ರಹ್ಮಾ ಷಡ್ಗರ್ಭಾಣಾಂ ವರಾನ್ದದೌ॥೧೨॥**

ಆ ಜನ್ಮದಲ್ಲಿ ಅವರು ಉಪಶಾಂತಿಯನ್ನು ಹೊಂದಿದವರಾಗಿ ಎಲ್ಲರೂ ಒಟ್ಟಾಗಿ ಸೇರಿ ತಪಸ್ಸನ್ನು ಮಾಡಿದರು. ಆ ಷಡ್ಗರ್ಭರು ಮಾಡಿದ ತಪಸ್ಸಿಗೆ ಬ್ರಹ್ಮನು ಮೆಚ್ಚಿ ಅವರಿಗೆ ವರಗಳನ್ನು ಕೊಟ್ಟನು.

॥ ಬ್ರಹ್ಮೋವಾಚ ॥

**ಶಪ್ತಾ ಯೂಯಂ ಮಯಾ ಪೂರ್ವಂ ಕ್ರೋಧಯುಕ್ತೇನ ಪುತ್ರಕಾಃ ।**
**ತುಷ್ಟೋಽಸ್ಮಿ ವೋ ಮಹಾಭಾಗಾ ಬ್ರುವಂತು ವಾಂಛಿತಂ ವರಂ॥೧೩॥**

ಬ್ರಹ್ಮನು ಹೇಳಿದನು—ಎಲೈ ಮಕ್ಕಳಿರಾ, ಪೂರ್ವದಲ್ಲಿ ನಾನು ಕೋಪದಿಂದ ನಿಮ್ಮನ್ನು ಶಪಿಸಿದೆನು. ನೀವು ಬಹಳ ಅದೃಷ್ಟಶಾಲಿಗಳು. ನಿಮ್ಮ ವಿಷಯದಲ್ಲಿ ನಾನು ಸಂತೋಷಪಟ್ಟಿರುತ್ತೇನೆ. ನಿಮಗೆ ಬೇಕಾದ ವರವನ್ನು ಕೇಳಿರಿ, ಕೊಡುತ್ತೇನೆ.

॥ ವ್ಯಾಸ ಉವಾಚ ॥

**ತೇ ತು ಶ್ರುತ್ವಾ ವಚಸ್ತಸ್ಯ ಬ್ರಹ್ಮಣಃ ಪ್ರೀತಮಾನಸಾಃ ।**
**ಬ್ರಹ್ಮಾಣಮಬ್ರುವನ್ಕಾಮಂ ಸರ್ವೇ ಕಾರ್ಯಾರ್ಥತತ್ಪರಾಃ ॥೧೪॥**

ವ್ಯಾಸನು ಹೇಳಿದನು—ಬ್ರಹ್ಮನ ಆ ಮಾತನ್ನು ಕೇಳಿ ಅವರೆಲ್ಲರೂ ಸಂತೋಷದಿಂದ ಕೂಡಿದ ಮನಸ್ಸುಳ್ಳವರಾಗಿ ತಮ್ಮ ಕಾರ್ಯವನ್ನು ನೆರವೇರಿಸಿಕೊಳ್ಳಲು ಆಸಕ್ತರಾಗಿ ಬ್ರಹ್ಮನ ಸಂಗಡ ತಮ್ಮ ಇಷ್ಟವನ್ನು ಹೇಳಿದರು.

॥ ಗರ್ಭಾ ಊಚುಃ ॥

**ಪಿತಾಮಹಾದ್ಯ ತುಷ್ಟೋಽಸಿ ದೇಹಿ ನೋ ವಾಂಛಿತಂ ವರಂ ।**
**ಅವಧ್ಯಾ ದೈವತೈಃ ಸರ್ವೈರ್ಮಾನವೈಶ್ಚ ಮಹೋರಗೈಃ ॥೧೫॥**

**ಗಂಧರ್ವಸಿದ್ಧಪತಿಭಿರ್ವಧೋ ಮಾ ಭೂತ್ಪಿತಾಮಹ ।**

ಆ ಷಡ್ಗರ್ಭರು ಹೇಳಿದರು—ಓ ಬ್ರಹ್ಮನೇ, ಈ ನೀನು ನಮ್ಮ ವಿಷಯದಲ್ಲಿ ಸಂತುಷ್ಟನಾಗಿರುವುದಾದರೆ, ನಮಗೆ ಎಲ್ಲ ದೇವತೆಗಳಿಂದಲೂ, ಮನುಷ್ಯರಿಂದಲೂ,

ಮಹಾಸರ್ಪಗಳಿಂದಲೂ, ಗಂಧರ್ವರಿಂದಲೂ, ಇನ್ನೂ ಸಿದ್ಧರೇ ಮೊದಲಾದ ಯಾರಿಂದಲೂ ಸಹ ಮರಣವು ಉಂಟಾಗದಂತೆ ನಾವು ಅಪೇಕ್ಷಿಸುವ ಈವರವನ್ನು ಕೊಡು.

|| ವ್ಯಾಸ ಉವಾಚ ||

ತಾನುವಾಚ ತತೋ ಬ್ರಹ್ಮಾ ಸರ್ವಮೇತದ್ಭವಿಷ್ಯತಿ ॥೧೬॥

ಗಚ್ಛಂತು ವೋ ಮಹಾಭಾಗಾಃ ಸತ್ಯಮೇವ ನ ಸಂಶಯಃ ।
ದತ್ವಾ ವರಂ ತತೋ ಬ್ರಹ್ಮಾ ಮುದಿತಾಸ್ತೇ ತದಾಽಭವನ್ ॥೧೭॥

ವ್ಯಾಸಮುನಿಯ ಹೇಳಿದನು—ಅನಂತರದಲ್ಲಿ ಬ್ರಹ್ಮನು ಅವರನ್ನು ಕುರಿತು ನೀವು ಕೇಳಿದ್ದೆಲ್ಲವೂ ನಿಮ್ಮ ಇಷ್ಟಪ್ರಕಾರ ಆಗುವುದು. ಇದು ಸತ್ಯವು. ಈ ವಿಷಯ ದಲ್ಲಿ ಸಂಶಯಪಡಬೇಡಿ. ಇನ್ನು ನಿಮ್ಮ ಇಷ್ಟದಂತೆ ಹೋಗಿ ಎಂಬದಾಗಿ ಹೇಳಿ ವರವನ್ನು ಕೊಟ್ಟು ಕಳುಹಿಸಿದನು. ಅದರಿಂದ ಆಗ ಅವರು ಸಂತೋಷ ವುಳ್ಳವರಾದರು.

ಹಿರಣ್ಯಕಶಿಪುಃ ಕ್ರುದ್ಧಸ್ತಾನುವಾಚ ಕುರೂದ್ವಹ ।
ಯಸ್ಮಾದ್ವಿಹಾಯ ಮಾಂ ಪುತ್ರಾಸ್ತೋಷಿತೋ ವೈ ಪಿತಾಮಹಃ॥೧೮॥

ಎಲೈ ಜನಮೇಜಯರಾಜನೇ ಕೇಳು—ಹಿರಣ್ಯಕಶಿಪುವು ಬಹಳ ಕೋಪ ಗೊಂಡು ಅವರನ್ನು ಕುರಿತು ಹೀಗೆ ಹೇಳಿದನು—ನೀವುಗಳು ನನ್ನ ಮಕ್ಕಳಾಗಿ ದ್ದರೂ ನನ್ನನ್ನು ಬಿಟ್ಟು ಬ್ರಹ್ಮನನ್ನು ಸಂತೋಷಪಡಿಸಿರುವಿರಿ.

ವರೇಣ ಪ್ರಾರ್ಥಿತೋಽತ್ಯರ್ಥಂ ಬಲವಂತೋ ಯತೋಽಭವನ್ ।
ಯುಷ್ಮಾಭಿರ್ಹಾಪಿತಃ ಸ್ನೇಹಸ್ತತೋ ಯುಷ್ಮಾಂಸ್ತ್ಯಜಾಮ್ಯಹಂ ॥

ನೀವುಗಳು ನನಗೆ ಶತ್ರುವಾದ ಬ್ರಹ್ಮನನ್ನು ಪ್ರಾರ್ಥಿಸಿ ವರವನ್ನು ಪಡೆದು ಬಲಿಷ್ಠರಾದಿರಿ. ಹೀಗೆ ನೀವು ತಂದೆಮಕ್ಕಳ ಸ್ನೇಹ ಮರ್ಯಾದೆಗಳನ್ನು ಕೈಬಿಟ್ಟಿರು ವಿರಿ. ಈ ಕಾರಣಗಳಿಗೋಸ್ಕರ ನಾನು ನಿಮ್ಮನ್ನು ತ್ಯಜಿಸಿರುತ್ತೇನೆ.

ಯೂಯಂ ವ್ರಜಂತು ಪಾತಾಲೇ ಷಡ್ಗರ್ಭಾವಿಶ್ರುತಾ ಭುವಿ ।
ಪಾತಾಲೇ ನಿದ್ರಯಾವಿಷ್ಟಾಸ್ತಿಷ್ಠಂತು ಬಹುವತ್ಸರಾನ್ ॥೨೦॥

ನೀವು ಭೂಮಿಯಲ್ಲಿ ಷಡ್ಗರ್ಭಾಃ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿರಿ, ಮತ್ತು ಪಾತಾಳಕ್ಕೆ ಹೋಗಿ ಅಲ್ಲಿ ವಾಸಮಾಡಿರಿ. ಆ ಪಾತಾಳ ಲೋಕದಲ್ಲಿ ನೀವುಗಳು ಅನೇಕ ವರ್ಷಗಳವರೆಗೂ ನಿದ್ರಾವಶರಾಗಿರುವಂತೆ ಆಗಲಿ.

**ತತಸ್ತು ದೇವಕೀಗರ್ಭೇ ವರ್ಷೇ ವರ್ಷೇ ಪುನಃ ಪುನಃ ।**
**ಪಿತಾ ವಃ ಕಾಲನೇಮಿಸ್ತು ತತ್ರ ಕಂಸೋ ಭವಿಷ್ಯತಿ ॥೨೧॥**
**ಸ ಏವ ಜಾತಮಾತ್ರಾನ್ವೋ ವಧಿಷ್ಯತಿ ಸುದಾರುಣಃ ।**

ಅನಂತರದಲ್ಲಿ ಪ್ರತಿ ವರ್ಷದಲ್ಲಿಯೂ ದೇವಕಿಯ ಗರ್ಭದಲ್ಲಿ ಹುಟ್ಟಿರಿ. ನಿಮ್ಮ ಹಿಂದಿನ ಜನ್ಮದಲ್ಲಿ ತಂದೆಯಾಗಿದ್ದ ಕಾಲನೇಮಿಯು ಭೂಮಿಯಲ್ಲಿ ಕಂಸನಾಗಿ ಹುಟ್ಟುವನು. ಬಹಳ ಕ್ರೂರನಾದ ಅವನು ನಿಮ್ಮನ್ನು ಹುಟ್ಟಿದ ಕೂಡಲೇ ಕೊಂದುಹಾಕುವನು ಎಂದು ಹಿರಣ್ಯಕಶಿಪುವು ಶಾಪವನ್ನು ಕೊಟ್ಟನು.

॥ ವ್ಯಾಸ ಉವಾಚ ॥

**ಏವಂ ಶಪ್ತಾಸ್ತದಾ ತೇನ ಗರ್ಭೇ ಜಾತಾನ್ಪುನಃ ಪುನಃ ॥೨೨॥**
**ಜಘಾನ ದೇವಕೀಪುತ್ರಾನ್ ಷಡ್ಗರ್ಭಾಞ್ಛಾಪನೋದಿತಃ ।**

ವ್ಯಾಸಋಷಿಯು ಹೇಳಿದನು—ಹೀಗೆ ಹಿರಣ್ಯಕಶಿಪುವಿನಿಂದ ಶಾಪವನ್ನು ಹೊಂದಿದ ಆ ಷಡ್ಗರ್ಭರು ದೇವಕಿಯ ಮಕ್ಕಳಾಗಿ ಹುಟ್ಟಿದಕೂಡಲೇ ಅವರನ್ನು ಶಾಪಪ್ರೇರಣೆಯಿಂದ ಕಂಸನು ಕೊಂದನು.

**ಶೇಷಾಂಶಃ ಸಪ್ತಮಸ್ತತ್ರ ದೇವಕೀಗರ್ಭಸಂಸ್ಥಿತಃ ॥೨೩॥**

ಹೀಗೆ ದೇವಕಿಯ ಆರು ಮಕ್ಕಳು ನಾಶವನ್ನು ಹೊಂದಿದ ಮೇಲೆ ಏಳನೆಯ ಗರ್ಭವುಂಟಾಯಿತು. ಇದು ಆದಿಶೇಷನ ಅಂಶವನ್ನು ಹೊಂದಿತ್ತು.

**ವಿಸ್ರಂಸಿತಶ್ಚ ಗರ್ಭೋಽಸೌ ಯೋಗೇನ ಯೋಗಮಾಯಯಾ ।**
**ನೀತಶ್ಚ ರೋಹಿಣೀಗರ್ಭೇ ಕೃತ್ವಾ ಸಂಕರ್ಷಣಂ ಬಲಾತ್ ॥೨೪॥**

ಈ ಏಳನೆಯ ಗರ್ಭವನ್ನು ಯೋಗಮಾಯೆಯು ಯೋಗಶಕ್ತಿಯಿಂದ ದೇವಕಿಯ ಗರ್ಭದಿಂದ ಬಲಾತ್ಕಾರವಾಗಿ ಆಕರ್ಷಿಸಿ ಎಳೆದು ರೋಹಿಣೀದೇವಿಯ ಗರ್ಭ

ದಲ್ಲಿ ಸೇರಿಸಿತು. ಮತ್ತು ಈ ಕಾರಣದಿಂದ ಆ ಮಗುವು ಸಂಕರ್ಷಣನೆಂಬ ಹೆಸರನ್ನು ಹೊಂದಿತು.

**ಪತಿತಃ ಪಂಚಮೇ ಮಾಸಿ ಲೋಕಖ್ಯಾತಿಂ ಗತಸ್ತದಾ ।**
**ಕಂಸೋಽಪಿ ಜ್ಞಾತವಾಂಸ್ತತ್ರ ದೇವಕೀಗರ್ಭಪಾತನಂ ॥೨೫॥**

ದೇವಕಿಯ ಗರ್ಭವು ಐದನೆಯ ತಿಂಗಳಿನಲ್ಲಿ ಪತನವಾಯಿತು ಎಂಬುದಾಗಿ ಲೋಕದಲ್ಲಿ ಆಗ ಪ್ರಸಿದ್ಧಿಯುಂಟಾಯಿತು. ಕಂಸನೂ, ಈ ಗರ್ಭಪತನದ ವರ್ತಮಾನವನ್ನು ಕೇಳಿ ತಿಳಿದನು.

**ಮುದಂ ಪ್ರಾಪ ಸ ದುಷ್ಟಾತ್ಮಾ ಶ್ರುತ್ವಾ ವಾರ್ತಾಂ ಸುಖಾವಹಾಂ ।**
**ಅಷ್ಟಮೇ ದೇವಕೀಗರ್ಭೇ ಭಗವಾನ್ಸಾತ್ವತಾಂ ಪತಿಃ ॥೨೬॥**
**ಉವಾಸ ದೇವಕಾರ್ಯಾರ್ಥಂ ಭಾರಾವತರಣಾಯ ಚ ।**

ದುಷ್ಟನಾದ ಕಂಸನೂ ಕೂಡ ತನಗೆ ಸುಖಕರವಾದ ಈ ವರ್ತಮಾನವನ್ನು ಕೇಳಿ ಸಂತೋಷಪಟ್ಟನು. ದೇವಕಿಯ ಎಂಟನೆಯ ಗರ್ಭದಲ್ಲಿ, ಷಡ್ಗುಣೈಶ್ವರ್ಯ ಸಂಪನ್ನನಾದ, ಯಾದವರಿಗೆ ಅಧಿಪತಿಯಾದ ಕೃಷ್ಣನು ದೇವತೆಗಳ ಕಾರ್ಯಕ್ಕಾಗಿಯೂ, ಭೂಮಿಯ ಭಾರವನ್ನು ಕಡಿಮೆ ಮಾಡುವುದಕ್ಕಾಗಿಯೂ ವಾಸವನ್ನು ಮಾಡಿದನು.

|| ರಾಜೋವಾಚ ||

**ವಸುದೇವಃ ಕಶ್ಯಪಾಂಶಃ ಶೇಷಾಂಶಶ್ಚ ತದಾಽಭವತ್ ॥೨೭॥**
**ಹರೇರಂಶಸ್ತಥಾ ಪ್ರೋಕ್ತೋ ಭವತಾ ಮುನಿಸತ್ತಮ ।**

ಜನಮೇಜಯರಾಜನು ವ್ಯಾಸಮುನಿಯನ್ನು ಕೇಳಿದನು—ವಸುದೇವನು ಕಶ್ಯಪಋಷಿಯ ಅಂಶವುಳ್ಳವನು ಆಗ ಆದಿಶೇಷನ ಅಂಶವುಳ್ಳವನಾದನು. ಹಾಗೆಯೇ ವಿಷ್ಣುವಿನ ಅಂಶವುಳ್ಳವನೆಂಬುದಾಗಿ ನಿನ್ನಿಂದ ಹೇಳಲ್ಪಟ್ಟಿತು.

**ಅನ್ಯೇ ಚ ಯೇಂಽಶಾ ದೇವಾನಾಂ ತತ್ರ ಜಾತಾಸ್ತು ತಾನ್ವದ ॥೨೮॥**
**ಭಾರಾವತರಣಾರ್ಥಂ ವೈ ಕ್ಷಿತೇಃ ಪ್ರಾರ್ಥನಯಾಽನಘ ।**

ಓ ಪೂಜ್ಯನಾದ ವ್ಯಾಸನೇ, ಭೂಮಿದೇವಿಯ ಪ್ರಾರ್ಥನೆಯಿಂದ ಭೂಮಿಯ ಭಾರವನ್ನು ಇಳಿಸುವುದಕ್ಕಾಗಿ ಯಾರು ಯಾರು ದೇವತೆಗಳ ಅಂಶದಿಂದ ಹುಟ್ಟಿದರು ಎಂಬುದನ್ನು ನನಗೆ ಹೇಳು.

॥ ವ್ಯಾಸ ಉವಾಚ ॥

**ಸುರಾಣಾಮಸುರಾಣಾಂ ಚ ಯೇ ಯೇಂಽಶಾ ಭುವಿ ವಿಶ್ರುತಾಃ ॥**
**ತಾನಹಂ ಸಂಪ್ರವಕ್ಷ್ಯಾಮಿ ಸಂಕ್ಷೇಪೇಣ ಶೃಣುಷ್ವ ತಾನ್ ।**

ವ್ಯಾಸಋಷಿಯು ಹೇಳಿದನು——ಓ ದೊರೆಯೇ, ಯಾವ ಯಾವ ದೇವತೆಗಳ ಮತ್ತು ರಾಕ್ಷಸರ ಅಂಶಗಳು ಈ ಭೂಲೋಕದಲ್ಲಿ ಅವತರಿಸಿ ಪ್ರಸಿದ್ಧಿಯನ್ನು ಹೊಂದಿರುವುವೋ ಅವುಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು.

**ವಸುದೇವಃ ಕಶ್ಯಪಾಂಶೋ ದೇವಕೀ ಚ ತಥಾಽದಿತಿಃ ॥೩೦॥**

**ಬಲದೇವಸ್ತ್ವನಂತಾಂಶೋ ವರ್ತಮಾನೇಷು ತೇಷು ಚ ।**
**ಯೋಽಸೌ ಧರ್ಮಸುತಃ ಶ್ರೀಮಾನ್ನಾರಾಯಣ ಇತಿ ಶ್ರುತಃ ॥೩೧॥**

ವಸುದೇವನು ಕಶ್ಯಪಋಷಿಯ ಅಂಶವು; ದೇವಕಿಯು ಅದಿತಿಯ ಅಂಶವು; ಬಲರಾಮನು ಆದಿಶೇಷನ ಅಂಶವು. ಎಂದರೆ ಅಂಶವನ್ನು ಕೊಟ್ಟಿರತಕ್ಕ ಆಯಾಯ ದೇವತೆಗಳು ಪ್ರತ್ಯೇಕವಾಗಿಯೂ ಇರುತ್ತಾರೆಂದು ತಾತ್ಪರ್ಯವು. ನಾರಾಯಣನೆಂಬ ಋಷಿಯು ಸಾಕ್ಷಾತ್ ಧರ್ಮದೇವತೆಯ ಮಗನೆಂದು ಪ್ರಸಿದ್ಧನಾಗಿ ಇರುವನಷ್ಟೆ!

**ತಸ್ಯಾಂಶೋ ವಾಸುದೇವಸ್ತು ವಿದ್ಯಮಾನೇ ಮುನೌ ತದಾ ।**
**ನರಸ್ತಸ್ಯಾನುಜೋ ಯಸ್ತು ತಸ್ಯಾಂಶೋಽರ್ಜುನ ಏವ ಚ ॥೩೨॥**

ಆ ನಾರಾಯಣಮುನಿಯು ಇರುವಾಗಲೇ ಕೃಷ್ಣನು ಆ ನಾರಾಯಣಋಷಿಯ ಅಂಶದಿಂದ ಜನಿಸಿದವನು. ಆ ನಾರಾಯಣಋಷಿಯ ತಮ್ಮನಾದ ನರನೆಂಬ ಋಷಿಯ ಅಂಶವು ಅರ್ಜುನನೆಂಬ ಹೆಸರಿನಿಂದ ಹುಟ್ಟಿತು.

**ಯುಧಿಷ್ಠಿರಸ್ತು ಧರ್ಮಾಂಶೋ ವಾಯ್ವಂಶೋ ಭೀಮ ಇತ್ಯುತ ।**
**ಅಶ್ವಿನ್ಯಂಶೌ ತತಃ ಪ್ರೋಕ್ತೌ ಮಾದ್ರೀಪುತ್ರೌ ಮಹಾಬಲೌ ॥೩೩॥**

ಯುಧಿಷ್ಠಿರನು ಧರ್ಮದೇವತೆಯ ಅಂಶದವನು. ಭೀಮಸೇನನು ವಾಯುವಿನ ಅಂಶವು ; ಮಹಾಬಲಿಷ್ಠರಾದ ಮಾದ್ರಿಯ ಮಕ್ಕಳಾದ ನಕುಲ ಸಹದೇವರು ಅಶ್ವಿನೀದೇವತೆಗಳ ಅಂಶದಿಂದ ಹುಟ್ಟಿದವರು.

**ಸೂರ್ಯಾಂಶಃ ಕರ್ಣ ಆಖ್ಯಾತೋ ಧರ್ಮಾಂಶೋ ವಿದುರಃ ಸ್ಮೃತಃ ।**
**ದ್ರೋಣೋ ಬೃಹಸ್ಪತೇರಂಶಸ್ತತ್ಸುತಸ್ತು ಶಿವಾಂಶಜಃ ॥೩೪॥**

ಕರ್ಣನು ಸೂರ್ಯನ ಅಂಶದಿಂದ ಹುಟ್ಟಿದವನು, ವಿದುರನು ಧರ್ಮದೇವತೆಯ ಅಂಶವು. ದ್ರೋಣಾಚಾರ್ಯನು ಬೃಹಸ್ಪತಿಯ ಅಂಶವು. ಅವನ ಮಗನಾದ ಅಶ್ವತ್ಥಾಮನು ಈಶ್ವರನ ಅಂಶದಿಂದ ಹುಟ್ಟಿದವನು.

**ಸಮುದ್ರಃ ಶಂತನುಃ ಪ್ರೋಕ್ತೋ ಗಂಗಾ ಭಾರ್ಯಾ ಮತಾಬುಧೈಃ ।**
**ದೇವಕಸ್ತು ಸಮಾಖ್ಯಾತೋ ಗಂಧರ್ವಪತಿರಾಗಮೇ ॥೩೫॥**

ಶಂತನುವೆಂಬ ರಾಜನು ಸಮುದ್ರದ ಅಂಶದವನು. ಅವನ ಹೆಂಡತಿಯು ಗಂಗೆಯ ಅಂಶದವಳು. ಗಂಗೆಯೇ ಸ್ತ್ರೀಯಾಗಿದ್ದುದರಿಂದ ಸಮುದ್ರನೇ ಶಂತನು ರಾಜನೆಂದು ಹೇಳಿದಂತಾಗುತ್ತದೆ. ದೇವಕೀದೇವಿಯ ತಂದೆಯಾದ ದೇವಕರಾಜನು ಗಂಧರ್ವರಾಜನೆಂದು ಶಾಸ್ತ್ರದಲ್ಲಿ ಉಕ್ತವಾಗಿರುತ್ತದೆ.

**ವಸುರ್ಭೀಷ್ಮೋ ವಿರಾಟಸ್ತು ಮರುದ್ಗಣ ಇತಿ ಸ್ಮೃತಃ ।**
**ಅರಿಷ್ಟಸ್ಯ ಸುತೋ ಹಂಸೋ ಧೃತರಾಷ್ಟ್ರಃ ಪ್ರಕೀರ್ತಿತಃ ॥೩೬॥**

ಅಷ್ಟವಸುಗಳಲ್ಲಿ ಒಬ್ಬನು ಭೀಷ್ಮನಾಗಿದ್ದನು. ವಿರಾಟರಾಜನು ಮರುದ್ಗಣಕ್ಕೆ ಸೇರಿದವನು. ಅರಿಷ್ಟನೇಮಿ ಎಂಬ ರಾಕ್ಷಸನ ಮಗನಾದ ಹಂಸನೆಂಬುವನು ಧೃತರಾಷ್ಟ್ರರಾಯನಾಗಿದ್ದನು.

**ಮರುದ್ಗಣಃ ಕೃಪಃ ಪ್ರೋಕ್ತಃ ಕೃತವರ್ಮಾ ತಥಾಽಪರಃ ।**
**ದುರ್ಯೋಧನಃ ಕಲೇರಂಶಃ ಶಕುನಿಂ ವಿದ್ಧಿ ದ್ವಾಪರಂ ॥೩೭॥**

ಕೃಪಾಚಾರ್ಯನು ಮರುದ್ಗಣದ ಅಂಶದವನು. ಕೃತವರ್ಮನೂ ಹಾಗೆಯೇ ಮರುದ್ಗಣಕ್ಕೆ ಸೇರಿದ ಮತ್ತೊಂದು ಅಂಶದವನು. ದುರ್ಯೋಧನನು ಕಲಿಯ ಅಂಶವು. ಶಕುನಿಯನ್ನು ದ್ವಾಪರಯುಗಾಭಿಮಾನಿಯಾದ ದೇವತೆಯ ಅಂಶವೆಂದು ತಿಳಿ.

**ಸೋಮಪುತ್ರಃ ಸುವರ್ಚಾಖ್ಯಃ ಸೋಮಪ್ರರುರುದಾಹೃತಃ ।**
**ಪಾವಕಾಂಶೋ ಧೃಷ್ಟದ್ಯುಮ್ನಃ ಶಿಖಂಡೀ ರಾಕ್ಷಸಸ್ತಥಾ ॥೩೮॥**

ಚಂದ್ರನ ಮಗನಾದ ಸುವರ್ಚನೆಂಬುವನು ಸೋಮಪ್ರರು ಎಂಬ ಯಾದವನು. ಧೃಷ್ಟದ್ಯುಮ್ನನು ಅಗ್ನಿಯ ಅಂಶಕ್ಕೆ ಸೇರಿದವನು. ಶಿಖಂಡಿಯು ರಾಕ್ಷಸನ ಅಂಶದವನು.

**ಸನತ್ಕುಮಾರಸ್ಯಾಂಶಸ್ತು ಪ್ರದ್ಯುಮ್ನಃ ಪರಿಕೀರ್ತಿತಃ ।**
**ದ್ರುಪದೋ ವರುಣಸ್ಯಾಂಶೋ ದ್ರೌಪದೀ ಚ ರಮಾಂಶಜಾ ॥೩೯॥**

ಪ್ರದ್ಯುಮ್ನನು ಸನತ್ಕುಮಾರನ ಅಂಶವೆಂದು ಹೇಳಲ್ಪಟ್ಟಿರುತ್ತದೆ. ದ್ರುಪದ ರಾಜನು ವರುಣನ ಅಂಶವು. ದ್ರೌಪದಿಯು ಲಕ್ಷ್ಮಿಯ ಅಂಶದಿಂದ ಹುಟ್ಟಿದವಳು.

**ದ್ರೌಪದೀತನಯಾಃ ಪಂಚ ವಿಶ್ವೇದೇವಾಂಶಜಾಃ ಸ್ಮೃತಾಃ ।**
**ಕುಂತಿಃ ಸಿದ್ಧಿರ್ಧೃತಿರ್ಮಾದ್ರೀ ಮತಿರ್ಗಾಂಧಾರರಾಜಜಾ ॥೪೦॥**

ದ್ರೌಪದಿಯ ಐವರು ಮಕ್ಕಳೂ ವಿಶ್ವೇದೇವತೆಗಳ ಅಂಶದಿಂದ ಹುಟ್ಟಿದವರು. ಕುಂತಿಯು ಸಿದ್ಧಿಯೆಂಬ ದೇವತೆಯ ಅಂಶವು. ಧೃತಿಯ ಅಂಶವೇ ಮಾದ್ರಿಯು. ಗಾಂಧಾರದೇಶದ ಧೊರೆಯ ಮಗಳಾದ ಗಾಂಧಾರಿಯು ಬುದ್ಧಿಗೆ ಅಭಿಮಾನದೇವತೆಯಾದ ಮತಿಯ ಅಂಶದವಳು.

**ಕೃಷ್ಣಪತ್ನ್ಯಸ್ತಥಾ ಸರ್ವಾ ದೇವವಾರಾಂಗನಾಃ ಸ್ಮೃತಾಃ ।**
**ರಾಜಾನಶ್ಚ ತಥಾ ಸರ್ವೇ ಅಸುರಾಃ ಶಕ್ರನೋದಿತಾಃ ॥೪೧॥**

ಕೃಷ್ಣನ ಹೆಂಡತಿಯರೆಲ್ಲರೂ ದೇವತೆಗಳ ಅಪ್ಸರಸ್ತ್ರೀಯರು ಅಥವಾ ವೇಶ್ಯಾಂಗನೆಯರು, ಎಂಬದಾಗಿ ತಿಳಿಯಲ್ಪಟ್ಟಿರುತ್ತದೆ. ಎಲ್ಲ ರಾಜರೂ ಇಂದ್ರನಿಂದ ಪ್ರೇರಿಸಲ್ಪಟ್ಟ ರಾಕ್ಷಸರ ಅಂಶದವರು.

**ಹಿರಣ್ಯಕಶಿಪೋರಂಶಃ ಶಿಶುಪಾಲ ಉದಾಹೃತಃ ।**
**ವಿಪ್ರಚಿತ್ತಿರ್ಜರಾಸಂಧಃ ಶಲ್ಯಃ ಪ್ರಹ್ಲಾದ ಇತ್ಯಪಿ ॥೪೨॥**

ಶಿಶುಪಾಲನು ಹಿರಣ್ಯಕಶಿಪುವಿನ ಅಂಶವು ಎಂಬುದಾಗಿ ಹೇಳಲ್ಪಟ್ಟಿದೆ. ವಿಪ್ರಚಿತ್ತಿ ಎಂಬ ರಾಕ್ಷಸನು ಜರಾಸಂಧನಾಗಿದ್ದನು. ಪ್ರಹ್ಲಾದನು ಶಲ್ಯನೆಂಬ ರಾಜನು ಎಂಬುದಾಗಿ ಹೇಳಲ್ಪಟ್ಟಿದೆ.

**ಕಾಲನೇಮಿಸ್ತಥಾ ಕಂಸಃ ಕೇಶೀ ಹಯಶಿರಾಸ್ತಥಾ ।**
**ಅರಿಷ್ಟೋ ಬಲಿಪುತ್ರಸ್ತು ಕಕುದ್ಮೀ ಗೋಕುಲೇ ಹತಃ ॥೪೩॥**

ಕಾಲನೇಮಿ ಎಂಬ ರಾಕ್ಷಸನು ಕಂಸನಾಗಿದ್ದನು. ಹಯಗ್ರೀವನೆಂಬ ರಾಕ್ಷಸನ ಅಂಶವೇ ಕೇಶಿಯು. ಬಲಿಯ ಮಗನಾದ ಅರಿಷ್ಟನೆಂಬುವನು ಕಕುದ್ಮಿ ಎಂಬುವನಾಗಿ ಗೋಕುಲದಲ್ಲಿ ಹುಟ್ಟಿದ್ದು ಕೊಲ್ಲಲ್ಪಟ್ಟನು.

**ಅನುಹ್ರಾದೋ ಧೃಷ್ಟಕೇತುರ್ಭಗದತ್ತೋಽಥ ಬಾಷ್ಕಲಃ ।**
**ಲಂಬಃ ಪ್ರಲಂಬಸಂಜಾತಃ ಖರೋಽಸೌ ಧೇನುಕೋಽಭವತ್ ॥೪೪॥**

ಧೃಷ್ಟಕೇತುವು ಅನುಹ್ರಾದನೆಂಬ ರಾಕ್ಷಸನ ಅಂಶವು. ಬಾಷ್ಕಲನೆಂಬ ರಾಕ್ಷಸನ ಅಂಶದಿಂದ ಭಗದತ್ತನು ಹುಟ್ಟಿದನು. ಲಂಬನೆಂಬ ರಾಕ್ಷಸನು ಪ್ರಲಂಬಾಸುರನ ಮಗನಾದನು. ಖರನೆಂಬ ರಾಕ್ಷಸನು ಧೇನುಕಾಸುರನಾಗಿದ್ದನು.

**ವಾರಾಹಶ್ಚ ಕಿಶೋರಶ್ಚ ದೈತ್ಯೌ ಪರಮದಾರುಣೌ ।**
**ಮಲ್ಲೌ ತಾವೇವ ಸಂಜಾತೌ ಖ್ಯಾತೌ ಚಾಣೂರಮುಷ್ಟಿಕೌ ॥೪೫॥**

ಬಹಳ ಕ್ರೂರರಾದ ವಾರಾಹ, ಕಿಶೋರ ಎಂಬ ರಾಕ್ಷಸರಿಬ್ಬರು ಪ್ರಸಿದ್ಧರಾದ ಚಾಣೂರ, ಮುಷ್ಟಿಕ ಎಂಬ ಹೆಸರಿನ ಜಟ್ಟಿಗಳಾಗಿ ಹುಟ್ಟಿದ್ದರು.

**ದಿತಿಪುತ್ರಸ್ತಥಾರಿಷ್ಟೋ ಗಜಃ ಕುವಲಯಾಭಿಧಃ ।**
**ಬಲಿಪುತ್ರೀ ಬಕೀ ಖ್ಯಾತಾ ಬಕಸ್ತದನುಜಃ ಸ್ಮೃತಃ ॥೪೬॥**

ದಿತಿಯ ಮಗನಾದ ಅರಿಷ್ಟನೆಂಬುವನು ಕುವಲಯಾಪೀಡವೆಂಬ ಆನೆಯಾಗಿದ್ದನು. ಬಲಿಯ ಮಗಳು ಪೂತನೆಯಾಗಿದ್ದಳು. ಅವಳ ತಮ್ಮನು ಬಕಾಸುರನಾಗಿದ್ದನು.

**ಯಮೋ ರುದ್ರಸ್ತಥಾ ಕಾಮಃ ಕ್ರೋಧಶ್ಚೈವ ಚತುರ್ಥಕಃ ।**
**ತೇಷಾಮಂಶೈಸ್ತು ಸಂಜಾತೋ ದ್ರೋಣಪುತ್ರೋ ಮಹಾಬಲಃ ॥೪೭॥**

ಯಮ, ರುದ್ರ, ಕಾಮ, ಕ್ರೋಧ ಈ ನಾಲ್ಕು ದೇವತೆಗಳ ಅಂಶದಿಂದ ಮಹಾಬಲಿಷ್ಠನಾದ ದ್ರೋಣಾಚಾರ್ಯರ ಮಗನಾದ ಅಶ್ವತ್ಥಾಮನು ಹುಟ್ಟಿದ್ದನು. ಇವನು ಶಿವಾಂಶನೂ ಆಗಿದ್ದನೆಂದು ಮೇಲೆ ಹೇಳಿದೆ.

**ಅಂಶಾವತರಣೇ ಪೂರ್ವಂ ದೈತೇಯಾ ರಾಕ್ಷಸಾಸ್ತಥಾ ।**
**ಜಾತಾಃ ಸರ್ವೇಽಸುರಾಂಶಾಸ್ತೇ ಕ್ಷಿತಿಭಾರಾವತಾರಣೇ ॥೪೮॥**

ಪೂರ್ವದಲ್ಲಿ ಭೂಮಿಯ ಭಾರವನ್ನು ಕಡಿಮೆ ಮಾಡುವುದಕ್ಕಾಗಿ ಅವತರಿಸುವ ಕಾಲದಲ್ಲಿ ದಿತಿಯ ಮಕ್ಕಳೂ ಮತ್ತು ರಾಕ್ಷಸರೂ ಸಹ ಎಲ್ಲರೂ ರಾಕ್ಷಸರ ಅಂಶದಿಂದ ಭೂಮಿಯಲ್ಲಿ ಹುಟ್ಟಿದ್ದರು.

**ಏತೇಷಾಂ ಕಥಿತಂ ರಾಜನ್ನಂಶಾವತರಣಂ ನೃಪ ।**
**ಸುರಾಣಾಂ ಚಾಸುರಾಣಾಂ ಚ ಪುರಾಣೇಷು ಪ್ರಕೀರ್ತಿತಂ ॥೪೯॥**

ಎಲೈ ಜನಮೇಜಯರಾಜನೇ ಕೇಳು—ಪುರಾಣಗಳಲ್ಲಿ ಹೇಳಲ್ಪಟ್ಟಿರುವ ಮೇರೆಗೆ ದೇವತೆಗಳ ಮತ್ತು ರಾಕ್ಷಸರ ಅಂಶಗಳಿಂದ ಭೂಮಿಯಲ್ಲಿ ಅವತರಣ ಕ್ರಮವು ಹೇಳಲ್ಪಟ್ಟಿತು.

**ಯದಾ ಬ್ರಹ್ಮಾದಯೋ ದೇವಾಃ ಪ್ರಾರ್ಥನಾರ್ಥಂ ಹರಿಂ ಗತಾಃ ।**
**ಹರಿಣಾ ಚ ತದಾ ದತ್ತೌ ಕೇಶೌ ಖಲು ಸಿತಾಽಸಿತೌ ॥೫೦॥**

ಬ್ರಹ್ಮನೇ ಮೊದಲಾದ ದೇವತೆಗಳು ವಿಷ್ಣುವನ್ನು ಕುರಿತು ಭೂಮಿಯಲ್ಲಿ ಅವತಾರಮಾಡುವುದಕ್ಕಾಗಿ ಪ್ರಾರ್ಥನೆಮಾಡಲು ಹೋದಕಾಲದಲ್ಲಿ ಕರಿಯದಾದ ಒಂದು ಕೂದಲನ್ನೂ, ಬಿಳಿಯದಾದ ಇನ್ನೊಂದು ಕೂದಲನ್ನೂ ಸಹ ವಿಷ್ಣುವು ಕೊಟ್ಟನು.

**ಶ್ಯಾಮವರ್ಣಸ್ತತಃ ಕೃಷ್ಣಃ ಶ್ವೇತಃ ಸಂಕರ್ಷಣಸ್ತಥಾ ।**
**ಭಾರಾವತರಣಾರ್ಥಂ ತೌ ಜಾತೌ ದೇವಾಂಶಸಂಭವೌ ॥೫೧॥**

ಆದುದರಿಂದ ಕೃಷ್ಣನು ಕಪ್ಪುಬಣ್ಣವುಳ್ಳವನೂ, ಬಲರಾಮನು ಬಿಳಿಯಬಣ್ಣವುಳ್ಳವನೂ ಸಹ ಆಗಿದ್ದರು. ಇವರಿಬ್ಬರೂ ವಿಷ್ಣುವಿನ ಅಂಶದಿಂದ ಭೂಮಿಯ ಭಾರವನ್ನು ಕಡಿಮೆಮಾಡುವುದಕ್ಕಾಗಿ ಅವತಾರಮಾಡಿದವರು.

**ಅಂಶಾವತರಣಂ ಚೈತಚ್ಛೃಣೋತಿ ಭಕ್ತಿಭಾವತಃ ।**
**ಸರ್ವಪಾಪವಿನಿರ್ಮುಕ್ತೋ ಮೋದತೇ ಸ್ವಜನೈರ್ವೃತಃ ॥೫೨॥**

ಯಾವನು ಈ ಅಂಶಾವತರಣ ಕ್ರಮವನ್ನು ಬಹಳ ಭಕ್ತಿಭಾವದಿಂದ ಶ್ರವಣ ಮಾಡುತ್ತಾನೆಯೋ, ಮತ್ತು ಇತರರೂ ಶ್ರವಣಮಾಡಲು ಅನುಕೂಲವಾಗುವಂತೆ ವಿವರಣಪ್ರಚಾರಣಗಳನ್ನೂ ಮಾಡುತ್ತಾನೆಯೋ, ಅಂಥವನು ಎಲ್ಲ ವಿಧವಾದ ಪಾಪಗಳಿಂದ ಬಿಡಲ್ಪಟ್ಟವನಾಗಿ ತನ್ನ ಬಾಂಧವಸುಹೃಜ್ಜನರೊಡನೆ ಸಂತೋಷವಾಗಿ ಸುಖವನ್ನು ಅನುಭವಿಸುವನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ದ್ವಾವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಚತುರ್ಥಸ್ಕಂಧೇ

## || ತ್ರಯೋವಿಂಶೋಽಧ್ಯಾಯಃ ||

### ಇಪ್ಪತ್ತುಮೂರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಹತೇಷು ಷಟ್ಸು ಪುತ್ರೇಷು ದೇವಕ್ಯಾ ಔಗ್ರಸೇನಿನಾ ।**
**ಸಪ್ತಮೇ ಪತಿತೇ ಗರ್ಭೇ ವಚನಾನ್ನಾರದಸ್ಯ ಚ ||೧||**

**ಅಷ್ಟಮಸ್ಯ ಚ ಗರ್ಭಸ್ಯ ರಕ್ಷಣಾರ್ಥಮತಂದ್ರಿತಃ ।**
**ಪ್ರಯತ್ನಮಕರೋದ್ರಾಜಾ ಮರಣಂ ಸ್ವಂ ವಿಚಿಂತಯನ್ ||೨||**

ವ್ಯಾಸಋಷಿಯು ಹೇಳಿದನು—ದೇವಕೀದೇವಿಯ ಆರು ಜನ ಮಕ್ಕಳೂ ಉಗ್ರಸೇನನ ಮಗನಾದ ಕಂಸನಿಂದ ನಾಶವನ್ನು ಹೊಂದಿದನಂತರದಲ್ಲಿ ದೇವಕಿಯ ಏಳನೆಯ ಗರ್ಭವು ಗರ್ಭಸ್ರಾವವಾದುದೆಂಬುದನ್ನು ಕಂಸನು ತಿಳಿದನಂತರದಲ್ಲಿ ನಾರದನ ಮಾತಿನ ಪ್ರಕಾರ ತನಗೆ ದೇವಕಿಯ ಎಂಟನೆಯ ಗರ್ಭದ ಮಗುವಿನಿಂದ ಮರಣವೆಂಬುದನ್ನು ತಿಳಿದು ಸ್ವಲ್ಪವೂ ಆಲಸ್ಯಮಾಡದೆ ತನ್ನ ಮರಣ ವಿಷಯದಲ್ಲಿ ಯೋಚನೆಮಾಡುವವನಾಗಿ, ಎಂಟನೆಯ ಮಗುವು ತಪ್ಪಿಸಿಕೊಂಡು ಹೋದೀತೆಂಬ ಸಂದೇಹದಿಂದ ಆ ಗರ್ಭದ ರಕ್ಷಣೆಗೋಸ್ಕರ ಸರಿಯಾಗಿ ಪ್ರಯತ್ನಪಟ್ಟನು.

**ಸಮಯೇ ದೇವಕೀಗರ್ಭೇ ಪ್ರವೇಶಮಕರೋದ್ಧರಿಃ ।**
**ಅಂಶೇನ ವಸುದೇವೇ ತು ಸಮಾಗತ್ಯ ಯಥಾಕ್ರಮಂ ||೩||**

ವಿಷ್ಣುವು, ತಾನು ಅವತಾರಮಾಡುವ ಕಾಲವು ಬಂದೊಡನೆಯೇ ವಸುದೇವನ ಶರೀರದಲ್ಲಿ ಅವನು ಭಕ್ಷಿಸುವ ಆಹಾರಪದಾರ್ಥದ ಮೂಲಕ ತನ್ನ ಅಂಶದಿಂದ

ಪ್ರವೇಶಿಸಿ, ಆ ವಸುದೇವನ ವೀರ್ಯದ ಮೂಲಕವಾಗಿ ದೇವಕೀದೇವಿಯ ಗರ್ಭವನ್ನು ಪ್ರವೇಶಿಸಿದನು.

**ತದೇಯಂ ಯೋಗಮಾಯಾ ಚ ಯಶೋದಾಯಾಂ ಯಥೇಚ್ಛಯಾ।**
**ಪ್ರವೇಶಮಕರೋದ್ದೇವೀ ದೇವಕಾರ್ಯಾರ್ಥಸಿದ್ಧಯೇ ॥೪॥**

ಆ ಕಾಲದಲ್ಲಿ ಈ ತೇಜಶ್ಶಕ್ತಿರೂಪಳಾದ ಯೋಗಮಾಯೆಯೂ ಕೂಡ ತನ್ನ ಇಚ್ಛೆಯಿಂದ ದೇವಕಾರ್ಯಸಿದ್ಧಿಗಾಗಿ ಯಶೋದಾದೇವಿಯ ಗರ್ಭದಲ್ಲಿ ಪ್ರವೇಶಿಸಿದಳು.

**ರೋಹಿಣ್ಯಾಸ್ತನಯೋ ರಾಮೋ ಗೋಕುಲೇ ಸಮಜಾಯತ ।**
**ಯತಃ ಕಂಸಭಯೋದ್ವಿಗ್ನಾ ಸಂಸ್ಥಿತಾ ಸಾ ಚ ಕಾಮಿನೀ ॥೫॥**

ರೋಹಿಣೀದೇವಿಯು ಕಂಸನ ಭಯದಿಂದ ಹೆದರಿಕೊಂಡು ಗೂಢವಾಗಿ ಗೋಕುಲದಲ್ಲಿ ವಾಸಮಾಡುತ್ತಿದ್ದಳು. ಆ ರೋಹಿಣೀದೇವಿಗೆ ಬಲರಾಮನು ಮಗನಾಗಿ ಹುಟ್ಟಿದನು.

**ಕಾರಾಗಾರೇ ತತಃ ಕಂಸೋ ದೇವಕೀಂ ದೇವಸಂಸ್ತುತಾಂ ।**
**ಸ್ಥಾಪಯಾಮಾಸ ರಕ್ಷಾರ್ಥಂ ಸೇವಕಾನ್ಸಮಕಲ್ಪಯತ್ ॥೬॥**

ಅನಂತರದಲ್ಲಿ ದೇವತೆಗಳಿಂದಲೂ ಹೊಗಳಿಸಿಕೊಳ್ಳಲ್ಪಟ್ಟ ದೇವಕೀದೇವಿಯನ್ನು ಕಂಸನು ಸೆರೆಮನೆಯಲ್ಲಿಡಿಸಿದನು. ಮತ್ತು ಆ ಸೆರೆಮನೆಯ ರಕ್ಷಣೆಗಾಗಿ ಸೇವಕರನ್ನು ನಿಯಮಿಸಿದನು.

**ವಸುದೇವಸ್ತು ಕಾಮಿನ್ಯಾಃ ಪ್ರೇಮತಂತುನಿಯಂತ್ರಿತಃ ।**
**ಪುತ್ರೋತ್ಪತ್ತಿಂ ಚ ಸಂಚಿಂತ್ಯ ಪ್ರವಿಷ್ಟಃ ಸಹ ಭಾರ್ಯಯಾ ॥೭॥**

ವಸುದೇವನೂ ಕೂಡ ಆ ರಮಣಿಯಾದ ದೇವಕಿಯ ಧಾರ್ಮಿಕವಾದ ಪ್ರೇಮಕ್ಕೆ ಸಿಕ್ಕಿದವನಾಗಿ ಗಂಡುಮಗುವಾಗುವುದೆಂಬ ಆಕಾಂಕ್ಷೆನಿರೀಕ್ಷಣೆಯುಳ್ಳವನಾಗಿ ಆಲೋಚಿಸಿ ತನ್ನ ಹೆಂಡತಿಯೊಡನೆಯೇ ಸೆರೆಮನೆಯಲ್ಲಿದ್ದನು.

**ದೇವಕೀಗರ್ಭಗೋ ವಿಷ್ಣುರ್ದೇವಕಾರ್ಯಾರ್ಥಸಿದ್ಧಯೇ ।**
**ಸಂಸ್ತುತೋಽಮರಸಂಘೈಶ್ಚ ವ್ಯವರ್ಧತ ಯಥಾಕ್ರಮಂ ॥೮॥**

ದೇವತೆಗಳ ಕಾರ್ಯಸಿದ್ಧಿಗಾಗಿ ದೇವಕಿಯ ಗರ್ಭವನ್ನು ಪ್ರವೇಶಿಸಿರುವ ವಿಷ್ಣುವು ದೇವಸಮೂಹಗಳಿಂದ ಸ್ತೋತ್ರಮಾಡಲ್ಪಟ್ಟವನಾಗಿ ಕ್ರಮಕ್ರಮವಾಗಿ ವೃದ್ಧಿಯನ್ನು ಹೊಂದುತ್ತಿದ್ದನು.

**ಸಂಜಾತೇ ದಶಮೇ ತತ್ರ ಮಾಸೇಽಥ ಶ್ರಾವಣೇ ಶುಭೇ ।**
**ಪ್ರಾಜಾಪತ್ಯರ್ಕ್ಷಸಂಯುಕ್ತೇ ಕೃಷ್ಣಪಕ್ಷೇಽಷ್ಟಮಿದಿನೇ ॥೯॥**

ಹೀಗಿರುವಲ್ಲಿ ಹತ್ತನೆಯ ತಿಂಗಳು ತುಂಬಿ ಬಂದಿತು. ಆಗ್ಗೆ ಸರಿಯಾಗಿ ಮಂಗಳಕರವಾದ ಶ್ರಾವಣಮಾಸದ ಕೃಷ್ಣಪಕ್ಷದ ಅಷ್ಟಮಿಯ ದಿನ ರೋಹಿಣೀ ನಕ್ಷತ್ರವು ಸೇರಿರುವ ಸಮಯದಲ್ಲಿ ಕಂಸನಿಗೆ ಬಹಳ ಭಯವುಂಟಾಯಿತು.

**ಕಂಸಸ್ತು ದಾನವಾನ್ ಸರ್ವಾನುವಾಚ ಭಯವಿಹ್ವಲಃ ।**
**ರಕ್ಷಣೀಯಾ ಭವದ್ಭಿಶ್ಚ ದೇವಕೀ ಗರ್ಭಮಂದಿರೇ ॥೧೦॥**

ಆಗ ಅವನು ಬಹಳ ಹೆದರಿದವನಾಗಿ ರಾಕ್ಷಸರೆಲ್ಲರನ್ನೂ ಕರೆದು ಹೀಗೆ ಹೇಳಿದನು—ಸೆರೆಮನೆಯಲ್ಲಿ ದೇವಕೀದೇವಿಯನ್ನು ನೀವುಗಳು ಜಾಗರೂಕರಾಗಿ ರಕ್ಷಿಸಿರಿ.

**ಅಷ್ಟಮೋ ದೇವಕೀಗರ್ಭಃ ಶತ್ರುರ್ಮೇ ಪ್ರಭವಿಷ್ಯತಿ ।**
**ರಕ್ಷಣೀಯಃ ಪ್ರಯತ್ನೇನ ಮೃತ್ಯುರೂಪಃ ಸ ಬಾಲಕಃ ॥೧೧॥**

ದೇವಕಿಯ ಎಂಟನೆಯ ಗರ್ಭವು ನನಗೆ ಶತ್ರುವಾಗುವುದು. ನನಗೆ ಮರಣ ವನ್ನುಂಟುಮಾಡುವ ಆ ಬಾಲಕನು ತಪ್ಪಿಸಿಕೊಂಡು ಹೋಗದಂತೆ ನೀವುಗಳು ಸೆರೆಮನೆಯಲ್ಲಿ ರಕ್ಷಣೆಯ ಕಾವಲಿರಬೇಕು.

**ಹತ್ವೈನಂ ಬಾಲಕಂ ದೈತ್ಯಾಃ ಸುಖಂ ಸ್ವಪ್ಸ್ಯಾಮಿ ಮಂದಿರೇ ।**
**ನಿವೃತ್ತಿವರ್ಜಿತೇ ದುಃಖೇ ನಾಶಿತೇ ಚಾಷ್ಟಮೇ ಸುತೇ ॥೧೨॥**

ಎಲೈ ರಾಕ್ಷಸರೇ, ಈ ಎಂಟನೆಯ ಗರ್ಭದಿಂದ ಉತ್ಪನ್ನವಾಗುವ ಬಾಲಕ ನಿಂದ ನನಗೆ ಪ್ರತೀಕಾರವಿಲ್ಲದಿರುವ ಮತ್ತು ಮಹತ್ತರವಾದ ದುಃಖವು ಉಂಟಾಗು ವುದು. ಆದುದರಿಂದ ಈ ಬಾಲಕನನ್ನು ನಾನು ಕೊಂದಮೇಲೆ ನಿಶ್ಚಿಂತೆಯಿಂದ ಮನೆಯಲ್ಲಿ ಸುಖವಾಗಿ ನೆಮ್ಮದಿಯಿಂದ ಮಲಗಿ ನಿದ್ರೆಮಾಡುವೆನು.

**ಖಡ್ಗಪ್ರಾಸಧರಾಃ ಸರ್ವೇ ತಿಷ್ಠಂತು ಧೃತಕಾರ್ಮುಕಾಃ ।**
**ನಿದ್ರಾತಂದ್ರಾವಿಹೀನಾಶ್ಚ ಸರ್ವತ್ರ ನಿಹಿತೇಕ್ಷಣಾಃ ॥೧೩॥**

ನೀವೆಲ್ಲರೂ ಸೋಮಾರಿತನವನ್ನೂ ನಿದ್ರೆಯನ್ನೂ ಬಿಟ್ಟು, ಕತ್ತಿ, ಪ್ರಾಸ, ಬಿಲ್ಲು, ಬಾಣ ಮುಂತಾದ ಆಯುಧಗಳನ್ನು ಹಿಡಿದುಕೊಂಡು ಎಲ್ಲ ಕಡೆಯಲ್ಲಿಯೂ ಕಣ್ಣಿಟ್ಟು ನೋಡುತ್ತಾ ಬಹಳ ಜಾಗರೂಕರಾಗಿ ಆ ಸೆರೆಮನೆಯನ್ನು ರಕ್ಷಿಸುತ್ತಿರಬೇಕು, ಎಂದು ಹೇಳಿದನು.

॥ ವ್ಯಾಸ ಉವಾಚ ॥

**ಇತ್ಯಾದಿಶ್ಯಾಸುರಗಣಾನ್ಕೃಶೋಽತಿಭಯವಿಹ್ವಲಃ ।**
**ಮಂದಿರಂ ಸ್ವಂ ಜಗಾಮಾಶು ನ ಲೇಭೇ ದಾನವಃ ಸುಖಂ ॥೧೪॥**

ವ್ಯಾಸಋಷಿಯು ಹೇಳಿದನು—ಕಂಸನು ರಾಕ್ಷಸಪರಿವಾರಕ್ಕೆ ಹೀಗೆ ಆಜ್ಞೆಯನ್ನು ಮಾಡಿ ಬಹಳ ಭಯದಿಂದ ಆತಂಕಪಡುತ್ತಾ ಕೃಶನಾಗಿ ತನ್ನ ಮನೆಯನ್ನು ಸೇರಿದನು. ಅಲ್ಲಿಯೂ ಅವನು ನಿಶ್ಚಿಂತೆಯಿಂದ ಸುಖವಾಗಿರಲು ಆಗಲಿಲ್ಲ.

**ನಿಶೀಥೇ ದೇವಕೀ ತತ್ರ ವಸುದೇವಮುವಾಚ ಹ ।**
**ಕಿಂ ಕರೋಮಿ ಮಹಾರಾಜ ಪ್ರಸವಾವಸರೋ ಮಮ ॥೧೫॥**

ಆದಿನ ಅರ್ಧರಾತ್ರಿಯ ಸಮಯದಲ್ಲಿ ದೇವಕಿಯು ವಸುದೇವನನ್ನು ಕುರಿತು ಹೇಳಿದಳು—ಓ ಮಹಾರಾಜನೇ, ನನಗೆ ಈಗ ಪ್ರಸವಕಾಲವು ಸಮೀಪಿಸಿರುವುದು. ಏನನ್ನು ಮಾಡಲಿ?

**ಬಹವೋ ರಕ್ಷಪಾಲಾಶ್ಚ ತಿಷ್ಠಂತ್ಯತ್ರ ಭಯಾನಕಾಃ ।**
**ನಂದಪತ್ನ್ಯಾ ಮಯಾ ಸಾರ್ಧಂ ಕೃತೋಽಸ್ತಿ ಸಮಯಃ ಪುರಾ ॥**

ಇಲ್ಲಿ ಬಹಳ ಜನ ಕಾವಲುಗಾರರು ರಕ್ಷಣೆಯನ್ನು ಮಾಡುತ್ತಿದ್ದಾರೆ. ಇವರನ್ನು ನೋಡಿದ ಮಾತ್ರದಿಂದ ಭಯವುಂಟಾಗುತ್ತದೆ. ನಾನೂ ಹಿಂದೆ ನಂದನ ಹೆಂಡತಿಯೊಡನೆ ಒಂದು ಒಪ್ಪಂದವನ್ನು ಮಾಡಿಕೊಂಡಿದ್ದೇನೆ. ಏನೆಂದರೆ,

**ಪ್ರೇಷಿತವ್ಯಸ್ತ್ವಯಾ ಪುತ್ರೋ ಮಂದಿರೇ ಮಮ ಮಾನಿನಿ ।**
**ಪಾಲಯಿಷ್ಯಾಮ್ಯಹಂ ತತ್ರ ತವಾತಿಮನಸಾ ಕಿಲ ॥೧೭॥**

ಓ ಮಾನವತಿಯಾದ ದೇವಕಿಯೇ, ನೀನು ನಿನ್ನ ಮಗುವನ್ನು ನನ್ನ ಮನೆಗೆ ಕಳುಹಿಸು. ನಾನು ಅದನ್ನು ನನ್ನ ಪೂರ್ಣಾನುರಾಗದಿಂದ ಕಾಪಾಡುತ್ತೇನೆ ಎಂದು ಯಶೋದೆಯೂ ಮಾತುಕೊಟ್ಟಿದಾಳೆ.

**ಅಪತ್ಯಂ ತೇ ಪ್ರದಾಸ್ಯಾಮಿ ಕಂಸಸ್ಯ ಪ್ರತ್ಯಯಾಯ ವೈ ।**
**ಕಿಂ ಕರ್ತವ್ಯಂ ಪ್ರಭೋ ಚಾದ್ಯ ವಿಷಮೇ ಸಮುಪಸ್ಥಿತೇ ॥೧೮॥**

ಅಷ್ಟೇ ಅಲ್ಲದೆ ನಾನು ಕಂಸನ ನಂಬಿಕೆಗಾಗಿ ನನ್ನ ಮಗುವನ್ನು ಕೊಡುತ್ತೇನೆ ಎಂಬದಾಗಿಯೂ ನಂದಪತ್ನಿಯು ನನ್ನ ಸಂಗಡ ಹೇಳಿದ್ದಾಳೆ. ಹೀಗೆ ನಾನೂ ನಂದಪತ್ನಿಯೂ ಸಹ ಒಂದು ಒಪ್ಪಂದವನ್ನು ಮಾಡಿಕೊಂಡಿದ್ದೆವು. ಈಗ ಅದು ನಡೆಯುವುದಕ್ಕೆ ಅವಕಾಶವಿಲ್ಲವೆಂದು ತೋರುತ್ತಿದೆಯಲ್ಲ. ಓ ಸ್ವಾಮಿಯೇ, ಈ ವಿಷಮಕಾಲವು ಹೀಗೆ ಒದಗಿರುವಾಗ ನಾವು ಏನನ್ನು ಮಾಡಬೇಕು ?

**ವ್ಯತ್ಯಯಃ ಸಂತತೇಃ ಶೌರೇ ಕಥಂ ಕರ್ತುಂ ಕ್ಷಮೋ ಭವೇಃ ।**
**ದೂರೇ ತಿಷ್ಠ ಸ್ವ ಕಾಂತಾದ್ಯ ಲಜ್ಜಾ ಮೇಽದ್ಯ ದುರತ್ಯಯಾ ॥೧೯॥**

ಓ ಶೂರಪುತ್ರನಾದ ವಸುದೇವನೇ, ಈ ಮಕ್ಕಳುಗಳನ್ನು ವಿನಿಮಯದಿಂದ ಬದಲಾಯಿಸುವ ವಾಗ್ದಾನದ ಮಾತನ್ನು ನಡೆಯಿಸುವುದಕ್ಕೂ ಅವಕಾಶವಿಲ್ಲದಿರುವಾಗ ಈ ಶಿಶುವಿನ ರಕ್ಷಣೆಯನ್ನು ಹೇಗೆ ಮಾಡಬಲ್ಲೆ ? ಓ ಕಾಂತನೇ, ನಿನ್ನ ಸಮಕ್ಷದಲ್ಲಿ ಹೆರಲು ನನಗೆ ಲಜ್ಜೆಯು ಬಹಳವಾಗಿರುತ್ತದೆ. ಆದುದರಿಂದ ನೀನು ನನ್ನ ಹತ್ತಿರವನ್ನು ಬಿಟ್ಟು ಸ್ವಲ್ಪ ದೂರದಲ್ಲಿ ಮರೆಯಾಗಿ ಇರು.

**ಪರಾವೃತ್ಯ ಮುಖಂ ಸ್ವಾಮಿನ್ನನ್ಯಥಾ ಕಿಂ ಕರೋಮ್ಯಹಂ ।**
**ಇತ್ಯುಕ್ತ್ವಾ ತಂ ಮಹಾಭಾಗಂ ದೇವಕೀ ದೇವಸಂಮತಂ ॥೨೦॥**

**ಬಾಲಕಂ ಸುಷುವೇ ತತ್ರ ನಿಶೀಥೇ ಪರಮಾದ್ಭುತಂ ।**
**ತಂ ದೃಷ್ಟ್ವಾ ವಿಸ್ಮಯಂ ಪ್ರಾಪ ದೇವಕೀ ಬಾಲಕಂ ಶುಭಂ ॥೨೧॥**

ಓ ಸ್ವಾಮಿಯೇ, ನಾನು ಹೆರುವುದನ್ನು ನೋಡದೆ ನೀನು ನಿನ್ನ ಮುಖವನ್ನು ಬೇರೆಕಡೆಗೆ ತಿರುಗಿಸಿಕೊಂಡು ಇರು. ಇಲ್ಲವಾದರೆ ನಾನು ಏನನ್ನು ಮಾಡಲಿ ? ಎಂದು ದೇವಕಿಯು ವಸುದೇವನೊಡನೆ ಹೇಳಿದಳು. ಅನಂತರದಲ್ಲಿ ಆ ಅರ್ಧ

ರಾತ್ರಿಯಲ್ಲಿ ದೇವಕಿಯು ಅತ್ಯಾಶ್ಚರ್ಯವನ್ನುಂಟುಮಾಡುವ ಲಕ್ಷಣಗಳಿಂದ ಕೂಡಿರುವ ಮಗುವನ್ನು ಹೆತ್ತಳು. ಮತ್ತು ಆ ಮಂಗಳಕರವಾದ ಮಗುವನ್ನು ನೋಡಿ ದೇವಕಿಗೆ ಬಹಳ ಸಂತೋಷದ ಆಶ್ಚರ್ಯವಾಯಿತು.

**ಪತಿಂ ಪ್ರಾಹ ಮಹಾಭಾಗಾ ಹರ್ಷೋತ್ಫುಲ್ಲಕಲೇವರಾ ।**
**ಪಶ್ಯ ಪುತ್ರಮುಖಂ ಕಾಂತ ದುರ್ಲಭಂ ಹಿ ತವ ಪ್ರಭೋ ॥೨೨॥**

ಬಹಳ ಅದೃಷ್ಟಶಾಲಿನಿಯಾದ ದೇವಕಿಯು ಸಂತೋಷದಿಂದ ಉಬ್ಬಿದ ಶರೀರವುಳ್ಳವಳಾಗಿ ವಸುದೇವನನ್ನು ಕುರಿತು, ಓ ಸ್ವಾಮಿಯೇ, ಪುತ್ರನ ಮುಖವನ್ನು ನೋಡು. ಇನ್ನುಮುಂದೆ ನಿನಗೆ ಇದನ್ನು ನೋಡುವುದು ದುರ್ಲಭವಾಗುವುದು. ಏಕೆಂದರೆ

**ಅದ್ಯೈನಂ ಕಾಲರೂಪೋಽಸೌ ಘಾತಯಿಷ್ಯತಿ ಭ್ರಾತೃಜಃ ।**
**ವಸುದೇವಸ್ತಥೇತ್ಯುಕ್ತ್ವಾ ತಮಾದಾಯ ಕರೇ ಸುತಂ ॥೨೩॥**

**ಅಪಶ್ಯಚ್ಚಾನನಂ ತಸ್ಯ ಸುತಸ್ಯಾದ್ಭುತಕರ್ಮಣಃ ।**
**ವೀಕ್ಷ್ಯ ಪುತ್ರಮುಖಂ ಶೌರಿಶ್ಚಿಂತಾವಿಷ್ಟೋ ಬಭೂವ ಹ ॥೨೪॥**

ನನ್ನ ಅಣ್ಣನ ಮಗನಾದ ಕಂಸನು ಯಮರೂಪಿಯಾಗಿ ಈಗಲೇ ಇವನನ್ನು ಕೊಲ್ಲುವನು, ಎಂದು ದೇವಕಿಯು ಹೇಳಲು, ಆಗ ವಸುದೇವನು ಹಾಗೆಯೇ ಆಗಲಿ ಎಂದು ಹೇಳಿ ಆ ಮಗುವನ್ನು ಕೈಯಲ್ಲಿ ತೆಗೆದುಕೊಂಡು, ಆಶ್ಚರ್ಯಕರವಾದ ಕೆಲಸಗಳನ್ನು ಮುಂದೆ ಮಾಡುವವನಾದ ಆ ಪುತ್ರನ ಮುಖವನ್ನು ನೋಡಿದನು. ಹೀಗೆ ಪುತ್ರನ ಮುಖವನ್ನು ನೋಡಿದನಂತರದಲ್ಲಿ ಆ ವಸುದೇವನಿಗೆ ಈ ಮಗುವನ್ನು ಏನನ್ನಾದರೂ ಮಾಡಿ ಹೇಗೆ ರಕ್ಷಿಸಬೇಕೆಂದು ಯೋಚನೆಯುಂಟಾಯಿತು.

**ಕಿಂ ಕರೋಮಿ ಕಥಂ ನ ಸ್ಯಾದ್ದುಃಖಮಸ್ಯ ಕೃತೇ ಮಮ ।**
**ಏವಂ ಚಿಂತಾತುರೇ ತಸ್ಮಿನ್ವಾಗುವಾಚಾಶರೀರಿಣೀ ॥೨೫॥**

ಈಗ ಏನನ್ನು ಮಾಡಲಿ? ಈ ಮಗುವಿನ ರಕ್ಷಣೆಯ ವಿಷಯವಾದ ದುಃಖವು ನನಗೆ ಉಂಟಾಗದಿರಬೇಕಾದರೆ ಹೇಗೆ ನಡೆಯಬೇಕೆಂದು ಆ ವಸುದೇವನು ಯೋಚಿಸುತ್ತಿರುವಾಗ ಮುಂದೆ ಹೇಳುವಂತೆ ಅಶರೀರವಾಣಿಯು ನುಡಿಯಿತು.

ವಸುದೇವಂ ಸಮಾಭಾಷ್ಯ ಗಗನೇ ವಿಶದಾಕ್ಷರಾ ।
ವಸುದೇವ ಗೃಹೀತ್ವೈನಂ ಗೋಕುಲಂ ನಯ ಸತ್ವರಃ ॥೨೬॥

ಆ ಅಶರೀರವಾಣಿಯು ವಸುದೇವನೇ, ಎಂದು ಅವನ ಹೆಸರನ್ನು ಕೂಗಿ ಆಕಾಶದಲ್ಲಿ ಸ್ಪಷ್ಟವಾಗಿ ಉಚ್ಚರಿಸುತ್ತಿರುವ ಅಕ್ಷರಗಳಿಂದ ಹೀಗೆ ಹೇಳಿತು.— ಎಲೈ ವಸುದೇವನೇ ನೀನು ಈ ಮಗುವನ್ನು ಜಾಗ್ರತೆಯಾಗಿ ನಂದಗೋಕುಲಕ್ಕೆ ತೆಗೆದುಕೊಂಡುಹೋಗಿ ಸೇರಿಸು.

ರಕ್ಷಪಾಲಾಸ್ತಥಾ ಸರ್ವೇ ಮಯಾ ನಿದ್ರಾವಿಮೋಹಿತಾಃ ।
ವಿವೃತಾನಿ ಕೃತಾನ್ಯಷ್ಟಕಪಾಟಾನಿ ಚ ಶೃಂಖಲಾಃ ॥೨೭॥

ಹೇಗೆಂದರೆ, ಈ ಸೆರೆಮನೆಯನ್ನು ಕಾಯುತ್ತಿರುವವರೆಲ್ಲರೂ ನನ್ನಿಂದ ನಿದ್ರಾ ಪರವಶರಾಗಿ ಮಾಡಲ್ಪಟ್ಟು ನಿಶ್ಚೇಷ್ಟಿತರಾಗಿರುತ್ತಾರೆ. ಈ ಸೆರೆಮನೆಯ ಎಂಟು ಬಾಗಿಲುಗಳೂ ತೆರೆಯಲ್ಪಟ್ಟವೆ. ನಿನ್ನ ಬೇಡಿಯ ಸರಪಣಿಯೂ ಕೂಡ ಬಿಡಿಸಲ್ಪಟ್ಟಿರುತ್ತದೆ.

ಮುಕ್ತ್ವೈನಂ ನಂದಗೇಹೇ ತ್ವಂ ಯೋಗಮಾಯಾಂ ಸಮಾನಯ ।
ಶ್ರುತ್ವೈವಂ ವಸುದೇವಸ್ತು ತಸ್ಮಿನ್ಕಾರಾಗೃಹೇ ಗತಃ ॥೨೮॥

ವಿವೃತಂ ದ್ವಾರಮಾಲೋಕ್ಯ ಬಭೂವ ತರಸಾ ನೃಪ ।
ತಮಾದಾಯ ಯಯಾವಾಶು ದ್ವಾರಪಾಲೈರಲಕ್ಷಿತಃ ॥೨೯॥

ಈ ಮಗುವನ್ನು ಗೋಕುಲದಲ್ಲಿರುವ ನಂದನ ಮನೆಯಲ್ಲಿ ಬಿಟ್ಟು ಅಲ್ಲಿರುವ ಯೋಗಮಾಯೆಯ ಅವತಾರವಾದ ಹೆಣ್ಣು ಮಗುವನ್ನು ಇಲ್ಲಿಗೆ ತೆಗೆದುಕೊಂಡು ಬಾ ಎಂಬುದಾಗಿ ಹೇಳಿದ ಅಶರೀರವಾಕ್ಯನ್ನು ಕೇಳಿ ಆ ವಸುದೇವನು ಆ ಸೆರೆಮನೆಯಲ್ಲಿ ನಿಂತುಕೊಂಡು ಬಾಗಿಲುಗಳೆಲ್ಲವೂ ತೆರೆದಿರುವುದನ್ನು ನೋಡಿದನು. ಕೂಡಲೇ ಆ ವಸುದೇವನು ಮಗುವನ್ನು ತೆಗೆದುಕೊಂಡು ಜಾಗ್ರತೆಯಾಗಿ ಹೊರಹೊರಟನು. ಬಾಗಿಲು ಕಾಯುವವರು ನಿದ್ರಾವಶರಾಗಿದ್ದುದರಿಂದ ಮಗುವನ್ನು ತೆಗೆದುಕೊಂಡು ಹೋಗುತ್ತಿರುವ ಇವನನ್ನು ನೋಡಲಿಲ್ಲ.

ಕಾಲಿಂದೀತಟಮಾಸಾದ್ಯ ಪೂರಂ ದೃಷ್ಟ್ವಾ ಸುನಿಶ್ಚಿತಂ ।
ತದೈವ ಕಟಿದಘ್ನೀ ಸಾ ಬಭೂವಾಶು ಸರಿದ್ವರಾ ॥೩೦॥

ಈ ವಸುದೇವನು ಗೋಕುಲಕ್ಕೆ ಹೋಗುವ ದಾರಿಯಲ್ಲಿ ಯಮುನಾನದಿಯು ಸಿಕ್ಕಿತು. ಆ ಹೊಳೆಯಲ್ಲಿ ಪ್ರವಾಹವು ತುಂಬಿ ಹರಿಯುತ್ತಿತ್ತು. ಆದರೂ ಇವನು ಆ ಹೊಳೆಯ ದಡಕ್ಕೆ ಬಂದ ಕೂಡಲೇ ಇವನಿಗೆ ದಾಟುವುದಕ್ಕೆ ಅನುಕೂಲವಾಗುವಂತೆ ಆ ಶ್ರೇಷ್ಠವಾದ ಯಮುನಾನದಿಯು ಇವನ ಸೊಂಟಮಟ್ಟಕ್ಕಿಂತ ಹೆಚ್ಚಾಗದಂತೆ ನೀರು ಇಳಿದಿರುವ ಹಾಗೆ ಮಾಡಿತು.

**ಯೋಗಮಾಯಾಪ್ರಭಾವೇಣ ತತಾರಾಽನಕದುಂದುಭಿಃ ।**
**ಗತ್ವಾ ತು ಗೋಕುಲಂ ಶೌರಿರ್ನಿಶೀಥೇ ನಿರ್ಜನೇ ಪಥಿ ॥೩೦॥**

ಯೋಗಮಾಯೆಯ ಮಹಿಮೆಯಿಂದ ವಸುದೇವನು ಯಮುನಾನದಿಯನ್ನು ದಾಟಿದನು. ವಸುದೇವನು, ಆ ಅರ್ಧರಾತ್ರಿಯಲ್ಲಿ ಜನಸಂಚಾರವೇ ಇಲ್ಲದಿರುವ ದಾರಿಯಲ್ಲಿ ಆ ಮಗುವನ್ನು ಗೋಕುಲಕ್ಕೆ ತೆಗೆದುಕೊಂಡುಹೋದನು.

**ನಂದದ್ವಾರೇ ಸ್ಥಿತಃ ಪಶ್ಯನ್ವಿಭೂತಿಂ ಪಶುಸಂಜ್ಞಿತಾಂ ।**
**ತದೈವ ತತ್ರ ಸಂಜಾತಾ ಯಶೋದಾಗರ್ಭಸಂಭವಾ ॥೩೨॥**
**ಯೋಗಮಾಯಾಂಶಜಾ ದೇವೀ ತ್ರಿಗುಣಾ ದಿವ್ಯರೂಪಿಣೀ ।**

ನಂದನ ಮನೆಯ ಬಾಗಿಲಿನಲ್ಲಿ ನಂದನ ಐಶ್ವರ್ಯವಾದ ದನಕರುಗಳ ಸಮೃದ್ಧಿಯನ್ನು ನೋಡಿದನು. ಯಶೋದೆಯು ಆಗತಾನೇ ಹೆಣ್ಣುಮಗುವನ್ನು ಹೆತ್ತಿದ್ದಳು. ಆ ಮಗುವು ತ್ರಿಗುಣಮಯಿಯಾದ ಯೋಗಮಾಯೆಯ ಅಂಶದಿಂದ ಹುಟ್ಟಿದ್ದುದರಿಂದ ಬಹಳ ಸುಂದರಾಕಾರವುಳ್ಳದ್ದೂ ಆಗಿತ್ತು.

**ಜಾತಾಂ ತಾಂ ಬಾಲಿಕಾಂ ದಿವ್ಯಾಂ ಗೃಹೀತ್ವಾ ಕರಪಂಕಜೇ ॥೩೩॥**

**ತತ್ರಾಗತ್ಯ ದದೌ ದೇವೀ ಸೈರಂಧ್ರೀರೂಪಧಾರಿಣೀ ।**
**ವಸುದೇವಃ ಸುತಂ ದತ್ವಾ ಸೈರಂಧ್ರೀಕರಪಂಕಜೇ ॥೩೪॥**

**ತಾವಾದಾಯ ಯಯೌ ಶೀಘ್ರಂ ಬಾಲಿಕಾಂ ಮುದಿತಾಶಯಃ ।**

ಯೋಗಮಾಯೆಯು ತಾನೇ ಸೈರಂಧ್ರೀ ದೂತಿಯ ಆಕಾರವನ್ನು ಧರಿಸಿ ಆಗ ಯಶೋದೆಯು ಹೆತ್ತಿದ್ದ ದಿವ್ಯಾಕಾರವುಳ್ಳ ಆ ಹೆಣ್ಣುಮಗುವನ್ನು ತನ್ನ ಕೈಯಿಂದ ತೆಗೆದುಕೊಂಡು ಬಂದು ವಸುದೇವನ ಕೈಗೆ ಕೊಟ್ಟಳು. ವಸುದೇವನು

ತಾನು ತಂದಿದ್ದ ಮಗುವನ್ನು ಆ ಯೋಗಮಾಯೆಯ ಕಮಲದಂತಿರುವ ಕೈಗೆ ಕೊಟ್ಟು, ಸೈರಂಧ್ರಿಯ ರೂಪವನ್ನು ಧರಿಸಿದ್ದ ಯೋಗಮಾಯೆಯು ಕೊಟ್ಟ ಯಶೋದೆಯ ಹೆಣ್ಣುಮಗುವನ್ನು ತೆಗೆದುಕೊಂಡು ಸಂತೋಷಪಟ್ಟ ಮನಸ್ಸುಳ್ಳವನಾಗಿ ಹಿಂತಿರುಗಿ ಹೊರಟನು.

**ಕಾರಾಗಾರೇ ತತೋ ಗತ್ವಾ ದೇವಕ್ಯಾಃ ಶಯನೇ ಸುತಾಂ ॥೩೫॥**
**ನಿಕ್ಷಿಪ್ಯ ಸಂಸ್ಥಿತಃ ಪಾರ್ಶ್ವೇ ಚಿಂತಾವಿಷ್ಟೋ ಭಯಾತುರಃ ।**

ಗೋಕುಲದಿಂದ ಬಂದು ಸೆರೆಮನೆಯನ್ನು ಸೇರಿ ದೇವಕಿಯ ಹಾಸಿಗೆಯಲ್ಲಿ ಆ ಹೆಣ್ಣುಮಗುವನ್ನು ಇರಿಸಿ, ಕಂಸನ ಹೆದರಿಕೆಯಿಂದಲೂ, ತಾನು ಗೋಕುಲಕ್ಕೆ ಸೇರಿಸಿದ ಮಗುವಿನ ಯೋಚನೆಯಿಂದಲೂ ಕೂಡಿ ದೇವಕಿಯ ಪಾರ್ಶ್ವದಲ್ಲಿ ಈ ಗುಟ್ಟಿನ ವ್ಯಾಪಾರವು ಪ್ರಕಟವಾಗದಿರಲೆಂದು ಯೋಚನಾಪರನಾಗಿದ್ದನು.

**ರುರೋದ ಸುಸ್ವರಂ ಕನ್ಯಾ ತದೈವಾಗತಸಂಜ್ಞಕಾಃ ॥೩೬॥**
**ಉತ್ತಸ್ಥುಃ ಸೇವಕಾ ರಾಜ್ಞಃ ಶ್ರುತ್ವಾ ತದ್ರುದಿತಂ ನಿಶಿ ।**

ಆಗ ಆ ಹೆಣ್ಣುಮಗುವು ಒಳ್ಳೆಯ ಸ್ವರದಿಂದ ಅತ್ತಿತು. ಬಾಗಿಲನ್ನು ಕಾಯುತ್ತಿರುವ ದೊರೆಯ ಸೇವಕರು, ಆ ಮಗುವು ಅತ್ತ ಧ್ವನಿಯನ್ನು ಕೇಳಿ, ನಿದ್ರೆಯಿಂದ ಎಚ್ಚತ್ತು ರಾಜನಿಗೆ ಈ ವೃತ್ತಾಂತವನ್ನರುಹಲು ಹೊರಟರು.

**ತಮೂಚುರ್ಭೂಪತಿಂ ಗತ್ವಾ ತ್ವರಿತಾಸ್ತೇಽತಿವಿಹ್ವಲಾಃ ॥೩೭॥**
**ದೇವಕ್ಯಾಶ್ಚ ಸುತೋ ಜಾತಃ ಶೀಘ್ರಮೇಹಿ ಮಹಾಮತೇ ।**

ಆ ರಾಜಸೇವಕರು ಕಾತರತೆಯಿಂದ ಕೂಡಿ ಶೀಘ್ರವಾಗಿ ರಾಜನ ಸಮೀಪವನ್ನೈದಿ ಅವನನ್ನು ಕುರಿತು—ಎಲೈ ಮಹಾಬುದ್ಧಿಶಾಲಿಯೇ, ದೇವಕಿಗೆ ಈಗತಾನೇ ಪುತ್ರನು ಜನಿಸಿರುವನು. ಆದುದರಿಂದ ಜಾಗ್ರತೆಯಾಗಿ ದಯಮಾಡಿಸಬೇಕೆಂದು ಬಿನ್ನವಿಸಿದರು.

**ತದಾಕರ್ಣ್ಯ ವಚಸ್ತೇಷಾಂ ಶೀಘ್ರಂ ಭೋಜಪತಿರ್ಯಯೌ ॥೩೮॥**
**ಪ್ರಾವೃತಂ ದ್ವಾರಮಾಲೋಕ್ಯ ವಸುದೇವಮಥಾಹ್ವಯತ್ ।**

ಆ ಸೇವಕರ ಮಾತನ್ನು ಕೇಳಿ ಭೋಜದೇಶಾಧಿಪತಿಯಾದ ಕಂಸನು ಜಾಗ್ರತೆಯಾಗಿ ಆ ಸೆರೆಮನೆಯ ಹತ್ತಿರಕ್ಕೆ ಬಂದು ಅದರ ಬಾಗಿಲು ಮುಚ್ಚಿರುವುದನ್ನು ನೋಡಿ, ವಸುದೇವನನ್ನು ಕೂಗಿ ಕರೆದನು.

॥ ಕಂಸ ಉವಾಚ ॥

**ಸುತಮಾನಯ ದೇವಕ್ಯಾ ವಸುದೇವ ಮಹಾಮತೇ ॥೩೯॥**
**ಮೃತ್ಯುರ್ಮೇ ಚಾಷ್ಟಮೋ ಗರ್ಭಸ್ತನ್ನಿಹನ್ಮಿ ರಿಪುಂ ಹರಿಂ ।**

ಕಂಸನು ವಸುದೇವನನ್ನು ಕುರಿತು ಹೇಳಿದನು—ಎಲೈ ಬುದ್ಧಿಶಾಲಿಯಾದ ವಸುದೇವನೇ, ದೇವಕಿಯು ಈಗ ಹೆತ್ತಿರುವ ಮಗನನ್ನು ತೆಗೆದುಕೊಂಡು ಬಾ. ಎಂಟನೆಯ ಗರ್ಭದಲ್ಲಿ ಹುಟ್ಟಿರುವ ಈ ಮಗುವು ನನಗೆ ಮರಣವನ್ನುಂಟುಮಾಡುವುದು. ಆದುದರಿಂದ ನನಗೆ ಶತ್ರುವಾದ ಶಿಶುರೂಪಿಯಾದ ಆ ವಿಷ್ಣುವನ್ನು ನಾನು ಕೊಲ್ಲುತ್ತೇನೆ.

॥ ವ್ಯಾಸ ಉವಾಚ ॥

**ಶ್ರುತ್ವಾ ಕಂಸವಚಃ ಶೌರಿರ್ಭಯತ್ರಸ್ತವಿಲೋಚನಃ ॥೪೦॥**
**ತಾಮಾದಾಯ ಸುತಾಂ ಪಾಣೌ ದದೌ ಚಾಶು ರುದನ್ನಿವ ।**

ವ್ಯಾಸಋಷಿಯು ಹೇಳಿದನು—ಶೂರನ ಮಗನಾದ ವಸುದೇವನು, ಕಂಸನ ಮಾತನ್ನು ಕೇಳಿ ಭಯದಿಂದ ಹೆದರಿದ ಕಣ್ಣುಗಳುಳ್ಳವನಾಗಿ, ಆ ಹೆಣ್ಣು ಮಗುವನ್ನು ಜಾಗ್ರತೆಯಾಗಿ ಎತ್ತಿಕೊಂಡು ಬಂದು ಅಳುತ್ತಾ ಕಂಸನ ಕೈಯ್ಯಲ್ಲಿ ಕೊಟ್ಟನು.

**ದೃಷ್ಟ್ವಾಽಥ ದಾರಿಕಾಂ ರಾಜಾ ವಿಸ್ಮಯಂ ಪರಮಂ ಗತಃ ॥೪೧॥**
**ದೇವವಾಣೀ ವೃಥಾ ಜಾತಾ ನಾರದಸ್ಯ ಚ ಭಾಷಿತಂ ।**

ರಾಜನಾದ ಕಂಸನು ಆ ಹೆಣ್ಣುಮಗುವನ್ನು ನೋಡಿ ಬಹಳ ಆಶ್ಚರ್ಯಪಟ್ಟು, ಹೀಗೆ ಯೋಚಿಸಿದನು—ದೇವವಾಣಿಯಾದ ಅಶರೀರವಾಕ್ಯೂ ಸುಳ್ಳಾಯಿತು. ನಾರದನ ಮಾತೂ ಸಹ ನಿಜವಾಗಲಿಲ್ಲ.

**ವಸುದೇವಃ ಕಥಂ ಕುರ್ಯಾದನೃತಂ ಸಂಕಟೇ ಸ್ಥಿತಃ ॥೪೨॥**
**ರಕ್ಷಪಾಲಾಶ್ಚ ಮೇ ಸರ್ವೇ ಸಾವಧಾನಾ ನ ಸಂಶಯಃ ।**

ಈ ವಿಚಾರದಲ್ಲಿ ಏನಾದರೂ ಮೋಸ ನಡೆದಿರಬಹುದೆಂದು ಹೇಳುವುದಾದರೆ, ಅದಕ್ಕೂ ಅವಕಾಶವಿಲ್ಲ. ಏಕೆಂದರೆ ಸೆರೆಮನೆಯಲ್ಲಿ ಬಂಧನದಲ್ಲಿರುವ ವಸುದೇವನು ಮೋಸವನ್ನು ಮಾಡಲು ಹೇಗೆ ಸಾಧ್ಯವಾದೀತು? ನನ್ನ ಕಡೆಯವರಾದ ಕಾವಲುಗಾರರೆಲ್ಲರೂ ಕೂಡ ಬಹಳ ಜಾಗರೂಕರಾಗಿಯೇ ಇದ್ದಾರೆ. ಈ ವಿಷಯದಲ್ಲಿ ಸಂಶಯಪಡುವ ಹಾಗಿಲ್ಲ.

**ಕುತೋಽತ್ರ ಕನ್ಯಕಾ ಕಾಮಂ ಕ್ವ ಗತಃ ಸ ಸುತಃ ಕಿಲ ॥೪೩॥**
**ಸಂದೇಹೋಽತ್ರ ನ ಕರ್ತವ್ಯಃ ಕಾಲಸ್ಯ ವಿಷಮಾ ಗತಿಃ ।**

ಹೀಗಿರುವಲ್ಲಿ ಈ ಹೆಣ್ಣುಮಗುವು ಎಲ್ಲಿಂದ ಬಂದಿತು? ಆ ಗಂಡುಮಗುವು ಎಲ್ಲಿ ಹೋಯಿತು? ಈ ವಿಷಯದಲ್ಲಿ ಸಂದೇಹ ಪಡುತ್ತಾ ಕುಳಿತುಕೊಳ್ಳುವುದು ಯುಕ್ತವಲ್ಲ. ಕಾಲಗತಿಯಿಂದ ಉಂಟಾಗುವ ಫಲವು ಒಂದೇ ಸಮನಾಗಿರುವುದಿಲ್ಲವು. ವಿಷಮವಾಗಿಯೂ ಇರಬಹುದು. ಆದುದರಿಂದ ಈ ಶಿಶುವು ಹೆಣ್ಣುಮಗುವೆಂದು ನಿರ್ಲಕ್ಷಿಸಿ ಇದನ್ನು ಕೊಲ್ಲದೇ ಬಿಡುವುದು ಉಚಿತವಲ್ಲವು.

**ಇತಿ ಸಂಚಿಂತ್ಯ ತಾಂ ಬಾಲಾಂ ಗೃಹೀತ್ವಾ ಪಾದಯೋಃ ಖಲಃ ॥೪೪॥**
**ಪೋಥಯಾಮಾಸ ಪಾಷಾಣೇ ನಿರ್ಘೃಣಃ ಕುಲಪಾಂಸನಃ ।**

ಹೀಗೆ ಯೋಚಿಸಿ ಕುಲಗೇಡಿಯಾದ ನೀಚನೂ ಕ್ರೂರನೂ ಆದ ಕಂಸನು ಆ ಹೆಣ್ಣುಮಗುವಿನ ಎರಡು ಕಾಲುಗಳನ್ನೂ ಹಿಡಿದುಕೊಂಡು ಕಲ್ಲಿನ ಮೇಲೆ ನಿರ್ದಯದಿಂದ ಹೊಡೆದಪ್ಪಳಿಸಿ ಕೊಲ್ಲಲು ಮಗುವನ್ನು ಮೇಲಕ್ಕೆತ್ತಿ ಎಸೆದನು.

**ಸಾ ಕರಾನ್ನಿಃಸೃತಾ ಬಾಲಾ ಯಯಾವಾಕಾಶಮಂಡಲಂ ॥೪೫॥**
**ದಿವ್ಯರೂಪಾ ತದಾ ಭೂತ್ವಾ ತಮುವಾಚ ಮೃದುಸ್ವನಾ ।**

ಆ ಹೆಣ್ಣುಮಗುವು ಈ ಕಂಸನ ಕೈಯಿಂದ ಬಿಟ್ಟಕೂಡಲೆ ಆಕಾಶಕ್ಕೆ ಹಾರಿ, ಅಲ್ಲಿ ದಿವ್ಯರೂಪವನ್ನು ಧರಿಸಿಕೊಂಡು ಮೃದುವಾದ ಸ್ವರದಿಂದ ಆ ಕಂಸನನ್ನು ಕುರಿತು ಹೀಗೆ ಹೇಳಿತು.

**ಕಿಂ ಮಯಾ ಹತಯಾ ಪಾಪ ಜಾತಸ್ತೇ ಬಲವಾನ್ರಿಪುಃ ॥೪೬॥**

**ಹನಿಷ್ಯತಿ ದುರಾರಾಧ್ಯಃ ಸರ್ವಥಾ ತ್ವಾಂ ನರಾಧಮಂ ।**
**ಇತ್ಯುಕ್ತ್ವಾ ಸಾ ಗತಾ ಕನ್ಯಾ ಗಗನಂ ಕಾಮಗಾ ಶಿವಾ ॥೪೭॥**

ಎಲೈ ಪಾಪಿಯೇ, ನನ್ನನ್ನು ಕೊಂದದ್ದರಿಂದ ನಿನಗೆ ಆಗುವುದೇನು? ನಿನ್ನನ್ನು ಕೊಲ್ಲಲು ಬಲಶಾಲಿಯಾದ ಶತ್ರುವು ಹುಟ್ಟಿದಾನೆ. ನೀನು ಆರಾಧಿಸುವುದಕ್ಕೂ ಸಹ ಅಸಾಧ್ಯನಾಗಿ ಅವನು ನೀಚಮನುಷ್ಯನಾದ ನಿನ್ನನ್ನು ಖಂಡಿತವಾಗಿಯೂ ಕೊಲ್ಲುವನು. ಹೀಗೆ ಹೇಳಿ ಆ ಹೆಣ್ಣುಮಗುವಿನ ರೂಪವನ್ನು ಹೊಂದಿದ್ದ ದೇವಿಯು ತನ್ನ ಇಚ್ಛೆಬಂದಂತೆ ಅಲ್ಲಿಯೇ ಅದೃಶ್ಯಳಾಗಿ ಹೊರಟು ಹೋದಳು.

**ಕಂಸಸ್ತು ವಿಸ್ಮಯಾವಿಷ್ಟೋ ಗತೋ ನಿಜಗೃಹಂ ತದಾ ।**
**ಆನಾಯ್ಯ ದಾನವಾನ್ಸರ್ವಾನಿದಂ ವಚನಮಬ್ರವೀತ್ ॥೪೮**

ಕಂಸನೂ ಕೂಡ ಆಶ್ಚರ್ಯವುಳ್ಳವನಾಗಿ ತನ್ನ ಮನೆಗೆ ಬಂದು ಎಲ್ಲ ರಾಕ್ಷಸರನ್ನೂ ಕರೆಯಿಸಿಕೊಂಡು ಅವರನ್ನು ಕುರಿತು ಹೀಗೆ ಹೇಳಿದನು.

**ಬಕಧೇನುಕವತ್ಸಾದೀನ್ ಕ್ರೋಧಾವಿಷ್ಟೋ ಭಯಾತುರಃ ।**
**ಗಚ್ಛಂತು ದಾನವಾಸ್ಸರ್ವೇ ಮಮ ಕಾರ್ಯಾರ್ಥಸಿದ್ಧಯೇ ॥೪೯॥**

ಕಂಸನು ಕೋಪದಿಂದಲೂ ಭಯದಿಂದಲೂ ಆಶಾಭಂಗದಿಂದಲೂ ಕೂಡಿ, ಬಕಾಸುರ, ಧೇನುಕಾಸುರ, ವತ್ಸಾಸುರ ಇವರೇ ಮೊದಲಾದ ರಾಕ್ಷಸರನ್ನು ಕುರಿತು, ನೀವೆಲ್ಲರೂ ನನ್ನ ಕಾರ್ಯಸಿದ್ಧಿಗಾಗಿ ಸಿದ್ಧರಾಗಿ ಹೊರಡಿರಿ.

**ಜಾತಮಾತ್ರಾಶ್ಚ ಹಂತವ್ಯಾ ಬಾಲಕಾ ಯತ್ರ ಕುತ್ರ ಚಿತ್ ।**
**ಪೂತನೈಷಾ ವ್ರಜತ್ವದ್ಯ ಬಾಲಘ್ನೀ ನಂದಗೋಕುಲಂ ॥೫೦॥**

ಎಳೆಯ ಮಕ್ಕಳು ಎಲ್ಲಿದ್ದರೂ ಸರಿ, ಹೇಗಿದ್ದರೂ ಸರಿ, ಅವುಗಳನ್ನು ಹುಟ್ಟಿದ ಕೂಡಲೆ ನೀವು ಕೊಂದುಬಿಡಿರಿ. ಎಳೆಯ ಮಗುವನ್ನು ಕೊಲ್ಲಲು ಮಾರ್ಗಗಳನ್ನು ತಿಳಿದಿರುವ ಈ ಪೂತನೆಯು ಈಗಲೇ ನಂದಗೋಕುಲಕ್ಕೆ ಹೋಗಲಿ.

**ಜಾತಮಾತ್ರಾನ್ನಿನಿಘ್ನಂತೀ ಶಿಶೂಂಸ್ತತ್ರ ಮಮಾಜ್ಞಯಾ ।**
**ಧೇನುಕೋ ವತ್ಸಕಃ ಕೇಶೀ ಪ್ರಲಂಬೋ ಬಕ ಏವ ಚ ॥೫೧॥**

**ಸರ್ವೇ ತಿಷ್ಠಂತು ತತ್ರೈವ ಮಮ ಕಾರ್ಯಚಿಕೀರ್ಷಯಾ ।**

ಈ ಪೂತನೆಯು ನನ್ನ ಆಜ್ಞೆಯಿಂದ ಹೊರಟು ಅಲ್ಲಿ ಹುಟ್ಟಿದ ಮಕ್ಕಳನ್ನು ಆಯಾಯ ಕ್ಷಣದಲ್ಲಿಯೇ ಕೊಲ್ಲುತ್ತಾ ಅಲ್ಲಿಯೇ ಇರಲಿ. ಧೇನುಕ, ವತ್ಸಕ, ಕೇಶೀ; ಪ್ರಲಂಬ, ಬಕ ಈ ರಾಕ್ಷಸರೂ ಸಹ ನನ್ನ ಕಾರ್ಯವನ್ನು ನೆರವೇರಿಸುವುದಕ್ಕಾಗಿ ಅಲ್ಲಿಯೇ ಇದ್ದುಕೊಂಡು ನನ್ನ ಆಜ್ಞೆಯನ್ನ ಪಾಲಿಸುತ್ತಿರಲಿ.

**ಇತ್ಯಾಜ್ಞಾಪ್ಯಾಸುರಾನ್ ಕಂಸೋ ಯಯೌ ನಿಜಗೃಹಂ ಖಲಃ ॥೫೨॥**
**ಚಿಂತಾವಿಷ್ಟೋಽತಿದೀನಾತ್ಮಾ ಚಿಂತಯಿತ್ವೈವ ತಂ ಪುನಃ ।**

ದುಷ್ಟನಾದ ಕಂಸನು, ರಾಕ್ಷಸರಿಗೆ ಈ ರೀತಿಯಲ್ಲಿ ಅಪ್ಪಣೆ ಮಾಡಿ, ಎಷ್ಟು ಪ್ರಯತ್ನ ಮಾಡಿದಾಗ್ಯೂ ವ್ಯರ್ಥವಾಯಿತೆಂದು ವ್ಯಸನದಿಂದ ದೀನನಾಗಿ ಕೊರಗುತ್ತಾ, ತನಗೆ ಶತ್ರುವಾದ ಆ ಮಗುವಿನ ವಿಷಯವನ್ನೇ ಯೋಚಿಸುತ್ತಾ ತನ್ನ ಮನೆಗೆ ಬಂದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ತ್ರಯೋವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಚತುರ್ಥಸ್ಕಂಧೇ

### || ಚತುರ್ವಿಂಶೋಽಧ್ಯಾಯಃ ||

### ಇಪ್ಪತ್ತುನಾಲ್ಕನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಪ್ರಾತರ್ನಂದಗೃಹೇ ಜಾತಃ ಪುತ್ರಜನ್ಮಮಹೋತ್ಸವಃ |**
**ಕಿಂವದಂತ್ಯಥ ಕಂಸೇನ ಶ್ರುತಾ ಚಾರಮುಖಾದಪಿ ||೧||**

ವ್ಯಾಸಋಷಿಯು ಹೇಳಿದನು—ಬೆಳಗಾದಕೂಡಲೇ ನಂದನ ಮನೆಯಲ್ಲಿ ಗಂಡುಮಗುವು ಹುಟ್ಟಿದ ನಿಮಿತ್ತದಿಂದ ಪುತ್ರೋತ್ಸವದ ಸಂತೋಷಕಾರ್ಯವು ವಿಜೃಂಭಣೆಯಿಂದ ನಡೆಯಿತು. ಕಂಸನೂ ಕೂಡ ತನ್ನ ದೂತರ ಮುಖದಿಂದ ಈ ವರ್ತಮಾನವನ್ನು ಕೇಳಿದನು.

**ಜಾನಾತಿ ವಸುದೇವಸ್ಯ ದಾರಾಸ್ತತ್ರ ವಸಂತಿ ಹಿ |**
**ಪಶವೋ ದಾಸವರ್ಗಶ್ಚ ಸರ್ವೇ ತೇ ನಂದಗೋಕುಲೇ ||೨||**

ಆ ನಂದಗೋಕುಲದಲ್ಲಿ ವಸುದೇವನ ಹೆಂಡತಿಯರು ಇರುವರು. ಮತ್ತು ಅವನ ದನಕರುಗಳೂ, ದಾಸದಾಸಿಯರೂ ಇವರೆಲ್ಲರೂ ಇರುವರೆಂದು ತಿಳಿದಿರುತ್ತಾನೆ.

**ತೇನ ಶಂಕಾಸಮಾವಿಷ್ಟೋ ಗೋಕುಲಂ ಪ್ರತಿ ಭಾರತ |**
**ನಾರದೇನಾಪಿ ತತ್ಸರ್ವಂ ಕಥಿತಂ ಕಾರಣಂ ಪುರಾ ||೩||**

ಕೆಲವು ಕಾಲದ ಹಿಂದೆ ನಾರದನೂ ಕೂಡ ವಸುದೇವನ ಸ್ವಜನರೂ ಮತ್ತು ಅವನಿಗೆ ಸೇರಿದ ಧನಧಾನ್ಯ ಪಶುವರ್ಗಗಳೂ ಗೋಕುಲದಲ್ಲಿ ಇರುತ್ತವೆ ಎಂದು

ಹೇಳಿದ್ದುದರಿಂದ ಗೋಕುಲದ ವಿಷಯದಲ್ಲಿ ಕಂಸನಿಗೆ ಆತಂಕದ ಸಂದೇಹವುಂಟಾಯಿತು. ಏಕೆಂದರೆ

**ಗೋಕುಲೇ ಯೇ ಚ ನಂದಾದ್ಯಾಃ ತತ್ಪತ್ನ್ಯಶ್ಚ ಸುರಾಂಶಜಾಃ ।**
**ದೇವಕೀವಸುದೇವಾದ್ಯಾಃ ಸರ್ವೇ ತೇ ಶತ್ರವಃ ಕಿಲ ॥೪॥**

**ಇತಿ ನಾರದವಾಕ್ಯೇನ ಬೋಧಿತೋಽಸೌ ಕುಲಾಧಮಃ ।**
**ಜಾತಃ ಕೋಪಮನಾ ರಾಜನ್ ಕಂಸಃ ಪರಮಪಾಪಕೃತ್ ॥೫॥**

ಗೋಕುಲದಲ್ಲಿರುವ ನಂದನೇ ಮೊದಲಾದವರೂ ಅವರ ಪತ್ನಿಯರೂ ವಸುದೇವನು ದೇವಕಿಯು ಇವರೇ ಮೊದಲಾದವರು ದೇವಾಂಶದಿಂದ ಹುಟ್ಟಿದವರಾದುದರಿಂದ ನಿನಗೆ ಶತ್ರುಗಳಲ್ಲವೇ ? ಎಂಬುದಾಗಿ ನಾರದನಿಂದ ಬೋಧಿಸಲ್ಪಟ್ಟ ಕುಲಗೇಡಿಯೂ, ಪರಮಪಾಪಿಯೂ ಆದ ಆ ಕಂಸನು ಬಹಳ ಕೋಪಾವಿಷ್ಟವಾದ ಮನಸ್ಸುಳ್ಳವನಾಗಿದ್ದನು.

**ಪೂತನಾ ನಿಹತಾ ತತ್ರ ಕೃಷ್ಣೇನಾಮಿತತೇಜಸಾ ।**
**ಬಕೋ ವತ್ಸಾಸುರಶ್ಚಾಪಿ ಧೇನುಕಶ್ಚ ಮಹಾಬಲಃ ॥೬॥**

**ಪ್ರಲಂಬೋ ನಿಹತಸ್ತೇನ ತಥಾ ಗೋವರ್ಧನೋ ಧೃತಃ ।**
**ಶ್ರುತ್ವೈತತ್ಕರ್ಮ ಕಂಸಸ್ತು ಮೇನೇ ಮರಣಮಾತ್ಮನಃ ॥೭॥**

ಆ ಗೋಕುಲದಲ್ಲಿ ಬಹಳ ತೇಜಶ್ಶಾಲಿಯಾದ ಕೃಷ್ಣನಿಂದ ಪೂತನೆಯೂ, ಬಕಾಸುರನೂ, ವತ್ಸಾಸುರನೂ, ಮಹಾಬಲಿಷ್ಠನಾದ ಧೇನುಕಾಸುರನೂ, ಪ್ರಲಂಬಾಸುರನೂ ಇವರೆಲ್ಲರೂ ಕೊಲ್ಲಲ್ಪಟ್ಟರು. ಮತ್ತು ಕೃಷ್ಣನು ಗೋವರ್ಧನಪರ್ವತವನ್ನು ಎತ್ತಿ ಹಿಡಿದು ಗೋವುಗಳನ್ನೂ ಗೋಪಾಲರನ್ನೂ ಕಾಪಾಡಿದನು. ಕೃಷ್ಣನ ಈ ಕೆಲಸಗಳನ್ನು ಕೇಳಿ ಕಂಸನು ಅವನಿಂದ ತನಗೆ ಮರಣವೆಂದು ತಿಳಿದನು.

**ತಥಾ ವಿನಿಹತಃ ಕೇಶೀ ಜ್ಞಾತ್ವಾ ಕಂಸೋಽತಿದುರ್ಮನಾಃ ।**
**ಧನುರ್ಯಾಗಮಿಷೇಣಾಶು ತಾವಾನೇತುಂ ಪ್ರಚಕ್ರಮೇ ॥೮॥**

ಹಾಗೆಯೇ ಕೇಶೀ ಎಂಬ ರಾಕ್ಷಸನೂ ಕೃಷ್ಣನಿಂದ ಕೊಲ್ಲಲ್ಪಟ್ಟನೆಂದು ತಿಳಿದು ಕಂಸನು ಕೆಟ್ಟಮನಸ್ಸುಳ್ಳವನಾಗಿ, ಧನುರ್ಯಾಗವನ್ನು ನೆರವೇರಿಸಬೇಕು ಎಂಬ ನೆಪದಿಂದ ಆ ರಾಮಕೃಷ್ಣರನ್ನು ತನ್ನ ಪಟ್ಟಣಕ್ಕೆ ಕರೆಯಿಸಲು ಉದ್ಯುಕ್ತನಾದನು.

**ಅಕ್ರೂರಂ ಪ್ರೇಷಯಾಮಾಸ ಕ್ರೂರಃ ಪಾಪಮತಿಸ್ತದಾ ।**
**ಆನೇತುಂ ರಾಮಕೃಷ್ಣೌ ಚ ವಧಾಯಾಮಿತವಿಕ್ರಮೌ ॥೯॥**

ಆಗ ಪಾಪಕೆಲಸದಲ್ಲೇ ಬುದ್ಧಿಯುಳ್ಳ, ಕ್ರೂರಸ್ವಭಾವದವನಾದ ಕಂಸನು ತುಂಬ ಪರಾಕ್ರಮಶಾಲಿಗಳಾದ ಆ ರಾಮಕೃಷ್ಣರನ್ನು ಸಂಹರಿಸಲೋಸುಗ ಅವರನ್ನು ಮಧುರೆಗೇ ಕರೆತರಲು ಅಕ್ರೂರನೆಂಬುವನನ್ನು ಕಳುಹಿಸಿದನು.

**ರಥಮಾರೋಪ್ಯ ಗೋಪಾಲೌ ಗೋಕುಲಾದ್ಗಾಂದಿನೀಸುತಃ ।**
**ಆಗತೋ ಮಧುರಾಯಾಂ ತು ಕಂಸಾದೇಶೀ ಸ್ಥಿತಃ ಕಿಲ ॥೧೦॥**

ಗಾಂದಿನೀದೇವಿಯ ಮಗನಾದ ಅಕ್ರೂರನು, ಕಂಸನ ಆಜ್ಞಾನುಸಾರವಾಗಿ ನಡೆಯಬೇಕಾಗಿದ್ದುದರಿಂದ ಗೊಲ್ಲರಂತಿರುವ ರಾಮಕೃಷ್ಣರಿಬ್ಬರನ್ನೂ ತನ್ನ ರಥದಲ್ಲಿ ಹತ್ತಿಸಿ ಕೂರಿಸಿಕೊಂಡು ಗೋಕುಲದಿಂದ ಕಂಸನ ರಾಜಧಾನಿಯಾದ ಮಧುರಾಪಟ್ಟಣಕ್ಕೆ ಬಂದನು.

**ತಾವಾಗತ್ಯ ತದಾ ತತ್ರ ಧನುರ್ಭಂಗಂ ಚ ಚಕ್ರತುಃ ।**
**ಹತ್ವಾಽಥ ರಜಕಂ ಕಾಮಂ ಗಜಂ ಚಾಣೂರಮುಷ್ಟಿಕಂ ॥೧೧॥**

**ಶಲಂ ಚ ತೋಶಲಂ ಚೈವ ನಿಜಘಾನ ಹರಿಸ್ತದಾ ।**
**ಜಘಾನ ಕಂಸಂ ದೇವೇಶಃ ಕೇಶೇಷ್ವಾಕೃಷ್ಯ ಲೀಲಯಾ ॥೧೨॥**

ಆಗ ರಾಮಕೃಷ್ಣರಿಬ್ಬರೂ ಮಧುರಾಪಟ್ಟಣಕ್ಕೆ ಬಂದು ಅಲ್ಲಿ ಧನುಸ್ಸನ್ನು ಮುರಿದರು; ಕಂಸನ ಅಗಸನನ್ನು ಕೊಂದರು; ಮತ್ತು ಸ್ವೇಚ್ಛೆಯಾಗಿ ನಡೆದುಬರುತ್ತಾ ಆನೆಯನ್ನೂ, ಚಾಣೂರಮುಷ್ಟಿಕರನ್ನೂ ಶಲ, ತೋಶಲ ಎಂಬ ಜಟ್ಟಿಗಳನ್ನೂ ಸಹ ಕೊಂದರು. ಕಡೆಗೆ ಕೃಷ್ಣನು ಲೀಲೆಯಿಂದಲೇ ಕಂಸನ ತಲೆಯ ಜುಟ್ಟನ್ನು ಹಿಡಿದೆಳೆದು ಬಗ್ಗಿಸಿಕೊಂಡು ಕಂಸನನ್ನೂ ಕೊಂದನು.

**ಪಿತರೌ ಮೋಚಯಿತ್ವಾಽಥ ಗತದುಃಖೌ ಚಕಾರಹ ।**
**ಉಗ್ರಸೇನಾಯ ರಾಜ್ಯಂ ತದ್ದದಾವರಿನಿಷೂದನಃ ॥೧೩॥**

ಅನಂತರದಲ್ಲಿ ತನ್ನ ತಂದೆತಾಯಿಯರನ್ನು ಸೆರೆಮನೆಯಿಂದ ಬಿಡಿಸಿ ಅವರ ದುಃಖಗಳನ್ನು ಹೋಗಲಾಡಿಸಿದನು. ಶತ್ರುಗಳನ್ನು ನಿರ್ಮೂಲವಾಗಿ ನಾಶಮಾಡುವ ಕೃಷ್ಣನು ಆ ರಾಜ್ಯವನ್ನು ಉಗ್ರಸೇನನಿಗೆ ಕೊಟ್ಟನು.

**ವಸುದೇವಸ್ತಯೋಸ್ತತ್ರ ಮೌಂಜೀಬಂಧನಪೂರ್ವಕಂ ।**
**ಕಾರಯಾಮಾಸ ವಿಧಿವದ್ವ್ರತಬಂಧಂ ಮಹಾಮನಾಃ ॥೧೪॥**

ಉದಾರಮನಸ್ಸುಳ್ಳ ವಸುದೇವನು ಆ ಬಲರಾಮಕೃಷ್ಣರಿಗೆ ಮಥುರಾಪಟ್ಟಣದಲ್ಲಿ ಶಾಸ್ತ್ರೋಕ್ತಕ್ರಮದಿಂದ ಉಪನಯನ ಬ್ರಂಹಚರ್ಯವ್ರತವನ್ನು ಮಾಡಿಸಿದನು.

**ಉಪನೀತೌ ತದಾ ತೌ ತು ಗತೌ ಸಾಂದೀಪನಾಲಯಂ ।**
**ವಿದ್ಯಾಃ ಸರ್ವಾಃ ಸಮಭ್ಯಸ್ಯ ಮಥುರಾಮಾಗತೌ ಪುನಃ ॥೧೫॥**

ಉಪನಯನವಾದ ಅನಂತರದಲ್ಲಿ ಬಲರಾಮಕೃಷ್ಣರಿಬ್ಬರೂ ವಿದ್ಯಾಭ್ಯಾಸ ಮಾಡಲು ಸಾಂದೀಪನರೆಂಬ ಗುರುಗಳ ಆಶ್ರಮವನ್ನು ಸೇರಿದರು. ಎಲ್ಲ ವಿದ್ಯೆಗಳನ್ನೂ ಚನ್ನಾಗಿ ಕಲಿತುಕೊಂಡು ಮಥುರಾಪಟ್ಟಣಕ್ಕೆ ಹಿಂತಿರುಗಿ ಬಂದರು.

**ಜಾತೌ ದ್ವಾದಶವರ್ಷೀಯೌ ಕೃತವಿದ್ಯೌ ಮಹಾಬಲೌ ।**
**ಮಥುರಾಯಾಂ ಸ್ಥಿತೌ ವೀರೌ ಸುತಾವಾನಕದುಂದುಭೇಃ ॥೧೬॥**

ವಸುದೇವನ ಮಕ್ಕಳಾದ ಬಲರಾಮಕೃಷ್ಣರಿಬ್ಬರೂ ಹನ್ನೆರಡು ವರುಷ ವಯಸ್ಸಿನಲ್ಲಿಯೇ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಮಹಾಬಲಪರಾಕ್ರಮಶಾಲಿಗಳೆಂದೂ ವೀರರೆಂದೂ ಪ್ರಸಿದ್ಧರಾಗಿ ಆ ಮಥುರಾಪಟ್ಟಣದಲ್ಲಿಯೇ ವಾಸವಾಗಿ ಇದ್ದರು.

**ಮಾಗಧಸ್ತು ಜರಾಸಂಧೋ ಜಾಮಾತೃವಧದುಃಖಿತಃ ।**
**ಕೃತ್ವಾ ಸೈನ್ಯಸಮಾಜಂ ಸ ಮಥುರಾಮಾಗತಃ ಪುರೀಂ ॥೧೭॥**

ಮಗಧದೇಶಕ್ಕೆ ಧೊರೆಯಾದ ಜರಾಸಂಧನು ತನ್ನ ಅಳಿಯನಾದ ಕಂಸನು ಹತನಾದ ಕಾರಣದಿಂದ ದುಃಖವುಳ್ಳವನಾಗಿ ಸೈನ್ಯವನ್ನು ಶೇಖರಿಸಿಕೊಂಡು ಮಥುರಾಪಟ್ಟಣವನ್ನು ಮುತ್ತಿದನು.

**ಸ ಸಪ್ತದಶವಾರಂ ತು ಕೃಷ್ಣೇನ ಕೃತಬುದ್ಧಿನಾ ।**
**ಜಿತಃ ಸಂಗ್ರಾಮಮಾಸಾದ್ಯ ಮಧುಪುರ್ಯಾಂ ನಿವಾಸಿನಾ ॥೧೮॥**

ಮಥುರಾಪಟ್ಟಣದಲ್ಲಿ ವಾಸಮಾಡುತ್ತಿದ್ದ ಕುಶಲಮತಿಯಾದ ಕೃಷ್ಣನ ಕೂಡ ಹದಿನೇಳು ಸಾರಿ ಯುದ್ಧಮಾಡಿಯೂ ಜರಾಸಂಧನು ಸೋತುಹೋದನು.

**ಪಶ್ಚಾಚ್ಚ ಪ್ರೇರಿತಸ್ತೇನ ಸ ಕಾಲಯವನಾಭಿಧಃ ।**
**ಸರ್ವಮ್ಲೇಚ್ಛಾಧಿಪಃ ಶೂರೋ ಯಾದವಾನಾಂ ಭಯಂಕರಃ ॥೧೯॥**

ಅನಂತರದಲ್ಲಿ ಆ ಜರಾಸಂಧನು ಮ್ಲೇಚ್ಛರೆಲ್ಲರಿಗೂ ರಾಜನಾದ, ಶೂರನಾದ ಮತ್ತು ಯಾದವರಿಗೆ ಭಯವನ್ನುಂಟುಮಾಡುವವನಾದ ಕಾಲಯವನನೆಂಬ ಮ್ಲೇಚ್ಛರಾಜನನ್ನು ಕೃಷ್ಣನ ಸಂಗಡ ಯುದ್ಧವನ್ನು ಮಾಡುವಂತೆ ಪ್ರೇರಿಸಿದನು.

**ಶ್ರುತ್ವಾ ಯವನಮಾಯಾಂತಂ ಕೃಷ್ಣಃ ಸರ್ವಾನ್ಯದೂತ್ತಮಾನ್ ।**
**ಆನಾಯ್ಯ ಚ ತಥಾ ರಾಮಮುವಾಚ ಮಧುಸೂದನಃ ॥೨೦॥**

ಕಾಲಯವನನೆಂಬುವನು ಮಧುರಾಪಟ್ಟಣಕ್ಕೆ ಮುತ್ತಿಗೆಹಾಕಲು ಬರುತ್ತಿರುವನೆಂದು ತಿಳಿದು, ಕೃಷ್ಣನು ಎಲ್ಲ ಯಾದವರನ್ನೂ ಮತ್ತು ಬಲರಾಮನನ್ನೂ ಸಹ ಕರೆಯಿಸಿ ಮಂತ್ರಾಲೋಚನೆಯನ್ನು ಪಡೆಯಲು ಹೀಗೆ ಹೇಳಿದನು.

**ಭಯಂ ನೋಽತ್ರ ಸಮುತ್ಪನ್ನಂ ಜರಾಸಂಧಾನ್ಮಹಾಬಲಾತ್ ।**
**ಕಿಂ ಕರ್ತವ್ಯಂ ಮಹಾಭಾಗಾ ಯವನಃ ಸಮುಪೈತಿ ವೈ ॥೨೧॥**

ಎಲೈ ಮಹನೀಯರೇ, ಕೇಳಿರಿ—ಮಹಾಬಲಶಾಲಿಯಾದ ಜರಾಸಂಧನಿಂದ ನಮಗೆ ಈ ಮಧುರಾಪಟ್ಟಣದಲ್ಲಿ ಆಗಾಗ್ಗೆ ಭಯವು ಸಂಭವಿಸಿ ನಿವಾರಿತವಾದರೂ ಈಗ ಪುನಃ ಪ್ರಾಪ್ತವಾಗಿದೆ. ಏಕೆಂದರೆ ಅವನಿಂದ ಪ್ರೇರಿತನಾದ ಕಾಲಯವನನು ಇಲ್ಲಿಗೆ ಯುದ್ಧಕ್ಕಾಗಿ ಬರುತ್ತಿರುವನು. ಆದುದರಿಂದ ನಾವು ಮುಂದೆ ಏನನ್ನು ಮಾಡೋಣ?

**ಪ್ರಾಣತ್ರಾಣಂ ಪ್ರಕರ್ತವ್ಯಂ ತ್ಯಕ್ತ್ವಾ ಗೇಹಂ ಬಲಂ ಧನಂ ।**
**ಸುಖೇನ ಸ್ಥೀಯತೇ ಯತ್ರ ಸ ದೇಶಃ ಖಲು ಪೈತೃಕಃ ॥೨೨॥**

ಮನೆಯನ್ನೂ, ಬಲವನ್ನೂ ಧನವನ್ನೂ ಸಹ ಬಿಟ್ಟು ಪ್ರಾಣರಕ್ಷಣೆಯನ್ನು ಮಾಡಿಕೊಳ್ಳಬೇಕು. ಯಾವ ದೇಶದಲ್ಲಿ ನಾವು ಸುಖದಿಂದ ಇರುವೆವೋ ಆ ದೇಶವೇ ನಮ್ಮ ಹಿರಿಯರ ದೇಶವೆಂದು ಪರಿಗಣಿಸಬೇಕು.

**ಸದೋದ್ವೇಗಕರಃ ಕಾಮಂ ಕಿಂ ಕರ್ತವ್ಯಃ ಕುಲೋಚಿತಃ ।**
**ಶೈಲಸಾಗರಸಾನ್ನಿಧ್ಯೇ ಸ್ಥಾತವ್ಯಂ ಸುಖಮಿಚ್ಛತಾ ॥೨೩॥**

ಕಾಲಯವನನು ನಮ್ಮನ್ನು ಕೊಲ್ಲುವುದಕ್ಕಾಗಿ ಇಲ್ಲಿಗೆ ಬರುತ್ತಿರುವುದರಿಂದ ನಾವು ನಮ್ಮ ಕುಲೋಚಿತವಾದ ಪರಾಕ್ರಮವನ್ನು ಆಶ್ರಯಿಸಿಕೊಂಡು ನಮ್ಮ ರಕ್ಷಣೆಯ ವಿಷಯದಲ್ಲಿ ಹೆಚ್ಚಾದ ಪ್ರಯತ್ನವನ್ನು ಮಾಡಬೇಕಲ್ಲವೇ? ಶತ್ರುವಿನ ತೊಂದರೆಯಿಂದ ಪಾರಾಗಿ ಸುಖವನ್ನು ಅಪೇಕ್ಷಿಸುವವರು ಶತ್ರುವಿಗೆ ದುರ್ಗಮವಾದ ಬೆಟ್ಟ ಅಥವ ಸಮುದ್ರ ಇವುಗಳ ಸಮೀಪದಲ್ಲಿ ವಾಸಮಾಡಬೇಕು.

**ಯತ್ರ ವೈರಿಭಯಂ ನ ಸ್ಯಾತ್ಸ್ಥಾತವ್ಯಂ ತತ್ರ ಪಂಡಿತೈಃ ।**
**ಶೇಷಶಯ್ಯಾಂ ಸಮಾಶ್ರಿತ್ಯ ಹರಿಃ ಸ್ವಪಿತಿ ಸಾಗರೇ ॥೨೪॥**

ಬುದ್ಧಿವಂತನಾದವನು, ಎಲ್ಲಿ ಶತ್ರು ಭಯವಿಲ್ಲವೋ ಅಂಥ ಪ್ರದೇಶಗಳಲ್ಲಿ ವಾಸಮಾಡಬೇಕು. ವಿಷ್ಣುವು ಸಮುದ್ರ ಮಧ್ಯದಲ್ಲಿ ಆದಿಶೇಷನನ್ನು ಹಾಸಿಗೆಯನ್ನಾಗಿ ಮಾಡಿಕೊಂಡು ಮಲಗಿರುತ್ತಾನೆ. ಇದು ಜಲದುರ್ಗದಲ್ಲಿ ವಾಸಮಾಡುವುದರ ಉದಾಹರಣೆಯು.

**ತಥೈವ ಚ ಭಯಾದ್ಭೀತಃ ಕೈಲಾಸೇ ತ್ರಿಪುರಾರ್ದನಃ ।**
**ತಸ್ಮಾನ್ನಾತ್ರೈವ ಸ್ಥಾತವ್ಯಮಸ್ಮಾಭಿಃ ಶತ್ರುತಾಪಿತೈಃ ॥೨೫॥**

ಹಾಗೆಯೇ ಶತ್ರುಭಯದಿಂದ ಹೆದರಿದವನಾಗಿ ತ್ರಿಪುರಾಸುರನನ್ನೂ ತ್ರಿಪುರವನ್ನೂ ನಾಶಮಾಡಿದ ಈಶ್ವರನೂ ಸಹ ಕೈಲಾಸಪರ್ವತದಲ್ಲಿ ವಾಸಮಾಡುತ್ತಿಲ್ಲವೇ? ಇದು ಗಿರಿದುರ್ಗವಾಸದ ಉದಾಹರಣೆಯು. ಹೀಗೆ ಇರುವಾಗ ಶತ್ರುಗಳಿಂದ ತೊಂದರೆಯನ್ನು ಅನುಭವಿಸಬೇಕಾಗಿರುವ ನಾವುಗಳು ಇಲ್ಲಿ ಇರುವುದು ಸರಿಯಾದುದಲ್ಲವು.

**ದ್ವಾರವತ್ಯಾಂ ಗಮಿಷ್ಯಾಮಃ ಸಹಿತಾಃ ಸರ್ವ ಏವ ವೈ ।**
**ಕಥಿತಾ ಗರುಡೇನಾದ್ಯ ರಮ್ಯಾ ದ್ವಾರಾವತೀ ಪುರೀ ॥೨೬॥**

ದ್ವಾರವತೀಪಟ್ಟಣವು ವಾಸಮಾಡಲು ಬಹಳ ರಮ್ಯವಾಗಿದೆ ಎಂದು ಗರುಡನೂ ಹೇಳಿರುತ್ತಾನೆ. ಆದುದರಿಂದ ನಾವೆಲ್ಲರೂ ಒಟ್ಟಾಗಿ ಆ ದ್ವಾರವತೀ ಪಟ್ಟಣಕ್ಕೆ ಹೋಗಿ ವಾಸಮಾಡೋಣ.

**ರೇವತಾಚಲಸಾನ್ನಿಧ್ಯೇ ಸಿಂಧುಕೂಲೇ ಮನೋಹರಾ ।**

ಆ ದ್ವಾರವತೀಪಟ್ಟಣವು ರೈವತಗಿರಿಯ ಸಮೀಪದಲ್ಲಿ ಸಮುದ್ರತೀರದಲ್ಲಿ ರಕ್ಷಣೆಗೆ ತಕ್ಕ ಸೌಕರ್ಯಗಳುಳ್ಳದ್ದಾಗಿ ಬಹಳ ಮನೋಹರವಾಗಿ ಒಪ್ಪುತ್ತಿರುವುದು.

|| ವ್ಯಾಸ ಉವಾಚ ||

**ತಚ್ಛ್ರುತ್ವಾ ವಚನಂ ತಥ್ಯಂ ಸರ್ವೇ ಯಾದವಪುಂಗವಾಃ ॥೨೭॥**
**ಗಮನಾಯ ಮತಿಂ ಚಕ್ರುಃ ಸಕುಟುಂಬಾಃ ಸವಾಹನಾಃ ।**

ವ್ಯಾಸಋಷಿಯು ಮುಂದೆ ಹೇಳಿದನು—ಕೃಷ್ಣನು ಹೇಳಿದ ಈ ಮಾತು ಸರಿಯಾಗಿರುವುದೆಂದು ತಿಳಿದು ಸಮಸ್ತ ಯಾದವಶ್ರೇಷ್ಠರೂ ತಮ್ಮ ತಮ್ಮ ಕುಟುಂಬ ಗಳೊಡನೆಯೂ, ವಾಹನಗಳೊಡನೆಯೂ ಆ ದ್ವಾರವತೀಪಟ್ಟಣಕ್ಕೆ ಹೊರಡಲು ನಿಶ್ಚಯಮಾಡಿದರು.

**ಶಕಟಾನಿ ತಥೋಷ್ಟ್ರಾಶ್ಚ ವಾಮ್ಯಶ್ಚ ಮಹಿಷಾಸ್ತಥಾ ॥೨೮॥**
**ಧನಪೂರ್ಣಾನಿ ಕೃತ್ವಾ ತೇ ನಿರ್ಯಯುರ್ನಗರಾದ್ಬಹಿಃ ।**

ಅನಂತರದಲ್ಲಿ ಆ ಯಾದವರು ಬಂಡಿಗಳ ಮೇಲೂ, ಒಂಟೆಗಳ ಮೇಲೂ, ಹೇಸರಕತ್ತೆಗಳ ಮೇಲೂ, ಕೋಣಗಳ ಮೇಲೂ ದ್ರವ್ಯವನ್ನು ಹೇರಿಕೊಂಡು ಮಧುರಾಪಟ್ಟಣದಿಂದ ಹೊರಹೊರಟರು.

**ರಾಮಕೃಷ್ಣೌ ಪುರಸ್ಕೃತ್ಯ ಸರ್ವೇ ತೇ ಸಪರಿಚ್ಛದಾಃ ॥೨೯॥**
**ಅಗ್ರೇ ಕೃತ್ವಾ ಪ್ರಜಾಃ ಸರ್ವಾಶ್ಚೇಲುಃ ಸರ್ವೇ ಯದೂತ್ತಮಾಃ ।**
**ಕತಿಚಿದ್ದಿವಸೈಃ ಪ್ರಾಪುಃ ಪುರೀಂ ದ್ವಾರವತೀಂ ಕಿಲ ॥೩೦॥**

ಹೀಗೆ ಹೊರಟ ಆ ಯದುಶ್ರೇಷ್ಠರು ಬಲರಾಮಕೃಷ್ಣರನ್ನು ಮುಂದುಮಾಡಿ ಕೊಂಡು ಹೆಂಡಿರು ಮಕ್ಕಳನ್ನು ಕರೆದುಕೊಂಡು ಮಾರ್ಗಾತಿಕ್ರಮಣಮಾಡುತ್ತಾ ಕೆಲವು ದಿವಸಗಳಲ್ಲಿ ದ್ವಾರವತೀಪಟ್ಟಣವನ್ನು ಸೇರಿದರು.

**ಶಿಲ್ಪಿಭಿಃ ಕಾರಯಾಮಾಸ ಜೀರ್ಣೋದ್ಧಾರಂ ಹಿ ಮಾಧವಃ ।**
**ಸಂಸ್ಥಾಪ್ಯ ಯಾದವಾಂಸ್ತತ್ರ ತಾವೇತೌ ಬಲಕೇಶವೌ ॥೩೧॥**

ತರಸಾ ಮಧುರಾಮೇತ್ಯ ಸಂಸ್ಥಿತೌ ನಿರ್ಜನಾಂ ಪುರೀಂ ।
ತದಾ ತತ್ರೈವ ಸಂಪ್ರಾಪ್ತೋ ಬಲವಾನ್ಯವನಾಧಿಪಃ ॥೧೨॥

ಆ ಮೇಲೆ ಕೃಷ್ಣನು ಆ ದ್ವಾರವತೀಪಟ್ಟಣವನ್ನು ಶಿಲ್ಪಿಗಳಿಂದ ಜೀರ್ಣೋದ್ಧಾರಮಾಡಿಸಿ ಅಲ್ಲಿ ಯಾದವರೆಲ್ಲರನ್ನೂ ಇರುವಂತೆ ನಿಯಮಿಸಿದನು. ಬಳಿಕ ಬಲರಾಮಕೃಷ್ಣರಿಬ್ಬರೂ ಅಲ್ಲಿಂದ ಹಿಂತಿರುಗಿ ಜನಗಳಿಲ್ಲದೆ ಶೂನ್ಯವಾಗಿರುವ ಮಧುರಾಪಟ್ಟಣಕ್ಕೆ ಬಂದು ಅಲ್ಲಿ ಇದ್ದರು. ಆಗ ಬಲಿಷ್ಠನಾದ ಕಾಲಯವನನು ಬಂದು ಆ ಪಟ್ಟಣವನ್ನು ಮುತ್ತಿದನು.

ಜ್ಞಾತ್ವೈನಮಾಗತಂ ಕೃಷ್ಣೋ ನಿರ್ಯಯೌ ನಗರಾದ್ಬಹಿಃ ।
ಪದಾತಿರಗ್ರೇ ತಸ್ಯಾಭೂದ್ಯವನಸ್ಯ ಜನಾರ್ದನಃ ॥೧೩॥

ಈ ಕಾಲಯವನನು ಬಂದುದನ್ನು ತಿಳಿದು ಕೃಷ್ಣನು ಪಟ್ಟಣದಿಂದ ಹೊರಕ್ಕೆ ಬಂದು ಆ ಕಾಲಯವನನ ಮುಂದುಗಡೆಯಲ್ಲಿ ಪಾದಚಾರಿಯಾಗಿ ಬಂದು ನಿಂತನು.

ಪೀತಾಂಬರಧರಃ ಶ್ರೀಮಾನ್ಪ್ರಹಸನ್ ಮಧುಸೂದನಃ ।
ತಂ ದೃಷ್ಟ್ವಾ ಪುರತೋ ಯಾಂತಂ ಕೃಷ್ಣಂ ಕಮಲಲೋಚನಂ ॥
ಯವನೋಽಪಿ ಪದಾತಿಸ್ಸನ್ ಪೃಷ್ಠತೋಽನುಗತಃ ಖಲಃ ।

ಕಮಲದಂತೆ ಕಣ್ಣುಳ್ಳ ಆ ಕೃಷ್ಣನು ಪೀತಾಂಬರವನ್ನು ಧರಿಸಿ ಮುಗುಳು ನಗೆಯಿಂದ ನಗುತ್ತಾ ಪಾದಚಾರಿಯಾಗಿ ಮುಂದೆ ಹೋಗುತ್ತಿರುವುದನ್ನು ಆ ನೀಚನಾದ ಕಾಲಯವನನು ನೋಡಿ ತಾನೂ ಪಾದಚಾರಿಯಾಗಿ ಆ ಕೃಷ್ಣನನ್ನು ಹಿಂದಟ್ಟಿ ಹೋದನು.

ಪ್ರಸುಪ್ತೋ ಯತ್ರ ರಾಜರ್ಷಿರ್ಮುಚುಕುಂದೋ ಮಹಾಬಲಃ॥೧೫॥
ಪ್ರಯಯೌ ಭಗವಾಂಸ್ತತ್ರ ಸಕಾಲಯವನೋ ಹರಿಃ ।
ತತ್ರೈವಾಂತರ್ದಧೇ ವಿಷ್ಣುರ್ಮುಚುಕುಂದಂ ಸಮೀಕ್ಷ್ಯ ಚ ॥೧೬॥

ಕಾಲಯವನನು ಕೃಷ್ಣನನ್ನು ಹೀಗೆ ಬೆನ್ನಟ್ಟಿಹೋಗುತ್ತಿರಲು, ಕೃಷ್ಣನು ಮಹಾಬಲಶಾಲಿಯಾದ ಮುಚುಕುಂದನೆಂಬ ರಾಜರ್ಷಿಯು ಮಲಗಿ ನಿದ್ರಿಸುತ್ತಿದ್ದ

ಸ್ಥಳಕ್ಕೆ ಹೋಗಿ ಆ ಮುಚುಕುಂದಋಷಿಯನ್ನು ಕಂಡು ಕೂಡಲೇ ಅಲ್ಲೇ ಅದೃಶ್ಯನಾದನು.

**ತತ್ರೈವ ಯವನಃ ಪ್ರಾಪ್ತಃ ಸುಪ್ತಭೂತಮಪಶ್ಯತ ।**
**ಮತ್ವಾ ತಂ ವಾಸುದೇವಂ ಸ ಪಾದೇನಾತಾಡಯನ್ನೃಪಂ ॥೩೭॥**

ಕಾಲಯವನನು ಅಲ್ಲಿಗೆ ಬಂದು ಮಲಗಿರುವ ಮನುಷ್ಯನನ್ನು ಕಂಡು ಅವನೇ ಕೃಷ್ಣನೆಂದು ತಿಳಿದು ಆ ರಾಜನನ್ನು ಕಾಲಿನಿಂದ ಒದ್ದನು.

**ಪ್ರಬುದ್ಧಃ ಕ್ರೋಧರಕ್ತಾಕ್ಷಸ್ತಂ ದದಾಹ ಮಹಾಬಲಃ ।**
**ತಂ ದಗ್ಧ್ವಾ ಮುಚುಕುಂದೋಽಥ ದದರ್ಶ ಕಮಲೇಕ್ಷಣಂ ॥೩೮॥**

ಮಹಾಬಲಿಷ್ಠನಾದ ಆ ಮುಚುಕುಂದನು ಎಚ್ಚರಗೊಂಡು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಆ ಕಾಲಯವನನನ್ನು ನೋಡಿದಕೂಡಲೇ ಅವನು ಸುಟ್ಟುಹೋದನು. ಅನಂತರದಲ್ಲಿ ಅವನು, ಕಮಲದಂತಿರುವ ಕಣ್ಣುಗಳುಳ್ಳ ಕೃಷ್ಣನನ್ನು ನೋಡಿದನು.

**ವಾಸುದೇವಂ ಸುದೇವೇಶಂ ಪ್ರಣಮ್ಯ ಪ್ರಸ್ಥಿತೋ ವನಂ ।**
**ಜಗಾಮ ದ್ವಾರಕಾಂ ಕೃಷ್ಣೋ ಬಲದೇವಸಮನ್ವಿತಃ ॥೩೯॥**

ಮುಚುಕುಂದರಾಜನು ದೇವೇಶನಾದ ಕೃಷ್ಣನಿಗೆ ನಮಸ್ಕಾರಮಾಡಿ ತಪಸ್ಸು ಮಾಡಲು ಕಾಡಿಗೆ ಹೋದನು. ಕೃಷ್ಣನೂ ಸಹ ಬಲರಾಮನೊಡನೆ ದ್ವಾರಕಾ ಪಟ್ಟಣಕ್ಕೆ ಬಂದನು. ಹೀಗೆ ರಕ್ತಪಾತವಿಲ್ಲದೆ ತನ್ನವರನ್ನು ಕಾಪಾಡಿ ಶತ್ರುವನ್ನೂ ಸಂಹರಿಸಿದನು.

**ಉಗ್ರಸೇನಂ ನೃಪಂ ಕೃತ್ವಾ ವಿಜಹಾರ ಯಥಾರುಚಿ ।**
**ಅಹರದ್ರುಕ್ಮಿಣೀಂ ಕಾಮಂ ಶಿಶುಪಾಲಸ್ವಯಂವರಾತ್ ॥೪೦॥**

ಕೃಷ್ಣನು ಉಗ್ರಸೇನನನ್ನು ದೊರೆಯನ್ನಾಗಿ ಮಾಡಿ, ತನ್ನಿಷ್ಟಬಂದಂತೆ ವಿಹಾರಮಾಡಿಕೊಂಡಿದ್ದನು. ಸ್ವಯಂವರದಲ್ಲಿ ಶಿಶುಪಾಲನು ಮದುವೆಮಾಡಿಕೊಳ್ಳಬೇಕೆಂದಿದ್ದರೂ ತನ್ನಲ್ಲಿ ಅನುರಕ್ತಳಾಗಿದ್ದ ರುಕ್ಮಿಣಿಯನ್ನು ಕೃಷ್ಣನು ತಾನೇ ಅಪಹಾರಮಾಡಿದನು.

ರಾಕ್ಷಸೇನ ವಿವಾಹೇನ ಚಕ್ರೇ ದಾರವಿಧಿಂ ಹರಿಃ ।
ತತೋ ಜಾಂಬವತೀಂ ಸತ್ಯಾಂ ಮಿತ್ರವಿಂದಾಂ ಚ ಭಾಮಿನೀಂ ॥೪೧॥

ಕಾಳಿಂದೀಂ ಲಕ್ಷ್ಮಣಾಂ ಭದ್ರಾಂ ತಥಾ ನಾಗ್ನಜಿತೀಂ ಶುಭಾಂ ।
ಪೃಥಕ್ಪೃಥಕ್ಸಮಾನೀಯಾಽಪ್ಯುಪಯೇಮೇ ಜನಾರ್ದನಃ ॥೪೨॥

ಕೃಷ್ಣನು ರಾಕ್ಷಸವಿವಾಹಕ್ರಮದಿಂದ ರುಕ್ಮಿಣಿಯನ್ನು ಮದುವೆಮಾಡಿಕೊಂಡನು. ಅನಂತರದಲ್ಲಿ ಜಾಂಬವತೀ, ಸತ್ಯಭಾಮಾ, ಮಿತ್ರವಿಂದಾ, ಕಾಳಿಂದೀ, ಲಕ್ಷ್ಮಣಾ, ಭದ್ರಾ, ನಾಗ್ನಿಜಿತೀ ಎಂಬ ಸ್ತ್ರೀಯರನ್ನು ಒಬ್ಬೊಬ್ಬರನ್ನಾಗಿ ಕರೆತಂದು ದುಷ್ಟರನ್ನು ಸಂಹರಿಸುವ ಕೃಷ್ಣನು ವಿವಾಹಮಾಡಿಕೊಂಡನು.

ಅಷ್ಟಾವೇವ ಮಹೀಪಾಲ ಪತ್ನ್ಯಃ ಪರಮಶೋಭನಾಃ ।
ಪ್ರಾಸೂತ ರುಕ್ಮಿಣೀ ಪುತ್ರಂ ಪ್ರದ್ಯುಮ್ನಂ ಚಾರುದರ್ಶನಂ ॥೪೩॥

ಎಲೈ ಜನಮೇಜಯರಾಜನೇ ಕೇಳು—ಕೃಷ್ಣನಿಗೆ ಮುಖ್ಯವಾಗಿ ಶೋಭನಾಂಗಿಯರಾದ ಎಂಟು ಜನ ಪತ್ನಿಯರಿದ್ದರು. ಅವರಲ್ಲಿ ರುಕ್ಮಿಣಿಯು ಸುಂದರನಾಗಿರುವ ಪ್ರದ್ಯುಮ್ನನೆಂಬ ಮಗನನ್ನು ಹೆತ್ತಳು.

ಜಾತಕರ್ಮಾದಿಕಂ ತಸ್ಯ ಚಕಾರ ಮಧುಸೂದನಃ ।
ಹೃತೋಽಸೌ ಸೂತಿಕಾಗೇಹಾಚ್ಛಂಬರೇಣ ಬಲೀಯಸಾ ॥೪೪॥

ಅನಂತರದಲ್ಲಿ ಕೃಷ್ಣನು ಆ ಬಾಲಕನಿಗೆ ಜಾತಕರ್ಮಾದಿಸಂಸ್ಕಾರಗಳನ್ನು ಮಾಡಿದನು. ಈ ಪ್ರದ್ಯುಮ್ನನೆಂಬ ಶಿಶುವನ್ನು ಬಲಿಷ್ಠನಾದ ಶಂಬರಾಸುರನು ಸೂತಿಕಾಗೃಹದಿಂದಲೇ ಕದ್ದೊಯ್ದನು.

ನೀತಶ್ಚ ಸ್ವಪುರೀಂ ಬಾಲೋ ಮಾಯಾವತ್ಯೈ ಸಮರ್ಪಿತಃ ।
ವಾಸುದೇವೋ ಹೃತಂ ದೃಷ್ಟ್ವಾ ಪುತ್ರಂ ಶೋಕಸಮನ್ವಿತಃ ॥೪೫॥

ಜಗಾಮ ಶರಣಂ ದೇವೀಂ ಭಕ್ತಿಯುಕ್ತೇನ ಚೇತಸಾ ।
ವೃತ್ರಾಸುರಾದಯೋ ದೈತ್ಯಾ ಲೀಲಯೈವ ಯಯಾ ಹತಾಃ ॥೪೬॥

ಶಂಬರಾಸುರನು ಆ ಮಗುವನ್ನು ತನ್ನ ಪಟ್ಟಣಕ್ಕೆ ಕರೆದುಕೊಂಡುಹೋಗಿ ಮಾಯಾವತಿಗೆ ಕೊಟ್ಟನು. ಕೃಷ್ಣನು ತನ್ನ ಮಗುವನ್ನು ಶಂಬರಾಸುರನು ಕದ್ದೊಯ್ದುದನ್ನು ನೋಡಿ ಪುತ್ರಶೋಕದಿಂದ ಕೂಡಿದವನಾಗಿ, ವೃತ್ರಾಸುರ, ರಕ್ತಬೀಜಾಸುರನೇ ಮೊದಲಾದ ದೈತ್ಯರನ್ನು ಅನಾಯಾಸದಿಂದ ಸಂಹರಿಸಿದ ದೇವಿಯನ್ನು ಭಕ್ತಿಭಾವವುಳ್ಳ ಮನಸ್ಸಿನಿಂದ ಶರಣುಹೊಂದಿದನು.

ತತೋಽಸೌ ಯೋಗಮಾಯಾಯಾಶ್ಚಕಾರ ಪರಮಾಂ ಸ್ತುತಿಂ ।
ವಚೋಭಿಃ ಪರಮೋದಾರೈರಕ್ಷರೈಃ ಸ್ತವನೈಃ ಶುಭೈಃ ॥೪೭॥

ಅನಂತರದಲ್ಲಿ ಕೃಷ್ಣನು ಸ್ಫುಟವಾಗಿಯೂ ಶ್ರಾವ್ಯವಾಗಿಯೂ ಇರುವ ಅಕ್ಷರಗಳಿಂದ ಕೂಡಿ ಮಂಗಳಕರವಾದ ವಾಕ್ಯಗಳಿಂದ ಸೇರಿರುವ ಕಲ್ಯಾಣಕರವಾದ ಸ್ತೋತ್ರಗಳಿಂದ ಯೋಗಮಾಯಾಸ್ವರೂಪಳಾದ ಆ ದೇವಿಯನ್ನು ಹೀಗೆ ಸ್ತುತಿಸಿದನು.

॥ ಶ್ರೀಕೃಷ್ಣ ಉವಾಚ ॥

ಮಾತರ್ಮಯಾತಿತಪಸಾ ಪರಿತೋಷಿತಾ ತ್ವಂ
ಪ್ರಾಗ್ಜನ್ಮನಿ ಪ್ರಸುಮನಾದಿಭಿರರ್ಚಿತಾಽಸಿ ।
ಧರ್ಮಾತ್ಮಜೇನ ಬದರೀವನಖಂಡಮಧ್ಯೇ
ಕಿಂ ವಿಸ್ಮೃತೋ ಜನನಿ ತೇ ತ್ವಯಿ ಭಕ್ತಿಭಾವಃ ॥೪೮॥

ಶ್ರೀಕೃಷ್ಣನು ಈ ರೀತಿಯಲ್ಲಿ ಸ್ತೋತ್ರಮಾಡಿದನು— ಓ ತಾಯಿಯೇ, ನಾನು ನನ್ನ ಹಿಂದಿನ ಜನ್ಮದಲ್ಲಿ ನಾರಾಯಣಋಷಿಯಾಗಿ ಅವತರಿಸಿದ್ದಾಗ ಉತ್ತಮವಾದ ತಪಸ್ಸಿನಿಂದ ನಿನ್ನನ್ನು ಸಂತೋಷಪಡಿಸಿರುತ್ತೇನೆ. ಅಷ್ಟೇ ಅಲ್ಲದೆ, ಆಗ ಧರ್ಮದೇವನ ಮಗನಾಗಿದ್ದ ನಾನು ಬದರೀವನಗಳ ಮಧ್ಯದಲ್ಲಿ ನಿನ್ನನ್ನು ಹೂವು ಮೊದಲಾದ ಅರ್ಚನಾಸಾಮಗ್ರಿಗಳಿಂದ ಪೂಜೆಯನ್ನೂ ಮಾಡಿರುತ್ತೇನೆ. ಹೀಗೆ ನಿನ್ನ ವಿಷಯದಲ್ಲಿ ನನಗೆ ಇರುವ ಭಕ್ತಿಭಾವವನ್ನು ನೀನು ಮರೆತಿರುವೆಯೋ ಏನು ?

ಸೂತೀಗೃಹಾದಪಹೃತಃ ಕಿಮು ಬಾಲಕೋ ಮೇ
ಕೇನಾಪಿ ದುಷ್ಟಮನಸಾಽಪ್ಯಥ ಕೌತುಕಾದ್ವಾ ।
ಮಾನಾಪಹಾರಕರಣಾಯ ಮಮಾದ್ಯ ನೂನಂ
ಲಜ್ಜಾ ತವಾಂಬ ಖಲು ಭಕ್ತಜನಸ್ಯ ಯುಕ್ತಾ ॥೪೯॥

ಓ ಮಾತೆಯೇ, ನನ್ನ ಮಗುವನ್ನು ಹೆರಿಗೆಮನೆಯಿಂದ ಯಾವನೋ ಒಬ್ಬ ದುಷ್ಟನು ಕುತೂಹಲಕ್ಕಾಗಿಯೇ ಅಪಹರಿಸಿರುವನೇನು ? ಇದರಿಂದ ನನ್ನಲ್ಲಿದ್ದ ಸಾಮರ್ಥ್ಯದ ಅಭಿಮಾನವು ಹೋಗಿದೆ. ಮತ್ತು ನನ್ನಲ್ಲಿ ಹಿಂದೆ ಇದ್ದ ಗರ್ವ ಅಹಂಭಾವಗಳಿಗಾಗಿ ನಾಚಿಕೆಯೂ ಉಂಟಾಗಿದೆ. ಓ ತಾಯಿಯೇ, ನೀನು ಹೀಗಾಗು ವಂತೆ ಮಾಡಿದುದು ಯುಕ್ತವೆಂದೇ ಭಾವಿಸುತ್ತಿದೇನೆ. ಏಕೆಂದರೆ ಕರ್ತೃತ್ವಸಾಮ ರ್ಥ್ಯದ ಅಭಿಮಾನಗರ್ವಗಳು ಇರುವವರೆಗೂ ಭಕ್ತಿಯು ಉತ್ತಮವಾದುದೂ ಫಲಕಾರಿ ಯಾದುದೂ ಆಗಲಾರದಲ್ಲವೇ ? ನಿನ್ನ ಭಕ್ತನಾದ ನನ್ನಲ್ಲಿ ನಿನಗೆ ಪ್ರೀತಿ ಇದ್ದುದ ರಿಂದಲೇ ನೀನು ಹೀಗೆ ನನ್ನ ಅಭಿಮಾನ, ಅಹಂಕಾರಗಳನ್ನು ನಿವಾರಿಸಿ ಉಪಕಾರ ಮಾಡಿರುವೆ ಎಂದು ಭಾವಿಸುತ್ತಿದೇನೆ.

**ದುರ್ಗೋ ಮಹಾನತಿತರಾಂ ನಗರೀ ಸುಗುಪ್ತಾ**
**ತತ್ರಾಪಿ ಮೇ ಸೂತಿಸದನಂ ಕಿಲ ಮಧ್ಯಭಾಗೇ ।**
**ಅಂತಃಪುರೇ ಚ ಪಿಹಿತಂ ನನು ಸೂತಿಗೇಹಂ**
**ಬಾಲೋ ಹೃತಃ ಖಲು ತಥಾಪಿ ಮಮೈವ ದೋಷಾತ್ ॥೫೦॥**

ನಾನು ಈಗಿರುವ ಪಟ್ಟಣವು ಬಲವಾದ ದುರ್ಗವು. ಅದಕ್ಕೆ ಉತ್ತಮವಾದ ರಕ್ಷಣಾವ್ಯವಸ್ಥೆಯೂ ಇರುತ್ತದೆ. ಅಲ್ಲದೆ ನನ್ನ ಮನೆಯು ಇಂಥಾ ನಗರದ ಮಧ್ಯ ಭಾಗದಲ್ಲಿರುತ್ತದೆ. ಆ ಮನೆಯ ಅಂತಃಪುರದಲ್ಲಿ ಸೂತಿಕಾಗೃಹವು ರಹಸ್ಯವಾಗಿಯೂ ಇರುವುದು. ಹೀಗೆ ಇದ್ದಾಗ್ಯೂ ನನ್ನ ಜನ್ಮಾಂತರದ ದುಷ್ಕರ್ಮದ ದೋಷದ ದೆಸೆಯಿಂದಲೇ ನನ್ನ ಮಗುವು ಕಳುವಾಗಿ ಹೋಗಿರುತ್ತದೆ.

**ನಾಹಂ ಗತಃ ಪರಪುರಂ ನ ಚ ಯಾದವಾಶ್ಚ**
**ರಕ್ಷಾವತೀಚ ನಗರೀ ಕಿಲ ವೀರವರ್ಯೈಃ ।**
**ಮಾಯಾ ತವೈವ ಜನನಿ ಪ್ರಕಟಪ್ರಭಾವಾ**
**ಮೇ ಬಾಲಕಃ ಪರಿಹೃತಃ ಕುಹಕೇನ ಕೇನ ॥೫೧॥**

ನಾನು ವಾಸಮಾಡುತ್ತಿರುವ ಈ ಊರನ್ನು ಬಿಟ್ಟು ಬೇರೆ ಯಾವ ಊರಿಗೂ ಹೋಗಿರಲಿಲ್ಲ. ನಗರವನ್ನು ರಕ್ಷಿಸುತ್ತಿರುವ ಯಾದವರು ಸಹ ಬೇರೆ ಕಡೆಗೆ ಹೋಗಿ ರಲಿಲ್ಲ. ಪಟ್ಟಣವೆಲ್ಲವೂ ಶೂರರಾದ ಭಟರಿಂದ ರಕ್ಷಣೆಮಾಡಲ್ಪಟ್ಟಿರುತ್ತದೆ. ಹೀಗಿರು ವಾಗಲೂ ಯಾವನೋ ಒಬ್ಬನು ಮೋಸದಿಂದ ಈ ನನ್ನ ಮಗುವನ್ನು ಅಪಹರಿಸಿರು

ತ್ತಾನೆ. ಇದನ್ನು ವಿಮರ್ಶಿಸಿ ನೋಡಿದರೆ ಈ ವಿಷಯದಲ್ಲಿ, ಓ ತಾಯಿಯೇ, ಪ್ರಸಿದ್ಧವಾದ ಮಹಿಮೆಯುಳ್ಳ ನಿನ್ನ ಮಾಯಾಬಲವು ಸಹಾಯವಾಗಿರಬೇಕೆಂದು ಊಹಿಸಬೇಕಾಗಿರುತ್ತದೆ. ಹಾಗಿಲ್ಲದಿದ್ದರೆ ಈ ಕೆಲಸವು ಸಾಧಾರಣವಾದ ವ್ಯಕ್ತಿಯಿಂದ ನಡೆಯುವುದು ಅಸಾಧ್ಯವಾದುದು.

**ನೋ ವೇದ್ಮ್ಯಹಂ ಜನನಿ ತೇ ಚರಿತಂ ಸುಗುಪ್ತಂ**
**ಕೋ ವೇದ ಮಂದಮತಿರಲ್ಪವಿದೇವ ದೇಹೀ ।**
**ಕ್ವಾಸೌ ಗತೋ ಮಮ ಭಟೈರ್ನ ಚ ವೀಕ್ಷಿತೋ ವಾ**
**ಹರ್ತಾಽಂಬಿಕೇ ಜವನಿಕಾ ತವ ಕಲ್ಪಿತೇಯಂ ॥೫೨॥**

ಓ ಜನನಿಯೇ, ನನ್ನನ್ನು ಲೋಕದಲ್ಲಿ ಸರ್ವಜ್ಞನೆಂದು ಜನಗಳು ತಿಳಿದಿರುವರು. ಹೀಗಿರುವಾಗ ನಾನಾದರೋ ನಿನ್ನ ಅತಿರಹಸ್ಯವಾದ ಚರಿತ್ರೆಯ ರೀತಿನೀತಿ ಉದ್ದೇಶಗಳನ್ನು ಸಮಗ್ರವಾಗಿ ತಿಳಿಯಲಾರೆನು. ಅಲ್ಪಜ್ಞನಾದ ಸಾಮಾನ್ಯಮನುಷ್ಯನು ಹೇಗೆತಾನೇ ನಿನ್ನ ಚರಿತ್ರೆಯನ್ನು ತಿಳಿಯಬಲ್ಲನು? ನನ್ನ ಮಗುವನ್ನು ಕದ್ದವನು ಎಲ್ಲಿಗೆ ಹೋದನು? ನನ್ನ ಕಡೆಯ ಯೋಧರು ಆ ಕಳ್ಳನನ್ನು ನೋಡುವುದಕ್ಕೂ ಕೂಡ ಆಗಲಿಲ್ಲವಲ್ಲ! ಓ ತಾಯಿಯೇ, ಹೀಗೆ ಆಗುವ ಇದೆಲ್ಲವೂ ನೀನು ಪ್ರಾಣಿಗಳ ವಿಷಯದಲ್ಲಿ ಹಾಕಿರುವ ಮಾಯೆಯ, ಅಜ್ಞಾನದ, ಅಲ್ಪಜ್ಞಾನದ ತೆರೆಯ ಮಹಿಮೆಯು!

**ಚಿತ್ರಂ ನ ತೇಽತ್ರ ಪುರತೋ ಮಮ ಮಾತೃಗರ್ಭಾ**
**ನ್ನೀತಸ್ತ್ವಯಾಽರ್ಧಸಮಯೇ ಕಿಲ ಮಾಯಯಾಽಸೌ ।**
**ಯಂ ರೋಹಿಣೀ ಹಲಧರಂ ಸುಷುವೇ ಪ್ರಸಿದ್ಧಂ**
**ದೂರೇ ಸ್ಥಿತಾ ಪತಿಪರಾ ಮಿಥುನಂ ವಿನಾಪಿ ॥೫೩॥**

ಓ ಮಾತೆಯೇ, ಈ ವಿಷಯದಲ್ಲಿ ಪ್ರಕಟವಾದ ನಿನ್ನ ಸಾಮರ್ಥ್ಯವು ಅಷ್ಟೇನೂ ಆಶ್ಚರ್ಯಕರವಲ್ಲವು. ಏಕೆಂದರೆ, ಇದಕ್ಕಿಂತಲೂ ಆಶ್ಚರ್ಯಕರವಾದ ಮತ್ತೊಂದು ಸಂಗತಿಯೂ ನೆರವೇರಿದೆ. ಅದೇನೆಂದರೆ, ನನ್ನ ಜನ್ಮಕ್ಕಿಂತ ಮುಂಚೆಯೇ ನನ್ನ ತಾಯಿಯ ಗರ್ಭದಿಂದ ಐದನೆಯ ತಿಂಗಳಿನಲ್ಲಿಯೇ ಬೇರೆಯ ಕಡೆಗೆ ಎಂದರೆ ರೋಹಿಣಿಯ ಗರ್ಭಕ್ಕೆ ಮುಂದೆ ಬಲರಾಮನೆಂದು ಪ್ರಸಿದ್ಧನಾದ ಶಿಶುವು ಸಾಗಿಸಲ್ಪಟ್ಟಿತು. ಪತಿವ್ರತೆಯಾದ ರೋಹಿಣಿಯು ಗಂಡನಿರುವ ಸ್ಥಳದಿಂದ

ದೂರದಲ್ಲಿದ್ದರೂ, ಪತಿಯ ಸಮಾಗಮವು ಇಲ್ಲದಿದ್ದರೂ ಈ ಶಿಶುವಿನಿಂದ ಗರ್ಭವನ್ನು ಧರಿಸಿ ಸಂಕರ್ಷಣನೆಂಬ ಹೆಸರಿನಿಂದ ಪ್ರಸಿದ್ಧನಾದ, ನೇಗಿಲೇ ಆಯುಧವಾಗಿ ಉಳ್ಳ ಬಲರಾಮನನ್ನು ಹೆತ್ತಳು. ಹೀಗೆ ಕೆಲಸಮಾಡಿರುವ ನಿನ್ನ ಮಾಯೆಯ ಸಾಮರ್ಥ್ಯವನ್ನು ನಾನು ಮನಗಂಡಿರುತ್ತೇನೆ. ಆದುದರಿಂದ ಗರ್ಭದಿಂದಲೇ ಮಗುವನ್ನು ತೆಗೆದುಕೊಂಡು ಹೋಗಬಲ್ಲ ನಿನ್ನ ಮಾಯೆಗೆ ಅಂತಃಪುರದ ಹೆರಿಗೆಮನೆಯಿಂದ ಮಗುವನ್ನು ತೆಗೆದುಕೊಂಡು ಹೋಗುವುದು ಹೆಚ್ಚು ಆಶ್ಚರ್ಯಕರವಾದುದೇನೂ ಅಲ್ಲವೆಂದು ಭಾವವು.

**ಸೃಷ್ಟಿಂ ಕರೋಷಿ ಜಗತಾಮನುಪಾಲನಂ ಚ**
**ನಾಶಂ ತಥೈವ ಪುನರಪ್ಯನಿಶಂ ಗುಣೈಸ್ತ್ವಂ ।**
**ಕೋ ವೇದ ತೇಽಂಬ ಚರಿತಂ ದುರಿತಾಂತಕಾರಿ**
**ಪ್ರಾಯೇಣ ಸರ್ವಮಖಿಲಂ ವಿಹಿತಂ ತ್ವಯೈತತ್ ॥೫೪॥**

ಓ ತಾಯಿಯೇ, ನೀನು ಎಲ್ಲ ಲೋಕಗಳನ್ನೂ ಸೃಷ್ಟಿಮಾಡುತ್ತೀಯೆ. ಅವುಗಳ ರಕ್ಷಣೆಯನ್ನೂ ನಿರ್ವಹಿಸುತ್ತೀಯೆ. ಹಾಗೆಯೇ ಆ ಲೋಕಗಳ ಕಾರ್ಯವಾದ ಮೇಲೆ ಅವುಗಳ ನಾಶವನ್ನೂ ಏರ್ಪಡಿಸುತ್ತೀಯೆ. ಈ ಸೃಷ್ಟಿಸ್ಥಿತಿಲಯಗಳನ್ನು ನೀನು ನಿನ್ನ ಮಾಯೆಯ ಸತ್ತ್ವರಜಸ್ತಮಸ್ಸೆಂಬ ಗುಣಗಳ ವೈಷಮ್ಯಗಳಿಂದ ಮಾಡುತ್ತಿರುತ್ತೀಯೆ. ಇಡಿಪ್ರಪಂಚಗಳ ಸೃಷ್ಟಿಸ್ಥಿತಿಲಯಗಳಂತಹ ಮಹಾಕಾರ್ಯಗಳನ್ನೇ ಲೀಲಾಜಾಲದಂತೆ ನೆರವೇರಿಸಬಲ್ಲ ನಿನ್ನ ಮಾಯಾಶಕ್ತಿಗೆ ನನ್ನ ಮನೆಯಲ್ಲಿ ನಡೆದಿರುವ ಮಗುವಿನ ಕಳ್ಳತನ ಮುಂತಾದವುಗಳೆಲ್ಲವೂ ಕೇವಲ ಲಘುವಾದ ಉದಾಹರಣೆಯಂತಹ ವಿಷಯಗಳು. ಆದರೂ ಅವೂ ನಿನ್ನ ಮಾಯೆಯಿಂದಲೇ ನಡೆದಿರುತ್ತವೆ. ನಿನ್ನ ಪಾಪನಾಶಕರವಾದ ಚರಿತ್ರೆಯ ನಡೆವಳಿಕೆಯಲ್ಲಿ ರೀತಿಕ್ರಮಗಳು ಹೀಗೆಯೇ ಇಷ್ಟೇ ಎಂಬುದನ್ನು ತಿಳಿಯಲು ಯಾರಿಗೆ ತಾನೇ ಸಾಧ್ಯವಾಗುತ್ತದೆ?

**ಉತ್ಪಾದ್ಯ ಪುತ್ರಜನನಪ್ರಭವಂ ಪ್ರಮೋದಂ**
**ದತ್ವಾ ಪುನರ್ವಿರಹಜಂ ಕಿಲ ದುಃಖಭಾರಂ ।**
**ತ್ವಂ ಕ್ರೀಡಸೇ ಸುಲಲಿತೈಃ ಖಲು ತೈರ್ವಿಹಾರೈ**
**ರ್ನೋ ಚೇತ್ಕಥಂ ಮಮ ಸುತಾಪ್ತಿರತಿರ್ವೃಥಾ ಸ್ಯಾತ್ ॥೫೫॥**

ಪುತ್ರನು ಹುಟ್ಟಿದುದರಿಂದ ಉಂಟಾಗುವ ಹರ್ಷವನ್ನು ನನಗೆ ಉಂಟುಮಾಡಿ, ಆಮೇಲೆ ಪುತ್ರವಿಯೋಗದಿಂದ ಅನುಭವಿಸಬೇಕಾದ ಹೆಚ್ಚಾದ ದುಃಖವನ್ನೂ ಕೊಟ್ಟು, ಹೀಗೆ ನೀನು ನಿನಗೆ ಮನೋಹರವಾದ ಮತ್ತು ಸುಲಭಸಾಧ್ಯಗಳಾದ ಇಂತಹ ಲೀಲೆಗಳಿಂದ ವಿಹರಿಸುತ್ತೀಯಲ್ಲವೇ ? ಹೀಗಲ್ಲದಿದ್ದರೆ ನನಗೆ ಮಗನನ್ನು ಹೊಂದಿದ್ದುದರಿಂದ ಉಂಟಾಗಿದ್ದ ಸುಖಪ್ರಾಪ್ತಿಯು ವ್ಯರ್ಥವಾದೀತು. ನನಗೆ ಹರ್ಷ ಮಾತ್ರವಲ್ಲದೆ ದುಃಖವೂ ಉಂಟಾಯಿತು. ಇವೆರಡರಲ್ಲಿಯೂ ಸಮತಾಜ್ಞಾನವು ನಿನ್ನ ಅನುಗ್ರಹದಿಂದ ನನ್ನಲ್ಲಿಯೂ ಉಂಟಾಗಲೆಂಬುದೇ ಉದ್ದೇಶವಲ್ಲವೇ ?

ಮಾತಾಽಸ್ಯ ರೋದಿತಿ ಭೃಶಂ ಕುರರೀವ ಬಾಲಾ
ದುಃಖಂ ತನೋತಿ ಮಮ ಸನ್ನಿಧಿಗಾ ಸದೈವ ।
ಕಷ್ಟಂ ನ ವೇತ್ಸಿ ಲಲಿತೇಽಪ್ರಮಿತಪ್ರಭಾವೇ
ಮಾತಸ್ತ್ವಮೇವ ಶರಣಂ ಭವಪೀಡಿತಾನಾಂ ॥೫೬॥

ಇದೆಲ್ಲವೂ ನಿನ್ನ ಮಾಯೆಯ ಸಾಮರ್ಥ್ಯದಿಂದುಂಟಾಯಿತೆಂದು ನಾನು ತಿಳಿಯುತ್ತೇನೆ. ಆದರೆ ಈ ಮಗುವಿನ ತಾಯಿಯು ಇನ್ನೂ ಚಿಕ್ಕವಳು. ಕುರರಪಕ್ಷಿಯಂತೆ ತುಂಬ ಅಳುತ್ತಿರುವಳು. ಅಲ್ಲದೆ ಅವಳು ನನ್ನ ಹತ್ತಿರದಲ್ಲಿರುತ್ತಾ ಯಾವಾಗಲೂ ಹೀಗೆ ಅಳುತ್ತಿರುವುದು ನನಗೂ ದುಃಖವನ್ನು ಹೆಚ್ಚಿಸುತ್ತದೆ. ಅಳತೆಗೆ ಸಿಕ್ಕದಿರುವ ಮಹಿಮೆಯುಳ್ಳ ಓ ಲಲಿತಾದೇವಿಯೇ, ಓ ತಾಯಿಯೇ, ಸುಖದುಃಖಗಳೆರಡೂ ಸಮನಾಗಿರುವ ನಿನಗೆ ಮಾತ್ರ ಅಜ್ಞಾನಿಗಳಾದ ನಮ್ಮ ಮನಸ್ಸಿನಲ್ಲಿರುವ ಕಷ್ಟವು ತಿಳಿಯುವುದಿಲ್ಲವೆಂದು ನಾವು ಭಾವಿಸಬೇಕಾಗಿದೆ. ಆದುದರಿಂದ ಹೇಗಾದರೂ ಇಂತಹ ಅಜ್ಞಾನದಿಂದ ಉಂಟಾಗಿರುವ ಕರ್ತೃತ್ವಾಭಿಮಾನ ಭೋಕ್ತೃತ್ವಾಭಿಮಾನಗಳನ್ನು ಹೊಂದುತ್ತಾ ಕ್ಲೇಶವನ್ನು ಅನುಭವಿಸುತ್ತಿರುವ ನಮ್ಮಂಥವರಿಗೆ ನೀನು ಹೊರತು ಬೇರೆ ರಕ್ಷಕರು ಯಾರೂ ಇಲ್ಲವು. ಆದುದರಿಂದ ನೀನೇ ನಮಗೆ ಗತಿಯು ಎಂದು ಭಾವವು.

ಸೀಮಾ ಸುಖಸ್ಯ ಸುತಜನ್ಮ ತದೀಯನಾಶೋ
ದುಃಖಸ್ಯ ದೇವಿ ಭುವನೇ ವಿಬುಧಾ ವದಂತಿ ।
ತತ್ಕಿಂ ಕರೋಮಿ ಜನನಿ ಪ್ರಥಮೇ ಪ್ರನಷ್ಟೇ
ಪುತ್ರೇ ಮಮಾದ್ಯ ಹೃದಯಂ ಸ್ಫುಟತೀವ ಮಾತಃ ॥೫೭॥

ಓ ದೇವಿಯೇ, ತಿಳಿದವರು ಈ ಲೋಕದಲ್ಲಿನ ಸುಖಗಳಲ್ಲಿ ಪುತ್ರಜನನದಿಂದ ಉಂಟಾಗುವ ಸುಖವು ಎಲ್ಲಕ್ಕಿಂತಲೂ ಮೇಲಾದುದೆಂದೂ, ಹಾಗೆಯೇ ದುಃಖಗಳಲ್ಲಿ ಪುತ್ರನಾಶಶೋಕವು ಎಲ್ಲಕ್ಕಿಂತಲೂ ಹೆಚ್ಚಾದುದೆಂದೂ ಹೇಳುತ್ತಾರೆ. ಓ ತಾಯಿಯೇ, ಈಗ ನನ್ನ ಮೊದಲನೆಯ ಮಗನೇ, ಕಳೆದುಹೋಗಿರುವುದರಿಂದ ನನ್ನ ಹೃದಯವು ಒಡೆದುಹೋಗುವಂತೆ ಕಾಣಬರುತ್ತಿದೆ. ನಾನು ಏನನ್ನು ಮಾಡಲಿ ?

**ಯಜ್ಞಂ ಕರೋಮಿ ತವ ತುಷ್ಟಿಕರಂ ವ್ರತಂ ವಾ**
**ದೈವಂ ಚ ಪೂಜನಮಥಾಖಿಲದುಃಖಹಾ ತ್ವಂ ।**
**ಮಾತಃ ಸುತೋऽತ್ರ ಯದಿ ಜೀವತಿ ದರ್ಶಯಾಶು**
**ತ್ವಂ ವೈ ಕ್ಷಮಾ ಸಕಲಶೋಕವಿನಾಶನಾಯ** ॥೫೪॥

ಓ ತಾಯಿಯೇ, ನೀನು ಎಲ್ಲ ಬಗೆಯ ದುಃಖಗಳನ್ನೂ ನಾಶಪಡಿಸಲು ಸಮರ್ಥಳಾಗಿರುತ್ತೀಯೆ. ನನ್ನ ಮಗುವು ಬದುಕಿರುವುದಾದರೆ ಅದನ್ನು ನನಗೆ ಬೇಗ ತೋರಿಸು. ನೀನು ಸಂತುಷ್ಟಳಾದರೆ ಎಲ್ಲ ದುಃಖಗಳನ್ನೂ ನಾಶಪಡಿಸಬಲ್ಲೆ. ಆದುದರಿಂದ ನನ್ನ ವಿಷಯದಲ್ಲಿ ನಿನ್ನ ಮನಸ್ಸಿನಲ್ಲಿರಬಹುದಾದ ಕೋಪವು ಹೋಗಿ ಸಂತೋಷವುಂಟಾಗುವುದಕ್ಕಾಗಿ ಯಾವ ಅಂಬಾಯಜ್ಞವನ್ನೂ ವ್ರತವನ್ನೂ ದೇವತಾರ್ಚನೆಯನ್ನಾದರೂ ಮಾಡುತ್ತೇನೆ.

॥ ವ್ಯಾಸ ಉವಾಚ ॥

**ಏವಂ ಸ್ತುತಾ ತದಾ ದೇವೀ ಕೃಷ್ಣೇನಾಕ್ಲಿಷ್ಟಕರ್ಮಣಾ ।**
**ಪ್ರತ್ಯಕ್ಷದರ್ಶನಾ ಭೂತ್ವಾ ತಮುವಾಚ ಜಗದ್ಗುರುಂ** ॥೫೯॥

ವ್ಯಾಸನು ಹೇಳಿದನು—ಆಗ ದೇವಿಯು, ಸತ್ಕರ್ಮಗಳನ್ನು ಮಾಡುವವನಾದ ಕೃಷ್ಣನಿಂದ ಈ ರೀತಿಯಾಗಿ ಸ್ತೋತ್ರಮಾಡಲ್ಪಟ್ಟವಳಾಗಿ, ಲೋಕಕ್ಕೆ ಮಾರ್ಗದರ್ಶಕನೂ, ಉಪದೇಶಕನೂ ಆಗಿರುತ್ತಾ ಗುರುವಾಗಿರಬೇಕಾದ ಕೃಷ್ಣನನ್ನು ಕುರಿತು, ಪ್ರತ್ಯಕ್ಷಳಾಗಿ ಮುಂದೆ ಹೇಳುವ ಮಾತನ್ನು ಹೇಳಿದಳು.

॥ ಶ್ರೀದೇವ್ಯುವಾಚ ॥

**ಶೋಕಂ ಮಾ ಕುರು ದೇವೇಶ ಶಾಪೋऽಯಂ ತೇ ಪುರಾತನಃ ।**
**ತಸ್ಯ ಯೋಗೇನ ಪುತ್ರಸ್ತೇ ಶಂಬರೇಣ ಹೃತೋ ಬಲಾತ್** ॥೬೦॥

ದೇವಿಯು ಹೇಳಿದಳು—ಎಲೈ ದೇವತೆಗಳಿಗೂ ಅಧಿಪತಿಯಾದ ಕೃಷ್ಣನೇ, ವ್ಯಸನಪಡಬೇಡ. ಇದು ಹಿಂದೆ ನಿನಗೆ ಬಂದಿದ್ದ ಶಾಪದ ಫಲವು. ಆ ಶಾಪದಿಂದ ನಿನ್ನ ಮಗನು ಶಂಬರಾಸುರನಿಂದ ಬಲಾತ್ಕಾರವಾಗಿ ಅಪಹರಿಸಲ್ಪಟ್ಟಿರುತ್ತಾನೆ.

**ಅತಸ್ತೇ (ಸ್ಯ) ಷೋಡಶೇ ವರ್ಷೇ ಹತ್ವಾ ತಂ ಶಂಬರಂ ಬಲಾತ್ ।**
**ಆಗಮಿಷ್ಯತಿ ಪುತ್ರಸ್ತೇ ಮತ್ಪ್ರಸಾದಾನ್ನ ಸಂಶಯಃ ॥೬೧॥**

ಹೀಗೆ ಶಂಬರಾಸುರನು ಕದ್ದುಕೊಂಡು ಹೋಗಿರುವ ಕಾರಣ, ನಿನ್ನ ಮಗನು ತನ್ನ ಹದಿನಾರನೆಯ ವರ್ಷದಲ್ಲಿ ನನ್ನ ಅನುಗ್ರಹದಿಂದ ಆ ಶಂಬರಾಸುರನನ್ನು ಸಂಹರಿಸಿ ನಿನ್ನ ಸಮೀಪಕ್ಕೆ ಬರುವನು. ಈ ವಿಷಯದಲ್ಲಿ ಸಂಶಯಪಡಬೇಡ.

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾಽಂತರ್ದಧೇ ದೇವೀ ಚಂಡಿಕಾ ಚಂಡವಿಕ್ರಮಾ ।**
**ಭಗವಾನಪಿ ಪುತ್ರಸ್ಯ ಶೋಕಂ ತ್ಯಕ್ತ್ವಾಽಭವತ್ಸುಖೀ ॥೬೨॥**

ವ್ಯಾಸಋಷಿಯು ಹೇಳಿದನು--ಅಪಾರವೂ ಭಯಂಕರವೂ ಆದ ಪರಾಕ್ರಮವುಳ್ಳ ಆ ಚಂಡಿಕಾದೇವಿಯು ಹೀಗೆ ಹೇಳಿ ಅಲ್ಲಿಯೇ ಕಣ್ಮರೆಯಾದಳು. ಆಮೇಲೆ ಷಡ್ಗುಣೈಶ್ವರ್ಯಸಂಪನ್ನನಾದ ಕೃಷ್ಣನೂ ಕೂಡ ಪುತ್ರ ಶೋಕವನ್ನು ಬಿಟ್ಟು ಸುಖವಾಗಿದ್ದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ ಚತುರ್ವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಚತುರ್ಥಸ್ಕಂಧೇ

## ॥ ಪಂಚವಿಂಶೋಽಧ್ಯಾಯಃ ॥

### ಇಪ್ಪತ್ತೈದನೆಯ ಅಧ್ಯಾಯವು

॥ ರಾಜೋವಾಚ ॥

**ಸಂದೇಹೋ ಮೇ ಮುನಿಶ್ರೇಷ್ಠ ಜಾಯತೇ ವಚನಾತ್ತವ ।**
**ವೈಷ್ಣವಾಂಶೇ ಭಗವತಿ ದುಃಖೋತ್ಪತ್ತಿಂ ವಿಲೋಕ್ಯ ಚ ॥೧॥**

ಜನಮೇಜಯರಾಜನು—ಓ ವ್ಯಾಸಋಷಿಯೇ, ವಿಷ್ಣುವಿನ ಅಂಶದಿಂದ ಭೂಮಿಯಲ್ಲಿ ಅವತರಿಸಿರುವ ಮಹಾಮಹಿಮಶಾಲಿಯಾದ ಕೃಷ್ಣನಿಗೂ ದುಃಖ ಉಂಟಾದುದನ್ನು ಕೇಳಿ ನೀನು ಹೇಳಿದ ಮಾತಿನಿಂದ ನನ್ನ ಮನಸ್ಸಿನಲ್ಲಿ ಸಂದೇಹವು ಹುಟ್ಟುತ್ತಿದೆ.

**ನಾರಾಯಣಾಂಶಸಂಭೂತೋ ವಾಸುದೇವಃ ಪ್ರತಾಪವಾನ್ ।**
**ಕಥಂ ಸ ಸೂತಿಕಾಗಾರಾದ್ಧೃತೋ ಬಾಲೋ ಹರೇರಪಿ ॥೨॥**

ಮಹಾಪರಾಕ್ರಮಶಾಲಿಯಾದ ಶ್ರೀಕೃಷ್ಣನು ನಾರಾಯಣನ ಅಂಶದಿಂದ ಹುಟ್ಟಿದವನು. ಇಂಥ ಶ್ರೀಕೃಷ್ಣನ ಮಗುವೂ ಕೂಡ ಪ್ರಸೂತಿಗೃಹದಿಂದ ಹೇಗೆ ಅಪಹರಿಸಲ್ಪಟ್ಟಿತು ?

**ಸುಗುಪ್ತನಗರೇ ರಮ್ಯೇ ಗುಪ್ತೇಽಥ ಸೂತಿಕಾಗೃಹೇ ।**
**ಪ್ರವಿಶ್ಯ ತೇನ ದೈತ್ಯೇನ ಗೃಹೀತೋಽಸೌ ಕಥಂ ಶಿಶುಃ ॥೩॥**

ಪಟ್ಟಣದಲ್ಲಿ ಎಲ್ಲ ಕಡೆಯಲ್ಲಿಯೂ ಕಾವಲಿರುವಾಗ, ಮತ್ತು ಸೂತಿಕಾ ಗೃಹವೂ ಚನ್ನಾಗಿ ರಕ್ಷಿಸಲ್ಪಟ್ಟಿರುವಾಗ ಆ ಶಂಬರಾಸುರನು ಕೃಷ್ಣನ ಮನೆಯನ್ನು ಹೇಗೆ ಪ್ರವೇಶಿಸಿ ಮಗುವನ್ನು ಕದ್ದುಕೊಂಡುಹೋದನು ?

**ನ ಜ್ಞಾತೋ ವಾಸುದೇವೇನ ಚಿತ್ರಮೇತನ್ಮಮಾದ್ಭುತಂ ।**
**ಜಾಯತೇ ಮಹದಾಶ್ಚರ್ಯಂ ಚಿತ್ತೇ ಸತ್ಯವತೀಸುತ ॥೪॥**

ಓ ಸತ್ಯವತೀಪುತ್ರನಾದ ವ್ಯಾಸಋಷಿಯೇ, ಆ ಮಗುವನ್ನು ಕದ್ದವನು ಇಂಥವನೆಂದು ಕೃಷ್ಣನಿಗೆ ತಿಳಿಯಲಿಲ್ಲವೇ? ಇದು ನನ್ನ ಮನಸ್ಸಿನಲ್ಲಿ ಬಹಳ ಆಶ್ಚರ್ಯವನ್ನುಂಟುಮಾಡುತ್ತಿದೆ.

**ಬ್ರೂಹಿ ತತ್ಕಾರಣಂ ಬ್ರಹ್ಮನ್ನ ಜ್ಞಾತಂ ಕೇಶವೇನ ಯತ್ ।**
**ಹರಣಂ ತತ್ರ ಸಂಸ್ಥೇನ ಶಿಶೋರ್ವಾ ಸೂತಿಕಾಗೃಹಾತ್ ॥೫॥**

ಶ್ರೀಕೃಷ್ಣನು ಮನೆಯಲ್ಲಿದ್ದಾಗ್ಯೂ ಈ ಮಗುವನ್ನು ಕದ್ದಿರುವುದೂ ಮತ್ತು ಕದ್ದವನು ಇಂಥವನೆಂಬುದು ಕೃಷ್ಣನಿಗೂ ಗೊತ್ತಾಗದೆ ಇರಲು ಕಾರಣವನ್ನು ನನಗೆ ತಿಳಿಸು.

॥ ವ್ಯಾಸ ಉವಾಚ ॥

**ಮಾಯಾ ಬಲವತೀ ರಾಜನ್ನರಾಣಾಂ ಬುದ್ಧಿಮೋಹಿನೀ ।**
**ಶಾಂಭವೀ ವಿಶ್ರುತಾ ಲೋಕೇ ಕೋ ವಾ ಮೋಹಂ ನ ಗಚ್ಛತಿ ॥೬॥**

ವ್ಯಾಸಋಷಿಯು ಹೇಳಿದನು—ಜನಮೇಜಯರಾಜನು ಮೊದಲನೆಯ ಸ್ಕಂಧದಲ್ಲಿ ಹೀಗೆಯೇ ಪ್ರಶ್ನೆಯನ್ನು ಮಾಡಿದಾಗ ವ್ಯಾಸಋಷಿಯು ಎಲ್ಲವೂ ಮಾಯಾಧೀನವಾದುದರಿಂದ ಬ್ರಹ್ಮಾದಿಗಳಿಗೂ ಸಂಶಯವು ಬರುತ್ತದೆ ಎಂದು ಉತ್ತರವನ್ನು ಕೊಟ್ಟಿರುತ್ತಾನೆ. ಪುನಃ ಪುನಃ ರಾಜನು ಹೀಗೆಯೇ ಪ್ರಶ್ನೆಯನ್ನು ಕೇಳಿದಾಗ ವ್ಯಾಸಋಷಿಯೂ ಒಂದುಸಾರಿ ಹೇಳಿದ ಉತ್ತರವನ್ನೇ ತಿರುಗಿ ತಿರುಗಿ ಹೇಳಿರುವನು. ಬಹುಕಾಲದಿಂದ ಬೇರೂರಿ ನಿಂತಿರುವ ಅಜ್ಞಾನವು ಒಂದಾವೃತ್ತಿ ಉಪದೇಶಮಾತ್ರದಿಂದ ತೊಲಗುವುದಿಲ್ಲವು. ಅದು ನಿರ್ಮೂಲವಾಗಿ ಹೋಗಬೇಕಾದರೆ ಅನೇಕಾವೃತ್ತಿ ತಿಳಿಯಹೇಳುತ್ತಿರಬೇಕು. ಅದರಂತೆ ಈಗ ಈ ಅಧ್ಯಾಯಾರಂಭದಲ್ಲಿ ರಾಜನು ತಿರುಗಿ ಅದೇ ಪ್ರಶ್ನೆಯನ್ನು ಕೇಳುವಲ್ಲಿ ಋಷಿಯು ಬೇಸರಪಡದೆ

ಹಿಂದಿನಂತೆಯೇ ಉತ್ತರವನ್ನು ಕೊಡುವನು. ' ವೇದೇಷು ಜಾಮಿತಾ ನಾಸ್ತಿ' ಎಂಬ ಸೂಕ್ತಿಯಂತೆ ಇದು ವೇದಗಳಲ್ಲಿಯೂ ಹೀಗೆಯೇ ಇರುತ್ತದೆ. ಆದರೆ ಬೇಸರವಾಗ ದಿರಲೆಂದು ಭಾಷಾಶೈಲಿ, ಕಥಾಸಂದರ್ಭ, ಹೇಳುವ ರೀತಿ ಇವುಗಳನ್ನು ತಕ್ಕಂತೆ ಬದಲಾಯಿಸಿ ಹೇಳಿರುತ್ತದೆ.

ಈ ಆದಿಶಕ್ತಿದೇವಿಯ ಸ್ವರೂಪವು ಬ್ರಹ್ಮ ವಿಷ್ಣು ರುದ್ರರಿಗೂ, ಅವರ ಸಹಧರ್ಮಿಣಿಯರಾದ ವಾಣೀ ಲಕ್ಷ್ಮೀ ಉಮಾದೇವಿಯರಿಗೂ ಮೂಲಕಾರಣ ವಾಗಿರುತ್ತಾ ಮೇಲಿನ ಅಂತಸ್ತಿನ ತತ್ತ್ವವಾಗಿದೆ ಎಂದು ನಿರೂಪಿಸುವುದು ಈ ಮಹಾ ಪುರಾಣದ ಮುಖ್ಯ ತಾತ್ಪರ್ಯವು. ಮೇಲೆ ೨೫, ೨೬ ನೆಯ ಪುಟಗಳನ್ನು ನೋಡಿ. ಈ ಮಾಯಾಶಕ್ತಿಯಿಂದ ಉಂಟಾಗಿರುವ ಸತ್ತ್ವರಜಸ್ತಮೋರೂಪವಾಗಿರುವ ಗುಣ ಗಳ ಪೈಕಿ ಒಂದೊಂದನ್ನು ಮುಖ್ಯವಾಗಿ ಮುಂದಾಗಿ ಪಡೆದಿರುವ ಉಪಾಧಿಯನ್ನು ಆಶ್ರಯಿಸಿ ತಾವೂ ಕ್ರಮವಾಗಿ ಆ ಗುಣಾಭಿಮಾನಿದೇವತೆಗಳಾಗಿರುತ್ತಾ ಬ್ರಹ್ಮವಿಷ್ಣು ಮಹೇಶ್ವರರು ಈ ಪ್ರಪಂಚದ ಸೃಷ್ಟಿಸ್ಥಿತಿಲಯರೂಪವಾದ ತಮ್ಮ ತಮ್ಮ ಕೆಲಸ ಗಳನ್ನು ನಡೆಯಿಸುತ್ತಿರುವರು. ಇಷ್ಟು ಮಾತ್ರಕ್ಕೆ ಇವರಿಗೆ ತಾವೇ ಸರ್ವಜ್ಞರೆಂಬ ಭ್ರಮವು ಬಹುಕಾಲದಿಂದ ಬರುತ್ತಿರುವುದು. ಜನಗಳೂ ಅನೇಕ ವಿಶೇಷಸಂದರ್ಭ ಗಳಲ್ಲಿ ಇವರನ್ನು ಸರ್ವಜ್ಞರೂ ಸರ್ವಶಕ್ತರೂ ಆದ ದೊಡ್ಡವರೆಂದು ತಿಳಿದು ಸ್ತೋತ್ರಮಾಡುತ್ತಿರುವರು. ಈ ಅಭಿಮಾನಮೋಹಗಳಿಂದ ಕೂಡಿದ ತಿಳಿವಳಿಕೆ ಯಿಂದಲೇ ಈ ಪ್ರಶ್ನೆಯು ಬರಲು ಅವಕಾಶವುಂಟಾಗುತ್ತಿರುತ್ತದೆ. ಅಲ್ಲದೆ ಅನಾದಿ ಕಾಲದಿಂದ ಬಂದಿರುವ ಅವರ ಅಭಿಮಾನವು ಒಂದಾವೃತ್ತಿ ತತ್ತ್ವವಿವರಣೆಯನ್ನು ಕೇಳುವ ಮಾತ್ರದಿಂದ ತೊಲಗುವುದಿಲ್ಲವು; ಅದನ್ನು ಅನೇಕಾವೃತ್ತಿ ಕೇಳುತ್ತಾ ಮನನಮಾಡುತ್ತಿರಬೇಕು. ಮತ್ತು ರಾಜನೂ ದೇವಿಯ ವಿಷಯದಲ್ಲಿ ದೊಡ್ಡ ಭಕ್ತನಾಗಿರುವ ಕಾರಣದಿಂದ ಆದರಾತಿಶಯವುಳ್ಳವನಾಗಿ ದೇವಿಯ ಮಹಿಮೆಯು ಜನರೆಲ್ಲರಿಗೂ ಚನ್ನಾಗಿ ತಿಳಿಯುವಂತೆ ಆಗುವುದಕ್ಕಾಗಿಯೂ ಪದೇ ಪದೇ ಒಂದೇ ಬಗೆಯ ಪ್ರಶ್ನೆಯನ್ನು ಬೇರೆಯ ಸಂದರ್ಭಗಳಲ್ಲಿ ಕೇಳುತ್ತಾ, ಅದಕ್ಕೆ ವ್ಯಾಸಋಷಿ ಯಿಂದ ಉತ್ತರವನ್ನು ಪಡೆಯುತ್ತಿರುತ್ತಾನೆ. ಈ ಅಧ್ಯಾಯದಲ್ಲಿಯೂ ರಾಮ ಕೃಷ್ಣಾದಿಗಳೂ ಸಹ ಈ ದೇವಿಯ ಅಂಶಾಂಶರಾಗಿರುವುದರಿಂದ ಅವಳ ಮಹಿಮೆಯನ್ನು ಚನ್ನಾಗಿ ತಿಳಿಯದೆ ಇರುವ ಕಾರಣದಿಂದ ಸರ್ವಜ್ಞರಲ್ಲವೆಂದೂ ಆದಿಶಕ್ತಿರೂಪಳಾದ ದೇವಿಯೇ ಸರ್ವಜ್ಞಳೂ ಸರ್ವಶಕ್ತಳೂ ಸರ್ವಕಾರಣಳೂ ಆಗಿದಾಳೆಂದೂ ತೋರಿಸಲು ವ್ಯಾಸಋಷಿಯು ದೇವಿಯ ಮಹಿಮೆಯನ್ನು ವಿಸ್ತಾರವಾಗಿ ಆಗಾಗ್ಗೆ ಹೇಳುತ್ತಿರುವನು.

ಎಲೈ ರಾಜನೆ ಕೇಳು— ಲೋಕದಲ್ಲಿ ಶಂಭುವಿನ ಮಾಯೆಯು ಬಲವತ್ತರವಾದುದು ಮತ್ತು ಅದು ಎಲ್ಲ ಪ್ರಾಣಿಗಳ ಎಲ್ಲ ಬಗೆಯ ವ್ಯವಹಾರಗಳನ್ನೂ ಆವರಿಸಿರುವುದು. ಆದುದರಿಂದ ಸರ್ವಸಾಮಾನ್ಯವಾದ ಈ ಮಾಯೆಯು ಮನುಷ್ಯರ ಬುದ್ಧಿಯನ್ನೂ ಮೋಹಗೊಳಿಸುತ್ತಲೇ ಇರುವುದು. ಈ ಕೆಲಸದಲ್ಲಿ ಇದು ಬಹಳ ಸಮರ್ಥವಾದುದೆಂದು ಪ್ರಸಿದ್ಧಿಯನ್ನು ಹೊಂದಿರುತ್ತದೆ. ಇದರ ಪ್ರಭಾವದಿಂದ ಈ ಲೋಕದಲ್ಲಿ ಯಾವ ಪ್ರಾಣಿಯು ತಾನೇ ಮೋಹಗೊಳ್ಳದಿರುವುದು?

**ಮಾನುಷಂ ಜನ್ಮ ಸಂಪ್ರಾಪ್ಯ ಗುಣಾಃ ಸರ್ವೇಽಪಿ ಮಾನುಷಾಃ ।**
**ಭವಂತಿ ದೇಹಜಾಃ ಕಾಮಂ ನ ದೇವಾ ನಾಸುರಾಸ್ತದಾ ॥೭॥**

ಆದುದರಿಂದ ದೇವತೆಗಳಾಗಲಿ ರಾಕ್ಷಸರಾಗಲಿ ಮನುಷ್ಯಜನ್ಮವನ್ನು ಹೊಂದಿದಾಗ ಅವರಲ್ಲಿ ಮನುಷ್ಯಶರೀರಸಂಬಂಧವಾದ ಗುಣದೋಷಗಳೆಲ್ಲವೂ ಪೂರ್ಣವಾಗಿ ಉಂಟಾಗುತ್ತವೆ. ಅವರವರ ಹಿಂದಿನ ಸ್ವಸ್ವರೂಪದ ಸ್ಫೂರ್ತಿಯು ಎಂದರೆ ದೇವತಾಭಾವವೂ, ಅಸುರಭಾವವೂ ಸಹ ಅಡಗಿರುತ್ತದೆಯೇ ಹೊರತು ಕೊಂಚವೂ ಮುಂದಾಗಿ ತೋರಲು ಅವಕಾಶವಿರುವುದಿಲ್ಲ. ಒಂದೊಂದು ಸಮಯದಲ್ಲಿ ತೋರಿದರೂ ಕೂಡಲೆ ಆ ದೇಹದ ಸ್ವಭಾವದಲ್ಲಿ ಅಡಗಿ ಮರೆಯಾಗಿರುತ್ತದೆ.

**ಕ್ಷುತ್ತೃಣ್ನಿಂದಾ ಭಯಂ ತಂದ್ರಾ ವ್ಯಾಮೋಹಃ ಶೋಕಸಂಶಯಃ ।**
**ಹರ್ಷಶ್ಚೈವಾಭಿಮಾನಶ್ಚ ಜರಾಮರಣಮೇವ ಚ ॥೮॥**

**ಅಜ್ಞಾನಂ ಗ್ಲಾನಿರಪ್ರೀತಿರೀರ್ಷ್ಯಾಽಸೂಯಾ ಮದಃ ಶ್ರಮಃ ।**
**ಏತೇ ದೇಹಭವಾ ಭಾವಾಃ ಪ್ರಭವಂತಿ ನರಾಧಿಪ ॥೯॥**

ಎಲೈ ರಾಜನೇ ಕೇಳು—ಅಂತಹ ಭಾವಗಳು ಯಾವುವೆಂದರೆ—ಹಸಿವು, ಬಾಯಾರಿಕೆ, ದೂಷಣೆ, ಭಯ, ಸೋಮಾರಿತನ, ತಪ್ಪುತಿಳಿವಳಿಕೆ, ದುಃಖ, ಸಂಶಯಜ್ಞಾನ, ಸಂತೋಷ, ಅಹಂಕಾರ, ಮುಪ್ಪು, ಮರಣ, ಅಜ್ಞಾನ, ಬಳಲಿಕೆ, ದ್ವೇಷ, ಅಸಹನೆ, ಹೊಟ್ಟೆಕಿಚ್ಚು, ಮದೋನ್ಮತ್ತತೆ, ಶ್ರಮ ಇವೆಲ್ಲವೂ ಮನುಷ್ಯನಾದವನಿಗೆ ಹುಟ್ಟುವಾಗಲೇ ಅನುಸರಿಸಿ ಬರುತ್ತವೆ. ಈ ಮೋಹವು ರಾಮಕೃಷ್ಣಾವತಾರಗಳಲ್ಲೂ ತಪ್ಪುವುದಿಲ್ಲವು. ಆದುದರಿಂದಲೇ

**ಯಥಾ ಹೇಮಮೃಗಂ ರಾಮೋ ನ ಬುಬೋಧ ಪುರೋಗತಂ ।**
**ಜಾನಕ್ಯಾ ಹರಣಂ ಚೈವ ಜಟಾಯುಮರಣಂ ತಥಾ  ॥೧೦॥**

ಶ್ರೀರಾಮನು ತನ್ನ ಎದುರಿಗೆ ಬಂದ ಚಿನ್ನದ ಮೃಗವನ್ನು ಮೋಸವೆಂದು ತಿಳಿಯಲಿಲ್ಲವು. ಹಾಗೆಯೇ ಸಿತಾಪಹರಣವನ್ನೂ ಜಟಾಯುವಿನ ಮರಣವನ್ನೂ ತಾನಾಗಿಯೇ ತಿಳಿಯಲಿಲ್ಲವು.

**ಅಭಿಷೇಕದಿನೇ ರಾಮೋ ವನವಾಸಂ ನ ವೇದ ಚ ।**
**ತಥಾ ನ ಜ್ಞಾತವಾನ್ ರಾಮಃ ಸ್ವಶೋಕಾನ್ಮರಣಂ ಪಿತುಃ  ॥೧೧॥**

ತನ್ನ ತಂದೆಯು ತನಗೆ ಯೌವರಾಜ್ಯಾಭಿಷೇಕವನ್ನು ಮಾಡುವುದಕ್ಕಾಗಿ ಗೊತ್ತುಮಾಡಿದ ದಿನದಲ್ಲಿಯೇ ರಾಮನು ತನಗೆ ವನವಾಸಪ್ರಾಪ್ತಿಯಾಗುವುದೆಂಬುವುದನ್ನೂ ಮತ್ತು ತನ್ನ ವಿಯೋಗದುಃಖದಿಂದ ತಂದೆಯು ಮರಣಹೊಂದುವನೆಂಬುದನ್ನೂ ಸಹ ತಿಳಿಯಲಾಗಲಿಲ್ಲವು.

**ಅಜ್ಞವದ್ವಿಚಚಾರಾಸೌ ಪಶ್ಯಮಾನೋ ವನೇ ವನೇ ।**
**ಜಾನಕೀಂ ನ ವಿವೇದಾಥ ರಾವಣೇನ ಹೃತಾಂ ಬಲಾತ್  ॥೧೨॥**

ವನವಾಸದಲ್ಲಿ ರಾಮನು ಸೀತೆಯನ್ನು ಕಾಣದೆ ಹುಡುಕುತ್ತಾ ಪ್ರತಿಯೊಂದು ಕಾಡಿನಲ್ಲಿಯೂ ಅಲೆದನು. ಆ ಮೇಲೆ ರಾವಣನು ಸೀತೆಯನ್ನು ಬಲಾತ್ಕಾರದಿಂದ ಅಪಹರಿಸಿದನೆಂಬುದನ್ನೂ ರಾಮನು ಮುಂಚಿತವಾಗಿ ತಾನೇ ತಿಳಿಯಲಾಗಲಿಲ್ಲವು.

**ಸಹಾಯಾನ್ವಾನರಾನ್ಕೃತ್ವಾ ಹತ್ವಾ ಶಕ್ರಸುತಂ ಬಲಾತ್ ।**
**ಪ್ರೇಷಯಾಮಾಸ ಸರ್ವಾಸು ದಿಕ್ಷು ತಾನ್ಕಪಿಕುಂಜರಾನ್  ॥೧೩॥**

**ಸಾಗರೇ ಸೇತುಬಂಧಂ ಚ ಕೃತ್ವೋತ್ತೀರ್ಯ ಸರಿತ್ಪತಿಂ ।**
**ಸಂಗ್ರಾಮಂ ಕೃತವಾನ್ ಘೋರಂ ದುಃಖಂ ಪ್ರಾಪ ರಣಾಜಿರೇ॥೧೪॥**

ಕಪಿಗಳ ಸಹಾಯವನ್ನು ಹೊಂದಿ, ವಾಲಿಯನ್ನು ಕೊಂದು, (ಎಲ್ಲ ದಿಕ್ಕುಗಳಿಗೂ ಸೀತೆಯ ಸಮಾಚಾರವನ್ನು ತಿಳಿಯಲು ಆಯಾಯ ಕಪಿಗಳನ್ನು ಕಳುಹಿಸಿ ಸೀತಾವೃತ್ತಾಂತವನ್ನು ತಿಳಿದು) ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಸಮುದ್ರವನ್ನು

ದಾಟಿ ಭಯಂಕರವಾದ ಯುದ್ಧವನ್ನು ಮಾಡಿದನು. ಮತ್ತು ಆ ಘೋರಯುದ್ಧದಲ್ಲಿ ಅನೇಕ ದುಃಖಗಳನ್ನು ಅನುಭವಿಸಿದನು. ಹೇಗೆಂದರೆ,

**ಬಂಧನಂ ನಾಗಪಾಶೇನ ಪ್ರಾಪ ರಾಮೋ ಮಹಾಬಲಃ ।**
**ಗರುಡಾನ್ಮೋಕ್ಷಣಂ ಪಶ್ಚಾದನ್ವಭೂದ್ರಘುನಂದನಃ ॥೧೫॥**

ಬಲಿಷ್ಠನಾದ ರಾಮನು ಯುದ್ಧದಲ್ಲಿ ನಾಗಪಾಶದಿಂದ ಬಂಧನವನ್ನು ಅನುಭವಿಸಿದನು. ಆ ಮೇಲೆ ಗರುಡನಿಂದ ಆ ನಾಗಪಾಶದಿಂದ ಬಿಡುಗಡೆಯನ್ನು ಹೊಂದಿದನು.

**ಅಹನದ್ರಾವಣಂ ಸಂಖ್ಯೇ ಕುಂಭಕರ್ಣಂ ಮಹಾಬಲಂ ।**
**ಮೇಘನಾದಂ ನಿಕುಂಭಂ ಚ ಕುಪಿತೋ ರಘುನಂದನಃ ॥೧೬॥**

ಅನಂತರದಲ್ಲಿ ಶ್ರೀರಾಮನು ಕೋಪಗೊಂಡು ರಾವಣ, ಕುಂಭಕರ್ಣ, ಮೇಘನಾದ, ನಿಕುಂಭ ಇವರೇ ಮೊದಲಾದ ರಾಕ್ಷಸರನ್ನು ಕೊಂದನು.

**ಅದೂಷ್ಯತ್ವಂ ಚ ಜಾನಕ್ಯಾ ನ ವಿವೇದ ಜನಾರ್ದನಃ ।**
**ದಿವ್ಯಂ ಚ ಕಾರಯಾಮಾಸ ಜ್ವಲಿತೇಽಗ್ನೌ ಪ್ರವೇಶನಂ ॥೧೭॥**

ದುಷ್ಟಶಿಕ್ಷಕನಾದ ವಿಷ್ಣುವಾದ ರಾಮನು ಈ ಮಾಯಾಪ್ರಭಾವದಿಂದಲೇ ಸೀತೆಯು ಪರಿಶುದ್ಧಳೆಂಬುವುದನ್ನು ತಿಳಿಯದೆ ಧರ್ಮಶಾಸ್ತ್ರದಲ್ಲಿ ಹೇಳಿರುವ ರೀತಿಯಿಂದ ದಿವ್ಯಪ್ರಮಾಣಕ್ಕೆ ಸೇರಿದ ಅಗ್ನಿಪ್ರವೇಶವನ್ನೂ ಸಹ ಅವಳಿಂದ ಮಾಡಿಸಿ ಲೋಕಕ್ಕೂ ಅವಳ ಪಾತಿವ್ರತ್ಯ ನಿಯಮವು ತಿಳಿಯುವಂತೆ ಮಾಡಿದನು.

**ಲೋಕಾಪವಾದಾಚ್ಚ ಪರಂ ತತಸ್ತತ್ಯಾಜ ತಾಂ ಪ್ರಿಯಾಂ ।**
**ಅದೂಷ್ಯಾಂ ದೂಷಿತಾಂ ಮತ್ವಾ ಸೀತಾಂ ದಶರಥಾತ್ಮಜಃ ॥೧೮॥**

ಮತ್ತು ದಶರಥನ ಮಗನಾದ ಆ ರಾಮನು ತನಗೆ ಪ್ರೀತಿಪಾತ್ರಳಾದ ಸೀತೆಯು ಪರಿಶುದ್ಧಳೆಂಬುದನ್ನು ಅವಳ ಅಗ್ನಿಪ್ರವೇಶದಿಂದ ತಾನು ತಿಳಿದಿದ್ದಾಗ್ಯೂ, ಅಪರಿಶುದ್ಧಳೆಂದು ದೂಷಣೆಯು ಸೀತೆಗೆ ಬಂದುದನ್ನು ತಿಳಿದು ಈ ಮಾಯಾ ಮಹಿಮೆಯಿಂದಲೇ ಜನಾಪವಾದಕ್ಕೆ ಹೆದರಿ ಆ ಸೀತೆಯನ್ನೂ ತ್ಯಾಗಮಾಡಿದನು.

**ನ ಜ್ಞಾತೌ ಸ್ವಸುತೌ ತೇನ ರಾಮೇಣ ಚ ಕುಶೀಲವೌ ।**
**ಮುನಿನಾ ಕಥಿತೌ ತೌ ತು ತಸ್ಯ ಪುತ್ರೌ ಮಹಾಬಲೌ ॥೧೯॥**

ಅಲ್ಲದೆ, ಶ್ರೀರಾಮನು ಕುಶಲವರೆಂಬ ಬಾಲಕರನ್ನು ತನ್ನ ಮಕ್ಕಳೆಂದು ಮೊದಲು ತಿಳಿದುಕೊಳ್ಳಲಿಲ್ಲವು. ಆ ಮೇಲೆ ಮಹಾಬಲಿಷ್ಠರಾದ ಆ ಹುಡುಗರು ನಿನ್ನ ಮಕ್ಕಳೆಂದು ವಾಲ್ಮೀಕಿಋಷಿಯು ರಾಮನಿಗೆ ಹೇಳಿದ ಮೇಲೆ ಆ ಅಂಶವನ್ನು ತಿಳಿದನು.

**ಪಾತಾಲಗಮನಂ ಚೈವ ಜಾನಕ್ಯಾ ಜ್ಞಾತವಾನ್ನ ಚ ।**
**ರಾಘವಃ ಕೋಪಸಂಯುಕ್ತೋ ಭ್ರಾತರಂ ಹಂತುಮುದ್ಯತಃ ॥೨೦॥**

ಎಲೈ ರಾಜನೇ ಕೇಳು—ಶ್ರೀರಾಮನು, ಸೀತೆಯು ಪಾತಾಳಲೋಕಕ್ಕೆ ಹೋದುದನ್ನೂ ತಿಳಿಯಲಿಲ್ಲವು. ಮತ್ತು ತನ್ನ ತಮ್ಮನಾದ ಲಕ್ಷ್ಮಣನನ್ನು ಕೋಪದಿಂದ ಕೊಲ್ಲುವುದಕ್ಕೂ ಸಹ ಸಿದ್ಧನಾದನು. ಇದೂ ಮಹಾಮಾಯೆಯ ಪ್ರಭಾವವೇ ಆಗಿದೆ.

**ಕಾಲಸ್ಯಾಗಮನಂ ಚೈವ ನ ವಿವೇದ ಖರಾಂತಕಃ ।**
**ಮಾನುಷಂ ದೇಹಮಾಶ್ರಿತ್ಯ ಚಕ್ರೇ ಮಾನುಷಚೇಷ್ಟಿತಂ ॥೨೧॥**

ಖರನೆಂಬ ರಾಕ್ಷಸನನ್ನು ಕೊಂದ ರಾಮನು ಯಮನು ತನ್ನಲ್ಲಿಗೆ ಬಂದುದನ್ನೂ ಸಹ ತಿಳಿಯಲಿಲ್ಲವು. ತನ್ನ ಪಾರಬ್ಧಕರ್ಮಾನುಸಾರವಾಗಿ ಮನುಷ್ಯಶರೀರವನ್ನು ಹೊಂದಿದ್ದುದರಿಂದ ಆ ಮನುಷ್ಯಜನ್ಮಕ್ಕೆ ಸ್ವಾಭಾವಿಕವಾದ ಅಜ್ಞಾನಕ್ಕೆ ಅನುರೂಪವಾದ ಕೆಲಸಗಳನ್ನೇ ಮಾಡಿದನು.

**ತಥೈವ ಮಾನುಷಾನ್ಭಾವಾನ್ನಾತ್ರ ಕಾರ್ಯಾ ವಿಚಾರಣಾ ।**
**ಪೂರ್ವಂ ಕಂಸಭಯಾತ್ಪ್ರಾಪ್ತೋ ಗೋಕುಲೇ ಯದುನಂದನಃ ॥**

ಅದರಂತೆಯೇ ಶ್ರೀಕೃಷ್ಣನೂ ಸಹ ಮನುಷ್ಯಜನ್ಮಕ್ಕೆ ಅನುರೂಪವಾದ ಅಲ್ಪಜ್ಞತೆ ಎಂದರೆ ಸ್ವಲ್ಪವಾದ ತಿಳಿವಳಿಕೆಯನ್ನು ಹೊಂದಿ ಅಜ್ಞಾನಸಂಶಯಮೋಹಾದಿಗಳಿಗೆ ವಶನಾಗಿದ್ದನು. ಕಂಸನ ಹೆದರಿಕೆಯಿಂದ ಬಾಲ್ಯದಲ್ಲಿ ಗೋಕುಲವನ್ನು ಸೇರಿ ಅಲ್ಲಿಯೇ ಇದ್ದನು.

**ಜರಾಸಂಧಭಯಾತ್ಪಶ್ಚಾದ್ದ್ವಾರವತ್ಯಾಂ ಗತೋ ಹರಿಃ ।**
**ಅಧರ್ಮಂ ಕೃತವಾನ್ಕೃಷ್ಣೋ ರುಕ್ಮಿಣ್ಯಾ ಹರಣಂ ಚ ಯತ್ ॥೨೩॥**

ಅಲ್ಲದೆ ಶ್ರೀಕೃಷ್ಣನು ಆಮೇಲೆ ಜರಾಸಂಧನ ಭಯದಿಂದ ದ್ವಾರಕಾಪಟ್ಟಣಕ್ಕೆ ಬಂದು ಸೇರಿದನು. ರುಕ್ಮಿಣಿಯನ್ನು ಅಪಹರಿಸಿ ಅಧರ್ಮವನ್ನೇ ಆಚರಿಸಿದನು. ಇದೆಲ್ಲವೂ ಆ ಮಹಾಮಾಯೆಯ ಪ್ರಭಾವದಿಂದಲೇ ಆಗಿದೆ.

**ಶಿಶುಪಾಲಹೃತಾಯಾಶ್ಚ ಜಾನನ್ ಧರ್ಮಂ ಸನಾತನಂ ।**
**ಶುಶೋಚ ಬಾಲಕಂ ಕೃಷ್ಣಃ ಶಂಬರೇಣ ಹೃತಂ ಬಲಾತ್ ॥೨೪॥**

ಈ ರುಕ್ಮಿಣಿಯನ್ನು ಶಿಶುಪಾಲನು ವರಿಸಿದ್ದ ವಿಷಯವನ್ನು ತಾನು ತಿಳಿದಿದ್ದರೂ ಮತ್ತು ಸನಾತನಧರ್ಮವೇನೆಂಬುದನ್ನು ತಿಳಿದಿದ್ದರೂ ಕೂಡ ರುಕ್ಮಿಣಿಯನ್ನು ಅಪಹರಿಸಿ ಅಧರ್ಮಾಚರಣೆಯನ್ನು ಮಾಡಿದನು. ಮತ್ತು ಶಂಬರಾಸುರನು ಕದ್ದುಕೊಂಡು ಹೋದ ತನ್ನ ಮಗುವಿನ ವಿಷಯವಾಗಿ ಬಹಳ ವ್ಯಸನಪಟ್ಟನು.

**ಮುಮೋದ ಜಾನನ್ ಪುತ್ರಂ ತಂ ಹರ್ಷಶೋಕಯುತಸ್ತತಃ ।**
**ಸತ್ಯಭಾಮಾಜ್ಞಯಾ ಯತ್ತು ಯುಯುಧೇ ಸ್ವರ್ಗತಃ ಕಿಲ ॥೨೫॥**

ಆ ಮೇಲೆ ಶ್ರೀಕೃಷ್ಣನು ತನ್ನ ಮಗುವಿನ ವಿಷಯವನ್ನು ಆದಿಶಕ್ತಿಯನ್ನು ಸ್ತುತಿಸಿದ ಮೇಲೆ ಪ್ರತ್ಯಕ್ಷಳಾದ ಆ ದೇವಿಯಿಂದ ತಿಳಿದು ಸಂತೋಷಪಟ್ಟನು. ಆದುದರಿಂದ ಕೃಷ್ಣನೂ ಹರ್ಷಶೋಕಗಳಿಗೆ ಅಧೀನನಾಗಿರುವನೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಮತ್ತು ಸತ್ಯಭಾಮೆಯ ಮಾತಿಗೆ ಅನುಸಾರವಾಗಿ ಸ್ವರ್ಗಕ್ಕೆ ಹೋಗಿ ಅಲ್ಲಿ ಯುದ್ಧವನ್ನೂ ಮಾಡಿದನು.

**ಇಂದ್ರೇಣ ಪಾದಪಾರ್ಥಂ ತು ಸ್ತ್ರೀಜಿತತ್ವಂ ಪ್ರಕಾಶಯನ್ ।**
**ಜಹಾರ ಕಲ್ಪವೃಕ್ಷಂ ಯಃ ಪರಾಭೂಯ ಶತಕ್ರತುಂ ॥೨೬॥**

ಶ್ರೀಕೃಷ್ಣನು ಸತ್ಯಭಾಮೆಯ ಮಾತನ್ನು ಕೇಳಿಕೊಂಡು ಒಂದು ವೃಕ್ಷದ ಸಲುವಾಗಿ ಇಂದ್ರನ ಸಂಗಡ ಯುದ್ಧಮಾಡಿ ಅವನನ್ನು ಸೋಲಿಸಿ ಕಲ್ಪವೃಕ್ಷವನ್ನು ಅಪಹಾರಮಾಡಿದನು. ಇದರಿಂದ ಕೃಷ್ಣನು ಹೆಂಗಸರ ವ್ಯಾಮೋಹಕ್ಕೆ ಸಿಕ್ಕಿ ಅವರ ವಶವರ್ತಿಯೆಂಬುದನ್ನು ಸ್ಪಷ್ಟಪಡಿಸಿದಹಾಗಾಯಿತು.

**ಮಾನಿನೀಮಾನರಕ್ಷಾರ್ಥಂ ಹರಿಶ್ಚಿತ್ರಧರಃ ಪ್ರಭುಃ ।**
**ಬಧ್ವಾ ವೃಕ್ಷೇ ಹರಿಂ ಸತ್ಯಾ ನಾರದಾಯ ದದೌ ಪತಿಂ ॥೨೭॥**

ಇಷ್ಟೇ ಅಲ್ಲದೆ ಮಹಿಮಾವಂತನಾದರೂ ಕೃಷ್ಣನು ಹೆಂಗಸರ ಮಾನವನ್ನು ರಕ್ಷಿಸುವುದಕ್ಕಾಗಿ ವಿಚಿತ್ರವಾದ ಅನೇಕಕೆಲಸಗಳನ್ನು ಮಾಡಿದನು. ಸತ್ಯಭಾಮೆಯು ಕೃಷ್ಣನನ್ನು ಮರಕ್ಕೆ ಕಟ್ಟಿಹಾಕಿ ಗಂಡನಾಗಿದ್ದಾಗ್ಯೂ ಅವನನ್ನು ನಾರದನಿಗೆ ದಾನ ಮಾಡಿದಳು.

**ದತ್ವಾಽಥ ಕನಕಂ ಕೃಷ್ಣಂ ಮೋಚಯಾಮಾಸ ಭಾಮಿನೀ ।**
**ದೃಷ್ಟ್ವಾ ತು ಪುತ್ರಾನ್ಸುರುಗುಣಾನ್ ಪ್ರದ್ಯುಮ್ನಪ್ರಮುಖಾನಥ ॥೨೮॥**

**ಕೃಷ್ಣಂ ಜಾಂಬವತೀ ದೀನಾ ಯಯಾಚೇ ಸಂತತಿಂ ಶುಭಾಂ ।**
**ಸ ಯಯೌ ಪರ್ವತಂ ಕೃಷ್ಣಸ್ತಪಸ್ಯಾ ಕೃತನಿಶ್ಚಯಃ ॥೨೯॥**

ನಾರದಋಷಿಗೆ ಕೃಷ್ಣನನ್ನು ದಾನಕೊಟ್ಟನಂತರದಲ್ಲಿ ಸತ್ಯಭಾಮೆಯು ಕೃಷ್ಣನ ತೂಕಕ್ಕೆ ಸಮನಾದ ಚಿನ್ನವನ್ನು ನಾರದನಿಗೆ ಕೊಟ್ಟು ಕೃಷ್ಣನನ್ನು ಬಿಡಿಸಿದಳು. ಜಾಂಬವತಿಯು, ಪ್ರದ್ಯುಮ್ನನೇ ಮೊದಲಾದ ಗುಣವಂತರಾದ ಕೃಷ್ಣನ ಮಕ್ಕಳನ್ನು ನೋಡಿ ಅದರಂತೆ ತನಗೂ ಮಕ್ಕಳಾಗಬೇಕೆಂದು ದೈನ್ಯದಿಂದ ಕೃಷ್ಣನನ್ನು ಬೇಡಿಕೊಂಡಳು. ಜಾಂಬವತಿಗೆ ಮಕ್ಕಳಾಗಬೇಕೆಂದು ಉದ್ದೇಶಿಸಿ ತಪಸ್ಸನ್ನು ಮಾಡುವುದಕ್ಕಾಗಿ ಕೃಷ್ಣನು ತಪೋಯೋಗ್ಯವೂ ಪವಿತ್ರವೂ ಆಗಿರುವ ಪರ್ವತಕ್ಕೆ ಹೋದನು.

**ಉಪಮನ್ಯುಮುನಿರ್ಯತ್ರ ಶಿವಭಕ್ತಃ ಪರಂತಪಃ ।**
**ಉಪಮನ್ಯುಂ ಗುರುಂ ಕೃತ್ವಾ ದೀಕ್ಷಾಂ ಪಾಶುಪತೀಂ ಹರಿಃ ॥೩೦॥**
**ಜಗ್ರಾಹ ಪುತ್ರಕಾಮುಸ್ತು ಮುಂಡೀ ದಂಡೀ ಬಭೂವ ಹ ।**

ಶತ್ರುಗಳನ್ನು ನಾಶಮಾಡುವುದರಲ್ಲಿ ಸಮರ್ಥನಾದ ಕೃಷ್ಣನು ಶಿವಭಕ್ತನಾದ ಉಪಮನ್ಯು ಋಷಿಯು ಇದ್ದ ಪರ್ವತಕ್ಕೆ ಹೋಗಿ, ಅವನನ್ನು ತನ್ನ ಗುರುವನ್ನಾಗಿ ಮಾಡಿಕೊಂಡು, ಪಾಶುಪತದೀಕ್ಷೆಯನ್ನು ಹೊಂದಿ ತನಗೆ ಆ ಜಾಂಬವತಿಯಲ್ಲಿ ಮಗನು ಆಗಬೇಕೆಂಬ ಆಸೆಯಿಂದ ಮುಂಡಿಯಾಗಿಯೂ ಎಂದರೆ ವಪನವನ್ನು ಮಾಡಿಸಿಕೊಂಡು ಬೋಳುತಲೆಯುಳ್ಳವನಾಗಿಯೂ, ಕೈಯಲ್ಲಿ ದಂಡವನ್ನು ಹಿಡಿದವನಾಗಿಯೂ ಇರುತ್ತಾ ಆ ದೀಕ್ಷಾನಿಯಮಗಳನ್ನು ಪಾಲಿಸುವವನಾದನು.

ಉಗ್ರಂ ತತ್ರ ತಪಸ್ತೇಪೇ ಮಾಸಮೇಕಂ ಫಲಾಶನಃ ॥೩೦॥
ಜಜಾಪ ಶಿವಮಂತ್ರಂ ತು ಶಿವಧ್ಯಾನಪರೋ ಹರಿಃ ।

ಅನಂತರದಲ್ಲಿ ಶ್ರೀಕೃಷ್ಣನು ಆ ಪರ್ವತದಲ್ಲಿ ಮೊದಲನೆಯ ತಿಂಗಳಲ್ಲಿ ಆಹಾರಕ್ಕಾಗಿ ಫಲಗಳನ್ನು ಮಾತ್ರ ಭಕ್ಷಿಸುತ್ತಾ, ಶಿವಮಂತ್ರವನ್ನು ಜಪಮಾಡುತ್ತಾ ಶಿವಧ್ಯಾನಾಸಕ್ತನಾಗಿ ಘೋರವಾದ ತಪಸ್ಸನ್ನು ಮಾಡತೊಡಗಿದನು.

ದ್ವಿತೀಯೇ ತು ಜಲಾಹಾರಸ್ತಿಷ್ಠನ್ನೇಕಪದಾ ಹರಿಃ ॥೩೨॥
ತೃತೀಯೇ ವಾಯುಭಕ್ಷಸ್ತು ಪಾದಾಂಗುಷ್ಠಾಗ್ರಸಂಸ್ಥಿತಃ ।

ಎರಡನೆಯ ತಿಂಗಳಿನಲ್ಲಿ ಕೇವಲ ನೀರನ್ನು ಮಾತ್ರ ಕುಡಿದುಕೊಂಡು ಒಂದು ಕಾಲಿನಲ್ಲಿ ನಿಂತುಕೊಂಡು ತಪಸ್ಸನ್ನು ಮಾಡಿದನು. ಮೂರನೆಯ ತಿಂಗಳಲ್ಲಿ ವಾಯುವನ್ನು ಆಹಾರಮಾಡುವವನಾಗಿ ಕಾಲಿನ ಹೆಬ್ಬೆರಳಿನ ತುದಿಯಿಂದ ನಿಂತುಕೊಂಡು ತಪಸ್ಸನ್ನು ಮಾಡುತ್ತಿದ್ದನು.

ಷಷ್ಠೇ ತು ಭಗವಾನ್ರುದ್ರಃ ಪ್ರಸನ್ನೋ ಭಕ್ತಿಭಾವತಃ ॥೩೩॥
ದರ್ಶನಂ ಚ ದದೌ ತತ್ರ ಸೋಮಃ ಸೋಮಕಲಾಧರಃ ।
ಆಜಗಾಮ ವೃಷಾರೂಢಃ ಸುರೈರಿಂದ್ರಾದಿಭಿರ್ವೃತಃ ॥೩೪॥
ಬ್ರಹ್ಮವಿಷ್ಣುಯುತಃ ಸಾಕ್ಷಾದ್ಯಕ್ಷಗಂಧರ್ವಸೇವಿತಃ ।

ಶ್ರೀಕೃಷ್ಣನು ಈ ರೀತಿಯಲ್ಲಿ ಉಗ್ರವಾದ ತಪಸ್ಸನ್ನು ಮಾಡುತ್ತಿರಲು, ಆರನೆಯ ತಿಂಗಳಲ್ಲಿ ಷಡ್ಗುಣೈಶ್ವರ್ಯಸಂಪನ್ನನಾದ ಶಿವನು ಇವನ ಭಕ್ತಿಗೆ ಮೆಚ್ಚಿ, ಚಂದ್ರಕಲೆಯನ್ನು ಶಿರಸ್ಸಿನಲ್ಲಿ ಧರಿಸಿ ಉಮಾದೇವಿಯಿಂದ ಕೂಡಿರುವವನಾಗಿ ವೃಷಭಾರೂಢನಾಗಿ, ಇಂದ್ರನೇ ಮೊದಲಾದ ದೇವತೆಗಳಿಂದ ಪರಿವೃತನಾಗಿ, ಬ್ರಹ್ಮ ವಿಷ್ಣು ಇವರುಗಳಿಂದ ಕೂಡಿ ಯಕ್ಷಗಂಧರ್ವಾದಿಗಳಿಂದ ಸೇವೆಗೊಳ್ಳುತ್ತಾ ಶ್ರೀಕೃಷ್ಣನು ತಪಸ್ಸನ್ನು ಮಾಡುತ್ತಿರುವ ಸ್ಥಳಕ್ಕೆ ಬಂದು ಅವನಿಗೆ ಪ್ರತ್ಯಕ್ಷದರ್ಶನವನ್ನು ಅನುಗ್ರಹಿಸಿದನು.

ಸಂಬೋಧಯನ್ವಾಸುದೇವಂ ಶಂಕರಸ್ತಮುವಾಚ ಹ ॥೩೫॥
ತುಷ್ಟೋಽಸ್ಮಿ ಕೃಷ್ಣ ತಪಸಾ ತವೋಗ್ರೇಣ ಮಹಾಮತೇ ।
ದದಾಮಿ ವಾಂಛಿತಾನ್ಕಾಮಾನ್ ಬ್ರೂಹಿ ಯಾದವನಂದನ ॥೩೬॥

ಮಯಿ ದೃಷ್ಟೇ ಕಾಮಪೂರೇ ಕಾಮಶೇಷೋ ನ ಸಂಭವೇತ್ ।

ಈ ರೀತಿಯಲ್ಲಿ ಬಂದು ಶಂಕರನು ಕೃಷ್ಣನನ್ನು ಸಂಬೋಧಿಸಿ ಹೀಗೆ ಹೇಳಿದನು—ಎಲೈ ಬುದ್ಧಿಶಾಲಿಯಾದ ಕೃಷ್ಣನೇ, ನಾನು ನಿನ್ನ ಉಗ್ರವಾದ ತಪಸ್ಸಿನಿಂದ ಸಂತುಷ್ಟನಾಗಿರುತ್ತೇನೆ. ನಿನ್ನ ಮನಸ್ಸಿನ ಇಷ್ಟವನ್ನು ಹೇಳು. ನಾನು ಅದನ್ನು ಕೊಡುವೆನು. ಎಲ್ಲ ವಿಧವಾದ ಆಸೆಗಳನ್ನೂ ಪೂರ್ಣಮಾಡುವ ನನ್ನನ್ನು ನೀನು ನೋಡಿದ ಮೇಲೆ, ನಿನಗೆ ಬೇಕಾದ ಯಾವ ಆಶೆಯೂ ಪೂರ್ಣವಾಗದೇ ಉಳಿಯುವುದಿಲ್ಲವು ಎಂದು ಶಿವನು ಹೇಳಿದನು.

|| ವ್ಯಾಸ ಉವಾಚ ||

ತಂ ದೃಷ್ಟ್ವಾ ಶಂಕರಂ ತುಷ್ಟಂ ಭಗವಾನ್ದೇವಕೀಸುತಃ ॥೩೭॥
ಪಪಾತ ಪಾದಯೋಸ್ತಸ್ಯ ದಂಡವತ್ಪ್ರೇಮಸಂಯುತಃ ।

ವ್ಯಾಸಮುಷಿಯು ಹೇಳಿದನು—ದೇವಕೀದೇವಿಯ ಪುತ್ರನೂ ಷಡ್ಗುಣೈಶ್ವರ್ಯ ಸಂಪನ್ನನೂ ಆದ ಕೃಷ್ಣನು, ಈಶ್ವರನು ಸಂತುಷ್ಟನಾಗಿರುವುದನ್ನು ನೋಡಿ ಆನಂದದಿಂದ ಕೂಡಿ ಅವನ ಪಾದಗಳಿಗೆ ದಂಡದಂತೆ ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.

ಸ್ತುತಿಂ ಚಕಾರ ದೇವೇಶೋ ಮೇಘಗಂಭೀರಯಾ ಗಿರಾ ॥೩೮॥
ಸ್ಥಿತಸ್ತು ಪುರತಃ ಶಂಭೋರ್ವಾಸುದೇವಃ ಸನಾತನಃ ।

ಅನಂತರದಲ್ಲಿ ದೇವಶ್ರೇಷ್ಠನೂ ನಿತ್ಯನೂ ಆಗಿರುವ ಆ ಕೃಷ್ಣನು ಶಂಕರನ ಮುಂದುಗಡೆಯಲ್ಲಿ ನಿಂತುಕೊಂಡು ಮೇಘದಂತೆ ಗಂಭೀರವಾದ ಧ್ವನಿಯಿಂದ ಆ ಶಂಕರನನ್ನು ಹೀಗೆ ಸ್ತೋತ್ರಮಾಡಿದನು.

|| ಕೃಷ್ಣ ಉವಾಚ ||

ದೇವದೇವ ಜಗನ್ನಾಥ ಸರ್ವಭೂತಾರ್ತಿನಾಶನ ॥೩೯॥
ವಿಶ್ವಯೋನೇ ಸುರಾರಿಘ್ನ ನಮಸ್ತ್ರೈಲೋಕ್ಯಕಾರಕ ।
ನೀಲಕಂಠ ನಮಸ್ತುಭ್ಯಂ ಶೂಲಿನೇ ತೇ ನಮೋ ನಮಃ ॥೪೦॥

ಶ್ರೀಕೃಷ್ಣನು ಹೀಗೆ ಸ್ತೋತ್ರಮಾಡಿದನು— ಓ ದೇವದೇವನೇ, ನೀನು ಈ ಜಗತ್ತಿಗೆಲ್ಲ ಒಡೆಯನು, ಸಮಸ್ತಪ್ರಾಣಿಗಳ ದುಃಖವನ್ನೂ ನಾಶಮಾಡುವವನು, ಈ ಎಲ್ಲ ಪ್ರಪಂಚಕ್ಕೂ ಕಾರಣನು, ದೇವತೆಗಳ ಶತ್ರುಗಳಾದ ದೈತ್ಯರನ್ನು ಸಂಹಾರ ಮಾಡುವವನು, ಮೂರು ಲೋಕಗಳನ್ನೂ ನಿರ್ಮಾಣಮಾಡುವವನು, ಅಂತಹ ನಿನಗೆ ನಮಸ್ಕಾರವು. ಲೋಕರಕ್ಷಣೆಗಾಗಿ ಮಹಾವಿಷವನ್ನು ಆಕರ್ಷಿಸಿ ಕುಡಿದುದರಿಂದ ಕಪ್ಪಾದ ಕಂಠವುಳ್ಳ, ಓ ಶಂಕರನೇ, ಶೂಲಾಯುಧವನ್ನು ಧರಿಸಿ ದಯಮಾಡಿರುವ ನಿನಗೆ ಅನೇಕ ನಮಸ್ಕಾರಗಳು.

**ಶೈಲಜಾವಲ್ಲಭಾಯಾಥ ಯಜ್ಞಘ್ನಾಯ ನಮೋಽಸ್ತು ತೇ ।**
**ಧನ್ಯೋಽಹಂ ಕೃತಕೃತ್ಯೋಽಹಂ ದರ್ಶನಾತ್ತವ ಸುವ್ರತ ॥೪೧॥**

ಹಿಮವಂತನ ಕುಮಾರಿಗೆ ಪತಿಯಾದ ನಿನಗೆ ನಮಸ್ಕಾರವು. ದಕ್ಷನ ಯಜ್ಞವನ್ನು ನಾಶಪಡಿಸಿದ ನಿನಗೆ ನಮಸ್ಕಾರವು. ಒಳ್ಳೆಯ ನಿಯಮ ಪಾಲಕನಾದ ಓ ಶಿವನೇ, ನಿನ್ನ ದರ್ಶನದಿಂದ ನಾನು ಧನ್ಯನಾಗಿರುತ್ತೇನೆ. ಮತ್ತು ನಾನು ಮಾಡಬೇಕಾದ ಕರ್ತವ್ಯಗಳನ್ನು ಮಾಡಿದವನಾಗಿರುತ್ತೇನೆ.

**ಜನ್ಮ ಮೇ ಸಫಲಂ ಜಾತಂ ನತ್ವಾ ತೇ ಪಾದಪಂಕಜಂ ।**
**ಬದ್ಧೋಽಹಂ ಸ್ತ್ರೀಮಯೈಃ ಪಾಶೈಃ ಸಂಸಾರೇಽಸ್ಮಿನ್ಜಗದ್ಗುರೋ ॥**

ನಿನ್ನ ಪಾದಕಮಲವನ್ನು ನಮಸ್ಕರಿಸಿದ ನನ್ನ ಜನ್ಮವು ಸಾರ್ಥಕವಾಯಿತು. ಓ ಜಗದ್ಗುರುವೇ, ನಾನು ಈ ಸಂಸಾರದಲ್ಲಿ ಸ್ತ್ರೀವ್ಯಾಮೋಹವೆಂಬ ಪಾಶದಿಂದ ಕಟ್ಟಲ್ಪಟ್ಟಿರುತ್ತೇನೆ.

**ಶರಣಂ ತೇಽದ್ಯ ಸಂಪ್ರಾಪ್ತೋ ರಕ್ಷಣಾರ್ಥಂ ತ್ರಿಲೋಚನ ।**
**ಸಂಪ್ರಾಪ್ಯ ಮಾನುಷಂ ಜನ್ಮ ಖಿನ್ನೋಽಹಂ ದುಃಖನಾಶನ ॥೪೩॥**

ಓ ಮೂರು ಕಣ್ಣುಳ್ಳವನಾದ ಈಶ್ವರನೇ, ಈಗ ನಾನು ನಿನ್ನನ್ನು ನನ್ನ ರಕ್ಷಕನನ್ನಾಗಿ ಹೊಂದಿರುತ್ತೇನೆ. ಓ ದುಃಖವನ್ನು ನಾಶಮಾಡುವ ಸ್ವಾಮಿಯೇ, ಮನುಷ್ಯಜನ್ಮವನ್ನು ಹೊಂದಿ ನಾನು ದುಃಖವುಳ್ಳವನಾಗಿರುತ್ತೇನೆ.

**ತ್ರಾಹಿ ಮಾಂ ಶರಣಂ ಪ್ರಾಪ್ತಂ ಭವಭೀತಂ ಭವಾಽಧುನಾ ।**
**ಗರ್ಭವಾಸೇ ಮಹದ್ದುಃಖಂ ಪ್ರಾಪ್ತಂ ಮದನದಾಹಕ ॥೪೪॥**

ಮನ್ಮಥನನ್ನು ದಹಿಸಿದವನಾದ ನಿತ್ಯನಾಗಿರುವ ಓ ಶಿವನೇ, ನಾನು ನಿನ್ನನ್ನು ಶರಣುಹೊಂದಿರುವೆನು. ಸಂಸಾರದಿಂದ ಹೆದರಿರುವ ನನ್ನನ್ನು ಈಗ ನೀನು ಕಾಪಾಡು. ಗರ್ಭವಾಸದಲ್ಲಿದ್ದುಕೊಂಡು ಅಲ್ಲಿ ಒದಗಿದ ಬಹಳ ದುಃಖವನ್ನು ಅನುಭವಿಸಿದೆನು.

**ಜನ್ಮತಃ ಕಂಸಭಯಜಮನುಭೂತಂ ಚ ಗೋಕುಲೇ ।**
**ಜಾತೋಽಹಂ ನಂದಗೋಪಾಲೋ ವಲ್ಲವಾಜ್ಞಾಕರಸ್ತಥಾ ॥೪೫॥**

ಹುಟ್ಟಿದ ಕೂಡಲೆ ಕಂಸನ ಹೆದರಿಕೆಯಿಂದ ನಂದಗೋಕುಲದಲ್ಲಿ ದುಃಖವನ್ನು ಅನುಭವಿಸಿದೆನು. ನಾನು ನಂದನ ದನಗಳನ್ನು ಕಾಯುವವನಾಗಿರುತ್ತಾ ಗೊಲ್ಲರು ಅಪ್ಪಣೆಮಾಡುತ್ತಿದ್ದುದನ್ನು ಕೇಳುವವನಾಗಿದ್ದೆನು.

**ಗೋರಜಃ ಕೀರ್ಣಕೇಶಸ್ತು ಭ್ರಮನ್ವೃಂದಾವನೇ ಘನೇ ।**
**ಮ್ಲೇಚ್ಛರಾಜಭಯತ್ರಸ್ತೋ ಗತೋ ದ್ವಾರವತೀಂ ಪುನಃ ॥೪೬॥**

ದನಕರುಗಳ ಧೂಳಿನಿಂದ ಕೂಡಿ ಮಾಸಿದ ತಲೆಗೂದಲುಳ್ಳವನಾಗಿ ದೊಡ್ಡದಾಗಿ ದಟ್ಟವಾದ ಆ ಬೃಂದಾವನದಲ್ಲಿ ಅಲೆಯುತ್ತಿದ್ದೆನು. ಅನಂತರದಲ್ಲಿ ಮ್ಲೇಚ್ಛರಾಜನಾದ ಕಾಲಯವನನ ಭಯದಿಂದ ಹೆದರಿಕೊಂಡು ಆ ಮಧುರಾಪಟ್ಟಣವನ್ನು ಬಿಟ್ಟು ದ್ವಾರವತೀಪಟ್ಟಣಕ್ಕೆ ಹೋಗಿ ಸೇರಿಕೊಂಡೆನು.

**ತ್ಯಕ್ತ್ವಾ ಪಿತ್ರ್ಯಂ ಶುಭಂ ದೇಶಂ ಮಾಥುರಂ ದುರ್ಲಭಂ ವಿಭೋ ।**
**ಯಯಾತಿಶಾಪಬದ್ಧೇನ ತಸ್ಮೈ ದತ್ತಂ ಭಯಾದ್ವಿಭೋ ॥೪೭॥**

ಓ ಸ್ವಾಮಿಯೇ, ಪಿತೃಪಾರಂಪರ್ಯವಾಗಿ ಬಂದಿರುವ ಉತ್ತಮವಾದ ಸಾಮಾನ್ಯ ರಾಜರಿಗೆ ದೊರೆಯದೆ ನಮ್ಮ ವಶದಲ್ಲಿದ್ದ ಮಧುರಾನಗರವನ್ನು ಕಾಲಯವನನ ಭಯದಿಂದ ಬಿಟ್ಟದ್ದೂ ಆಯಿತು. ಯಯಾತಿರಾಜನ ಶಾಪದಿಂದ ಮಧುರಾಪಟ್ಟಣವನ್ನೂ ಅವನಿಗೆ ಬಿಟ್ಟುಕೊಟ್ಟೆನು.

**ರಾಜ್ಯಂ ಸುಪುಷ್ಟಮಪಿ ಚ ಧರ್ಮರಕ್ಷಾಪರೇಣ ಚ ।**
**ಉಗ್ರಸೇನಸ್ಯ ದಾಸತ್ವಂ ಕೃತಂ ವೈ ಸರ್ವದಾ ಮಯಾ ॥೪೮॥**

ಧರ್ಮವನ್ನು ರಕ್ಷಣೆಮಾಡುವುದರಲ್ಲಿ ಆಸಕ್ತಿಯಿಂದ, ಸಮೃದ್ಧವಾದ ರಾಜ್ಯವನ್ನು ಉಗ್ರಸೇನನಿಗೆ ಕೊಟ್ಟು, ಯಾವಾಗಲೂ ಅವನ ದಾಸತ್ವವನ್ನು ವಹಿಸಿ ಅವನು ಹೇಳಿದಂತೆ ಕೇಳಿಕೊಂಡಿದ್ದೆನು.

ರಾಜಾsಸೌ ಯಾದವಾನಾಂ ವೈ ಕೃತೋ ನಃ ಪೂರ್ವಜೈಃ ಕಿಲ ।
ಗಾರ್ಹಸ್ಥ್ಯಂ ದುಃಖದಂ ಶಂಭೋ ಸ್ತ್ರೀವಶ್ಯಂ ಧರ್ಮಖಂಡನಂ ॥
ಪಾರತಂತ್ರ್ಯಂ ಸದಾ ಬಂಧೋ ಮೋಕ್ಷವಾರ್ತಾsತ್ರ ದುರ್ಲಭಾ ।

ಈ ಉಗ್ರಸೇನನು ನಮ್ಮ ಪೂರ್ವೀಕರಿಂದ ಯಾದವರೆಲ್ಲರಿಗೂ ರಾಜನಾಗಿ ಮಾಡಲ್ಪಟ್ಟಿರುತ್ತಾನಲ್ಲವೇ ? ಶಂಭುವೇ, ನಾನು ಗೃಹಸ್ಥಧರ್ಮವನ್ನು ಆಶ್ರಯಿಸಿ ರುತ್ತೇನೆ. ಇದು ದುಃಖವನ್ನು ಉಂಟುಮಾಡುವುದೂ, ಸ್ತ್ರೀಯರಿಗೆ ವಶವಾಗಿರು ವುದೂ, ಧರ್ಮವನ್ನು ಹಾಳುಮಾಡುವುದೂ, ಇನ್ನೊಬ್ಬರಿಗೆ ಅಧೀನವಾಗಿರಬೇಕಾ ದುದರಿಂದ ಸ್ವಾತಂತ್ರ್ಯವನ್ನು ನಾಶಪಡಿಸುವುದೂ ಆಗಿರುವುದು. ಅಲ್ಲದೆ ಈ ಗೃಹಸ್ಥಧರ್ಮವು ಕಾಮುಪಾಶದಿಂದ ಕಟ್ಟಲ್ಪಟ್ಟಿರುವುದರಿಂದ ಮೋಕ್ಷದ ಮಾತಂತೂ ಈ ಗೃಹಸ್ಥನಾಗಿರುವ ನನಗೆ ದುರ್ಲಭವಾಗಿಯೇ ಇರುತ್ತದೆ.

ರುಕ್ಮಿಣ್ಯಾಸ್ತನಯಾನ್ದೃಷ್ಟ್ವಾ ಭಾರ್ಯಾ ಜಾಂಬವತೀ ಮಮ ॥೫೦॥
ಪ್ರೇರಯಾಮಾಸ ಪುತ್ರಾರ್ಥಂ ತಪಸೇ ಮದನಾಂತಕ ।
ಸಕಾಮೇನ ಮಯಾ ತಪ್ತಂ ತಪಃ ಪುತ್ರಾರ್ಥಮದ್ಯ ವೈ ॥೫೧॥

ನನ್ನ ಪತ್ನಿಯಾದ ಜಾಂಬವತಿಯು, ರುಕ್ಮಿಣಿಯ ಮಕ್ಕಳನ್ನು ನೋಡಿ ತನಗೂ ಮಕ್ಕಳಾಗಬೇಕೆಂದು ಬಯಸಿ, ನನ್ನನ್ನು ಪುತ್ರಾರ್ಥಿಯಾಗಿ ತಪಸ್ಸನ್ನು ಮಾಡಲು ಪ್ರೇರಿಸಿದಳು. ಮದನಾಂತಕನಾದ ಶಂಭುವೇ, ಈಗ ನಾನು ಪುತ್ರಾಭಿಲಾ ಷಿಯಾಗಿ ಕಾಮ್ಯವಾದ ತಪಸ್ಸನ್ನು ಮಾಡಿದೆನು.

ಲಜ್ಜಾ ಭವತಿ ದೇವೇಶ ಪ್ರಾರ್ಥನಾಯಾಂ ಜಗದ್ಗುರೋ ।
ಕಸ್ತ್ವಾಮಾರಾಧ್ಯ ದೇವೇಶಂ ಮುಕ್ತಿದಂ ಭಕ್ತವತ್ಸಲಂ ॥೫೨॥
ಪ್ರಸನ್ನಂ ಯಾಚತೇ ಮೂಢಃ ಫಲಂ ತುಚ್ಛಂ ವಿನಾಶಿ ಯತ್ ।

ಲೋಕಕ್ಕೆ ಗುರುವಾದ, ದೇವತೆಗಳಿಗೂ ಅಧಿಪತಿಯಾಗಿರುವ ಓ ಸ್ವಾಮಿಯೇ, ಭಕ್ತರಲ್ಲಿ ಪ್ರೀತಿಯುಳ್ಳವನಾಗಿಯೂ, ಮುಕ್ತಿಯನ್ನೂ ಕೊಡುವ ದೇವಾಧಿಪತಿಯಾ ಗಿಯೂ ಇರುವ ನಿನ್ನನ್ನು ಪೂಜಿಸಿ ಪ್ರಸನ್ನನನ್ನಾಗಿ ಮಾಡಿಕೊಂಡು, ನಿಕೃಷ್ಟವಾದ, ನಾಶವಾಗುವ ಅಲ್ಪಫಲವನ್ನು ಯಾವ ದಡ್ಡನುತಾನೇ ಕೇಳುವನು ? ಅಂತಹ ಅಲ್ಪ ಫಲವನ್ನು ಯಾಚಿಸಲು ನನಗೆ ನಾಚಿಕೆಯುಂಟಾಗಿರುತ್ತದೆ.

**ಸೋಽಯಂ ಮಾಯಾವಿಮೂಢಾತ್ಮಾ ಯಾಚೇ ಪುತ್ರಸುಖಂ ವಿಭೋ॥**
**ಕಾಮಿನ್ಯಾ ಪ್ರೇರಿತಃ ಶಂಭೋ ಮುಕ್ತಿದಂ ತ್ವಾಂ ಜಗತ್ಪತೇ ।**

ಲೋಕಕ್ಕೆ ಅಧಿಪತಿಯಾದ ಓ ಸ್ವಾಮಿಯೇ, ನಾನು ಆ ಮಾಯೆಯಿಂದ ಮೋಹಿತನಾಗಿ, ಹೆಂಗಸಿನಿಂದ ಪ್ರೇರಿತನಾಗಿ, ಮುಕ್ತಿಯನ್ನು ಕೊಡತಕ್ಕವನಾದ ನೀನು ಪ್ರತ್ಯಕ್ಷನಾಗಿರುವಾಗಲೂ ಅಲ್ಪವಾದ ಪುತ್ರಸುಖವನ್ನು ಬೇಡಿಕೊಳ್ಳುತ್ತೇನೆ.

**ಜಾನಾಮಿ ದುಃಖದಂ ಶಂಭೋ ಸಂಸಾರಂ ದುಃಖಸಾಧನಂ ॥೩೪॥**
**ಅನಿತ್ಯಂ ನಾಶಧರ್ಮಾಣಂ ತಥಾಪಿ ವಿರತಿರ್ನ ಮೇ ।**

ಓ ಶಂಭುವೇ ಈಗ ಈ ಸಂಸಾರವು ದುಃಖವನ್ನು ಕೊಡುವುದೆಂದೂ, ಮುಂದೆಯೂ ದುಃಖಕ್ಕೆ ಸಾಧನಭೂತವಾಗಿರುವುದೆಂತಲೂ, ಯಾವಾಗಲೂ ಇರತಕ್ಕದ್ದಲ್ಲವೆಂತಲೂ ನಾಶವನ್ನು ಹೊಂದುವ ಸ್ವಭಾವವುಳ್ಳದ್ದೆಂತಲೂ ನಾನು ತಿಳಿದಿರುತ್ತೇನೆ. ಹೀಗೆ ಇದ್ದರೂ ಈ ಸಂಸಾರದಿಂದ ನನಗೆ ವೈರಾಗ್ಯವು ಲಭಿಸಲಿಲ್ಲವು.

**ಶಾಪಾನ್ನಾರಾಯಣಾಂಶೋಽಹಂ ಜಾತೋಽಸ್ಮಿನ್ ಕ್ಷಿತಿಮಂಡಲೇ ॥**
**ಭೋಕ್ತುಂ ಬಹುತರಂ ದುಃಖಂ ಮಾಯಾಪಾಶೇನ ಯಂತ್ರಿತಃ ।**

ನಾನು ನಾರಾಯಣನ ಅಂಶದಿಂದ ಕೂಡಿದವನಾದರೂ ಈ ಭೂಮಿಯಲ್ಲಿ ಶಾಪದಿಂದ ಅನೇಕ ವಿಧವಾದ ದುಃಖವನ್ನು ಅನುಭವಿಸುವುದಕ್ಕಾಗಿ ಮಾಯಾಪಾಶದಿಂದ ಬದ್ಧನಾಗಿ ಹುಟ್ಟಿರುವೆನು.

॥ ವ್ಯಾಸ ಉವಾಚ ॥

**ಇತ್ಯುಕ್ತವಂತಂ ಗೋವಿಂದಂ ಪ್ರತ್ಯುವಾಚ ಮಹೇಶ್ವರಃ ॥೩೬॥**
**ಬಹವಸ್ತೇ ಭವಿಷ್ಯಂತಿ ಪುತ್ರಾಃ ಶತ್ರುನಿಷೂದನ ।**

ವ್ಯಾಸಋಷಿಯು ಹೇಳಿದನು—ಹೀಗೆ ಕೃಷ್ಣನು ಹೇಳುತ್ತಿರುವಲ್ಲಿ ಈಶ್ವರನು ಅನುಗ್ರಹದ ಪ್ರತ್ಯುತ್ತರವನ್ನು ಹೀಗೆ ಹೇಳಿದನು—ಶತ್ರುಗಳನ್ನು ನಾಶಮಾಡುವ ಎಲೈ ಕೃಷ್ಣನೇ, ನಿನಗೆ ನಿನ್ನ ಕೋರಿಕೆಯಂತೆ ಬಹಳ ಮಂದಿ ಮಕ್ಕಳಾಗುವರು.

**ಸ್ತ್ರೀಣಾಂ ಷೋಡಶಸಾಹಸ್ರಂ ಭವಿಷ್ಯತಿ ಶತಾರ್ಧಕಂ ॥೩೭॥**
**ತಾಸು ಪುತ್ರಾ ದಶ ದಶ ಭವಿಷ್ಯಂತಿ ಮಹಾಬಲಾಃ ।**

ನಿನಗೆ ಹದಿನಾರು ಸಾವಿರದ ಐವತ್ತು ಜನ ಹೆಂಡಿತಿಯರಾಗುವರು. ಅವರುಗಳಲ್ಲಿ ಪ್ರತಿಯೊಬ್ಬರಿಗೂ ಹತ್ತು ಹತ್ತು ಜನರಂತೆ ಬಲಶಾಲಿಗಳಾದ ಗಂಡು ಮಕ್ಕಳೂ ಹುಟ್ಟುವರು.

**ಇತ್ಯುಕ್ತ್ವೋಪರರಾಮಾಶು ಶಂಕರಃ ಪ್ರಿಯದರ್ಶನಃ ॥೫೮॥**
**ಉವಾಚ ಗಿರಿಜಾ ದೇವೀ ಪ್ರಣತಂ ಮಧುಸೂದನಂ ।**

ಹೀಗೆ ಹೇಳಿ, ಸೌಮ್ಯಾಕೃತಿಯುಳ್ಳ ಶಂಕರನು ಸುಮ್ಮನಾದನು. ಆಮೇಲೆ ಪಾರ್ವತೀದೇವಿಯೂ ನಮಸ್ಕಾರಮಾಡಿ ನಿಂತಿರುವ ಕೃಷ್ಣನಿಗೆ ಈ ರೀತಿಯಲ್ಲಿ ಹೇಳಿದಳು.

**ಕೃಷ್ಣ ಕೃಷ್ಣ ಮಹಾಬಾಹೋ ಸಂಸಾರೇಽಸ್ಮಿನ್ನರಾಧಿಪ ॥೫೯॥**
**ಗೃಹಸ್ಥಪ್ರವರೋ ಲೋಕೇ ಭವಿಷ್ಯತಿ ಭವಾನಿಹ ।**

ಎಲೈ ಮಹಾಬಾಹುಬಲವುಳ್ಳ ಜನರಕ್ಷಕನಾದ ಕೃಷ್ಣನೇ, ಈ ಲೋಕದಲ್ಲಿರುವ ಸಂಸಾರವಂದಿಗರಲ್ಲಿ ನೀನು ಮಾನ್ಯನಾದ ದೊಡ್ಡಗೃಹಸ್ಥನಾಗಿ ಬಾಳುವೆ.

**ತತೋ ವರ್ಷಶತಾಂತೇ ತು ದ್ವಿಜಶಾಪಾಜ್ಜನಾರ್ದನ ॥೬೦॥**
**ಗಾಂಧಾರ್ಯಾಶ್ಚ ತಥಾ ಶಾಪಾದ್ಭವಿತಾ ತೇ ಕುಲಕ್ಷಯಃ ।**

ನೂರು ವರ್ಷಗಳು ಕಳೆದನಂತರದಲ್ಲಿ ಎಲೈ ಕೃಷ್ಣನೇ, ಬ್ರಾಹ್ಮಣರ ಶಾಪದಿಂದಲೂ, ಗಾಂಧಾರಿಯ ಶಾಪದಿಂದಲೂ ಸಹ ನಿನ್ನ ವಂಶವು ನಾಶವಾಗುತ್ತದೆ.

**ಪರಸ್ಪರಂ ನಿಹತ್ಯಾಜೌ ಪುತ್ರಾಸ್ತೇ ಶಾಪಮೋಹಿತಾಃ ॥೬೧॥**
**ಗಮಿಷ್ಯಂತಿ ಕ್ಷಯಂ ಸರ್ವೇ ಯಾದವಾಶ್ಚ ತದಾಽಪರೇ ।**

ನಿನ್ನ ಮಕ್ಕಳು ಶಾಪದಿಂದ ಮೋಹಿತರಾಗಿ ಯುದ್ಧದಲ್ಲಿ ಅನ್ಯೋನ್ಯವಾಗಿ ಹೊಡೆದಾಡಿ, ಯಾದವರೊಡನೆ ಎಲ್ಲರೂ ನಾಶವನ್ನು ಹೊಂದುವರು.

**ಸಾನುಜಸ್ತ್ವಂ ತಥಾ ದೇಹಂ ತ್ಯಕ್ತ್ವಾ ಯಾಸ್ಯಸಿ ವೈ ದಿವಂ ॥೬೨॥**
**ಶೋಕಸ್ತತ್ರ ನ ಕರ್ತವ್ಯೋ ಭವಿತವ್ಯಂ ಪ್ರತಿ ಪ್ರಭೋ ।**

ನೀನೂ ಸಹ ನಿನ್ನ ತಮ್ಮನೊಡನೆ ಈ ದೇಹವನ್ನು ಬಿಟ್ಟು ಸ್ವರ್ಗವನ್ನು ಪಡೆಯುವೆ. ಎಲೈ ಕೃಷ್ಣನೇ, ದೈವಾಧೀನವಾಗಿ ಮುಂದೆ ಅವಶ್ಯವಾಗಿ ನಡೆಯುವ ಕಾರ್ಯಗಳ ವಿಷಯದಲ್ಲಿ ನೀನು ದುಃಖವನ್ನು ಪಡಬೇಕಾದುದಿಲ್ಲವು.

**ಅವಶ್ಯಂ ಭಾವಿ ಭಾವಾನಾಂ ಪ್ರತೀಕಾರೋ ನ ವಿದ್ಯತೇ ॥೬೩॥**
**ತತ್ರ ಶೋಕೋ ನ ಕರ್ತವ್ಯೋ ನೂನಂ ಮಮ ಮತಂ ಸದಾ ।**

ಅವಶ್ಯಕವಾಗಿ ನಡೆಯಬೇಕಾದ ಕಾರ್ಯಗಳ ವಿಷಯದಲ್ಲಿ ಪ್ರತೀಕಾರವು ಇಲ್ಲವೇ ಇಲ್ಲವು. ಎಂದರೆ ಮುಂದೆ ಹೀಗೆಯೇ ನಡೆಯಬೇಕೆಂದು ವಿಧಿನಿಯಮಿತ ವಾದ ಕಾರ್ಯವನ್ನು ಬೇರೆ ವಿಧವಾಗಿ ಆಗುವಂತೆ ಮಾಡಲು ಸಾಧ್ಯವೇ ಇಲ್ಲವು. ಆದುದರಿಂದ ಅವಶ್ಯಕವಾಗಿ ನಡೆಯಬೇಕಾದ ಕಾರ್ಯಗಳ ವಿಷಯದಲ್ಲಿ ವ್ಯಸನವನ್ನು ಮಾಡಲೇ ಕೂಡದು ಎಂದು ನನ್ನ ಮತವು.

**ಅಷ್ಟಾವಕ್ರಸ್ಯ ಶಾಪೇನ ಭಾರ್ಯಾಸ್ತೇ ಮಧುಸೂದನ ॥೬೪॥**
**ಚೌರೇಭ್ಯೋ ಗ್ರಹಣಂ ಕೃಷ್ಣ ಗಮಿಷ್ಯಂತಿ ಮೃತೇ ತ್ವಯಿ ।**

ಎಲೈ ಮಧುಸೂದನನೇ, ಕೇಳು. ನೀನು ಮರಣವನ್ನು ಹೊಂದಿದ ಮೇಲೆ ನಿನ್ನ ಹೆಂಡಿತಿಯರು ಅಷ್ಟಾವಕ್ರಋಷಿಯ ಶಾಪದಿಂದ ಕಳ್ಳರ ಸೆರೆಗೆ ಗುರಿಯಾಗುವರು.

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾಽಂತರ್ದಧೇ ಶಂಭುಃ ಸೋಮಃ ಸಸುರಮಂಡಲಃ ॥೬೫॥**
**ಉಪಮನ್ಯುಂ ಪ್ರಣಮ್ಯಾಥ ಕೃಷ್ಣೋಽಪಿ ದ್ವಾರಕಾಂ ಯಯೌ ।**

ವ್ಯಾಸಋಷಿಯು ಹೇಳಿದನು—ಈಶ್ವರನೂ, ಹೀಗೆ ಹೇಳಿದ ಪಾರ್ವತಿಯೊಡನೆಯೂ, ತನ್ನ ಜೊತೆಯಲ್ಲಿ ಬಂದಿದ್ದ ಸಮಸ್ತ ದೇವತೆಗಳೊಡನೆಯೂ, ಅಲ್ಲಿಯೇ ಅಂತರ್ಧಾನನಾದನು. ಕೃಷ್ಣನೂ ಸಹ ಉಪಮನ್ಯುಋಷಿಗೆ ನಮಸ್ಕಾರಮಾಡಿ ದ್ವಾರಕಾಪಟ್ಟಣಕ್ಕೆ ಹೊರಟುಬಂದನು.

**ತಸ್ಮಾದ್ಬ್ರಹ್ಮಾದಯೋ ರಾಜನ್ಸಂತಿ ಯದ್ಯಪ್ಯಧೀಶ್ವರಾಃ ॥೬೬॥**
**ತಥಾಪಿ ಮಾಯಾಕಲ್ಲೋಲಯೋಗಸಂಕ್ಷುಭಿತಾಂತರಾಃ ।**
**ತದಧೀನಾಃ ಸ್ಥಿತಾಃ ಸರ್ವೇ ಕಾಷ್ಠಪುತ್ರಲಿಕೋಪಮಾಃ ॥೬೭॥**

ಶ್ರೀಕೃಷ್ಣನಿಗೆ ಉಂಟಾದ ದುಃಖವನ್ನೂ ಅವನಿಗೆ ಇರುವ ಜ್ಞಾನವನ್ನೂ, ಶಂಕರನಿಂದ ಲಭಿಸಿದ ವರವನ್ನೂ ಇದುವರೆಗೆ ಚನ್ನಾಗಿ ವಿವರಿಸಿ ಹೇಳಿದ್ದರಿಂದ ದೇವಿಯು ಸರ್ವಜ್ಞಳು, ಸರ್ವಶಕ್ತಳು, ಬ್ರಹ್ಮ, ವಿಷ್ಣು, ರುದ್ರ, ಇಂದ್ರ ಮುಂತಾದ ಎಲ್ಲ ದೇವತೆಗಳಿಗಿಂತಲೂ ಉತ್ಕೃಷ್ಟಳು, ಎಲ್ಲರಿಗೂ ಕಾರಣಳೂ ಅಧಿಪತಿಯಾದ ವಳೂ ಮತ್ತು ಎಲ್ಲರೂ ಪೂಜೆಮಾಡಲು ಯೋಗ್ಯಳು ಎಂಬ ಅಂಶವು ದೃಢಪಟ್ಟಿತು. ಈ ಅಂಶವು ವೇದ ಮತ್ತು ಆಗಮಗಳಿಂದಲೂ ತಿಳಿದುಬರುತ್ತಿರುವ ಸಿದ್ಧಾಂತ ವಾಗಿಯೂ ಇರುತ್ತದೆ. ಎಲೈ ರಾಜನೇ ಕೇಳು—ಬ್ರಹ್ಮನೇ ಮೊದಲಾದ ತ್ರಿಮೂರ್ತಿ ಗಳೂ ಇತರ ಜೀವರೂ ನಮ್ಮೆಲ್ಲರಿಗಿಂತ ಶಕ್ತರು; ಈ ಬ್ರಹ್ಮಾಂಡಕ್ಕೆ ಅಧಿಪತಿಗಳೂ, ದಿಕ್ಕುಗಳಿಗೆ ಪಾಲಕರೂ ಆದ ದೇವತೆಗಳಧರ್ಮರಕ್ಷಣೆಗಾಗಿ ಇರತಕ್ಕವರು. ಆದರೆ ಅವರನ್ನೂ ಎಲ್ಲರಿಗೂ ಅಧಿಪತಿಗಳೆಂದು ಹೇಳಲಾಗುವುದಿಲ್ಲ. ಏಕೆಂದರೆ ಅವರೂ ಈ ಮಹಾಮಾಯೆಯ ವೇಗಕ್ಕೆ ಸಿಕ್ಕಿಕೊಂಡು ವ್ಯವಹರಿಸುತ್ತಾ, ಮರದಿಂದ ಮಾಡಿದ ಬೊಂಬೆಗಳು ಸೂತ್ರಧಾರಿಯಾದ ಆಟಗಾರನಿಗೆ ಅಧೀನವಾಗಿ ಇರುವಂತೆ, ಆ ಮಾಯೆಗೆ ಅಧೀನರಾಗಿರುವರು. ಆದುದರಿಂದ ಎಲ್ಲರಿಗಿಂತ ದೇವಿಯೇ ಸರ್ವಜ್ಞಳೂ ಸರ್ವಶಕ್ತಳೂ ಆಗಿರುವುದರಿಂದ ಉತ್ತಮಳೆಂದೂ, ಆ ಆದಿಶಕ್ತಿದೇವಿಯನ್ನು ಅನನ್ಯಭಕ್ತಿಯಿಂದ ಆರಾಧಿಸುವವರಿಗೆ ಐಹಿಕ, ಆಮುಷ್ಮಿಕಗಳಾದ ಅಭ್ಯುದಯಗಳನ್ನೂ ಕಡೆಗೆ ಮೋಕ್ಷ ವನ್ನೂ ಅನುಗ್ರಹಿಸುವವಳಾದ ಆ ದೇವಿಗೆ ಎಲ್ಲರೂ ಅಧೀನರೆಂದೂ ತಿಳಿಯಬೇಕು.

**ಯಥಾ ಯಥಾ ಪೂರ್ವಭವಂ ಕರ್ಮ ತೇಷಾಂ ತಥಾ ತಥಾ ।**
**ಪ್ರೇರಯತ್ಯನಿಶಂ ಮಾಯಾ ಪರಬ್ರಹ್ಮಸ್ವರೂಪಿಣೀ ॥೬೮॥**

ಸರ್ವೇಶ್ವರಿಯೂ ಸರ್ವಜ್ಞಳೂ ಆಗಿರುವ ದೇವಿಯು ಆಯಾಯ ಪ್ರಾಣಿಗಳ ಪೂರ್ವಜನ್ಮದ ಕರ್ಮಗಳು ಹೇಗೆ ಹೇಗೆ ಇರುತ್ತವೆಯೋ ಅದಕ್ಕನುಸಾರವಾಗಿ ಆಯಾಯ ಪ್ರಾಣಿಗಳು ತಮ್ಮ ಕರ್ಮಫಲಗಳನ್ನು ಅನುಭವಿಸಲು ಒದಗುವಂತೆ ಅವುಗಳನ್ನು ಪ್ರೇರಿಸುವಳು. ಆದುದರಿಂದ ಆ ಪ್ರಾಣಿಗಳ ಸುಖದುಃಖಗಳಿಗೆ ಅವೇ ಹೊಣೆಗಾರರಾಗಿರುತ್ತವೆ. ಮಾಯಾವಿಶಿಷ್ಟವಾದ ಪರಬ್ರಹ್ಮಸ್ವರೂಪಿಣಿಯಾಗಿರುವ ಈ ದೇವಿಗೆ ಕರ್ತೃತ್ವವು ಸ್ವೇಚ್ಛೆಯಾಗಿ ಸ್ವಾತಂತ್ರ್ಯದಿಂದಲೂ, ನಮ್ಮಂತೆಯೇ ಅಭಿಮಾನ ದಿಂದಲೂ, ಇರುವುದಿಲ್ಲವು. ಆಯಾಯ ಪ್ರಾಣಿಗಳ ಕರ್ಮಕ್ಕಧೀನವಾಗಿ ಭೋಕ್ತೃತ್ವವೂ ಅವರವರಿಗೇ ಇರುವ ಕಾರಣ ಅವರವರ ಕರ್ಮಗಳಿಗನುಸಾರವಾಗಿ ಜನ್ಮಮರಣಾದಿ ಗಳು ಸಂಭವಿಸುತ್ತಾ ಈ ಪ್ರಾಪಂಚಿಕವ್ಯವಹಾರವು ನಡೆಯುತ್ತಿರುತ್ತದೆ.

**ನ ವೈಷಮ್ಯಂ ನ ನೈರ್ಘೃಣ್ಯಂ ಭಗವತ್ಯಾಂ ಕದಾಚನ ।**
**ಕೇವಲಂ ಜೀವಮೋಕ್ಷಾರ್ಥಂ ಯತತೇ ಭುವನೇಶ್ವರೀ ॥೬೯॥**

ಆದುದರಿಂದ ಮಾಯೆಯೇ ಉಪಾಧಿಯಾಗಿ ಉಳ್ಳ ಪರಬ್ರಹ್ಮಸ್ವರೂಪಿಣಿಯಾಗಿರುವ ಈ ದೇವಿಗೆ ಆಯಾಯ ಪ್ರಾಣಿಗಳನ್ನು ಸುಖದುಃಖಾನುಭವಗಳಿಗೆ ಪ್ರೇರಿಸುವುದರಿಂದ ವೈಷಮ್ಯವಾಗಲಿ ಎಂದರೆ ಪಕ್ಷಪಾತವಾಗಲಿ, ನಿರ್ಘೃಣತ್ವವಾಗಲಿ ಎಂದರೆ ದಯೆ ಇಲ್ಲದ ಕ್ರೂರತನವಾಗಲಿ, ಯಾವಾಗಲೂ ಉಂಟಾಗುವುದಿಲ್ಲ. ಏಕೆಂದರೆ ಅವರವರ ಕರ್ಮಫಲವೆಲ್ಲವನ್ನೂ ಅವರವರು ಅನುಭವಿಸಿಕೊಂಡು ಬರುತ್ತಿದ್ದರೆ ಪ್ರಪಂಚವು ನಡೆದುಹೋಗುತ್ತಿರುವುದು. ಹೀಗೆಯೇ ಇದ್ದಲ್ಲಿ ಯಾರೂ ಮೋಕ್ಷವನ್ನು ಹೊಂದುವುದಕ್ಕೆ ಅವಕಾಶವೇ ಇಲ್ಲದೆ ಜಗತ್ತಿನ ಮಾಯೆಯಲ್ಲಿ ಎಲ್ಲರೂ ಅನಂತವಾಗಿ ಸಿಕ್ಕಿರಬೇಕಾಗುವುದು. ಜಗತ್ತೆಲ್ಲವೂ ಹೀಗಾದರೆ ಬಂಧಮೋಕ್ಷವ್ಯವಸ್ಥೆಗೆ ಅವಕಾಶವಿಲ್ಲದೆ ಹೋಗುತ್ತದೆ. ಆದುದರಿಂದ ದೇವಿಯು ಈ ಭಕ್ತರನ್ನು ಎಂದರೆ ಧರ್ಮನಿಷ್ಠರೂ ವಿವೇಕಿಗಳೂ ಆದ ಜೀವರನ್ನು ಫಲಕಾಮನೆ ಇಲ್ಲದೆ ಸತ್ಕರ್ಮಾಚರಣೆಯಲ್ಲಿ ಆಸಕ್ತರಾಗುವಂತೆಯೂ ಮಾಡುತ್ತಾ ಉದ್ಧಾರಮಾಡಲೂ ಸಹಾಯಕಳಾಗಿರುತ್ತಾಳೆ. ಜಗತ್ತನ್ನು ಸೃಷ್ಟಿಮಾಡಿದರೆ ಆಗ ಸೃಷ್ಟವಾದ ಪ್ರಾಣಿಗಳು ಅವರವರ ಕರ್ಮಾನುಸಾರವಾಗಿ ಉಪಾಸನಾದಿಗಳನ್ನು ಮಾಡಿಕೊಂಡು ಕಡೆಗೆ ನಿಷ್ಕಾಮಕರ್ಮಾಚರಣೆಯಿಂದ ಉಂಟಾಗುವ ಚಿತ್ತಶುದ್ಧಿ ಜ್ಞಾನವೈರಾಗ್ಯಾದಿಗಳಿಂದ ಆತ್ಮಸಾಕ್ಷಾತ್ಕಾರವನ್ನು ಪಡೆದು ಮುಕ್ತರಾಗುವರು.

**ಯದಿ ಸಾ ನೈವ ಸೃಜ್ಯೇತ ಜಗದೇತಚ್ಚರಾಚರಂ ।**
**ತದಾ ಮಾಯಾವಿನಾಭೂತಂ ಜಡಂ ಸ್ಯಾದೇವ ನಿತ್ಯಶಃ ॥೭೦॥**

ಈ ಉದ್ದೇಶವು ದೇವಿಗೆ ಇಲ್ಲದಿದ್ದರೆ, ಎಂದರೆ ದೇವಿಯು ಚರಾಚರಾತ್ಮಕವಾದ ಜಗತ್ತನ್ನು ಅವರವರ ಕರ್ಮಾಧೀನವಾಗಿ ಸೃಷ್ಟಿಮಾಡದಿದ್ದರೆ, ಮತ್ತು ಅವರವರ ಸತ್ಕರ್ಮಾನುಸಾರವಾಗಿ ಅವರನ್ನು ಉದ್ಧಾರಮಾಡದೆ ಇದ್ದರೆ, ಆಗ ಜಗತ್ತು ಹೆಚ್ಚು ಹೆಚ್ಚಾಗಿ ವಿಕಾಸವನ್ನು ಯಾವಾಗಲೂ ಪಡೆಯುತ್ತಾ ಅನಂತವಾಗಿದ್ದುಬಿಡುವುದು. ಮತ್ತು ಸ್ವೇಚ್ಛೆಯಿಂದಲೇ ದೇವಿಯು ಈ ಜಗತ್ತನ್ನು ನಿರ್ಮಿಸಿದಲ್ಲಿ ದೇವಿಗೆ ವೈಷಮ್ಯಾದಿ ದೋಷಗಳೂ ಉಂಟಾಗುವುವು. ಆದುದರಿಂದ ಮಾಯಾಧೀನವಾಗಿ ಅವರವರ ಕರ್ಮಾನುರೂಪವಾಗಿ ಸೃಷ್ಟಿಯೂ ಸದ್ಗತಿಯೂ ಕಡೆಗೆ ಮೋಕ್ಷವೂ ಉಂಟಾಗುವಂತೆ ಅವಕಾಶವೇರ್ಪಟ್ಟಿರುತ್ತದೆ.

**ತಸ್ಮಾತ್ಕಾರುಣ್ಯಮಾಶ್ರಿತ್ಯ ಜಗಜ್ಜೀವಾದಿಕಂ ಚ ಯತ್ ।**
**ಕರೋತಿ ಸತತಂ ದೇವೀ ಪ್ರೇರಯತ್ಯನಿಶಂ ಚ ತತ್ ॥೭೦॥**

ಆದುದರಿಂದ ದೇವಿಯು ಪ್ರಾಣಿಗಳ ಮತ್ತು ಜಗತ್ತಿನ ವಿಷಯದಲ್ಲಿ ದಯೆಯುಳ್ಳವಳಾಗಿ, ತನ್ನ ಲೀಲೆಯಿಂದಲೇ ಅವುಗಳನ್ನು ಸೃಷ್ಟಿಮಾಡಿ ಅವರವರ ಕರ್ಮಾನುಸಾರವಾಗಿ ಫಲಗಳನ್ನು ಒದಗಿಸುತ್ತಾ ಯಾವಾಗಲೂ ಪ್ರೇರಿಸುತ್ತಿರುತ್ತಾಳೆ. ಆದರೂ ಜೀವರು ಪ್ರಾರಬ್ಧಕರ್ಮಫಲವನ್ನು ಅನುಭವಿಸುತ್ತಿರುವಾಗಲೇ ವಿವೇಕವನ್ನು ಗುರೂಪದೇಶ ಶಾಸ್ತ್ರಾಭ್ಯಾಸಗಳಿಂದ ಪಡೆಯುತ್ತಾ ಸತ್ಕರ್ಮಗಳನ್ನೇ ಆರಿಸಿಕೊಂಡು ಫಲಾಶೆ ಇಲ್ಲದೆ ಆಚರಿಸುತ್ತಾ ಕಡೆಗೆ ನಿತ್ಯವಾದ ಮೋಕ್ಷದ ಸ್ವಾತಂತ್ರ್ಯಸುಖವನ್ನೂ ಚಿತ್ತಶುದ್ಧಿ ಜ್ಞಾನಪ್ರಾಪ್ತಿಯ ಮೂಲಕ ಪಡೆಯಲು ಸ್ವತಂತ್ರರಾಗಿರುತ್ತಾರೆ.

**ತಸ್ಮಾದ್ಬ್ರಹ್ಮಾದಿಮೋಹೇಽಸ್ಮಿನ್ ಕರ್ತವ್ಯಃ ಸಂಶಯೋ ನ ಹಿ ।**
**ಮಾಯಾಽಂತಃ ಪಾತಿನಸ್ಸರ್ವೇ ಮಾಯಾಧೀನಾಃ ಸುರಾಸುರಾಃ ॥೭೨॥**

ಆದುದರಿಂದ ಸಕಾಮಕರ್ಮಾಚರಣೆಯನ್ನು ಮಾಡಿರುವ ಬ್ರಹ್ಮಾದಿಗಳಿಗೂ ಮೋಹವುಂಟು ಎಂಬ ವಿಷಯದಲ್ಲಿ ಸಂಶಯವನ್ನೂ ಆಶ್ಚರ್ಯವನ್ನೂ ಪಡಬೇಕಾದುದಿಲ್ಲವು. ದೇವತೆಗಳು ಮತ್ತು ರಾಕ್ಷಸರು ಮೊದಲಾಗಿ ಎಲ್ಲರೂ ಮಾಯೆಗೆ ಒಳಗಾದವರು.

**ಸ್ವತಂತ್ರಾ ಸೈವ ದೇವೇಶೀ ಸ್ವೇಚ್ಛಾಚಾರವಿಹಾರಿಣೀ ।**
**ತಸ್ಮಾತ್ಸರ್ವಾತ್ಮನಾ ರಾಜನ್ ಸೇವನೀಯಾ ಮಹೇಶ್ವರೀ ॥೭೩॥**

ಎಲೈ ಜನಮೇಜಯರಾಜನೇ ಕೇಳು—ಆ ದೇವಿಯೊಬ್ಬಳೇ ಸರ್ವಜ್ಞಳೂ ಸರ್ವಶಕ್ತಳೂ, ಆಗಿ ಸ್ವತಂತ್ರಳು; ತನ್ನ ಇಚ್ಛಾನುಸಾರವಾದ ಆಚಾರವಿಹಾರಗಳುಳ್ಳವಳು; ದೇವತೆಗಳಿಗೂ ಅಧಿಪತಿಯಾದವಳು. ಆದರೂ ವಿವೇಕಿಗಳಾದ ಜೀವರಿಗೆ ಅವರ ಸತ್ಕರ್ಮಗಳನ್ನು ಅನುಸರಿಸಿ ಅನುಗ್ರಹಗಳನ್ನು ಮಾಡುತ್ತಿರುತ್ತಾಳೆ. ಆದುದರಿಂದ ಮಹೇಶ್ವರಿಯಾದ ಆ ದೇವಿಯನ್ನು ಎಲ್ಲರೂ ಸರ್ವಪ್ರಕಾರದಿಂದಲೂ ಸೇವಿಸಬೇಕು.

**ನಾತಃ ಪರತರಂ ಕಿಂಚಿದಧಿಕಂ ಭುವನತ್ರಯೇ ।**
**ಏತದ್ಧಿ ಜನ್ಮಸಾಫಲ್ಯಂ ಪರಾಶಕ್ತೇಃ ಪದಸ್ಮೃತಿಃ ॥೭೪॥**

ಮೂರು ಲೋಕದಲ್ಲಿಯೂ ಕೂಡ ಈ ದೇವಿಗಿಂತ ಅಧಿಕವಾದ ತತ್ವವು ಮತ್ತೊಂದಿಲ್ಲವು. ಪರಾಶಕ್ತಿಯನ್ನು ಆರಾಧಿಸಿದರೆ ಬ್ರಹ್ಮವನ್ನು ಆರಾಧಿಸಿದಂತೆಯೇ ಆಗುತ್ತದೆ. ಆದುದರಿಂದ ಈ ಪರಾಶಕ್ತಿಯ ಪಾದಸ್ಮರಣೆಯೇ ಜನ್ಮಸಾಫಲ್ಯವನ್ನುಂಟುಮಾಡುವುದು.

**ಮಾ ಭೂತ್ತತ್ರ ಕುಲೇ ಜನ್ಮ ಯತ್ರ ದೇವೀ ನ ದೈವತಂ ।**
**ಅಹಂ ದೇವೀ ನ ಚಾನ್ಯೋಽಸ್ಮಿ ಬ್ರಹ್ಮೈವಾಹಂ ನ ಶೋಕಭಾಕ್ ॥**

ಆದುದರಿಂದ ಭಕ್ತನಾದವನು, ದೇವಿಯು ಕುಲದೇವತೆಯಲ್ಲದಿರುವವರ ವಂಶದಲ್ಲಿ ನನಗೆ ಜನ್ಮವುಂಟಾಗಬೇಡ ಎಂದು ಬಯಸುತ್ತಾ, ವಿವೇಕದಿಂದ ಸತ್ಕರ್ಮಾಚರಣೆಯನ್ನೂ ಉಪಾಸನೆಯನ್ನೂ ಮಾಡುತ್ತಾ ಕಡೆಗೆ ಆ ದೇವಿಯ ಸಾಕ್ಷಾತ್ಕಾರದಿಂದ, ನಾನೇ ದೇವಿಯು ; ನಾನು ದೇವಿಗಿಂತ ಬೇರೆಯಲ್ಲ ; ನಾನೇ ಬ್ರಹ್ಮಸ್ವರೂಪನಾಗಿದ್ದೇನೆ ; ದುಃಖಾದಿಗಳನ್ನು ಅನುಭವಿಸುವವನಲ್ಲವು ; ಎಂಬ ಅಪರೋಕ್ಷಾನುಭವವನ್ನೂ ಪಡೆಯುತ್ತಾನೆ. ಆದುದರಿಂದ

**ಇತ್ಯಭೇದೇನ ತಾಂ ನಿತ್ಯಾಂ ಚಿಂತಯೇಜ್ಜಗದಂಬಿಕಾಂ ।**
**ಜ್ಞಾತ್ವಾ ಗುರುಮುಖಾದೇನಾಂ ವೇದಾಂತಶ್ರವಣಾದಿಭಿಃ ॥೭೬॥**

ಭಕ್ತರೆಲ್ಲರೂ ಹೀಗೆಂಬ ಅಭೇದಭಾವದಿಂದ ದೇವೀಸ್ವರೂಪವನ್ನು ಗುರುಮುಖದಿಂದಲೂ ವೇದಾಂತಶ್ರವಣಮನನಾದಿಗಳಿಂದಲೂ ತಿಳಿದುಕೊಂಡು ಆ ನಿತ್ಯಳೂ ಜಗನ್ಮಾತೆಯೂ ಆದ ದೇವಿಯನ್ನು ಅಭೇದದಿಂದ ಧ್ಯಾನಮಾಡಬೇಕು.

**ನಿತ್ಯಮೇಕಾಗ್ರಮನಸಾ ಭಾವಯೇದಾತ್ಮರೂಪಿಣೀಂ ।**
**ಮುಕ್ತೋ ಭವತಿ ತೇನಾಶು ನಾನ್ಯಥಾ ಕರ್ಮಕೋಟಿಭಿಃ ॥೭೭॥**

ಭಕ್ತನೂ ಉಪಾಸಕನೂ ಪ್ರತಿನಿತ್ಯದಲ್ಲಿಯೂ ಚಿತ್ತೈಕಾಗ್ರತೆಯಿಂದ ಸರ್ವಭೂತಗಳಿಗೂ ಆತ್ಮರೂಪಿಣಿಯಾದ ದೇವಿಯನ್ನು ತನಗೂ ಆತ್ಮರೂಪಳಾಗಿದಾಳೆಂದು ಧ್ಯಾನಮಾಡಬೇಕು. ಈ ರೀತಿಯಾಗಿ ಧ್ಯಾನಮಾಡುವುದರಿಂದ ಜಾಗ್ರತೆಯಾಗಿ ದೇವಿಯಲ್ಲಿ ಸಾಯುಜ್ಯಸಾಕ್ಷಾತ್ಕಾರವನ್ನು ಪಡೆದು ಮುಕ್ತನಾಗುತ್ತಾನೆ. ಹೀಗಲ್ಲದೆ ಕೋಟಿಗಟ್ಟಲೆಯಾಗಿ ಕರ್ಮಗಳನ್ನು ಮಾಡಿದರೂ ಮುಕ್ತನಾಗುವುದಿಲ್ಲವು.

**ಶ್ವೇತಾಶ್ವತರಾದಯಃ ಸರ್ವೇ ಋಷಯೋ ನಿರ್ಮಲಾಶಯಾಃ ।**
**ಆತ್ಮರೂಪಾಂ ಹೃದಾ ಜ್ಞಾತ್ವಾ ವಿಮುಕ್ತಾ ಭವಬಂಧನಾತ್ ॥೭೮॥**

ಶುದ್ಧವಾದ ಅಂತಃಕರಣವುಳ್ಳ ಶ್ವೇತಾಶ್ವತರನೇ ಮೊದಲಾದ ಎಲ್ಲ ಋಷಿಗಳೂ, ದೇವಿಯು ಪರಬ್ರಹ್ಮವೆಂದೂ ಪರಮಾತ್ಮಸ್ವರೂಪಳೆಂದೂ ಉಪಾಸನೆಮಾಡಿ ಅಪರೋಕ್ಷಾನುಭವದಿಂದ ತಿಳಿದು ಸಂಸಾರಸಂಬಂಧದಿಂದ ಬಿಡುಗಡೆಯನ್ನು ಹೊಂದಿದರು.

**ಬ್ರಹ್ಮವಿಷ್ಣ್ವಾದಯಸ್ತದ್ವದ್ಗೌರೀಲಕ್ಷ್ಮ್ಯಾದಯಸ್ತಥಾ ।**
**ತಾಮೇವ ಸಮುಪಾಸಂತೇ ಸಚ್ಚಿದಾನಂದರೂಪಿಣೀಂ ॥೭೯॥**

ಈ ಶ್ವೇತಾಶ್ವತರನೇ ಮೊದಲಾದ ಋಷಿಗಳ ಹಾಗೆ, ಬ್ರಹ್ಮ, ವಿಷ್ಣು, ರುದ್ರ, ಮೊದಲಾದ ದೇವತೆಗಳೂ, ಗೌರೀ, ಲಕ್ಷ್ಮೀ, ವಾಣೀ ಮುಂತಾದ ದೊಡ್ಡವರೂ ಸಹ ಸಚ್ಚಿದಾನಂದರೂಪಿಣಿಯಾದ ಈ ದೇವಿಯನ್ನು ಧ್ಯಾನಮಾಡುತ್ತಿರುವರು.

**ಇತಿ ತೇ ಕಥಿತಂ ರಾಜನ್ಯದ್ಯತ್ಪೃಷ್ಟಂ ತ್ವಯಾಽನಘ ।**
**ಪ್ರಪಂಚತಾಪತ್ರಸ್ತೇನ ಕಿಂ ಭೂಯಃ ಶ್ರೋತುಮಿಚ್ಛಸಿ ॥೮೦॥**

ಪಾಪರಹಿತನಾದ ಎಲೈ ರಾಜನೇ ಕೇಳು. ಈ ಪ್ರಪಂಚದ ದುಃಖಾನುಭವದಿಂದ ನೊಂದಿರುವ ನೀನು ಏನೇನನ್ನು ಕೇಳಿದೆಯೋ ಅದನ್ನೆಲ್ಲವನ್ನೂ ನಿನಗೆ ಈ ರೀತಿಯಲ್ಲಿ ಹೇಳಿದ್ದಾಯಿತು. ಮುಂದೆ ಇನ್ನೇನನ್ನು ಕೇಳಲು ಇಚ್ಛಿಸುತ್ತಿರುವೆ?

**ಏತತ್ತೇ ಕಥಿತಂ ರಾಜನ್ಮಯಾಽಽಖ್ಯಾನಮನುತ್ತಮಂ ।**
**ಸರ್ವಪಾಪಹರಂ ಪುಣ್ಯಂ ಪುರಾಣಂ ಪರಮಾದ್ಭುತಂ ॥೮೧॥**

ಎಲೈ ರಾಜನೇ, ನಿನಗೋಸ್ಕರವಾಗಿ ನಾನು ಬಹಳ ಉತ್ತಮವಾದ, ಪುಣ್ಯಕರವಾದ, ಪಾಪಗಳನ್ನು ನಾಶಮಾಡುವುದಾದ ಮತ್ತು ಅತ್ಯಾಶ್ಚರ್ಯಕರವಾದ ಈ ಪುರಾಣವನ್ನು ಹೇಳಿರುತ್ತೇನೆ.

**ಯ ಇದಂ ಶೃಣುಯಾನ್ನಿತ್ಯಂ ಪುರಾಣಂ ವೇದಸಂಮಿತಂ ।**
**ಸರ್ವಪಾಪವಿನಿರ್ಮುಕ್ತೋ ದೇವೀಲೋಕೇ ಮಹೀಯತೇ ॥೮೨॥**

ವೇದಕ್ಕೆ ಸಮಾನವಾದ ಈ ಪುರಾಣವನ್ನು ಯಾವನು ಪ್ರತಿದಿನವೂ ಶ್ರವಣ ಮಾಡುವನೋ ಅವನು ಎಲ್ಲ ಪಾಪಗಳಿಂದ ಬಿಡಲ್ಪಟ್ಟವನಾಗಿ ದೇವಿಯ ಲೋಕದಲ್ಲಿಯೂ ಪೂಜಿಸಲ್ಪಡುವನು.

॥ ಸೂತ ಉವಾಚ ॥

**ಏತನ್ಮಯಾ ಶ್ರುತಂ ವ್ಯಾಸಾತ್ಕಥ್ಯಮಾನಂ ಸವಿಸ್ತರಂ ।**
**ಪುರಾಣಂ ಪಂಚಮಂ ನೂನಂ ಶ್ರೀಮದ್ಭಾಗವತಾಭಿಧಂ ॥೮೩॥**

ಸೂತಮುನಿಯು ಹೇಳಿದನು—ಶ್ರೀಮದ್ಭಾಗವತವೆಂಬ ಹೆಸರಿನ ಈ ಐದನೆಯ ಪುರಾಣವನ್ನು ವ್ಯಾಸಮಹರ್ಷಿಯು ವಿಸ್ತಾರವಾಗಿ ಹೇಳಿರುವುದನ್ನು ನಾನು ಕೇಳಿ ಅದನ್ನೇ ನಿಮಗೆ ಹೇಳಿರುತ್ತೇನೆಂದು ಶೌನಕಾದಿಋಷಿಗಳಿಗೆ ಸೂತಮುನಿಯು ನಿರೂಪಿಸಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಚತುರ್ಥಸ್ಕಂಧೇ**
**ಪಂಚವಿಂಶೋಽಧ್ಯಾಯಃ.**

ಅರ್ಥಾಧಿಕ್ಯೈರ್ವಸುವಿಧು ಯುಗವಿಶ್ವಂಭರಾಭಿಧೈಃ ।
ಪದ್ಯೈಶ್ಚತುರ್ಥಸ್ಕಂಧೋಽಯಂ ಕಥಿತೋವ್ಯಾಸನಿರ್ಮಿತೈಃ ॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಸಮಾಪ್ತಶ್ಚತುರ್ಥಸ್ಕಂಧಃ ॥

**ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರಶಾಸನಾತ್ ।**
**ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ॥**
**ಸುಬ್ಬಮ್ಮಾಂಬಾದೇವಯಜ್ವ ತನಯಶ್ಚಂದ್ರಶೇಖರಃ ।**
**ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥**
**ಸೇವಿತ್ವಾವತು ಸಾ ದೇವೀ ಸರ್ವಶಕ್ತಿ ಸ್ವರೂಪಿಣೀ ।**
**ಪ್ರಾಣಿಕರ್ಮವಶಾದ್ಬ್ರಹ್ಮಣೀಚ್ಛಾ ಜ್ಞಾನಕ್ರಿಯಾತ್ಮಿಕಾ ॥**

॥ ಶ್ರೀರಸ್ತು ॥

